ಶ್ರೀರಸ್ತು.



ಶ್ರೀಮನ್ಮಹಾರಾಜಾಧಿರಾಜ ಶ್ರೀ ಮುಮ್ಮಡಿ ಕೃಷ್ಣರಾಜಒಡೆಯರ್
ಬಹದರವರು ಲೋಕೋಪಕಾರಾರ್ಥವಾಗಿ ಬ್ರಹ್ಮಾಂಡೋಪಪುರಾಣವಿಂದ
ಕರ್ಣಾಟಕ ಭಾಷೆಯಲ್ಲಿ ರಚಿಸಲ್ಪಟ್ಟ

# ಸಹಸ್ರಾಯುಂ ಚರಿತ್ರೆ.

ಶ್ರೀಮನ್ಮಹಾರಾಜ್ಞೀವಾಣೀವಿಲಾಸ ಮಹಾ ಸನ್ನಿಧಾನದಿಂದಲೂ,
ಹುಜೂರು ಮಹಾ ಸನ್ನಿಧಾನದಿಂದಲೂ ಅಪ್ಪಣೆಪಡೆದ

ಯಂ. ಶ್ರೀನಿವಾಸಮೂರ್ತಿರಾಯರಿಂದ,

ಆರ್ಯಮತಗ್ರಂಥಪ್ರವರ್ಧಿನೀ ಸಭೆಯ ಮ್ಯಾನೇಜರ್
ಗುಂಡ್ಲುಪಂಡಿತರುಲಕ್ಷ್ಮಣಾಚಾರ್ಯರಮೂಲಕ
ಪ್ರಚುರಪಡಿಸಲ್ಪಟ್ಟಿದೆ.

ಶ್ರೀ ಚಾಮುಂಡೇಶ್ವರಿ ಮುದ್ರಾಕ್ಷರಶಾಲ.
ಮೈಸೂರು.

1906.

ರಿಜಸ್ಟರಾಗಿದೆ.

## ವಿಜ್ಞಾಪನೆ.



ಶ್ರೀಮನ್ಮಹೀಶೂರ ಮಹಾ ಸಂಸ್ಥಾನದ ಆಳಿದ ಮಹಾ ಪ್ರಭುಗಳಾದ ಶ್ರೀಮತ್ ಮುಮ್ಮಡಿ ಕೃಷ್ಣರಾಜ ಒಡೆಯರವರು ಸಂಸ್ಕೃತ ಭಾಷೆಯಲ್ಲಿ ಬ್ರಹ್ಮಾಂಡೋಪ ಪುರಾಣದ ಹಯಗ್ರೀವಾಗಸ್ತ್ಯ ಸಂವಾದದಲ್ಲಿನ

"ಸಪಸಾ್ರಯುರಾಜನ ಚರಿತ್ರಾಮೃತವನ್ನು"

ಕರ್ಣಾಟಕ ಜನಗಳಿಗೆ ಸುಲಭವಾಗಿ ವ್ಯಕ್ತಪಡಿಸುವ ಉದ್ದಿಶ್ಯವಾಗಿ ವಿದ್ವನ್ಮಂಡಲಿಯಲ್ಲಿ ವಿರಚಿಸಿದ ಈ ಗ್ರಂಥವು ಬಹಳಕಾಲದಿಂದಲೂ ಅಚ್ಚಾಗದೆ ಅಲ್ಲಲ್ಲಿ ಬಂದೊಂದು ಕಾಪಿಯನ್ನು ಬರೆದಿಟ್ಟುಕೊಂಡಿರೋಣವರಿಂದ ಅನೇಕರ ಮನಸ್ಸಿಗೆ ಬಹಳ ವಿಷಾದವನ್ನುಂಟುಮಾಡುತ್ತಿತ್ತು. ಈಚೆಗೆ ಶ್ರೀಮನ್ಮಹಾರಾಣಿಯವರ ಮಹಾ ಸನ್ನಿಧಾನದಿಂದ ಈ ಗ್ರಂಥವನ್ನು ಮತ್ತು

"ಸೌಗಂಧಿಕಾ ಪರಿಣಯವನ್ನು"

ಸಹಾ ಪ್ರಿಂಟುಮಾಡಿಸಿ ಪ್ರಚುರಪಡಿಸತಕ್ಕ ಬಗ್ಯೆ ಅಪ್ಪಣೆ ಪಡೆದಿರುತ್ತೇನೆ. ಇದಕ್ಕೆ ಸಂಪೂರ್ಣವಾಗಿ ದ್ರವ್ಯ ಸಹಾಯಮಾಡಿವಗುಂಡ್ಲುಪಂಡಿತರುಲಕ್ಷ್ಮಣಾಚಾರ್ಯ್ರಿಗೆ ಮೊದಲನೇ ಛಾಪೆಯಾಗಿ ಮುದ್ರಿಸಿ ಪ್ರಚಾರಪಡಿಸುವದಕ್ಕೋಸ್ಕರ ಇದನ್ನು ವಹಿಸಿರುತ್ತೇನೆ.

ಈ ಮೇಲ್ಕಂಡ ಗ್ರಂಥಗಳು ಒಳ್ಳೇ ಶೈಲಿಯಲ್ಲಿರುವವಲ್ಲದೆ ಓದುವ ರಸಿಕರಿಗೆ ಮನೋರಂಜನವನ್ನುಂಟುಮಾಡಿ ಅನೇಕ ರಾಜಕೀಯತಂತ್ರಗಳನ್ನು ವಿಶದಪಡಿಸುತ್ತಲಿವೆ. ಪಂಡಿತ ಮಹಾಶಯರಲ್ಲಿರತಕ್ಕ ಬಗ್ಯೆ ಈ ಗ್ರಂಥಗಳು ಯೋಗ್ಯತೆಯುಳ್ಳದ್ದಾಗಿವೆ. ಶುದ್ಧಾಶುದ್ಧ ಪತ್ರಿಕೆಯಲ್ಲಿ ಅನೇಕಪ್ರಿಂಟು ತಪ್ಪುಗಳನ್ನು ಶೋಧಿಸಿರುತ್ತೇನೆ. ಕನ್ನಡಿಗರು ಈ ಪುಸ್ತಕದಲ್ಲಿ ಅಭಿರುಚಿ ಹೊಂದುವರೆಂದು ನಂಬಿರುತ್ತೇನೆ.

M. Srinivasa murthy Rao,
Munshi, Palace office,
Mysore.

24—1—1906
ಮೈಸೂರು



# ಸಹಸ್ರಾಂಯುಚರಿತ್ರೆ

---

## ಪ್ರಥಮಾಧ್ಯಾಯ

ಸಚರಾಚರಸ್ಯಜಗತ, ಸ್ಸ್ರಷ್ಟಾಪಾತಾಚಸಂಹರ್ತಾ ॥
ಶ್ರೀಮಾನ್ವೃಷಾಕಪಾಯಿಾ, ರಮಣಃಪಾಯಾತ್ಸಮುದಾದೇವಃ ॥
ಜಯತ್ಯಮಿತಕಲ್ಯಾಣಗುಣರತ್ನಮಹೋದಧಿಃ । ಮಹಿಶೂರಪುರೇಶ್ರೀ
ಮಾನ್ಕೃಷ್ಣರಾಜಮಹೀಪತಿಃ॥೧॥ ತನ್ಮುದೇಕಥಿಕಾಸೇಯಂಕಥಾಕರ್ನಾ
ಟಭಾಷಯಾ ॥ ಶಿರೀಷಮೃದ್ವ್ಯಾಮಧುರಂಸೀತಾರಾಮಾಖ್ಯಸೂರಿಣಾ ॥೨॥

ಸ್ವಸ್ತಿ ಶ್ರೀಮದಖಂಡಭಾರತಖಂಡಮಂಡನಾಯಮಾನ ಕೋಸಲ ದೇಶದೊಳು ನಾಕದಂತೆ ವಿಬುಧಾಶ್ರಯವಾಗಿ ರಸಾತಲದಂತೆ ನೇತ್ರಶ್ರುತಿ ಮನೋಹರವಾಗಿ ಸಮುದ್ರದಂತೆ (ಮುನ್ನೀರಿನಂತೆ) ರಾಜಾಭ್ಯುದಯವ

ಧಿಷ್ಣುವಾಗಿ ಅಗಾಧಜಲಪೂರದಿಂ ಭಯಂಕರವಾದ ಪರಿಘಾವಲಯದಿಂ ದುರ್ಗಮವಾದ ತಾರಾಪಥಚುಂಬಿತಾಯಸಮಯಪ್ರಾಕಾರದಿಂ ಪ್ರಕಾಶಮಾನವಾಗಿರುವ ಮಾಹಿಷ್ಮತೀನಾಮನಗರವು, ಅನೇಕ ರಾಜವೀಧಿಗಳಿಂದ ಸ್ಫಟಿಕಶಿಲಾರಚಿತಾತ್ಯುನ್ನತಸೌಧಪಙ್ಕ್ತಿಗಳಿಂದ ನಿಖಿಲವಸ್ತುಸಮಾಜಸಮೃದ್ಧ ಪಣ್ಯವೀಧಿಗಳಿಂದ ಯೌವನಲಾವಣ್ಯ ಸಂಪದೆಗಳಿಂದಲಂಕೃತರಾದ ನಾರೀನರಸಮಾಜದಿಂ ಸಾಂದ್ರವಾಗಿರುವದು. ಆ ಪುಟಭೇದನದಲ್ಲಿ ಸಿರಿಯಿಂ ಸುರಪತಿಯಂತೆ ಸೌಂದರ್ಯದೊಳ್ ಸುಮಬಾಣನಂತೆ ಸತ್ವದೊಳ್ ಮೃತ್ಯುಂಜಯನಂತೆ ಪ್ರಕಾಶಿಪ ಸುಶರ್ಮನೆಂಬ ಮಹಾರಾಯನು ನಿಖಿಲನಿರವದ್ಯಗುಣಾಲಯನಂತೆ ಆ ಮಹೀಪತಿಯು ಅನವರತಪ್ರಭೆಯಿಂ ರವಿಯಂತೆ ಕೌಮುದಿಯಿಂ ಕುಮುದಬಾಂಧವನಂತೆ ಕಾಂತಿಮಾಲಿನಿಯೆಂಬ ಕಾಂತೆಯಿಂದೊಡಗೂಡಿ ರತ್ನಸಿಹ್ಮಾಸನಾಸೀನನಾಗಿ ಧರ್ಮಗುಪ್ತನೆಂಬ ಮಹಾಮಾತ್ಯಸಂಯುಕ್ತನಾಗಿ ಧರೆಯಂ ಪೊರೆಯುತ್ತಿರಲು. ಸಕಲ ಪ್ರಜೆಗಳು ಸ್ವಮತವಿಹಿತವರ್ಣಾಶ್ರಮಧರ್ಮಂಗಳಲ್ಲಿ ಈಷನ್ನ್ಯೂನಾತಿರೇಕವಿಲ್ಲದಂತೆ ನಡೆವರದರಿಂದ ತತ್ತತ್ಕಾಲದಲ್ಲಿ ಪರ್ಜನ್ಯವರ್ಷಿಸುವದು ಸಕಲ ಕ್ಷೇತ್ರಂಗಳು ಸಫಲವಾಗಿರುವದು ಸಮಸ್ತ ಪ್ರಜೆಗಳು ಪುತ್ರಮಿತ್ರಕಳತ್ರಾದಿ ಸಂತತಿ ಸಂಪತ್ಸಾರಸ್ವತ ದಯಾ ದಾಕ್ಷಿಣ್ಯ ಸತ್ಯ ಶೌಚಾದಿ ಮಹಾಗುಣಗಳಿಂದ ಸಂಪೂರ್ಣರಾಗಿ ಇಹದಲ್ಲಿ ಸಕಲ ಭೋಗಂಗಳನುಭವಮಾಡಿ ಪರಲೋಕಾರ್ಥವಾಗಿ ವಾಪೀಕೂಪತಟಾಕವನ ದ್ವಿಜ ದೇವಾಲಯನಿರ್ಮಾಣತತ್ಪರರಾಗಿ ಸುಖದಲ್ಲಿಹರು. ತತ್ಕಾಲದೊಳ್ ಇಳೆಯಾಣ್ಮನು ಸ್ವದೇಶಮಂ ನೋಡಲುದ್ಯುಕ್ತನಾಗಿ ಧರ್ಮಗುಪ್ತನಿಂದೊಡಗೂಡಿ ಸೇನಾಸಮೇತನಾಗಿ ಸಂಚಾರಮಂ ಮಾಡುತ್ತ ಬರಲು, ತನ್ನ ನಾಡೊಳೆಲ್ಲಿಯುಂ ಸಸ್ಯವಿಲ್ಲದ ಕ್ಷೇತ್ರವಿಲ್ಲ ಸತ್ರವಿಲ್ಲದ ಗ್ರಾಮಂಗಳಿಲ್ಲ ಪ್ರಪಾಶಾಲೆಯಿಲ್ಲದ ಮಾರ್ಗಂಗಳಿಲ್ಲ ಫಲವಿಲ್ಲದ ತರುಗಳಿಲ್ಲ ಕೊಳವಿಲ್ಲದ ವನವಿಲ್ಲ ಸಂತಾನವಿಲ್ಲದ ಪ್ರಜೆಗಳಿಲ್ಲ ಧರ್ಮವಿಲ್ಲದ ಆಲಯವಿಲ್ಲ ದಾಕ್ಷಿಣ್ಯಪರರಲ್ಲದ ಮನುಜರಿಲ್ಲ ಇಂತಖಿಲಸಂಪತ್ಸಮೃದ್ಧವಾದ ಸ್ವರಾಜ್ಯಮಂ ತಿರುಗಿ ಪುರೋಹಿತಪ್ರಮುಖರಾದ ಭೂಸುರೋತ್ತಮರಂ ಕರಿಸಿ ಅರ್ಘ್ಯಪಾದ್ಯಮಧುಪರ್ಕಾದಿಗಳತ್ತು ಸತ್ಕರಿಸಿ ನಮಿಸಿ ಭೂದೇ

ವತೆಗಳಾ ಕೇಳ ಮಾದಿಗಂಗೆ ವೇದಾಭ್ಯಾಸದಂತೆ ಪತಿತಂಗೆ ಪರಮಪುರುಷಾರ್ಥದಂತೆ ಸಂತಾನವಿಲ್ಲದವಂಗೆ ಸಾಮ್ರಾಜ್ಯಶೋಭಿಸಲರಿಯದುದರಿಂದ ಅರಣ್ಯಪ್ರವೇಶವಂ ಮಾಡಬೇಕೆಂದು ನಿಮ್ಮಾಜ್ಞೆಯನ್ನು ಅಪೇಕ್ಷೆ ಮಾಡುತಿದೆ ಮನವೆಂದು ಕಂಬನಿದುಂಬಲು, ಆ ಮಹಾನುಭಾವರಾದ ಬ್ರಾಹ್ಮಣೋತ್ತಮರು ತಮ್ಮತಮ್ಮ ಅನೇಕ ಜನ್ಮಗಳಿಂದ ಸಂಚಿತವಾದ ಕರ್ಮಗಳಿಗನುಗುಣವಾಗಿ ಫಲಪ್ರದನಾದ ಪರಮೇಶ್ವರನ ಪ್ರಸಾದದಿಂದುತ್ಪನ್ನವಾದ ಅನ್ಯಜೀವಸಮವೇತಕರ್ಮಪರಂಪರಾಪರೋಕ್ಷಜ್ಞಾನವೆಂಬ ದೀಪದಿಂ ನಿರಸ್ತವಾದ ಸಮಸ್ತಸಂಶಯಾಂಧಕಾರಮುಳ್ಳವರಾಗಿ ಸಕಾಲದೀನಲೋಕವಿತಾನ ಸಂತಾನನಾದ ಈ ಮಹಾರಾಜಂಗೆ ಸಂತಾನಾಭಾವಪ್ರಯುಕ್ತ ಸಂತಾಪಮುಚಿತಮಲ್ಲೆಂದು ಸಾಂತ್ವವಚನಗಳಿಂದ ಸಮಾಧಾನಮಂಮಾಡಿ ಸಂತತಿಪ್ರದವಾದ ಜಪ ವ್ರತ ಹೋಮ ದಾನ ದೇವತಾರಾಧನಾದಿ ಪ್ರಕಾರಂಗಳನ್ನು ಉಪದೇಶವಂಮಾಡಲು, ಆ ಮಹೀಶನು ಅತ್ಯಂತಭಕ್ತಿಯಿಂದ ತದನುಸಾರವಂ ಯಥೋಕ್ತಪ್ರಕಾರವಾಗಿ ಮಾಡಿ ಅತೀತಜನ್ಮಗಳಲ್ಲಿ ಮಾಡಿದ ಸದಿತರಕರ್ಮಪ್ರಾಬಲ್ಯದಿಂದ ಉಕ್ತಫಲವಾಗದಿರಲು, ಆ ಧರಾಕಾಂತನತ್ಯಂತಚಿಂತಾಕ್ರಾಂತನಾಗಿ ಸರ್ವವ್ಯಾಪಾರದೊಳು ನಿರ್ವೇದಮಂನೈದಿ ಮುಖ್ಯಪ್ರಧಾನನಂ ಕರಿಸಿ ಎಲೈ ಧರ್ಮಗುಪ್ತನೆ ನೋಡು ಭೂಸುರೋತ್ತಮರು ಆಜ್ಞಾಪಿಸಿದಂತೆ ಮಾಡಿದಡೆಯುಂ ಮನೋರಥಕೂಡಿಬರಲಿಲ್ಲ ಅದರಿಂದ ನೀನು ಸತ್ಕುಲಪ್ರಸೂತನಾಗಿ ಸ್ವಾಮಿಕಾರ್ಯಧುರಂಧರನಾಗಿ ನಮ್ಮ ವಂಶಪಾರಂಪರ್ಯಪ್ರಧಾನನಾಗಿ ಅರ್ಥಶಾಸ್ತ್ರನೀತಿಶಾಸ್ತ್ರ ಧರ್ಮಶಾಸ್ತ್ರವೆ ಮೊದಲಾದ ಸಕಲಕಲಾಕೋವಿದನಾಗಿ ಸಕಲಗುಣನಿಧಾನನಾದ ಪ್ರಧಾನಿಯಾದ್ದರಿಂದ, ಇದಕ್ಕೊಂದುಪಾಯವಂ ಮನದೊಳಾಲೋಚಿಸಿ ಪೇಳಬೇಕೆಂದೆನಲು, ಜೀಯ್ಯ ಲಾಲಿಪುದೆನ್ನ ಬಿನ್ನಹವಂ ಸಂತತಿಪ್ರದವಾದ ಸಾಧನತ್ರಯವುಂಟು, ಅದರಲ್ಲಿ ಪ್ರಥಮಸಾಧನವು ದ್ವಿಜೋಕ್ತಿಯಿಂದಾಚರಿಸಲ್ಪಟ್ಟಿತು. ಅದರಿಂದ ಸಂತತಿಪ್ರತಿಬಂಧಕವಾದ ದುರಿತನಿಕರಪರಿಹಾರವಾದುದು. ಈಗ ಎರಡನೆಯ ಉಪಾಯವಂ ಮಾಡಿದಡೆ ಮನೋರಥಸಿದ್ಧಿಯಾಗುವದು. ಸಂಶಯವಿಲ್ಲ. ಆ ಉಪಾಯವೇನೆಂದೊಡೆ— ಬೀಜಾವಾಪವಂ ಮಾಡಲು ಸಫಲಮಪ್ಪ ಸು

ಕ್ಷೇತ್ರಮಂ ನೋಡಿ ದಾನಧಾರಾಪೂರ್ವಕವಾಗಿ ಕೈಕೊಂಡು ಮನದ ಯೆಣಿಕೆಯಂ ಕಾಣಬಹುದು. ಇನ್ನೊಂದು ಮೂರನೆಯ ಸಾಧನ ಮದೇನೆಂದೊಡೆ, ಮುನ್ನ ಸಂತಾನವಿಲ್ಲದ ಮಹೀಪತಿಗಳು ಪೂರ್ವೋಕ್ತವಾದ ಎರಡು ಸಾಧನಂಗಳಂ ಮಾಡಿ ಅದರಿಂದ ಫಲವಾಗದಿರಲು ಅಡವಿಯಂ ಪೊಕ್ಕು ಸ್ವಜನರಿಂದ ಲಕ್ಷಿತರಾಗಿ ತಮ್ಮಿಷ್ಟದೇವತೆಗಳಂ ಕುರಿತು ತಪವಂ ಮಾಡಿ ತಮ್ಮಿಷ್ಟಾರ್ಥವಂ ಪಡೆದಿರುವರು. ಅದರಿಂದ ಎರಡನೆಯ ಉಪಾಯಮಂ ಮಾಡಿ ತದನಂತರದಿ ನೋಡಬಹುದೆಂದು ಮಂತ್ರಿ ಬಿನ್ನಹವಂ ಮಾಡಲು, ಸುಶರ್ಮರಾಯನದಂ ಕೇಳಿ ಮನದೊಳಾಲೋಚನೆಯಂ ಮಾಡಿ ಎಲೈ ಧರ್ಮಗುಪ್ತನೆ ಕೇಳು, ಮೂರನೆಯ ಸಾಧನವುದಾಯತ್ತ ಎರಡನೆಯ ಉಪಾಯತ್ವದಾಯತ್ತವದರಿಂದ, ಕುಲಶೀಲಸಂಪನ್ನಳಾಗಿರುವ ಸತಿಯಾದಂಗನೆಯನರಸಿ ನಿಷ್ಕರ್ಷೆಯಂ ಮಾಡು ನೀನೆಂದು ವೀಳೆಯಮಂ ತರಿಸಿ ಯಿತ್ತು ಬಹುಮಾನವಂ ಮಾಡಿ ಅಪ್ಪಣೆಯಂ ಕೊಡಲು, ಮಂತ್ರಿ ತನ್ನಾಲಯಕೆ ಬಂದು ತನ್ನೊಳಾಲೋಚನೆಯಂ ಮಾಡಿ ನಿಶ್ಚೈಸಿ, ಕನ್ಯಾನ್ವೇಷಣಾರ್ಥವಾಗಿ ಶುಭಮುಹೂರ್ತದೊಳು ತೆರಳಿ ದೇವಿಯರ ಅರಮನೆಗೆ ಬಂದು ವಂದಿಸಿ ವೃತ್ತಾಂತವೆಲ್ಲಮಂ ವಿಸ್ತಾರವಾಗಿ ವಿಜ್ಞಾಪನೆಯಂ ಮಾಡಲು, ಕಾಂತಿಮಾಲಿನಿಯು ಕೇಳಿ ತತ್ಕಾಲೋಚಿತವಾದ ಮಾತುಗಳಂ ಪೇಳಿ ವೀಳೆಯವಂ ತರಿಸಿತ್ತು ಅಪ್ಪಣೆಯಂ ಕೊಡಲು, ಧರ್ಮಗುಪ್ತನು ಸಮಸ್ತ ವಿಭವದಿಂದ ಯುಕ್ತನಾಗಿ ನಗರದಿಂ ಪೊರಟು ಕರ್ನಾಟಕ ಸೌರಾಷ್ಟ್ರ ಮಹಾರಾಷ್ಟ್ರ ಸೌವೀರ ಚೋಳ ನೇಪಾಳ ಮಳೆಯಾಳ ಮೊದಲಾದ ದೇಶಗಳಂ ಪೊಕ್ಕು, ತದನುರೂಪವಾದ ಕನ್ನಿಕೆಯನರಸಿ ಕಾಣದೆ, ಮಗಧ ಜನಪದಮಂ ನೈದಿ ಬರುತ್ತೊಂದುದಿನ ಮಾರ್ಗತಪ್ಪಿ ಮಹದ್ಗಹನಮಂ ಪೊಕ್ಕು ದಿಕ್ಕುಗಳ ಕಾಣದೆ ಘೋರಜಂತುಗಳಿಂದ ಭಯಂಕರವಾದ ದುರ್ಗಮಧರಾಧರಕ್ಷೋಣೀರುಹಮಂಡಕಂಟಕಮಹಾಗರ್ತನಿರ್ಝರಗಳಿಂದತಿಕಠೋರವಾದ ವಿಪಿನದೊಳು ತಿರುಗುತ್ತ ಮರುಗಿ ಕಂಗೆಟ್ಟು ಕರಗುತ್ತ ಸ್ವಪರಿವಾರದಿಂ ವಿಯುಕ್ತನಾಗಿ ಬರುತಲ್ಲಿ, ದಿವ್ಯತೇಜಸ್ವಿಯಾದೋರ್ವ ಭೂಸುರೋತ್ತಮನಂ ಕಂಡು ತತ್ಸನಿಮಾಪವಮಂನೈದಿ ವಾದನೆಯಂ ಮಾಡಿ ವಿಪ್ರನಂ ಕುರಿತು ನೀನೆಲ್ಲಿಂದ

ಬಂದೆ ಮುಂದೆ ನೀನೆಲ್ಲಿಗೈದುವೆ ಈ ಅರಣ್ಯಮಂ ಪ್ರವೇಶಮಾಡುವದಕ್ಕೆ ಕಾರಣವೇನು ಮಹಾತೇಜಸ್ವಿಯಾಗಿ ಕೃಶಾಂಗನಾಗಿರುವದ್ದರಿಂದ ತಪಮಂ ಮಾಡುವನಂತೆ ಕಾಣುತಿದೆ ಎನ್ನೊಳನುರಾಗದಿಂ ಸಕಲ ವೃತ್ತಾಂತಮಂ ಪೇಳಬೇಕೆಂದು ಮಂತ್ರಿಯು ವಿನಯದಿಂದ ಪ್ರಶ್ನೆಯಂಮಾಡಲು, ಆ ವಿಪ್ರವರ್ಯನು ಮಂತ್ರಿಯಂ ಕುರಿತು ಬಾಹುಜಪ್ರವರನೇ ಕೇಳು, ದ್ವಿಜರಿಗೆ ಅರಣ್ಯದೊಳು ವಾಸವೆ ವಿಹಿತ ಅದರಿಂದ ಅದಂತಿರಲಿ, ಅನಂತರದೊಳೆನ್ನ ವೃತ್ತಾಂತಮಂ ಪೇಳುವೆ, ನೀನು ಕ್ಷತ್ರಿಯೋತ್ತಮನಾಗಿ ವೃದ್ಧಸಮ್ಮತನಾಗಿ ಬುದ್ಧಿಶಾಲಿಯಾದ ರಾಜಲಕ್ಷ್ಮಿಯಂ ಶೋಭಿಸುವ ನಿನಗೀಗಹನಪ್ರವೇಶವೇನುಕಾರಣವೆಂದು ಕೇಳಲು, ಮಂತ್ರಿಯು ಭೂಸುರೋತ್ತಮನೆ ಕೇಳು, ಮಾಹಿಷ್ಮತಿಯೆಂಬ ನಗರಮನ್ನಾಳುವ ಸುಶರ್ಮನೆಂಬ ಮಹಾರಾಯನಮಂತ್ರಿಯಾದ ಧರ್ಮಗುಪ್ತನು ತಾನು. ಆ ಮಹಿಪತಿಗೆ ಸಂತಾನವಿಲ್ಲದ್ದರಿಂದ ದ್ವಿತೀಯವಿವಾಹಮಂ ಮಾಡಿಕೊಳ್ಳಬೇಕೆಂದು ಕನ್ಯಾನ್ವೇಷಣಾರ್ಥವಾಗಿ ಎನಗಪ್ಪಣೆಯನಿತ್ತು ಕಳುಹಲು ತಾನಾತಂಗನುರೂಪವಾದ ಕನ್ನಿಕೆಯನ್ನು ದೇಶದೇಶದೊಳಗರಸುವಲ್ಲಿ ರೂಪವಿದ್ದಡೆ ಗುಣವಿಲ್ಲ ಅದುಯಿರಲು ಸಿರಿಯಿಲ್ಲ ಈ ಮೂರುಸಾಧನವಿದ್ದೆಡೆಯಲ್ಲಿ ಕುಲಶೀಲಾದಿಗಳಿಲ್ಲ, ಇಂತು ಚಿಂತಿಸುತ ಕಾಂತಾರಮಂ ಪೊಕ್ಕೆ, ಪಥತಪ್ಪಿ ಮರಗುತ್ತಿರಲು, ಸಿರಿನಲ್ಲನೊಲುಮೆಯಿಂದ ನಿನ್ನಂಘ್ರಿಗಳಂ ಕಂಡೆನದುಕಾರಣಂ ಇಲ್ಲಿಂದಮುಂದೆ ಭವದನುಗ್ರಹದಿಂದ ನೆನದೆಣಿಕೆ ಕೈಗೂಡದೆಇರದು ಎಂದು ನುಡಿದಾತನಂನೋಡಿ ಮುಖಜಾತನಾತನಂ ಕುರಿತು ಸಚಿವಮಣಿಯೆ ಕೇಳು, ಕುರುಕ್ಷೇತ್ರದಲ್ಲಿ ಚಿರವಾಸಿಯಾದ ಶೌನಕನೆಂಬ ಭೂಸುರೋತ್ತಮನ ಸುತನಗ್ನಿಶರ್ಮನೆಂಬೆನ್ನಯನಾಮ. ತನಗೆ ವೇದಶಾಸ್ತ್ರಗಳೆಲ್ಲ ತಾವೆ ಉಪದೇಶಮಾಡಿ ಅನಿತರೊಳು ಲೋಕಾಂತರಮನೈದಲು, ತಾನಲ್ಲಿ ಕ್ವಚಿತ್ಕಾಲ ವಾಸಮಂ ಮಾಡಿ ತನ್ನಲ್ಲಿ ತಾನೆ ಆಲೋಚಿಸಿ, ಋಣತ್ರಯಮುಕ್ತನೆ ಮುಕ್ತನೆಂದು ನಿಶ್ಚೈಸಿ, ಸ್ವಾಧೀನವಾದ ಬ್ರಹ್ಮಚರ್ಯಮಂ ಯಥಾಶಕ್ತಿಯಾಚರಿಸಿ ಋಷಿಗಳ ಋಣದಿಂ ಮುಕ್ತನಾಗಿ, ತದನಂತರದಲ್ಲಿ ಗೃಹಿಯಾಗಿ ಸ್ವಕ್ಷೇತ್ರದಲ್ಲಿ ಸಂತಾನಮಂಪಡೆದು ಪಿತೃಋಣದಿಂದ ನಿರ್ಲಿಪ್ತನಾಗಿ, ಪಶುವಿಶಸನಮಂ ಮಾಡಿ ದೇವತಾಋಣದಿಂದ ಮುಕ್ತನಾದೆ

ನೆಂದೊಡೆ, ಆ ಎರಡುಸಾಧನಗಳು ಪಿತ್ರೈಕಸಾಧ್ಯವೆನಗೆ, ಪಿತ್ರಾರ್ಜಿತ ಸ್ವಾರ್ಜಿತ ದ್ರವ್ಯೋಪಪತ್ತಿ ಇಲ್ಲದರಿಂದ ಅಭಾವವಿರಕ್ತಿಯುಳ್ಳವನಾಗಿ ಚಿತ್ತಶೋಭೆಯಿಂದ ತೀರ್ಥಯಾತ್ರಾವ್ಯಾಸಂಗವಂ ಮಾಡಬೇಕೆಂದು ಗಂಗಾದಿ ತೀರ್ಥಂಗಳಂ ನಾನಾವಿಧಕ್ಷೇತ್ರಂಗಳಂ ತಿರುಗುತ್ತಲ್ಲಲ್ಲಿ ತತ್ತದ್ದೇಶದೊಳಗಿರುವ ವೇಷಭಾಷಾಚಾರಮರ್ಯಾದೆಗಳಂ ನೋಡುತ್ತ, ವಿದರ್ಭದೇಶಮಂಪೊಕ್ಕು ಬರುತ್ತಿರಲು, ತದ್ದೇಶಕಧಿಪತಿಯಾದ ಸೋಮದತ್ತರಾಯನ ಮಗಳು ಕಲಾವತಿಯೆಂಬ ಕನ್ನಿಕೆಯು, ಅನೇಕ ಸಖೀಜನರಿಂದೊಡಗೂಡಿ ಕ್ರೀಡಾರ್ಥವಾಗಿ ತತ್ಪುರೋದ್ಯಾನಕ್ಕೈತಂದು ಕುಸುಮಾಪಚಯ ಜಲಕ್ರೀಡಾದಿ ನಾನಾವಿನೋದದಿಂ ಕ್ರೀಡಿಸುತ್ತಿರಲು, ಅವರಲ್ಲಿಗೈದುವದಕ್ಕೆಮುಂನಲೆ ತಾನು ಮಾರ್ಗಶ್ರಮದಿಂದ ಲಲಾಟಂತಪನಾದಚಂಡಮಾರ್ತಾಂಡ ಕಿರಣದಿಂ ತಪ್ತನಾಗಿ ಆರಾಮದೊಳಗೊಂದು ಪುಷ್ಪಿತರಸಾಲದ್ರುಮದ ನೀರಂ ತಚ್ಛಾಯೆಯದೊಳು ಕುಳ್ಳಿರಲು, ಆ ರಾಜಕುಮಾರಿಯಂನ್ನೆಡೆಗೆಬಂದು ಸಾಷ್ಟಾಂಗದಿಂ ನಮಿಸಿ ವಿನಯದಿಂ ತನ್ನ ವೃತಾಂತಮಂ ಕೇಳಿ ತಿಳಿದು, ಬಳಿಕಂಜುತಂಜಲಿಬದ್ಧಳಾಗಿಮಧುರೋಕ್ತಿಯಿಂದ ಸ್ತೋತ್ರಮಂ ಮಾಡಿ ವಿಪ್ರೋತ್ತಮನೆ ಕೇಳು, ಅತ್ಯಂತಾವಶ್ಯಕವಾದ ಕಾರ್ಯ ತನಗೊಂದುಂಟು, ಅದು ನಿಮ್ಮ ಕೃಪೆಯಿಂದಾಗಬೆಕಲ್ಲದೆ ಯಿನ್ನೋರ್ವರಿಂದಸಾಧ್ಯ, ಅದರಿಂದಲಾಕಾರ್ಯಮಂ ನೀವು ಸಂದರ್ಭಮಾಡಿದಡೆ ನಿಮ್ಮಿಷ್ಟಾರ್ಥಮಿನಿತಾಯಾಸಮಿಲ್ಲದಂತೆ ಮಾಡಿ ಧನಕನಕಾದಿಸಕಲಸಂಪದಗಳಂ ಕೊಡುವೆನಿದುಸತ್ಯಮೆಂದು ಬಹು ಪ್ರಕಾರವಾಗಿ ಬೇಡಲು, ಯನ್ನಿಂದ ಕೂಡಿ ಬಹುಕಾರ್ಯಮಾಬೊಡೆ ಅವಶ್ಯವಾಗಿ ಮಾಡುವೆನೆಂದೊಡಂಬಡಲು ಆ ಕಲಾವತಿಯೆಂಬ ಕಂನಿಕೆಯು ಯಲೈ ವಿಪ್ರವರ್ಯನೆ ಕೇಳು ಚಿರಕಾಲದಿಂದ ಲೋಕೋತ್ತಮನಾದ ಪತಿಯಂ ಪಡೆಯಬೇಕೆಂಬ ಕುತೂಹಲದಿಂದ ತಮ್ಮಿಷ್ಟದೇವತಾಪ್ರಾರ್ಥನೆಯಂ ಮಾಡಲು, ವಂದು ದಿನ ಕರುಣದಿಂ ಪ್ರತ್ಯಕ್ಷವಾಗಿ ಯನ್ನ ಮನೋರಥಮಂ ಕೇಳಿ ತಿಳಿದು ಕ್ಷಣಮಾಲೋಚನೆಯಂ ಮಾಡಿ ಬಳಿಕ ಸರಯೂತೀರದೊಳಿರುವ ಭೀಮೇಶ್ವರದರ್ಶನಾರ್ಥವಾಗಿ ಪ್ರತ್ಯಹದಲ್ಲಿಯು ಬ್ರಹ್ಮಮಾನಸಪುತ್ರನಾದ ನಾರದಮಹರ್ಷಿಗಳು ಬಂದು ವಂದನೆಯಂ ಮಾಡಿ ಪೋಗುವನಾತನಂ ಕೇಳಿದ

ಡೆ, ನಿನ್ನಪತಿಯ ವೃತ್ತಾಂತವಂ ಪೇಳುವನು, ಅವರಿಂ ತಿಳಿಯುವದೆಂದು ಪೇಳಿ ಅಂತರ್ಧಾನವನ್ನೈದಲು, ಅಂದನಾರಭ್ಯ ಈ ವೃತ್ತಾಂತವಂ ತಿಳಿದು ಯೆನಗೆ ಪೇಳುವರನಕಾಣದೆ ಮಿಡುಕುತಿರುವೆನು, ಆರ್ಯ, ಆ ದೇವತಾನುಗ್ರಹದಿಂದ ನಿನ್ನಡಿಯದರ್ಶನವಾಯಿತು, ಈಗ ಯೆಂನೊಳತ್ಯಂತ ಕೃಪೆಯಿಂದ ಸರಯೂನದೀತೀರದೊಳಿರುವ ಭೀಮೇಶ್ವರಾಲಯುವನ್ನೈದಿ ತದಾಗಮನಕಾಲವಂ ಪ್ರತೀಕ್ಷಿಸಿ ಮಹರ್ಷಿಯ ಪ್ರಸಾದವಂ ಪಡೆದು ಈ ವೃತ್ತಾಂತವಂ ತಿಳಿದು ಯೆನಗೆ ಪೇಳಬೇಕೆಂದು ಬಹುಪ್ರಕಾರವಾಗಿ ಪ್ರಾರ್ಥನೆಯಂ ಕೂಡಿ ಆ ರಾಜಕುಮಾರಿಗೆ ಅಭಯವಂ ನಿತ್ತು ಆ ಕ್ಷೇತ್ರಮಂ ಕುರಿತು ಪೋಗುವನಾಗಿ ಬಹುದೂರಮಾರ್ಗಮಂ ಕಳೆದು ನಡುಬಳಿತ ಅರಣ್ಯಮಾರ್ಗಮಂ ಪೊಕ್ಕೆನು, ಇದು ಯೆನ್ನ ವೃತ್ತಾಂತ ಮೆಂದೆನಲು, ಅಮಾತ್ಯನು ವಿಪ್ರವಾಕ್ಯಮಂ ಕೇಳಿ ಮನದೊಳಾಲೊಡನೆಯಂ ಮಾಡಿ, ಈ ವಿಪ್ರನಿಂದೆನ್ನಕಾರ್ಯಗಳೆಲ್ಲ ಕೂಡಿಬರಬೇಕಲ್ಲದೆ ಯೆಂನಿಲ್ಲಮಾರ್ಗಾಂತರಮದರಿಂದ ಭೇದೋಪಾಯಮಂ ಮಾಡಬೇಕೆಂದು ಮನಿನಿಶ್ಚಯಮಾಡಿ, ಯೆಲೈಬ್ರಾಹ್ಮಣೋತ್ತಮನೆ ಕೇಳು, ಮನುಜರ್ಗೆ ಮಹರ್ಷಿಯಾದ ನಾರದನ ದರ್ಶನಮದೇಂ ಸುಲಭಮೆ ಮಾತಾಡಲೇಂ ಸಹಜಮೆ ನೋಡು, ಅದರಿಂದ ದುರ್ಘಟವಾಗಿ ತೋರುವದೆನೆಗೆ ಇಂತಲ್ಲದುಪಾಯದಿಂ ಕೂಡಿ ಬರುವ ಕಾರ್ಯಕಿಂತಾಯಾಸಪಡಲೇಕೆ, ಪಂದುಪಾಯದಿಂ ಬಹುಕಾರ್ಯ ಕೂಡಿಬರುವ ಸನ್ನಿಧಾನವಿರಲು ವೃಥಾಯಾಸಪಡುವದುಯುಕ್ತಮಲ್ಲ, ಫಲಿತಾರ್ಥಮೇನೆಂದೊಡೆ, ಪೊಡವಿಪನ ಕಾರ್ಯ ಕನ್ಯೆಯಮನೊರಥ ತಮ್ಮಿಮ್ಮರ್ವರಶ್ರಮಮಿದೆಲ್ಲ ಸಫಲಮಪ್ಪುದದರಿಂದ ಸರ್ವತೋಮುಖಮಾಗಿಯುಷ್ಮತ್ಕಾರ್ಯಸಫಲವಾಗುವದು, ಅದರಲ್ಲಿ ಸಂಶಯಮಿಲ್ಲವೆಂದುನುಡಿದ ಮಂತ್ರಿಯಂ ನೋಡಿ, ಭೂಸುರನು ಮಂತ್ರಿವರನೀನುಡಿದವಾಕ್ಯಾರ್ಥಮೆನಗಾಗಲಿಲ್ಲ ಅದರಭಿಪ್ರಾಯಮಂ ತಿಳುಹಿದಡೆ ನಿನ್ನ ಸೂತ್ರಾನುಸಾರಿಯಾಗಿರುವೆನೆಂದೊಡಂಬಡಲು, ಧರ್ಮಗುಪ್ತನು ಪರಮಸಂತೋಷಯುಕ್ತನಾಗಿ ನಿಖಿಲಸಂವಿಧಾನಮಂನೊರೆಯಲು, ಅತ್ಯಂತಹರ್ಷದಿಂದುಭಯತ್ರರೊಡಗೂಡಿ ವಿದರ್ಭದೇಶಾಭಿಮುಖರಾಗಿ ಬರುತಿರಲಾ ರಾತ್ರಿಯೊಂದಡೆಯೊಳಿರ್ದು ಮರುದಿನದುದಯಕಾಲದೊಳೆದ್ದು ಮಂತ್ರಿಯ

ಪ್ಪಣೆಗೊಂಡು ತತ್ಸಂಚಿತವಿದರ್ಭವಿಷಯಪ್ರಾಂತಸ್ಥಿತಮಹೋದಯವೆಂ ಬ ಅಗ್ರಹಾರದೊಳು ಪ್ರಚ್ಛನ್ನನಾಗಿ ಯಿರುತಿರಲು. ಇತ್ತಲಾಧರ್ಮಗು ಪ್ತನು ಅಲ್ಲಿನ್ದ ಪಥದಪ್ಪಿ ವಿಕಲಿತನಾದ ಸೇನೆಯಂ ಪರಿವಾರವಮಂ ಕೂಡಿಕೊಂಡು ಅಲ್ಲಿಂದ ಸಕಲವೈಭವಸಹಿತನಾಗಿ, ಮೆಲ್ಲಮೆಲ್ಲನೆ ವಿದರ್ಭ ದೇಶದೊಳು ಸೋಮದತ್ತರಾಯನಿರುವ ನಗರಾಭಿಮುಖನಾಗಿ ಬರುತಿ ರಲು, ಆನಾಡೊಳಿರುವ ಅಧಿಕಾರಿಗಳು ತಮ್ಮ ಪ್ರಭುವಿನಡಿದಾವರೆಗೆ ಸೆ ನಾಸಮೇತನಾಗಿ ಬರುತಿರುವ ಮಂತ್ರಿಶೇಖರನ ವೈಭವಮಂ ಬಂದು ಬಿನ್ನ ಹಮಾಡಲು, ಸೋಮದತ್ತರಾಯನು ಅಧಿಕಾರಿಗಳಿಗೆ ಬರುತಿರುವ ಮಂ ತ್ರಿಪ್ರವರನಿಗೆ ಸಕಲೋಪಚಾರವಂ ಮಾಡುವಂತೆ ಬರೆಯುತಾಜ್ಞಾಪಿಸ ಲು, ನಿಖಿಲಮರ್ಯಾದೆಗಳು ಮಾರ್ಗದೊಳು ನಡೆಯುತ್ತಿರಲು, ಮಂತ್ರಿಸಂ ತುಷ್ಟನಾಗಿ ಪುರಸಮೀಪಕ್ಕೆ ಬಂದು ನಿಲ್ಲಲು, ಆ ಮಹೀಪತಿಯು ತನ್ನ ಸಚಿವನಂ ಕರದು ಮಾಹಿಷ್ಮತೀನಗರಿಯಿಂ ಸುಶರ್ಮಮಹಾರಾಯನಿಂದ ಮುಖ್ಯಪ್ರಧಾನನಾದ ಧರ್ಮಗುಪ್ತನೆ ಕಾರ್ಯಗೌರವದಿಂದ ಬಂದಿರುವಂತೆ ತೋರುತಿದೆ, ಅದುಕಾರಣ ನೀವು ಮಂತ್ರಿಮುನ್ನೆಯರೆಲ್ಲ ಸಕಲವೈಭವದಿಂ ದಯದುಗೊಂಡು ಕರದುಕೊಂಡುಬರುವದೆಂದು ಆಜ್ಞಾಪಿಸಿ, ತಾನು ಸ ಭೆಯಂ ಮಾಡಿ ಸಿಂಹಾಸನದೊಳ್ಕುಳಿತು ರಾಜ್ಯವಿಚಾರಮಂಮಾಡುತ್ತಿ ರಲು. ಯಿತ್ತಲಾ ಮಂತ್ರಿಮುನ್ನೆಯರೆಲ್ಲ ಧರ್ಮಗುಪ್ತನನೆದುಗೊಂಡು ಸ ಮಸ್ತ ವೈಭವದಿಂದ ಕರತರಲು. ಅವರಿಂದೊಡಗೂಡಿ ನಗರಮಂ ಪೊಕ್ಕು ಸಭೆಗೈತಂದು ರಾಯನಂ ಕಂಡು ಕೈಮುಗಿದು ತದ್ದತ್ತಾಸನದೊಳಾಸೀನ ನಾಗಿ ಪರಸ್ಪರ ಕುಶಲಪ್ರಶ್ನೆಯಂ ಮಾಡಿ, ಸೋಮದತ್ತರಾಯನು ಧ ರ್ಮಗುಪ್ತನಂ ಕುರಿತು ಸಚಿವಾಗ್ರೇಸರನೆ ಸುಶರ್ಮರಾಯನಂ ಕ್ಷಣಮು ಗಲಲರಿಯದ ನೀನು ಯನ್ನೆಡೆಗೆ ಬಂದಪದನಾವುದೆಂದು ಕೇಳಲು, ಧರ್ಮ ಗುಪ್ತನತ್ಯಂತವಿನಯದಿಂ. ಜೀಯ, ತದಾಜ್ಞೆಯಿಂ ಬಂದೆನೆಂದೆನಲು, ಮ ಹೀಪತಿಯು ಕಾರಣಮಂ ಕೇಳಲು, ಸಂತಾನಾಪೇಕ್ಷೆಯುಳ್ಳವನಾಗಿ ಭವ ದಪತ್ಯಪ್ರಾರ್ಥನೆಯಂ ಮಾಡಲೊಸುಗಂ ಕಳುಹಿದನು ಯೆಂದು ನುಡಿ ಯಲು, ಸೋಮದತ್ತರಾಯನು ಮಹಾನುಭಾವನಾದ ಸುಶರ್ಮರಾಯನು ಜಾಮಾತನಾದಡೆ ಧನ್ಯನಾನೆಂಬು ಮನದಿ ಯೋಚಿಶಿ, ಧರ್ಮಗುಪ್ತನಂ

ಕುರಿತುನಸುನಗುತ ಬಹುಕಾಲದಿಂದೆಮಗೆ ಸಂಬಂಧಮುಂಟದುಕಾರಣ
ಮುಂತಾಗಲೆಂದೊಡಂಬಟ್ಟು, ಮಂತ್ರಿಗೆ ಬಹುಮಾನಮಂಮಾಡಿ, ಸಕಲವೈ
ಭವದಿಂದ ಬಿಡದಿಗಪ್ಪಣೆಯಿತ್ತು, ತಾನು ಮಗಳ ಮನೆಗೈತಂದು ಮಂತ್ರಿ
ಬಂದಿರುವ ಹದನಂತಿಳುಹೆ, ಆ ಕಲಾವತಿಯು ಲಜ್ಜೆಯಿಂ ಶಿರಬಾಗಿ ಜನನಿ
ಯೊಡನೆ ವಿಪ್ರನಂ ಕಳುಹಿರುವ ವೃತ್ತಾಂತಮಂ ತಿಳುಹಿ, ವಿಪ್ರಬರುವ
ದಿನವಾದುದೆಂದು ನುಡಿಯಲು, ಕರುಣದಿಂ ಜನನಿ ಪತಿಗರುಹಲು, ಮಹೀ
ಪತಿಯು ಅದಂಕೇಳಿ, ದೇವತಾಜ್ಞೆಯೆಂದಂಗೀಕಾರಮಂಮಾಡಿ, ನಸುನಗು
ತ ಅರಮನೆಗೈತಂದು, ಧರ್ಮಗುಪ್ತನಂ ಕರತಂದು ತರಳೆಯ ಅಭಿಪ್ರಾ
ಯಮಂ ತಿಳುಹಲು, ಧರ್ಮಗುಪ್ತನು ಕೇಳಿ ದ್ವಿಜಾಗಮನಾನಂತರದಲ್ಲಿ
ತಿಳಿದು ಪೋಗುವೆನೆಂದು ನುಡಿದು, ತನ್ನಬಿಡದಿಗೈತಂದು ಬುದ್ಧಿಶಾಲಿಯಾ
ದ ಚಾರನಂ ವಿಪ್ರನೆಡೆಗೆ ಕಳುಹಲು, ಆ ಗೂಢಚಾರನು ಜವದೊಳೈತಂ
ದು ಮಹೋದಯವೆಂಬ ಅಗ್ರಹಾರದೊಳು ಇರುವ ವಿಪ್ರನೊಡನೆ ಅಖಿಲ
ವೃತ್ತಾಂತಮಂ ತಿಳುಹಲಾ ಭೂಸುರೋತ್ತಮನು ಕೇಳಿಬರುವೆ ನೀ
ಮುಂದೆ ನಡೆಯೆಂದುಕಳುಹಿ, ಚಾರನಂ ತಾನು ಸಾವಕಾಶದಿಂ ಮೆಲ್ಲಮೆಲ್ಲ
ನೆ ಬಂದು ಪುರಮಂ ಪೊಕ್ಕು, ಕಲಾವತಿಯ ಅರಮನೆಯ ಬಾಗಿಲೊಳು
ನಿಂದು, ದ್ವಾರಪಾಲಕರೊಡನೆ ತಾನು ಬಂದಿರುವೆನೆಂದು ನಿಮ್ಮ ರಾಜಕು
ಮಾರಿಗೆ ತಿಳುಹಿನೀವೆಂದು ಕುರುಹಂ ಪೇಳಲು, ದ್ವಾರಪಾಲಕರು ಅಂ
ತಃಪುರಕ್ಕೆಬಂದು ದೂತಿಯರ ಮುಖದಿಂದ ಕುಮಾರಿಗೆ ತಿಳುಹಲು, ಆಕ್ಷ
ಣದಿ ಪರಮಸಂತೋಷಯುಕ್ತಳಾಗಿ ಕುಮುದಿನಿಯಂ ಕರದು ಭೂಸು
ರೋತ್ತಮನಂ ಅಂತಃಪುರಕ್ಕೆ ಕರತರುವುದೆಂದು ಕಳುಹಿ, ಕುಮುದಿನೀ
ಯೆಂಬ ದೂತಿಯು ಕರತಂದ ದ್ವಿಜೋತ್ತಮನಂಘ್ರಿಗೆ ವಂದನೆಯಂ
ಮಾಡಿ, ದಿವ್ಯಾಸನವಂನಿತ್ತು, ಅರ್ಘ್ಯಪಾದ್ಯಗಳಿಂದ ಸತ್ಕರಿಸಿ ಎಲೈ ಭೂ
ಸುರೋತ್ತಮನೆ ಕೇಳು ನೀಂ ಪೋಗಿರ್ದ ಕಾರ್ಯಮೇನಾದುದೆಂದು ಕೇಳ
ಲು, ಅಗ್ನಿಶರ್ಮನು ಕೋಮಲಾಂಗಿಯೆ ಕೇಳು, ದೇವತಾವಾಕ್ಯವನ್ಯಥ
ವಾಗುವುದುಂಟೆ, ನಿನ್ನದೆಶೆಯಿಂದ ಸರಯೂನದೀಸ್ನಾನ, ಭೀಮೇಶ್ವರ ದ
ರ್ಶನ, ಮಹರ್ಷಿಯಡಿದಾವರೆಗಳಸೇವೆ, ಇದೆಲ್ಲ ಘಟನೆಯಾದುದೆಂದು ನು
ಡಿಯಲು, ಕಲಾವತಿಯು ಕುತೂಹಲದಿಂದ ನಾರದಮಹರ್ಷಿಗೂ ನಿಮಗೂ

ನಡೆದ ವಾರ್ತಾಪ್ರಸಂಗಮಂ ಪೇಳಬೇಕೆಂದೆನಲು, ಎಲೈ ರಾಜಕುಮಾರಿಯೆ ಕೇಳು. ಇಲ್ಲಿಂದ ನಿನ್ನ ಕಾರ್ಯಾರ್ಥವಾಗಿ ಪೊರಟು ಬಹುದೂರ ಮಾರ್ಗಮಂ ಕಳೆದು ಸರಯೂತರಂಗಿಣಿಯಂ ಕಂಡು ಸ್ನಾನಮಂ ಮಾಡಿ ಭೀಮೇಶ್ವರಸ್ವಾಮಿಯ ದರ್ಶನಮಂಮಾಡಿ, ಆ ದೇವಾಲಯದ ಮಹಾದ್ವಾರದೊಳು ನಾರದಾಗಮನಮಂ ಪ್ರತೀಕ್ಷೆಮಾಡುತ್ತಾ ರುದ್ರಸೂಕ್ತಂಗಳಂ ಪಠನೆಮಾಡುತ್ತಿರಲು, ಗಗನದೊಳು ಮಿಂಚುಹೊಳೆದಂತೆ ದಿವ್ಯವೀಣಾಗಾನದತ್ತಚೇತೋವೃತ್ತಿವುಳ್ಳವನಾಗಿ ಗಗನದಿಂದಿಳಿದನಾ ಮಯೂರವಾಹನದೊಡನೆ ದಿವ್ಯತೇಜೋಮಯದಿಂ ಪ್ರಕಾಶಿಪ ನಾರದಮಹರ್ಷಿಯ ದಿವ್ಯರೂಪಮಂ ನೋಡಿ, ತಾನುನಡುನಡುಗಿ, ಅನಿತರೊಳು ಧೈರ್ಯಮಂಮಾಡಿ ಸಾಷ್ಟಾಂಗದಿಂ ನಮಿಸಿ ನುತಿಸುತ್ತಿರಲು, ಎನ್ನಂ ನೋಡಿ ಪರಮಕರುಣಾಳುವಾದ ಮಹರ್ಷಿಯು, ತನ್ನಂ ಕುರಿತು ಎಲೈ ವಿಪ್ರನೆ ನಿನ್ನಾಶಯಮೇನು ಎಮ್ಮ ಬಹುವಿಧದಿಂದ ನುತಿಪ ಕಾರಣಮೇನು ಎಂದುಕೇಳಲು, ತಾನು ಮಣಿದು ಮನದೊಳು ಭಯದಿಂದ ನಿನ್ನಭಿಪ್ರಾಯಮಂ ವಿಜ್ಞಾಪನೆ ಮಾಡಲು, ಆ ಮಹರ್ಷಿಯು ಎಲೈ ವತ್ಸ ಭಾವಿಕಾರ್ಯಂಗಳಂ ದೇವತಾಗುಹ್ಯಮಂ ಮನುಜರ್ಗೆ ಪೇಳಲಾಗದು. ನಿನ್ನ ಮನದೆಣಿಕೆ ಇನ್ನೇನಾದಡಿರೆ ಪೇಳು ಎಂದೆನಲು, ಕೈಮುಗಿದು ರಾಜಕನ್ನಿಕೆಗೆ ತಾನಭಯವನಿತ್ತು ತಮ್ಮಡಿದಾವರೆಯ ಕಾಣಲಿಬಂದೆ. ವಿಪ್ರವಾಕ್ಯವನ್ಯಥಾಆಗುವುದು ಚಿತ್ತಕ್ಕೆ ಯುಕ್ತಮಾದೊಡೆ ಅಂತಾಗಲೆಂದೆನಲು, ಆ ಮಹರ್ಷಿಯು ದಯಾರ್ದ್ರಹೃದಯನಾಗಿ ವತ್ಸ ಕೋಸಲದೇಶದೊಳು ಮಾಹಿಷ್ಮತೀನಾಮನಗರದೊಳು ಸುಶರ್ಮನೆಂಬ ಮಹೀಪತಿ ಇರುವನು. ಆತನತೀತಜನ್ಮಗಳಲ್ಲಿ ಬಹುಪ್ರಕಾರವಾಗಿ ಪಂಚಾಸ್ಯನಂ ಭಜಿಸಿ ತತ್ಕೃಪಾಕಟಾಕ್ಷದಿಂದ ಸಕಲಗುಣಸಂಪನ್ನನಾಗಿ ಮಹಿಯಂ ಪಾಲಿಸುತ್ತಿರುವನು. ಈ ವರ್ತಮಾನಕಾಲದೊಳು ಆತನಂ ಪೋಲ್ವ ಮಹೀಶರೀಧರೆಯೊಳಿಲ್ಲ. ಆತನೇ ನೀ ಪೇಳಿದಂಗನೆಗೆ ಪತಿಯಾಗುವನು. ಪೋಗೆಂದು ಪೇಳಿ ಅಂತರ್ಧಾನಮನೈದಲು, ತಾನಾದಿಕ್ಕಿಗೆ ನಮನಮಂ ಮಾಡಿ ತದ್ವಿಯೋಗ ಖೇದದಿಂ ಮೆಲ್ಲಮೆಲ್ಲನೆ ನಿನ್ನೊಳನುರಾಗದಿಂ ಬಂದೆನೆಂದೆನಲು, ಕಲಾವತಿ ಕೇಳಿ ಹರುಷಪರವಶಳಾಗಿ ಮಣಿದು ತನ್ನಂಗದೊಳಿರ್ದ ಸರ್ವಾಭರಣಮಂ ವಿಪ್ರನಡಿಗೆ ಸಮರ್ಪಣೆಯಂ

ಮಾಡಿ ಕುಮುದಿನಿಯುಂ ಕರೆದು ಜನನಿ ಜನಕರ್ಗೆ ಬ್ರಾಹ್ಮಣಾಗಮನವಂ ಪೇಳಿ ಕರೆತಾರೆಂದು ಕಳುಹಲು, ಆ ಕುಮುದಿನಿಯು ರಾಯನೆಡೆಗೈತಂದು ತಿಳುಹಲಾ ಭೂಪತಿಯು ಪತ್ನಿಯಿಂದೊಡಗೂಡಿ ಮಗಳ ಮನೆಗೈತಂದು ವೃತ್ತಾಂತವಂ ಕೇಳಿ ವಿಪ್ರನಿಗೆ ಕನಕಾಭಿಷೇಕವಂ ಮಾಡಿ ಮನದಣಿ ಕೆಯುಂಸಲ್ಲಿಸಿ, ವಿವಾಹವಾಗುವಪರಿಯಂತವೂ ಈ ನಗರದೊಳಿದ್ದು ತರು ವಾಯ ನಿಜಸ್ಥಾನವಂಕುರಿತು ದಯಮಾಡಬೇಕೆಂದು ಪ್ರಾರ್ಥನೆಯುಂಮಾ ಡಿ ವಾಸಮಾಡುವುದಕ್ಕೆ ನಿಲಯಮನಿತ್ತು ಅರಸನಾಸ್ಥಾನಕ್ಕೈತಂದು ಮಂ ತ್ರಿಯಂ ಕಳುಹಿ ಧರ್ಮಗುಪ್ತನಂ ಕರಿಸಿ ಸರ್ವವೃತ್ತಾಂತವಂ ತಿಳಿಸಿ ಲಗ್ನಪತ್ರಿಕೆಯಂ ಬರೆದಿತ್ತು ಮಂತ್ರಿಪ್ರವರನಿಗೆ ಧನಕನಕವಸ್ತುವಾಹನ ಗಳನಿತ್ತು ಬಹುಮಾನವಂ ಮಾಡಿ ಅಪ್ಪಣೆಯಂ ಕೊಡಲು, ಧರ್ಮಗು ಪ್ತನು ಕೃತಕೃತ್ಯನಾದೆನೆಂದು ಸಂತೋಷದಿಂ ಗೂಢವಾಗಿ ವಿಪ್ರನಂ ಕರೆ ಸಿ ಬಹುದ್ರವ್ಯವಸ್ತುಗಳನಿತ್ತು ಅಲ್ಲಿಂದ ಪೊರಟು ಬಹುದೂರ ಮಾರ್ಗ ಮಂ ನಡಬು ಮಾಹಿಷ್ಮತೀನಗರಿಗೈತಂದು ತಿರೆಯಾಣ್ಮನಂ ಕಂಡು ನಿ ಖಿಲವೃತ್ತಾಂತವಂ ಪೇಳಿ ಲಗ್ನಪತ್ರಿಕೆಯನ್ನೀಯಲು, ಆ ಮಹೀಶನತ್ಯ ಧಿಕ ಮೋದದಿಂದೋದಿ ಮಂತ್ರಿಯಂ ತೆಗದಪ್ಪಿ ಬಹುಪ್ರಕಾರ ಶ್ಲಾಘನೆ ಯಂಮಾಡಿ ಮನೆಗಪ್ಪಣೆಯಿತ್ತು, ಸರ್ವಗುಣವತಿಯಾದ ಕಾಂತಿಮಾಲಿನಿ ಯು ಅರಮನೆಗೆ ಬಂದು ವೃತ್ತಾಂತಮಂತಿಳಿಸಿ ಪತ್ರಿಕೆಯನ್ನೀಯಲು, ಆ ಕಾಂತಿಮಾಲಿನಿಯು ಪತ್ರಿಕೆಯನ್ನೋದಿ ಪರಮಸಂತೋಷದಿಂ ಪತಿಯೊ ಡನೆ ನುಡಿದಳೆಲೈ ಕಾಂತ ನಿನ್ನ ಸಂತತಿ ಬೆಳೆಯಬೇಕೆಂಬ ಚಿಂತೆಯೊಂದ ಲ್ಲದಿನ್ನೊಂದಿಲ್ಲವದರಿಂದ ಎಂತಾದಡೆಯು ನಿನಿಗೆ ಸಂತಾನವೆ ತನಿಗೆ ಸಂತಾ ನಮದುಕಾರಣಂ ಸಕಲವೈಭವದಿಂ ತವಕದಿಂ ಪೊರಟು ನಡೆಯಬೇಕೆಂದು ಬಿನ್ನೈಸಲು, ಆ ನರಪತಿಯು ಸತಿಯಗುಣನಿಕರಗಳ ಪೊಗಳುತೀಮಹಿ ಯೊಳಗೆ ನಿನ್ನ ಪೋಲುವ ಸತಿಯರುಂಟೆ ಎಂದು ಕೊಂಡಾಡಿ ಮತ್ತಾಕೆ ಯಂ ತಕ್ಕೈಸಿ, ಕುತ್ತರಿಸುತಲ್ಲಿಂದ ಸಭೆಗೆಬಂದು ಸಿಹ್ಮಾಸನದಿ ಕುಳಿತು ದೈವಜ್ಞರಂ ಕರಿಸಿ ಸುಮುಹೂರ್ತವಂ ತಿಳಿದವರ ಮುಖದಿಂ ಧರ್ಮ ಗುಪ್ತನು ಕರೆದು ರಾಜ್ಯಭಾರವಂ ನಾತನಧೀನವಂಮಾಡಿ, ಸಮಸ್ತ ಸನ್ನಾಹದಿಂ ಪತ್ನೀಸಮೇತನಾಗಿ ಪೊರಟು ಪುರದಿಂ ಸಕಲಸೇನಾಸಮೇತ

ನಾಗಿ ಪರಿವಾರದಿಂ ಪೊರಟು ಬರುತ್ತೊಂದು ದಿನ ಮಾರ್ಗದೊಳು ನಿಶಿ
ಯೊಳಗೆ ಮಲಗಿರಲು. ಆ ಮಹೀಶನ ಪಟಾಲಯದ ಸಮೀಪದೊಳು
ಒಂದು ಮಹದುನ್ನತವಾದ ವಟವೃಕ್ಷವಿರಲು ಆ ಪಾದಪದಲ್ಲಿ ಬಹುಕಾಲ
ದಿಂ ಟಿಟ್ಟಿಭಪತತ್ರಿಮಿಥುನವು ವಾಸವಂ ಮಾಡಿಕೊಂಡಿರುವುದು. ಆ ನಿ
ಶಿಯಲ್ಲಿ ಸ್ತ್ರೀಪಕ್ಷಿ ನಿದ್ರೆ ತಿಳಿದೆದ್ದು ಪತಿಯೊಡನೆಂದಳೆಲೆಕಾಂತ ಕನಸ
ನೊಂದನು ಕಂಡೆನೀ ಗೋರ್ವಮಹೀಪತಿಯು ಜ್ಯೇಷ್ಠಪತ್ನಿಯಲ್ಲಿ ಸಂ
ತಾನವಾಗದಿರಲು ದ್ವಿತೀಯವಿವಾಹವಂ ಮಾಡಿಕೊಂಡಾಕೆಯೊಳು ಸಂ
ತಾನವಂ ಪಡೆದು, ಸುಖದಲ್ಲಿದ್ದಂತೆ ಅದು ಕಾರಣಂ ನೀನು ಇನ್ನೊಬ್ಬ ಟಿ
ಟ್ಟಿಭಿಯಂ ಪತ್ನಿಯಂ ಮಾಡಿಕೊಂಡಾ ಪತ್ನಿಯಲ್ಲಿ ಸತ್ಪುತ್ರರಂ ಪಡೆದು
ನೀನು ಸುಖದಲ್ಲಿ ಇರಬಾರದೆ ಎಂದು ನುಡಿದಾಕೆಯಂ ನೋಡಿ ಟಿಟ್ಟಿಭ
ನು ಎಲೈ ಮರುಳೆ ಕೇಳು. ಈ ಮಾಹಿಷ್ಮತೀಪತಿಯು ವಿವಾಹಾಂತರಾ
ಪೇಕ್ಷೆಯಿಂ ಪೋಗುತಿಹನಿವಂಗೆ ಮುಂದಾಗವ ಅನರ್ಥವಂ ನೀನೆ ನೋ
ಡುವೆ,ತಾಳು ಆದ್ದರಿಂದ ವಿವೇಕಿಯಾದವನು ಜ್ಯೇಷ್ಠಪತ್ನಿ ಗುಣವತಿಯಾ
ಗಿರಲು ದ್ವಿತೀಯವಿವಾಹವಂ ಮಾಡಿಕೊಳ್ಳುವನೆ ಕೇಳೆಂದು ನುಡಿಯಲಾ
ಟಿಟ್ಟಿಭಿಯು ಅದೇನನರ್ಥವಾಗುವದೆಂದು ಕೇಳಲು, ಪುರುಷಪಕ್ಷಿಯು ಪ
ತ್ನಿಯಂ ಕುರಿತು ಈ ರಾಯನೀಗ ವಿವಾಹವಮಾಡಿಕೊಂಬ ದ್ವಿತೀಯಪತ್ನಿ
ಯು ಅತ್ಯಂತಮೂರ್ಖಳು, ಮಹದಸೂಯಾಪರಳು, ಪತಿಗೆ ನಾನಾವಿಧದಿ
ಬೋಧನೆಯಂ ಮಾಡಿ ಗುಣವತಿಯಾದ ಜ್ಯೇಷ್ಠಪತ್ನಿಗೂ ಇವನಿಗೂ
ವಿರೋಧವಂ ಬೆಳೆಸಿ ಮನಕಾಗದಂತೆ ಮಾಡಿ ಈಕೆಯು ಕಪಟೋಪಾಯ
ದಿಂದ ಮಹಾಪತಿವ್ರತೆಯಾದ ಕಾಂತಿಮಾಲಿನೀ ಪುತ್ರನು ವಿದೇಶಗತನಾಗಿ
ನಾನಾವಿಧಸಾಹಸಂಗಳಂ ಮಾಡಿ ಮೃತನಾಗುವನೆಂದು ಪುರುಷಪತತ್ರಿ ನು
ಡಿಯಲಾ ಟಿಟ್ಟಿಭಿಯು ಮನದಿ ಮರುಗುತ್ತ ತದನಂತರವೇನಾಗುವುದೆಂ
ದು ಪುನಶ್ಚ ಪ್ರಶ್ನೆಯಂ ಮಾಡಲು, ಎಲೈ ಟಿಟ್ಟಿಭಿಯೆ ಕೇಳು. ಮೃತನಾದ
ಕಾಂತಿಮಾಲಿನೀ ಪುತ್ರನು ಆಕೆಯಿಂದಾ ಬಾಲ್ಯವಾಗಿ ಪೂಜಿತಳಾದ ಕುಮಾ
ರಜನನಿಯ ಕರುಣದಿಂ ಪುನರುಜ್ಜೀವಿತನಾಗಿ ನಾನಾವಿಧಪ್ರಮದಿಂ ತಿರು
ಗುತ್ತಿರುವ ಸಮಯದೊಳು, ಕನಿಷ್ಠಪತ್ನಿಯಾದ ಕಲಾವತೀ ಪುತ್ರನಿಗೆ
ವಿವಾಹಮಾಡಬೇಕೆಂದು ಪ್ರಯತ್ನವಂ ಮಾಡಿ ಅವರ ದೆಸೆಯಿಂದ ಮಹ

ದ್ವಿಪತ್ತುಗಳನ್ನೈದಿ ಈಶ್ವರಾನುಗ್ರಹಮುಳ್ಳನಾದ ಕಾರಣ ಕಡೆಹಾಯುವ
ನೆಂದು ಪೇಳಲು, ಆ ಸಮಯದೊಳು ಕಾಂತಿಮಾಲಿನೀ ಪ್ರಿಯಸಖಿಯಾದ
ಮತಂಗಿಯು ಆ ದ್ವಿಜವಾಕ್ಯಮಂ ಕೇಳಿ ವಿಸ್ಮಿತಳಾಗಿ ವಡತಿಯೊಡನೊರೆ
ಯಲಂಜುತ್ತ ಸುಮ್ಮನಿರಲು, ಸುಶರ್ಮನುದಯದೊಳೆದ್ದು ಮುಂದೆ ಪ್ರ
ಯಾಣಮಂ ಮಾಡಿ, ಕಳಿಂಗನೆಂಬ ಮಂತ್ರಿಯಂ ಕರೆದು ಮುಂಚಿತವಾಗಿ
ನೀ ಪೋಗೆಂದು ಕಳುಹಲಾ ಕಳಿಂಗನತಿಜವದಿಂದ ಬರುತಾ ವಿದರ್ಭದೇಶ
ಮಂ ಪೊಕ್ಕು ಸೋಮದತ್ತನೆಡೆಗೈತರುತ ಆ ನೃಪತಿಯಿಂದ ಪ್ರೇಷಿತನಾ
ಗಿ ವಿದರ್ಭದೇಶದ ಕೊನೆಯೊಳು ಪರಿಮಿತವಾದ ಸೇನಾಸಮೇತನಾಗಿ ಬ
ರುವ ಸುಶರ್ಮರಾಯನೊಡನೆ ಮಾರ್ಗದೊಳು ಸರ್ವೋಪಚಾರಗಳನಡಸಿ
ಕೊಂಡು ಕರತರಲೋಸುಗಂ ಬರುತಿರುವ ಸೇನಾಪತಿಯಾದ ಚಿತ್ರಸೇನ
ನಂ ಕಂಡು ಪರಸ್ಪರಾಲಾಪದಿಂ ವೃತ್ತಾಂತಮಂ ತಿಳಿದು, ಕಳಿಂಗನು ಪುರ
ಮಂ ಪೊಕ್ಕು ನೃಪತಿಯಂ ಕಂಡು ಮಹೀಶನಾಗಮಮಂ ತಿಳುಹಲು. ಆ ನೃ
ಪತಿಯು ಕಳಿಂಗನಿಗೆ ಸನ್ಮಾನಮಂ ಮಾಡಿ, ತನ್ನ ಮಂತ್ರಿಯಂ ಕರೆದು
ಮಾಹಿಷ್ಮತೀಶನಿಳಿಯುವದಕ್ಕೆ ರಚಿಸಿರುವ ಸಸೋಬಸ್ಕರ ನೂತನ ವಿಶಾ
ಲವಾದ ಆಲಯವನೀತಂಗೆ ತೋರಿ ಈತನಧೀನಮಂ ಮಾಡುವುದೆಂದು ಪೇ
ಳಲು, ಮಂತ್ರಿ ಈ ಕಳಿಂಗನಂ ಕರೆದುಕೊಂಡು ನೂತನವಾಗಿ ನಿರ್ಮಿತವಾ
ಗಿರುವ ವಿಚಿತ್ರತರವಾದ ಸಸೋಬಸ್ಕರನಿಜಯಜಾಂಬೂನದಮಯಾ
ಲಯಮಂ ತೋರುತ್ತಾ ತನ ಅಧೀನಮಂ ಮಾಡಲು. ಆ ಕಳಿಂಗನಾಲಯ
ಮಂ ನೋಡಿ ಸಂತೋಷಯುಕ್ತನಾಗಿ ಸುಖದಿಂದಿರಲು.

ಇತ್ತಲಾ ಸುಶರ್ಮರಾಯನು ಸತ್ವರದಿಂ ಬರುತ ವಿದರ್ಭದೇಶಮಂ
ಪೊಕ್ಕು ಚಿತ್ರಸೇನನಿಂದಸತ್ಕೃತನಾಗಿ ಮೆಲ್ಲಮೆಲ್ಲನೆ ಮಾರ್ಗವಂ ನಡೆ
ದು ನಗರಸಮೀಪದೊಳು ಸೇನಾನಿವೇಶಮಂ ಮಾಡಿ ಮಜ್ಜನಭೋಜನಾದಿ
ಗಳ ಮಾಡುತ್ತಿರಲು. ಸೋಮದತ್ತರಾಯನು ಅಖಿಲ ವೈಭವದಿಂದ ಎದು
ರ್ಗೊಂಡು ಅನ್ಯೋನ್ಯವಾಗಿ ಪ್ರೇಮಾಲಿಂಗನವಂ ಮಾಡಿ ಕುಶಲಪ್ರಶ್ನೆ
ಯಂಮಾಡಿ ಸಂತೋಷಯುಕ್ತರಾಗಿ ಪರಮೋತ್ಸವದಿಂದ ನಗರಪ್ರವೇಶ
ಮಂ ಮಾಡಿ ಬಿಡದಿಯೊಳು ಸುಶರ್ಮನಂ ಬಿಟ್ಟು ಸೋಮದತ್ತನು ತ
ನ್ನಾಲಯಕ್ಕೆ ಬಂದು, ಅಸ್ವಪತ್ನಿಯರೊಡನೆ ಸುಶರ್ಮನ ಸೌಂದರ್ಯಗಾಂ

ಭೀರ್ಯಾದಿಗುಣಗಳಂವರ್ಣಿಸಿ ಪ್ರತಿಷ್ಠೆಗಳಾಗಿರುವಂತೆ ಪೇಳಿ ತನ್ನ ಮನೆಗೈತಂದು, ಉದಯದೊಳಗೆದ್ದು ಮಂಗಳಸ್ನಾನವಂ ಮಾಡಿ ಕ್ಷತ್ರಿಯವರ್ಣಕ್ಕೆ ತಕ್ಕ ವಿಧಾನದಿಂದ ಸುಶರ್ಮರಾಯಂಗೆ ಕಲಾವತಿಯು ದಾನವುಂಮಾಡಿ, ತದಂಗವಾದಗೋ ಭೂ ಹಿರಣ್ಯಾದಿಗಳನಪರಿಮಿತವಾಗಿತ್ತು, ವಿವಾಹಾರ್ಥವಾಗಿ ಬಂದಿರುವ ವಿಪ್ರರಿಗೆ ಮೃಷ್ಟಾನ್ನ ದಕ್ಷಿಣೆ ವಸ್ತ್ರಾಭರಣಗಳ ಯಾವದಪೇಕ್ಷೆಯಿತ್ತು, ಮಹೀಪತಿಗಳ್ಗೆ ವಸ್ತು ವಾಹನ ಧನಕನಕಾದಿ ಬಹುಮಾನವಂಮಾಡಿ ಸತ್ಕರಿಸಿ, ವಂದಿ ಮಾಗಧ ಸೂತಮೊದಲಾದ ಪರಿವಾರಕ್ಕಪರಿಮಿತವಾಗಿತ್ತು, ಸುತೆಗೆ ಅನೇಕರತ್ನಾಭರಣ ದಾಸೀದಾಸರೆ ಮೊದಲಾದ ಅನೇಕಸಂಪದವಿತ್ತು, ಪತ್ನೀಸಹಿತನಾದ ಸುಶರ್ಮರಾಯನಂ ಬಹುಪ್ರಕಾರದಿಂದ ಸಂತೋಷಪಡಿಸಿ, ಕಾಂತಿಮಾಲಿನೀದೇವಿಗೆ ದಿವ್ಯವಸ್ತ್ರಾಭರಣಗಳನಿತ್ತು, ಕಲಾವತಿಯನಾಕೆಯ ಕೈಯೊಳಿತ್ತು, ಉಭಯಪತ್ನಿಯರಿಂದಯುಕ್ತನಾಗಿ ಸುಶರ್ಮನ ಪುರಕ್ಕೆ ಕಳುಹಿ ಕೃತಕೃತ್ಯನಾಗಿ ಸುಖದಿಂರಾಜ್ಯಗೈಯುತ್ತಿರಲು.

ಇತ್ತಲಾ ಸುಶರ್ಮರಾಯನು ಚತುರಂಗಬಲಸಮೇತನಾಗಿ ಬುದ್ಧಿಮತಿಗಳಿಂದ ಕೂಡಿದಾತ್ಮನಂತೆ ಕಾಂತಿಮಾಲಿನೀ ಕಲಾವತಿಯೆಂಬ ಪತ್ನಿಯರಿಂದೊಡಗೂಡಿ ಮಾಹಿಷ್ಮತಿಗೆ ಬಂದು ಸುಖದಿಂಧರೆಯಂ ಪೊರೆಯುತ್ತಿರಲು, ಕನಿಷ್ಠಪತ್ನಿಯಾದ ಕಲಾವತಿಯು ಸ್ತ್ರೀಸ್ವಭಾವಸಿದ್ಧವಾದ ಮಸದಸೂಯಾಪರಳಾಗಿ ಗುಣವತಿಯಾದ ಕಾಂತಿಮಾಲಿನೀ ವಿಷಯವಾಗಿ ಸುಶರ್ಮರಾಯಂಗೆ ವೈಮನಸ್ಯಮಂ ಬೆಳಯಿಸಿ ಪ್ರತ್ಯೇಕವಾಗಿ ರಮಣೀಯವಾದ ಅರಮನೆಯಂ ರಚಿಸಬೇಕೆಂದು ಪತಿಗೆ ಬೋಧನೆಯಂ ಮಾಡಿ ನೂತನವಾಗಿ ರಚಿಸಿದ ಮಣಿಮಯವಾದ ಅರಮನೆಯಲ್ಲಿ ಪತಿಯಿಂದೊಡಗೂಡಿ ಸುಖದಿಂದಿರಲು, ಕಾಂತಿಮಾಲಿನಿಯು ಪುರಾತನವಾದ ಅರಮನೆಯಲ್ಲಿ ಪ್ರತಿಸ್ಥಳಾಗಿ ನಿರಂತರ ಕೃತಾಂತಹರನಂಗನೆಯ ಚರಣಕಮಲಂಗಳಾರಾಧನೆಯಲ್ಲಿ ತತ್ಪರಳಾಗಿ ತದ್ಧ್ಯಾನಜನಿತಾನಂದ ವಾರ್ಧಿಯೊಳು ಮುಳಗಿ ಇತರ ವಿಷಯಂಗಳಂ ಮರತು ಯೋಗಿಗಳಂತೆ ದಿನವಂದುತ್ಸಟಿಯಾಗಿ ಕಾಲವಂ ಕಳಯುತ್ತಲಿರುತಿರಲು, ಸುಶರ್ಮನಾ ಕಲಾವತಿಯ ಬಿಬ್ಬೋಕಪಾಶದಿಂ ಬದ್ಧನಾಗಿ ಗುಣವತಿಯಾದ ಕಾಂ

ತಿಮೂಲಿನಿಯುಂ ಮರೆತು ಚಿರಕಾಲ ಕೃತಘ್ನನಂತಿದ್ದು ಆ ಕಲಾವತಿಯಲ್ಲಿ
ಯೂ ಸಂತಾನಮಂ ಕಾಣದೆ ಸಂತಾನರಹಿತನಾಗಿ, ಮುಖ್ಯಾಮಾತ್ಯನಂ
ಕರೆಸಿ ರಾಜ್ಯಭಾರಮಂ ತದಧೀನಮಂ ಮಾಡಿ ಸ್ವಜನರಿಂದ [illegible]ನಾಗಿ
ಘೋರವಾದ ಕಾಂತಾರಮಂ ಪೊಕ್ಕು ವಿವಿಕ್ತರಮ[illegible]
ನೋಡುತ್ತ ಬರುತಿರಲು. ಮಹೇಂದ್ರಾಚಲದ ಸಾನುವಿನಲ್ಲಿ ರಮಣೀಯವಾ
ದ ತಪೋವನಮಂ ಕಂಡು ಪರಮಸಂತೋಷಯುಕ್ತನಾಗಿ ವಾಸಮಂ ಮಾಡಿ,
ನಿರ್ಮಲ ಜಲಾಶಯದೊಳು ಸ್ನಾನಮಂ ಮಾಡಿ ಯಮನಿಯಮಾಸನ ಪ್ರಾ
ಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿ ಮೊದಲಾದ ಅಷ್ಟಾಂ
ಗಯೋಗಯುಕ್ತನಾಗಿ ಧೂರ್ಜಟಿಯಂ ಕುರಿತು ತಪಮಂ ಮಾಡಿ, ವಾತಾಂ
ಬುಪರ್ಣಾಶನನಾಗಿ ಪಾದಾಂಗುಷ್ಠದಿಂದ ಮಹಿಯನಾಶ್ರಯಿಸಿ ಊರ್ಧ್ವ
ಬಾಹುವಾಗಿ ಅಸಂಪ್ರಜಾತಸಮಾಧಿಯಿಂದ ಉಮಾಪತಿಯ ಚರಣಾರವಿಂ
ದಗಳಂ ಧ್ಯಾನಮಾಡುತ್ತಿರಲು, ಪರಮಕರುಣಾಶಾಲಿಯಾದ ಪಶುಪತಿಯು
ಈ ರಾಜರ್ಷಿಯಾಚರಿಸುವ ದಾರುಣವಾದ ತಪಮಂ ಮನದಂದು ಪಾರ್ವ
ತೀಸಹಾಯನಾಗಿ ಪರಮಮಂಗಳಕರವಾದ ತನ್ನ ದಿವ್ಯರೂಪಮಂ ಸುಶ
ರ್ಮನ ಅಕ್ಷಿಗೋಚರಮಂ ಮಾಡಿಸಲು. ಸಾಕ್ಷಾತ್ಪರಮೇಶ್ವರನಂ ನೋಡಿ
ಸಾಷ್ಟಾಂಗದಿಂ ನಮಿಸಿ ನಾನಾವಿಧಸ್ತೋತ್ರಮಂ ಮಾಡಿ ಭಕ್ತಿಪಾರವಶ್ಯ
ದಿಂ ಬಾಲೋನ್ಮತ್ತಸೋಪಾದಿಯಲ್ಲಿ ನರ್ತನಮಂ ಮಾಡಿ ನಿನ್ನ ಚರಣಾ
ರಾಧಕನಾದ ಪುತ್ರನಂ ದಯಮಾಡಬೇಕೆಂದು ಬೇಡುವ ಮಹೀರಮಣನಂ ನೋಡಿ,
ಮಹಾಕೃಪಾಳುವಾದ ಗಂಗಾಧರನು ಸರ್ವಮಂಗಳೆಯ ಮುಖಮಂ ನೋಡಿ
ದಿವ್ಯವಾದ ರಸಾಲಫಲಮಂ ರಾಜರ್ಷಿಗೆ ದಯಗೈದು ಅಂತರ್ಧಾನಮಂ
ನೈದಲು. ಸುಶರ್ಮರಾಯನು ಜಗನ್ಮೋಹನಾಕಾರದಿಂ ತನ್ನ ದೃಷ್ಟಿ
ಗೋಚರನಾದ ಪರಮೇಶ್ವರನು ಅದೃಶ್ಯನಾದುದರಿಂ ದುಃಖಿತನಾಗಿ ತದ್ವಿ
ಯೋಗಮಂ ಸಹನಮಾಡಲಾರದೆ ಆ ಮಹಾದೇವನ ಪ್ರಸಾದಾ[illegible]ತಮಾ
ದ ಅಮೋಘ ರಸಾಲಫಲಮಂ ತೆಗೆದುಕೊಂಡು ವನದಿಂ ಪೊರಟು [illegible]
ಪ್ರತಿಗೈತಂದು ತನ್ನರಮನೆಯಂ ಪೊಕ್ಕು ಪತ್ನಿಯಂ ನರಸು[illegible]ತನಂ
ಕಂಡು ದೂತಿಯರು [illegible] ಕಲಾವತಿಗೆ ತಿಳಿಸಲು. ಆ ಕಲಾವತಿಯು
ಹರ್ಷಪರವಶಳಾಗಿ ಮೈಮರದು ಪತಿಯಡಿಗೆ ಬಂದು ಸಾಷ್ಟಾಂಗಪುರಸ್ಸರ

ನಂತೆ ಪರಮಶೋಭಿಸ್ವಿನಿಂ ಮೆರೆಯುವ ಪತಿಯಂ ಕಂಡು ದೂರದಲ್ಲಿ ಪ್ರೌಢಮಾಟ್ಸ್ಯ [illegible] ಕದಿಂದ ಪಾದಗಳ ತೊಳೆದು ತಾಂಬೂಲವಂ ಕೊಡುತ್ತ, ಮೆಲ್ಲಮೆಲ್ಲನೆ ಕಾಂತನಂ ಕುರಿತು ಕುಶಲಪ್ರಶ್ನೆಯಂ ಮಾಡಿ ವೃತ್ತಾಂತವಂ ಕೇಳಲಾ ಸುಶರ್ಮನು ಅಖಿಲವೃತ್ತಾಂತವಂ ಪತ್ನಿಯೊಡನೊರೆದು ಕಾಂತಿಮಾಲಿನಿಯು ಮರದು ಯುಕ್ತಾಯುಕ್ತವಿಚಾರವಂ ತೊರೆದು ಮಹೇಶ್ವರಪ್ರಸಾದದಿಂ ಲಬ್ಧವಾದ ಚೂತಫಲವಂ ಕಲಾವತಿಗಿತ್ತು, ತನ್ಮಾಹಾತ್ಮ್ಯವಂ ವಿವರಿಸಲಾ ಕಲಾವತಿಯು ಫಲವಂ ತನ್ನಕರದೊಳ್ತೆಗೆದುಕೊಂಡು ತನ್ನಂತಃಪುರಕ್ಕೆ ಬಂದು ಪತಿಯ ಅನುರಾಗದಿಂ ಯುಕ್ತವಾದ ಮನ್ನನದಿಂದಹುಕೃತಳಾಗಿ ಮಾಲತಿಯೆಂಬ ದೂತಿಯಂ ಕರೆಯಲು. ಆ ದೂತಿಯಾ ಸಮಯದೊಳು ಅಲ್ಲಿಯಿಲ್ಲದಿರಲು, ಕಾಂತಿಮಾಲಿನಿಯು ಆಬಾಲ್ಯವಾಗಿ ಪರಮಭಕ್ತಿಯಿಂದ ಪೂಜಿಸುವ ಗೌರಿದೇವಿಯು ಈ ಕಲಾವತಿಯ ಅಭಿಪ್ರಾಯವಂ ತಿಳಿದು, ಆ ಮಾಲತೀರೂಪವಂಧರಿಸಿ ಕಲಾವತಿಯಡೆಗೆ ಬಂದೇನೆಂದು ಕೇಳಲು, ಕಲಾವತಿಯು ರಸಾಲಫಲವನಾಕೆಯ ಕರದೊಳಿತ್ತು ರಸದೆಗೆದುತಾರೆಂದೆನಲು, ಆ ಜಗನ್ಮಾತೆ ಸುವರ್ಣಪಾತ್ರೆಯೊಳು ಕಿಂಚಿದ್ರಸವತೆಗೆದು ಆಫಲದೊಳಿದ್ದ ರಸವಿಂತೆಯೆಂದು ತಂದೀಯಲಾ ಕಲಾವತಿಯು ಅದಂ ಪಾನವಂಮಾಡಿ ಸಂತೋಷದಿಂದಿರಲೆಂಬಲ್ಲಿಗೆ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ಪ್ರಥಮೋಧ್ಯಾಯವು ಮುಗಿದುದು.

ಪ್ರಥಮಾಧ್ಯಾಯ ಸಂಪೂರ್ಣಂ.

---

# ದ್ವಿತೀಯಾಧ್ಯಾಯಂ.

ಆ ಬಳಿಕ ಅಂಬಿಕಾದೇವಿಯು ಮಹೋಗ್ರರೂಪ ದೂತಿಯ ರೂಪವಂ ತಾಳಿ, ಆ ವಿಶಿಷ್ಟಫಲವಂ ತೆಗೆದುಕೊಂಡು, ಕಾಂತಿಮಾಲಿನೀಮನೆಗೆ ಬಂದು ಆ ಅಮೋಘವಾದ ಚೂತಫಲವನಾಕೆಯ ಕರದೊಳಿತ್ತು, ಪ ತ್ಯಾಗಮುನಿಯಂ ಈಶ್ವರಪ್ರಸಾದದಿಂ ಲಬ್ಧವಾದ ಫಲದ ವೃತ್ತಾಂತವಂ ಪಕ್ಷಪಾತದಿಂ ಕಲಾವತಿಗೆ ವಿಶಿಷ್ಟಫಲವನಿತ್ತ ಮರ್ಯಾದಾತಿಕ್ರಮಣವಂ ಆ ಫಲವನಹಂಕಾರದಿಂದ ರಸಪಡೆದು, ತಾರೆಂದು, ತನ್ನ ಹಸ್ತದೊಳು ಕೊಡಲು, ತಾನು ನಿನ್ನೊಳು ಮಮತೆಯಿಂ ಫಲರಸವನು ಈಷತ್ತಾಕೆ ಗಿತ್ತು, ಮಿಗಿಲಾದ ವಿಶಿಷ್ಟಫಲವಂ ತಂದಿತ್ತ ಪ್ರಕಾರವಂ ಆ ಫಲಭಕ್ಷ ಣೆಯಿಂದಾಗತಕ್ಕ ಮಹಾಫಲವಂ ವಿಸ್ತಾರವಾಗಿ ವರ್ಣಿಸಲು, ಕಾಂತಿ ಮಾಲಿನಿಯು ಪರಮಸಂತೋಷಯುಕ್ತಳಾಗಿ, ಕೇಳಿ, ಎದ್ದು ಎರಡು ಕರಗಳಿಂದ ಫಲವಂ ತೆಗೆದುಕೊಂಡು, ಪ್ರಿಯಸಖಿಯೆ ಕೇಳು ಪತಿಸಂ ಗಮಿಲ್ಲದವಳಿಗೆ ಈ ಫಲಾಹಾರದಿಂದೇನಾಗುವುದು? ಆ ಕಲಾವತಿಗೆ ಇ ತ್ತಡೆ ಪತಿಸಂಗದಿಂದ ಸಂತಾನವಾಗಲೆಂದು ನುಡಿವಾಕೆಯಂ ನೋಡಿ ಆ ಗೌರಿದೇವಿಯರು ಆಕೆಯ ವಿರಕ್ತಿಯಂ ಸಮಬುದ್ಧಿಯಂ ನೋಡಿ ಪರ ಮಕಾರುಣ್ಯದಿಂ ನುಡಿದರೆಲೈತಾಯೆ ಸಾಕ್ಷಾತ್‌ಪರಮೇಶ್ವರಪ್ರಸಾದದಿಂ ಲ ಬ್ಧವಾಗಿರುವುದಿದು ಇದರ ಸಂದರ್ಭವಂ ಮುಕ್ಕಣ್ಣನೆ ಬಲ್ಲ. ನಿನಿಗೆ ಅದರ ಚಿಂತೆಯದ್ಯಾಕೆ. ಋತುಸ್ನಾನವಂ ಮಾಡಿದಂದು ಈ ಫಲವಂ ಭಕ್ಷಿಸೆಂದು ಕೊಡಲು, ಆ ಕಾಂತಿಮಾಲಿನಿಯು ಋತುಕಾಲನಿರೀಕ್ಷಣೆಯಂ ಮಾಡಿ, ಸ್ನಾನವಾದಂದು ಗೌರಿದೇವಿಯಡಿದಾವರೆಯ ನೆನೆದು, ಭಕ್ತಿ ಯಿಂ ಸಬೀಜವಾದ ಫಲವಂ ತ್ವಕ್ಸಹಿತವಾಗಿ, ಈಷತ್ತು ಬಿಡದೆ ಭ ಕ್ಷಿಸಲು, ಈಶ್ವರಪ್ರಸಾದಾಸಾದಿತ ರಸಾಲಫಲಾಹಾರದಿಂದೀರ್ವರೂ ಗ ರ್ಭಧಾರಣೆಯಂ ಮಾಡಿ, ಪ್ರಕಾಶಿಸುತ್ತಿರಲು ಆ ಕಲಾವತಿಯು ಅಂತರ್ವ ತ್ನಿಯಾಗಿರುವ ಚಿಹ್ನೆಗಳಂ ನೋಡಿ, ಮಹೀಪತಿಯು ಚಂದ್ರನಂ ಕಂಡ ಚಕೋರದಂತೆ ಪರಮಾಹ್ಲಾದಯುಕ್ತನಾಗಿ, ಯಡರಿಲ್ಲದೆ ಗರ್ಭಾಭಿವೃದ್ಧಿ

ಯಾಗಬೇಕೆಂಬ ಕುತೂಹಲದಿಂದ ದಾನಧರ್ಮಂಗಳನ್ನು ಅಪರಿಮಿತವಾಗಿ ಮಾಡುತ್ತಿರಲು, ಕಲಾವತಿಯು ಮಹಾದುರ್ಬುದ್ಧಿಯುಳ್ಳವಳಾದಕಾರಣ ವಿದಗ್ಧೆಯರಾದ ದೂತಿಯರಂ ಕರೆದು ನೀವು ಕಾಂತಿಮಾಲಿನೀ ಮನೆಗೆ ಇಂದಿನಾರಭ್ಯ ವ್ಯಾಜಾಂತರದಿಂದ ಪೋಗಿ ತನ್ನ ವೈಭವಮಂ ಗರ್ಭಧಾರಣೆಯುಂ ಪತಿಯ ಅನುರಾಗಮನಾಕೆಯು ಮುಂದೆ ವರ್ಣಿಸುತ್ತಾಕೆಯ ವೃತ್ತಾಂತಮಂ ತಿಳಿದೆನಗೆ ಪ್ರತ್ಯಹವೂ ಪೇಳುತಿರುವುದೆಂದು, ಕಟ್ಟಲೆಯಂ ಮಾಡಲು, ಆ ದೂತಿಯರು ಒಡತಿಯಾಜ್ಞಾನುಸಾರವಾಗಿ, ಕಾರ್ಯಾಂತರ ವ್ಯಾಜದಿಂದ ಕಾಂತಿಮಾಲಿನೀನಿಲಯಕ್ಕೈತಂದು ಕುಳಿತು ಪರಸ್ಪರ ಮಾತಾಡುವ ಕಾಲದೊಳ್ ಸಖಿಯರನ್ಯೋನ್ಯವಾಗಿ, ಕಲಾವತಿಯ ಪ್ರಭಾವಮಂ ವರ್ಣಿಸುತ್ತಿರುತಿರಲು, ಒಂದುದಿನ ಈ ಸಖಿಯರಂ ಕುರಿತು ಪರಮಸಂತೋಷದಿಂ ಎಲೈ ಸಖಿಯರಾ ಕೇಳಿ ಆ ಕಲಾವತೀಗರ್ಭದಲ್ಲಿ ಪುಟ್ಟಿದವನೆ ತನ್ನ ಕುಮಾರನಾತನಭ್ಯುದಯವೆ ತನ್ನ ಅಭ್ಯುದಯ ಪಾರ್ವತೀಚರಣಕಮಲಾನುಗ್ರಹದಿಂದ ಅಭಿವೃದ್ಧವಾಗಲಾಕೆಯ ಗರ್ಭಮಂದೀಶ್ವರಂಗೆ ಕೈಮುಗಿದು, ನಲಿದಾಡುತಿರುವ ಕಾಂತಿಮಾಲಿನಿಯ ಅನಸೂಯಾಪರತ್ವಮಂ ಕೊಂಡಾಡುತ್ತ ಸೌಕುಮಾರ್ಯಸೌಜನ್ಯಮಂ ನೋಡಿ ಪೊಗಳುತ್ತ ಮಾಹಿಷ್ಮತೀಶನ ಪಕ್ಷಪಾತಮಂ ನೆನೆನೆನೆದು ಜರಿವುತ್ತ ಕಲಾವತಿಯ ದುರಹಂಕಾರಮಂ ಕಂಡು ಬಯ್ಯುತ್ತ, ತದುಪಜೀವ್ಯರಾದುದರಿಂದ ಎದುರಿಗೆ ಬಂದು ತದುತ್ಸಾಹಕವಾದ ಚಾಟುವಾಕ್ಯಗಳನಾಡುತ್ತ, ಕಾಲಮಂ ಕಳೆಯುತಿರೆ, ಕಾಂತಿಮಾಲಿನೀಗರ್ಭವು ಶುಕ್ಲಪಕ್ಷದುಡುಪತಿಯಂತೆ, ಪ್ರವರ್ಧಮಾನರಾದಂತೆ, ಚಿಂತಾಬ್ಧಿಯುಬ್ಬಿದುದು. ಲೋಕಾಪವಾದ ಭೀತಿಯಿಂ ಇಂತು ಈರ್ವರ ಗರ್ಭಕ್ಕೆ ನವಮಾಸ ತುಂಬಿ ಕಲಾವತಿಯು ಸುಮುಹೂರ್ತದಲ್ಲಿ ಪ್ರಸವಿಸಲು, ಸುಲಕ್ಷಣವಾದ ಪುತ್ರನಭ್ಯುದಯಮಂ ಕೇಳಿ ನರಪತಿಯು ಅನೇಕ ಗೋ ಭೂ ಹಿರಣ್ಯಾದಿದಾನಧರ್ಮಂಗಳನಪರಿಮಿತವಾಗಿ, ಭೂಸುರೋತ್ತಮರಿಗಿತ್ತು, ಜಾತಕರ್ಮಾದಿಗಳ ಮಾಡಿ, ಸಾಕ್ಷಾತ್ ಪರಮೇಶ್ವರಪ್ರಸಾದದಿಂದುದಿಸಿದವನಾದಕಾರಣ ವೃಷಧ್ವಜನೆಂಬ ನಾಮವನಿಟ್ಟು, ಬಾಲಕ್ರೀಡಾದಿಗಳ ನೋಡಿ ಹಿಗ್ಗುತ್ತಲಿರುತಿರಲು, ಈ ಕಲಾವತಿಯಿಂದ ಆಜ್ಞಪ್ತರಾದ

ದೂತಿಯರೊಳೊರ್ವಕುರೂಪಿಯಾದ ಕುಬ್ಜೆಯು ಈ ಕಾಂತಿಮಾಲಿನಿಯು ಗರ್ಭಚಿಹ್ನೆಗಳನರಿತು, ನಿಶ್ಚಯ ಮಾಡದೆ, ತನ್ನೊಡತಿಯೊಡನೆ ಪೇಳಲಂಜಿ, ನಿಶ್ಚಯ ಮಾಡಿ ಪೇಳಬೇಕೆಂದು ನಿರಂತರದಲ್ಲಿಯು ರಹಸ್ಯಾನ್ವೇಷಣದಲ್ಲಿ ತತ್ಪರಳಾಗಿ ಇರುತ್ತಿರಲು, ಆ ಗರ್ಭಕ್ಕೆ ನವಮಾಸ ತುಂಬಿ, ಶುಭದಿವಸದೊಳು ಸುಮುಹೂರ್ತದಲ್ಲಿ ಪ್ರಸನ್ನಲಗ್ನದಲ್ಲಿ ಪ್ರಸವಿಸಲು, ಆಮ್ರಫಲಾಕಾರನಾದ ಮಾಂಸಪಿಂಡಮಂ ನೋಡಿ ಪರಮದುಃಖಿತಳಾಗಿ, ಪತಿಸಂಗವಿಲ್ಲದೆ ಅಕ್ರಮವಾಗಿ ಗರ್ಭಮಂ ಧರಿಸಿದುದರಿಂದಲೂ ಸಬೀಜವಾದ ಫಲಭಕ್ಷಣೆಯಿಂದಲೂ ಈ ವಿಪರೀತಫಲವಾದುದೆಂದು ಬಹು ಪ್ರಕಾರ ಪ್ರಲಾಪಮಂ ಮಾಡಿ, ಮತಂಗಿಯಂ ಕರೆದು ಈ ಪಿಂಡಮಂ ಖನನ ಮಾಡುವುದೆಂದು ಪೇಳಲು, ಮತಂಗಿಯು ಟಿಟ್ಟಿಭನ ವಾಕ್ಯಮಂ ಸ್ಮರಿಸಿ, ಕಾಂತಿಮಾಲಿನಿಯಂ ಕುರಿತು ಎಲೈ ತಾಯೆ ಈ ಪಿಂಡವೀಶ್ವರಾನುಗ್ರಹದಿಂದ ಜನಿಯಿಸಿರುವದು. ಪೂರ್ವದಲ್ಲಿ ಬಹುಮಂದಿ ರಾಜಪತ್ನಿಯರು ಈಪ್ರಕಾರ ಪಿಂಡಮಂ ಪ್ರಸವಿಸಿ, ತೈಲಕಟಾಹದೊಳಟ್ಟು ಸಂರಕ್ಷಣೆ ಮಾಡಿ, ಕಾಲಾಂತರದಲ್ಲಿ ಪುತ್ರರನ್ನದರಲ್ಲಿ ಪಡೆದಿರುವರದುಕಾರಣಂ ಖನನನ ಮಾಡಲಾಗದೆಂದು ಪೇಳಲಾ ನುಡಿಯಂಕೇಳಿ, ಕಾಂತಿಮಾಲಿನಿಯು ಹಾಗಾದೊಡೆ ತೈಲಕಟಾಹದೊಳಟ್ಟು ಸಂರಕ್ಷಿಸುವುದೆಂದು ಅಪ್ಪಣೆಗೊಡಲು, ಮತಂಗಿಯು ಪಿಂಡಮಂ ತೆಗೆದು, ತೈಲಕಟಾಹದೊಳರಿಸಲಾ ಕಟಾಹಮಂ ಮೀರಿ ಬೆಳೆಯಲು, ಮತ್ತೊಂದು ವಿಶಾಲವಾದ ಕಟಾಹಾಂತರದೊಳಟ್ಟು, ಸಂರಕ್ಷಣೆಯಂ ಮಾಡಲಾ ಕಟಾಹಮಂ ಮೀರಿ ಬರೆಹದ್ದುಯದಿಂದ ಒಂದು ತೊಟ್ಟಿಯ ಮನೆಯೊಳಟ್ಟು, ಪೊರೆಯುತ್ತಿರಲಾತೊಟ್ಟಿಯಾಲಯಮಂ ತುಂಬಿ ಬೆಳೆಯುತ್ತಿರಲು, ಕುಬ್ಜೆಯು ಈ ಅನರ್ಥಮನುಪಾಯದಿಂದ ತಿಳಿದು, ತನ್ನೊಡತಿಯೊಡನೆ ಬಂದು, ಕ್ರಮದಿಂದೀವೃತ್ತಾಂತಮಂ ತಿಳುಹಲು, ಆಕಲಾವತಿಯದಂಕೇಳಿ, ವಿಸ್ಮಿತಳಾಗಿ, ಇದೇನಾಶ್ಚರ್ಯವಿದು ನಿಶ್ಚಯಮೆ ಎಂದು ಕೇಳಲಾ ಕುಬ್ಜೆಯು ನಿನ್ನಡಿದಾವರೆಯಾದ ತಾನು ಅನೃತವಾರ್ತೆಯಂ ಪೇಳುವಳೆ ಸರ್ವಾತ್ಮಾ ನಿಶ್ಚಯವೆಂದು ಬಿನ್ನಹ ಮಾಡೆ, ಆ ಕಲಾವತಿಯು ಅತ್ಯಂತ ಸುತೋಷದಿಂ ಮಹೀಶ

ನಾಗಮನಮಂ ಪ್ರತೀಕ್ಷಿಸುತ್ತ, ಆತ ಬರುವಸಮಯದೊಳು ಭೂಷ ಣಾದಿಗಳಂ ತೆಗೆದು ಮಲಿನಾಂಬರಮನುಟ್ಟು, ಪರಮಕ್ಲೇಶಾವಿಷ್ಟ ಳೋಪಾದಿಯಲ್ಲಿ ಇರಲು, ಸುಶರ್ಮನು ರಾಜ್ಯವಿಚಾರಮಂ ಮಾಡಿ ಮ ನೆಗೈತಂದು ಚಿಂತಾಕ್ರಾಂತಳಾದ ಕಾಂತೆಯಂ ನೋಡಿ, ಪರಮವ್ಯ ಥಾಯುಕ್ತನಾಗಿ, ಮೋಹನಾಂಗಿಯೆ ಕೇಳು ಏನುಕಾರಣವಿಂತುಚಿಂತಿ ಸುವೆ. ಯಾರೇನು ಮಾಡಿದರು ಪೇಳು ನಿನ್ನಾಶೆಯುವೆನೆಂದು ಕೇಳಲು, ಕಲಾವತಿಯು ರಾಯನನುರಾಗಮಂ ತಿಳಿದು, ಕಾಂತ ಕೇಳೆಮ್ಮಿರ್ವರ ಪಾಣಿಗ್ರಹಣಮಂ ಮಾಡಿದುದರಿಂ ನಿನ್ನಡಿಗೆ ಕ್ಷೇಮಮಂ ಕಾಣೆ ನಿಂತಲ್ಲ ದಿಂನೊಂದು ಮಹಾಪಕೀರ್ತಿ ಮಾತ್ರದಲ್ಲೆ ಪರ್ಯವಸಾನವಾಗುವುದೊ? ಅಥವಾ ಮೃತ್ಯುರೂಪವಾಗಿ ಪುಟ್ಟಿರುವುದೊ ? ಕಾಣೆನದರಿಂದ ದುಃಖ ದಿಂದಿರುವೆನೇಗೈವೆನೆಂದಳಲು ತಿರುವಮಾನಿನಿಯಂ ನೋಡಿ, ಆ ಮಹೀಪ ತಿಯು ವಿಸ್ಮಿತನಾಗಿ, ಅದೇನದಂಪೇಳೆಂದೆನಲು, ಕಲಾವತಿಯು ಪತಿಯ ವ್ಯಥೆಯಂ ನೋಡಿ ಸಾವಧಾನದೊಳವಧರಿಪುದೆನ್ನಬಿನ್ನಹವು ನಿನಗತಿ ಪ್ರಿಯಳಾದ ಕಾಂತಿಮಾಲಿನಿಯು ದುಷ್ಟದೇವತಾಉಪಾಸನೆಯಂ ಮಾ ಡಿ, ಗರ್ಭಿಣಿಯಾಗಿ, ಮಾಂಸಪಿಂಡಮಂ ಪಡೆದಿರುವಳಂತೆ ಆ ಮಾಂಸ ಪಿಂಡಮಂ ತೈಲಕಟಾಹದೊಳಿಟ್ಟು ಕಾಪಾಡುತಿರಲು. ಆ ಪಿಂಡವಾ ಕ ಟಾಹಮಂ ಮೀರಿ ಬೆಳೆಯಲು, ಕಟಾಹಾಂತರದೊಳಡಲದಂ ಮೀರಿ ಬ ರಲೊಂದು ತೊಟ್ಟಿಯ ಮನೆಯೊಳಿಟ್ಟು, ಸಂರಕ್ಷಣೆಯಂ ಮಾಡುತಿಹರಂ ತೆ ಮತ್ತಾ ಪಿಂಡವು ತೊಟ್ಟಿಯಂ ತುಂಬಿ ಪೆರ್ಚುತಿದೆಯಂತೆ, ಅದೇನ ದು ಮೃತ್ಯುವೋ ? ಮಾರಿಯೋ ? ಏನುಕಾರಣ ಬೆಳೆಯುತಿರುವು ದೊ ಕಾಣೆನದರಿಂದ ಮಹದ್ವ್ಯಥಾಯುಕ್ತಳಾಗಿರುವೆನೆಂದು ನುಡಿಯಲು, ಸುಶರ್ಮನದಂ, ಕೇಳಿ ಚಿಂತಾಯುಕ್ತನಾಗಿ, ಮನದೊಳಾಲೋಚನೆಯ ಮಾಡಿ, ಎಲೈ ಕಾಮಿನಿಯೆ ಕೇಳು ನಾಳೆಯುದಯದೊಳದರ ವಾಜ್ಮೂ ಲಮಂ ತಿಳಿದು, ಪರಿಹಾರಮಂ ಮಾಡುವೆನು. ಇದಕಿಂತಿಚಿಂತಿಪುದೇ ಕೆಂದು ಪೇಳಿ, ಮಹಾಗುಣವತಿಯಾದ ಕಾಂತಿಮಾಲಿನಿಯಲ್ಲಿ ಮಹತ್ಸಂಶ ಯಮುಳ್ಳವನಾಗಿ, ನಾಳೆ ಪರೀಕ್ಷೆಯಂ ಮಾಡಬೇಕೆಂದು, ನಿಶ್ಚೈಸಿ, ಮ ಹದಾಕ್ರೋಶದಿಂತಿರುವನಿತರೊಳು ತರಂಗಿಣಿಯೆಂಬ ದಾಸಿಯು ಈ ವ

ರ್ತಮಾನವಂ ತಿಳಿದು, ಕಾಂತಿಮಾಲಿನಿಯುಮೇಲಣ ಪ್ರೇಮದಿಂದ ಸತ್ವರದಿ ದೇವಿಯೆಡೆಗೈತಂದು, ವಂದನೆಯಂ ಮಾಡಿ, ವೃತ್ತಾಂತವೆಲ್ಲವಂ ಶೃತಮಾಡಿ, ಪರೀಕ್ಷಾರ್ಥವಾಗಿ ಮಹೀಶನು ನಿಶ್ಚಯವಾಗಿ, ನಾಳೆ ಬರುವನೆಂದು, ಪೇಳಲಾತರಂಗಿಣಿಗೆ ಅನೇಕ ಬಹುಮಾನವಂ ಮಾಡಿ ವಸ್ತ್ರಾಭರಣಗಳನಿತ್ತು ನೀಪೋಗೆಂದು ಕಳುಹಿ, ತಾನು ಪರಮಚಿಂತಾಕ್ರಾಂತಳಾಗಿ, ಮತಂಗಿಯುಂ ಕರೆದು, ರಾಯನು ಪರೀಕ್ಷಾರ್ಥವಾಗಿ ಬರುವವಾರ್ತೆಯಂ ಪೇಳಿ, ಮುಂದೆ ತಮಗೇನುಗತಿಯೆಂದು, ಈರ್ವರಾಲೋಚನೆಯಂ ಮಾಡಿ, ಸರ್ವಸಾಹಸಮೊಳೀಯಾಮಿನಿಯೊಳೆ ಆ ಪಿಂಡಮಂ ಪರಿಹರಿಸಬೇಕೆಂದು, ನಿಶ್ಚೈಸಿ, ಯಾಮಾಂತರದೊಳೆಲ್ಲದೂತಿಯುರಂ ಕರೆದು, ಪೇಳಲಾ ಮತಂಗಿಯೆ ಮುಖ್ಯರಾದ ದಾಸೀಜನರು ಖಡ್ಗಕುಠಾರಿಗಳೆ ಮೊದಲಾದ ತೀಕ್ಷ್ಣಮಾದಾಯುಧಂಗಳಂ ಪಿಡಿದು, ಆ ಮಹಾಸ್ಥೂಲವಾದ ಪಿಂಡಮಂ ಛಿನ್ನಾಛಿನ್ನವಾಗಿ, ಕತ್ತರಿಸಲು, ಅದರ ಮಧ್ಯದಲ್ಲಿ ರಸಾಲಬೀಜದಾಕಾರವಾಗಿರುವ ಶುಕ್ತಿಯಂ ಕಂಡು ಮತಂಗಿಯಾಶುಕ್ತಿಯನೆರಡುಕೈಯೊಳಾಂತು ಮೆಲ್ಲಮೆಲ್ಲನದಂ ತೆಗೆಯಲು, ಸಾಕ್ಷಾತ್ ಬಾಲಭಾಸ್ಕರನಂತೆ ದ್ವಾತ್ರಿಂಶಲ್ಲಕ್ಷಣೋಪೇತನಾದ ಬಾಲಕನು ಮಲಗಿರಲಾ ಶಿಶುವಂ ನೋಡಿ, ಮೆಯ್ಮರೆದು ವಿಸ್ಮಿತಳಾಗಿ ಅತ್ಯಂತ ಸಂತೋಷದಿಂ ಕಾಂತಿಮಾಲಿನಿಯೆಡೆಗೆ ತಂದು ತೋರಿಸಲು, ಅತ್ಯಾಶ್ಚರ್ಯಯುಕ್ತಳಾಗಿ, ಸಾಕ್ಷಾತ್, ಷಡಾನನಂತೆ ಅತಿ ಪ್ರಕಾಶಮಾನವಾಗಿರುವ ಶಿಶುವಂ ನೋಡಿ ಪರಮಪ್ರೇಮದಿಂದೆತ್ತಿ, ಮುದ್ದಾಡಿ, ಮೊಲೆಯೂಡಿ, ಹರುಷದಿಂದೋಲ್ಯಾಡಿ ಮಾತಾಡುತದರೊಡನೆ ಹರಸುತ ಅಡಿಗಡಿಗೆ ಅರಸಕೇಳಾಪಿಂಡಪರಿಪೂರ್ಣವಾಗಿ, ತಾನೆಯುದಯಿಸಿದೊಡಾಶಿಶು ವೈಮರದಳವು ಇನ್ನೆಂತು ಪುಟ್ಟುವನೊ ಮುಕ್ಕಣ್ಣನೆ ಬಲ್ಲ ಕಾಂತಿಮಾಲಿನಿಯು ಮುಂದಿನಾಲೋಚನೆಯಮಾಡಿ, ಮನದೊಳಗೆ ನಿಶ್ಚೈಸಿ, ಮತಂಗಿಯೊಡನಿಂತೆಂದಳೆಲೆ ವತ್ಸೆ ಮುಂದೆ ಬಹುಕಾರ್ಯವಿಹುದದರಿಂದ ಜವದೊಳಗೆ ಆ ಮಾಂಸಖಂಡಗಳ ಕ್ರೀಡಾವನದಲ್ಲಿ ಒಂದೆರಡುತಾಣದೊಳು ಖನನಮಂ ಮಾಡಿ, ಮನೆಯೊಳಗೆ ತಚ್ಚಿಹ್ನೆ ಈಷತ್ತಿಲ್ಲದಂತೆ ಮಾಡಿ, ಬಾರೆಂದು ಸಮಸ್ತ ದೂತಿಯರಂ ಕರೆದವರ್ಗೆ ಯಥಾಭಿಲಷಿತಧನಕನಕವಸ್ತ್ರಾಭೂ

ಷಣಾದಿಗಳನಿತ್ತು ಕಳುಹಲಾ ಮತಂಗಿಯೆ ಮೊದಲಾದ ದೂತಿಯರು ಆ ಮಾಂಸಪಿಂಡವಮಂ ಕತ್ತರಿಸುತ್ತಲ್ಲಲ್ಲಿ ಖನನಮಂ ಮಾಡಿ ಆ ತೊಟ್ಟಿಯೊಳು ತಜ್ಜ್ವರಜ್ಞೆ ಇನಿತಾದಡೆಯು ಮಿಲ್ಲದಂತೆ ಮಾಡಿದರ್ಚೆದುರೆಯರು ಅನಂತರದೊಳಾ ಕಾಂತಿಮಾಲಿನಿಯು ಮತಂಗಿಯಂ ಕರೆದು ವತ್ಸೆ ಕೇಳು ಇನನುದಯವಾಗುವುದು ಎನ್ನಿನಯನ್ನೈತಂದು ವ್ಯಭಿಚಾರವಮಂ ಮಾಡೆ ಪುಟ್ಟಿರುವುದೆಂದು ಕಂದನಂ ಕೊಯಿದ ತಾನೇನಾದಾಡಡೆಯು ಚಿಂತೆಯಿಲ್ಲ. ಅದರಿಂದ ಕಂದನಿಗೆ ಮುಂದೇನುಗತಿಯೆಂದು ಅಳುವಾಕೆಯಂ ನೋಡಿ ಮತಂಗಿ ಒಂದೂ ತೋರದೆ ಮಿಡುಕುತಿರಲು, ಕಾಂತಿಮಾಲಿನಿಯು ಅತ್ಯಂತ ದುಃಖದಿಂ ಮತಂಗಿಯೊಡನಿಂತೆಂದಳೆಲೆ ವತ್ಸೆ ಈ ಶಿಶುವಂ ನಿನ್ನ ಕರದೊಳೀವೆ. ನೀನು ದೇಶಾಂತರಕ್ಕೆ ಪೋಗಿ ಸರ್ವಸಾಹಸದಿಂದ ಶಿಶುವಂ ಸಂರಕ್ಷಣೆ ಮಾಡೆಂದು ಪೇಳಿ, ತನ್ನಂಗದೊಳಗಿರ್ದ ದಿವ್ಯಾರ್ಘಸಮಸ್ತ ರತ್ನಖಚಿತಾಭರಣನಿಕರವಮಂ ತೆಗೆದು, ಸರ್ವಸ್ವಮನಿತ್ತು, ವಿಚಿತ್ರಮುಕ್ತಾಮಯಮಾದ ತೊಟ್ಟಿಲನಿತ್ತು, ಶಿಶುವನೀಯಲಾರದನುತಾಪದಿಂದಳಲಿ, ಬಳಲಿ, ಮುಕ್ತಕಂಠಳಾಗಿ, ರೋದನವಂ ಮಾಡಿ ಮೂರ್ಛೆಯನೊಂದಲು, ಮತಂಗಿಮಾಕೆಯಂ ಸಾಂತ್ವೈಸಿ, ತಾಯೆ ಚಿಂತಿಸಬೇಡ ಸರ್ವೋಪಾಯದಿಂ ಶಿಶುವ ಸಂಹುತ್ತ, ತಂದು, ನಿನಗೊಪ್ಪಿಸುವೆ. ಸತ್ಯಮಿದು ಮರುಗದಿರು ಎಂದು ಶಪಥವ ಮಾಡೆ, ಕಾಂತಿಮಾಲಿನಿಯು ಧೈರ್ಯಾವಲಂಬನೆಯಂ ಮಾಡಿ, ಶಿಶುವಂ ನೋಡಿ ಮುದ್ದಾಡಿ, ಮಾತಾಡಿ, ಚನ್ನಾಗಿ ರಕ್ಷಿಸುವದೆನುತ ದೂತಿಯನು ನೋಡಿ, ಶಿಶುವನಾಮತಂಗಿಯ ಕರದೊಳಿತ್ತು, ಸಹಸ್ರಾಯುವಾಗೆಂದು ಹರಸಿ, ದೂತಿಗೆ ದಿವ್ಯದುಕೂಲಾಭರಣಮನಿತ್ತು, ಮಧುರತರವಾಣಿಯಿಂ ಮತಂಗಿಯಂ ನುಡಿಸಿ, ಮೃದುಭಾಷಿಣಿಯೆಂಬ ದೂತಿಯನಿತ್ತು ಅಪ್ಪಣೆಗೊಡಲು, ಮತಂಗಿಯು ಮೃದುಭಾಷಿಣಿಯಿಂದೊಡಗೂಡಿ, ಶಿಶುವಂ ತೆಗೆದು ಮುಕ್ತಾಮಯಮಾದ ತೊಟ್ಟಿಲೊಳು ಮಲಗಿಸಿ ದಿವ್ಯದುಕೂಲವಮಂ ಮುಚ್ಚಿ, ಶಿರದ ಮೇಲಿಟ್ಟು, ಚೋರಮಾರ್ಗದಿಂ ಪೊರಟು, ದೇಶಾಂತರವಮಂ ಕುರಿತು ಪೋಗಲು, ಈ ಕಾಂತಿಮಾಲಿನಿಯು ಸಂತಾಪದಿಂ ದಹ್ಯಮಾನಸರ್ವಾಂಗಮುಳ್ಳವಳಾದಡೆಯುಂ ಪ್ರಿಯಾಗಮನವಾರ್ತಾಶ್ರವ

ಣನೆಮತ್ತನ್ನಹರ್ಷಾಮೃತವರ್ಷದಿಂ ಪಲ್ಲವಿತಾಂಗಲತೆಯುಳ್ಳವಳಾದಳ
ದೆಂದುಟೊ ಪತಿ ಯೆಂಬ ವಸ್ತು ಸತಿಯರ್ಗೆ ರವಿಯುದಯವಾಗಲು,
ಮಂಗಳಸ್ನಾನವಂ ಮಾಡಿ, ಸರ್ವಾಭರಣಭೂಷಿತಳಾಗಿ ಗೃಹಾಲಂಕಾ
ರವಂ ಮಾಡಿ, ಸಾಕ್ಷಾತ್ ಶಚಿಯಂತೆ ನಿರ್ಮಲಚಿತ್ತಳಾಗಿ, ಕಾಂತಿಮಾಲಿ
ನಿಯು ಗೌರಿದೇವಿಯರ ಚರಣಾರವಿಂದಗಳ ಪೂಜಿಸುತ್ತಿರಲು, ಸು
ಶರ್ಮರಾಯನು ಕನಿಷ್ಠಪತ್ನಿಯುಪದೇಶದಿಂ ಕ್ರೋಧಮೂರ್ಛಿತನಾಗಿ,
ಕಾಂತಿಮಾಲಿನಿಯ ಅರಮನೆಯನಸ್ತಮಯಕಾಲದೊಳು ಪೊಕ್ಕು, ಬ
ರುತಿರಲು, ಕಾಂತಿಮಾಲಿನಿಯು ಇದಿರ್ಗೆ ಬಂದು ಸಾಷ್ಟಾಂಗದಿಂ ನಮಿ
ಸಿ, ಕೈಮುಗಿದು, ಹಸ್ತಲಾಘವನಿತ್ತು, ಬಹುಕಾಲವಾದುದೀ ಅರ
ಮನೆಯನೋಡಿಯದರಿಂ ಗೃಹವೆಲ್ಲ ನೋಡಬೇಕೆಂಬ ತೋರಿಸುವ ವ್ಯಾ
ಜದಿಂ ಸರ್ವಪ್ರದೇಶವಂ ತೋರಿಸುತ ಬರುತ್ತಿರಲು ಆವಹೀಶನಾಲಯ
ಮೆಲ್ಲವನೀಷತ್ತು ಬಿಡದೆ ನೋಡಿ ಅತ್ಯಂತ ಚಿಂತೆಯನ್ನೈದಿ ಈ ಕಾಂ
ತಿಮಾಲಿನಿಯಮೇಲಣ ಅಸೂಯೆಯಿಂದೀವಾರ್ತೆಯಂ ತನ್ನೊಡನೆ ಕಲಾ
ವತಿ ಪೇಳಿದಳೆಂದು ನಿಶ್ಚಯಮಾಡಿ ಸಾಕ್ಷಾತ್ ತನ್ನ ಜಯಲಕ್ಷ್ಮಿಯಂತಿರು
ವ ಮಾನಿನಿಯ ಮೊಗವ ನೋಡಿ ತಾನು ಕಲಾವತಿಯ ವಿಹಾರಾರ್ಥ
ವಾಗಿ ಪೋಗುವ ಸಮಯದೊಳು ಕಾಂತಿಮಾಲಿನಿಯೊಡನೆ ಮಾತಾಡಿದ
ರ್ಥವಂ ತರುವಾಯ ತನ್ನ ವ್ಯಾಪಾರವಂ ಸ್ಮರಿಸಿ ತಾನೆ ಲಜ್ಜಿತನಾಗಿ ಶಿ
ರಬಾಗಿ ಮಾತಾಡದಿರುವ ಪತಿಯ ಇಂಗಿತವತಿಳಿದು ಕಾಂತಿಮಾಲಿನಿಯು
ಚಿರಕಾಲವಾದುದೀ ನಿನ್ನ ಚರಣಾಂಬುರುಹದರುಶನವಾಗಿ ಇದೇನು
ಪುಣ್ಯಮಾಡಿದೆನೊ ನಿನ್ನಡಿಯ ತಾಕಂಡೆ ನಿಂದಿನದಿನವೆ ಸುದಿನ. ಕಲಾ
ವತಿದೇವಿಯುದರದೊಳು ನಿನಗೊರ್ವಸುಕುಮಾರನುದಯಿಸಿದನಾ ಶಿಶುವು
ಪರಮಸುಂದರನೆಂದು ಪೇಳುತಿಹರೆಲ್ಲರಾ ಶಿಶುವ ನೋಡಲು ಪುಣ್ಯವಿಲ್ಲ
ದಂತಾದುದಿನ್ನು ಬಹುಮಾತಿನಿಂದೇನು ಫಲ ನಿನ್ನ ಸಂತೋಷವೆಲ್ಲಾ
ದಡೆಯು ಸಫಲವಾದಡೆ ಸಾಕು; ಎಂದು ಸಾಭಿಪ್ರಾಯವಾಕ್ಯಗಳ ನು
ಡಿಯುತಿರೆ ತಿರೆಯಾಣ್ಮನತ್ಯಂತಲಜ್ಜಿತನಾಗಿ ಮಾತಾಡೆ ಮುಖವಿಲ್ಲದಲ್ಲಿಂ
ದೆಲಿದ್ದು ಕಲಾವತಿ ತನ್ನೊಳನೃತವಾಡಿದಳೆಂದು ರೋಷದಿಂದಾಕೆಯೆಡೆ
ಗೈತಂದು ತನ್ನೊಳನೃತವಾಡಿದೆ ನೀನು ಕಾಂತಿಮಾಲಿನಿಯ ಉಂಗುಟನ

ಪ್ರೊಲುವಸತಿಯರುಂಟೆ ಈ ಜಗದೊಳಗೆ ಎಂದು ನಾನಾವಿಧದಿ ಕಲಾ
ವತಿಯುಜರಿದಾ ತನ್ನಗವುನೆಗೆ ಬಂದು ಕಾಂತಿಮಾಲಿನಿ ನುಡಿದ ಮಾ
ತುಗಳ ನೆನೆನೆನೆದು ಮರುಗುತ್ತಲಿರುತಿರಲು ಕಲಾವತಿ ಕುಬ್ಜೆಯಂ ಕ
ರೆದು ಪತಿಜರಿದ ವೃತ್ತಾಂತವಂ ಪೇಳಿ ನಿನ್ನ ದೆಶೆಯಿಂದೆನಗೆ ಅವಮಾ
ನವಾದುದಂತೆದರಿಂದ ಇನ್ನು ನಿನ್ನಯ ಮುಖವ ನೋಡೆ ನೀನೆಂಡೆ
ಯೊಳಿರಬ್ಯಾಡ ಪೋಗೆಂದು ತಾಡನೆಯುಮಾಡಲಾಕುಬ್ಜೆ ವಿಸ್ಮಿತಳಾಗಿ
ತಾಯೆನಾನನ್ಯತೆಮುನ್ನಾಡಿದವಳಲ್ಲ. ಆದಡೆ ನಾದುದಿವರಭಿಪ್ರಾಯುಮಂ
ತಿಳಿದು ಬಂದೊರವೆ ನೀನು ಪ್ರಕಾಶಮಾಡದಿರೆಂದು ಪೇಳುತಪ್ಪಣೆಗೊಂ
ಡು ಕಾಂತಿಮಾಲಿನಿಯರ ಮನೆಗೆ ಬಂದು ನಾದನೆಯಂಮಾಡಿ ಕಂಬನಿಸಂ
ಬಿ ಕೈಮುಗಿದು ನಿಂದಿರಲು ಕಾಂತಿಮಾಲಿನಿಯು ಕುಬ್ಜೆಯಂ ನೋಡಿ ಎ
ಲೈ ದೂತಿಯೆ ಯಾಕೆ ನೀನಳುವೆಯೆಂದು ಕೇಳಲು ಕುಬ್ಜೆಯು ಕಲಾವತಿ
ತನ್ನ ಬಡಿದು ಆಭರಣವಸ್ತ್ರಾದಿಗಳ ಕಿತ್ತುಕೊಂಡು ಅರಮನೆಯೊಳಿರ
ಬ್ಯಾಡೆಂದು ಪೊರಡಿಶಿದರದರಿಂದ ನಿಮ್ಮಡಿಯ ಮರೆಪೊಕ್ಕೆನೆಂದೆನಲು ಕಾಂ
ತಿಮಾಲಿನಿಯು ಕಾರಣಮೆನೆಂದು ಕೇಳೆ ರಾಯನಿಂಮೊಲಮಕೆ ಬರುವ
ವಾರ್ತೆಯಂ ಮುನ್ನನಿಮ್ಮಡಿಗಳ್ಗೆ ತಾನು ತಿಳುಪಿದೆನೆಂದು ಕುಪಿತಳಾದಳೆಂ
ದು ಕುಬ್ಜೆ ನುಡಿಯಲು ಕಾಂತಿಮಾಲಿನಿಯಾದೊಡೇನೆಂದು ಕೇಳಲು ಕುಬ್ಜೆ
ಯುದರ ಸಂದರ್ಭಮೆನೊ ತನಗೆ ತಿಳಿಯದೆ ನಲಾಕಾಂತಿಮಾಲಿನಿಯು ತ
ನ್ನರಮನೆಯೊಳಿರು ಪೋಗೆಂದು ಅಪ್ಪಣೆಯನೀಯಲು ಕುಬ್ಜೆ ಪರಮಸಂ
ತೋಷದಿಂದೆದ್ದು ಕಪಟೋಪಾಯದಿ ಮಾಂಸಖಂಡಮಂ ಖನನಮಾಡಿ
ರುವ ಪ್ರದೇಶನರಿದು ಬಳಿಕ ಕೃತಕಾರ್ಯಳಾಗಿ ಕಲಾವತಿಯಡೆಗೈದಿ ಮ
ಣಿದು ನರಪತಿ ಬರುವವಾರ್ತೆಯಂ ತಿಳಿದು ಆಯಾವಿನಿಯೊಳಿಭಯ
ದಿಂದ ಆಮಾಂಸಪಿಂಡಮಂ ಛಿನ್ನಾಭಿನ್ನವಾಗಿ ಕತ್ತರಿಸಿ ಕ್ರೀಡಾವ
ನದಲ್ಲಿ ಖನನಮಂ ಮಾಡಿರುವರಾಪ್ರದೇಶಮಂ ನೋಡಿ ನಿಶ್ಚಯ ಮಾ
ಡಿ ಬಂದೆನೆಂದೊರೆಯಲು ಅದಂಕೇಳಿ ಕಲಾವತಿಯು ಪತಿಯೊಡನೆ ಈ
ವೃತ್ತಾಂತಮಂ ಪೇಳಲು ನರಪತಿಯು ಆಕ್ಷಣಬೊಳ್ಳೈತೆಂದು ಖನನ
ಮಾಡಿರುವ ಪ್ರದೇಶಮನ್ನಗಿಸಿನೋಡಲು ಮಾಂಸಖಂಗಳಿರಲು ಅದಂ
ಕಂಡು ಪರಮಾಶ್ಚರ್ಯಯುಕ್ತನಾಗಿ ಕಾಂತಿಮಾಲಿನಿಯೊಳತ್ಯಂತ ರೋ

ಷದಿಂ ವೈಮುರೆತು ಧರ್ಮಗುಪ್ತನಂ ಕರೆಸಿ ನಡೆದ ವೃತ್ತಾಂತವಂ ತಿಳುಹಿ ಕಾಂತಿಮಾಲಿನಿಯ ಸಂಹಾರಮಾಡುವೆನೆಂದು, ಖಡ್ಗವಂ ಪಿಡಿಯಲು, ಧರ್ಮಗುಪ್ತನು ದೇವಿಯೊಳಗಪರಾಧ ನಿಶ್ಚಯಮಿಷ್ಟುಮಾತ್ರದಿಂದಲೇ ಮಾಡಕೂಡದು. ಜೀಯ್ಯ ಪ್ರತ್ಯಕ್ಷಮಾದೊಡೆಯೂ, ಪ್ರಮಾಣಿಸಿ ನೋಡಬೇಕಪ್ಪ್ಯಾಕೆಂದೊಡೆ ತಮ್ಮ ಅಡಿದಾವರೆಗೆ ಪಿಂಡಬೆಳೆಯುತ್ತಿರುವದೆಂದು ಬಿಂನಹಮಾಡಿದವರನುಡಿ ಪರೀಕ್ಷೆ ನಿಶ್ಚಿತಮಾಗಲಿಲ್ಲ ವದು ಕಾರಣ ಸ್ವವಾಕ್ಯನಿರ್ವಾಹಾರ್ಥವಾಗಿ ಈ ಪ್ರದೇಶದೊಳು ಮಾಂಸಖಂಡಮಂ ಖನನಮಾಡಿಸಿ ಪೇಳಿ ತೋರಿದೊಡೆ, ನಾವು ಮಾಡುವುದೇನು. ಕೇಳರಸ ಇಂತಲ್ಲದೆ ನಾರಿಯರು ವಧಾರ್ಹರಲ್ಲ ರಾಜಪತ್ನಿಯಾದ ಕಾರಣ ಪರಿತ್ಯಾಗಮಂ ಮಾಡಲಾಗದು. ಅದುಕಾರಣ ನೂತನಮಾಗಿ ಕಾರಾಗೃಹಮಂ ರಚಿಸುತಲ್ಲಿ ನಿರ್ಬಂಧಮಂ ಮಾಡಿರಿಸಿ, ನೋಡಬೇಕೆಂದು ಬಿನ್ನಹಮಾಡಲಾ ನರಪತಿಯು ಕೇಳಿ, ಮುಖ್ಯಾಮಾತ್ಯನವಾಣಿಯಂ ಮನದೊಳಾಲೋಚಿಸುತ ಪುರೋಪವನದಲ್ಲಿ ಒಂದು ಗೃಹಮಂ ರಚಿಸಿ, ಪರಿಮಿತ ಸಖೀಜನರಿಂದ ಕಾಂತಿಮಾಲಿನಿಯನ್ನಲ್ಲಿರಿಸಿ ಬಹಿರ್ನಿಷ್ಕಾಸನೆಯಿಲ್ಲದಂತೆ, ಕಾವಲನಿಟ್ಟು ಜಂತುಮಾತ್ರವೂ ಒಳಗೆ ಪ್ರವೇಶಮಂ ಮಾಡದಂತೆ ಕಟ್ಟಳೆಯಂಮಾಡಿ ಬಹುವಿಧಮಾದ ನಿಷ್ಠುರೋಕ್ತಿಗಳಿಂದ ಸತಿಯಂ ಧಿಕ್ಕರಿಸಲು ಕಾಂತಿಮಾಲಿನಿಯು ಕಂದನಭ್ಯುದಯಾವಲೋಕನವಾಸೆಯಿಂದವೆಲ್ಲಮಂ ಸಹಿಸಿ ಶರೀರಮಾತ್ರ ಸಂರಕ್ಷಣೆಯಲ್ಲಿ ತಾತ್ಪರ್ಯಮುಳ್ಳವಳಾಗಿ ವೈಷಯಿಕಾನಂದಗಂಧಮಂ ಮರತು ಗಿರಿಜಾಂಘ್ರಿಯುಗಳಮಂ ಪೂಜಿಸುತ್ತಾ ಕಾಲಮಂ ಕಳೆಯುತ್ತಿರಲು ಆ ಬಾಲಕನು ದಿನೇದಿನೇ ಅಭಿವೃದ್ಧನಾಗುತ್ತ ಔತ್ಪತ್ತಿಕಮನೀಷಾವಿಶೇಷದಿಂ ಸಕಲ ವಿದ್ಯಾಭ್ಯಾಸಮಂ ಮಾಡುತ್ತ ಅತ್ಯಂತ ಪ್ರಾಗಲ್ಭ್ಯದಿಂ ಪ್ರಕಾಶಿಸುತ್ತಿರುವ ಕುಮಾರಂಗೆ ದ್ವಾದಶವರ್ಷ ತುಂಬಲು ಸುಶರ್ಮನು ನೋಡಿ ಧರ್ಮಗುಪ್ತನಂ ಕರೆದು ಆಲೋಚನೆಮಾಡಿ ಪುತ್ರಗನುರೂಪಮಾದ ಕನ್ನಿಕೆಯಂ ನೋಡಿ ವಿಚಾರಮಾಡಿ ನಿಷ್ಕರ್ಷೆಯಂಮಾಡಿಕೊಂಡು ಬರಬೇಕೆಂದು ವೀಳೆಯವ ತರಿಸೀಯಲು ಧರ್ಮಗುಪ್ತನಾ

ಜ್ಞಾನುಸಾರವಾಗಿ ಸುಮುಹೂರ್ತದೊಳು ಸಕಲ ವೈಭವದಿಂದತೆರಳಿ ದೇಶದೇಶಂಗಳಂ ತಿರುಗಿ ವೃಷಧ್ವಜಗನುರೂಪವಾದ, ಕುಲಶೀಲಸೌಂದರ್ಯಗಳಿಂದ ಸಲಕ್ಷಣವಾದ, ಕನ್ಯಾರತ್ನಮಂನರಸುತ್ತ, ಬರುತ್ತೊಂದುದಿನ ಮಾರ್ಗದೊಳು ಬರುವ ಬ್ರಾಹ್ಮಣ ಸಮುದಾಯಮಂ ಕಂಡು ಯಾನದಿಂದಿಳಿದು ಸಾಷ್ಟಾಂಗದಿಂ ನಮಿಸಿ ಮಧ್ಯಾಹ್ನವಾದುದರಿಂದ ಸಮೀಪದೊಳು ಪ್ರವಹಿಸುವ ತರಂಗಿಣೀತೀರದೊಳು ನಿರಂತರಛಾಯವಾಗಿರುವ, ರಸಾಲವನದಲ್ಲಿ ಭೋಜನಮಾಡಿ, ಮುಂದೆ ದಯಮಾಡಬಹುದೆಂದು ಬಹುಪ್ರಕಾರವಾಗಿ ಪ್ರಾರ್ಥನೆಯಂ ಮಾಡಲು ಮಾರ್ಗಗಮನಶ್ರಾಂತಿಯುಳ್ಳವರಾದಕಾರಣ ಆ ವಿಪ್ರರು ಮಂತ್ರಿಯ ಮಧುರತರವಾಣಿಯಂ ಕೇಳಿ ಪರಮಸಂತೋಷದಿಂದ ಚೂತವನಮಂ ಪೊಕ್ಕು ತರುನಿಬಿಡಸುಛಾಯದೊಳು ಮಾರ್ಗಶ್ರಾಂತಿಯಂ ನೀಗಿ ಮಾಧ್ಯಾಹ್ನಿಕ ನಿಯಮಂಗಳಾಚರಿಸಲು ಆ ತರಂಗಿಣೀತೀರಕ್ಕೆ ಪೋಗಿ ಸ್ನಾನಜಪದೇವಪೂಜಾದಿಗಳಮಾಡುತಿರಲಿತ್ತ ಧರ್ಮಗುಪ್ತನು ಬಂದು ಒಂದು ಯಾಮದೊಳು ಸರ್ವಭಕ್ಷ್ಯರಸಾಯನ ಪಾಯಸ ಮೊದಲಾದ ಮೃಷ್ಟಾನ್ನರಾಶಿಗಳನಪರಿಮಿತವಾಗಿ ಮಾಡಿಸಿ ಬ್ರಾಹ್ಮಣರಿಗೆ ಭೋಜನವ ಮಾಡಿಸಿ ವಸ್ತ್ರ ಧನಕನಕಗಳನಪರಿಮಿತವಾಗಿತ್ತು ಮಾತಾಡುತ್ತಿರುವಲ್ಲಿ ಬ್ರಾಹ್ಮಣರಂ ಕುರಿತು ಧರ್ಮಗುಪ್ತನು ತಾವೆಲ್ಲಿವಾಸನಾಗಿರುವದೂ ಈಗೆಲ್ಲಿಗೈದುವಿರೆಂದು ಕೇಳಲಾ ದ್ವಿಜವರರು ಪರಮಸಂತೋಷದಿಂ ಧರ್ಮಗುಪ್ತನೊಡನೆ ತಾವೆಲ್ಲರಿಹುದು ಕಳಿಂಗದೇಶ ಕಾಶ್ಮೀರದೇಶಾಧಿಪತಿಯಾದ ದೇವಸೇನರಾಯನ ಮಗಳತಿಚಲ್ವೆ ಸುಶೀಲೆಯೆಂಬನಾಮ ಮೋಹನಾಕೆಯ ಸ್ವಯಂವರವಾರ್ತೆಯಂ ಕೇಳಿ ಪೋಗಿದ್ದೆವು. ಆ ಕನ್ನಿಕೆಯಲ್ಲಿ ಮೋಹಿತರಾಗಿ ಬಹುಮಂದಿನರಪತಿಗಳಾಕೆಯ ಸ್ವಯಂವರಕ್ಕೆ ಬಂದು ಕನ್ಯಾಮನೋರಥಮಂ ಪೂರ್ತಿಮಾಡಲಾರದೆ ಕ್ರೋಧಾವೇಶದಿಂದ ಯುದ್ಧಸನ್ನಾಹನಂ ಮಾಡಲು ದೇವಸೇನರಾಯನವರೊಡನೆ ಯುದ್ಧಮಂ ಮಾಡಿ ಪರಾಜಿತರಂ ಮಾಡಲು ಆ ನರಪತಿಗಳತ್ಯಂತ ದುಗುಡದಿಂ ತಮ್ಮತಮ್ಮ ರಾಜ್ಯಮಂ ಕುರಿತು ಪೋಗಲು ತಾವು ಪೋದಕಾರ್ಯ ನಿರರ್ಥಕವಾಯಿತೆಂ

ಧು ತಮ್ಮ ದೇಶಕ್ಕೆ ಪೋಗಲ್ಯೆದಿದೆವು. ಎಂದು ನುಡಿದಾತಂಗೆ ಆಶೀರ್ವಾದವಂ ಮಾಡಿ ಮುಂದೆ ನಡಿಯಲಾ ಧರ್ಮಗುಪ್ತನು ಸೇನಾ ಸಮೇತನಾಗಿ ದೇವಸೇನನಂ ಕಂಡು ಆತನಿಂ ಬಹುಮಾನಿತನಾಗಿ ಸರ್ವಭೂಭುಜರ ಪ್ರತಾಪವ್ನೂ ನಿನ್ನತೇಜೋವೈಶ್ವಾನರನಿಂದಗ್ರಸ್ತಮಾದಬಳಿಕ ಸಮರದೊಳು ನಿನ್ನಪೋಲುವರುಂಟೆಎಂದು, ಶ್ಲಾಘನೆಮಾಡಿ, ಸ್ವಾಭಿಪ್ರಾಯಮಂ ತಿಳುಹಲು ದೇವಸೇನನತ್ಯಂತ ಮೋದದಿಂದೀವರ್ತಮಾನಕಾಲದೊಳು ಸುಶರ್ಮಮಹಾರಾಯಂಗೆ ಸದೃಶವಾದ ನರಪತಿಗಳೇಇಲ್ಲ. ಆತನ ಕುಮಾರನಾದ ವೃಷಕೇತುನಾಮ ನಾ ಮುಕ್ಕಣ್ಣನೊಲುಮೆಯಿಂದುತ್ಪನ್ನನಾಗಿರುವನೆಂಬ ಕಿಂವದಂತಿ ಲೋಕದೊಳು ಪ್ರಸಿದ್ಧಮಾಗಿರಲು ತತ್ಸಮ್ಮಂಧ ಉನ್ಮದಾದಿಗಳಿಂದ ಪ್ರಾರ್ಥನೀಯಮಿಂತಿರಲು ಆ ಮಹಾರಾಜನೆ ಭವನ್ಮುಖದಿಂದ ಕನ್ನೆಯಂ ಪ್ರಾರ್ಥಿಸಲು ತನ್ಮನೋನುಸಾರವಾಗಿ ನಡೆಯುವದಕ್ಕೆ ಅನ್ಯಥಾಯೋಚನೆಯುಂಟೆ ಆದಡೆಯುಮುತ್ಸುತೆಯ ಅಭಿಪ್ರಾಯಮಂ ತಿಳಿದ ತರುವಾಯ ನೀಪೇಳಿದಂತಾಗಲೆಂದು ಸಚಿವಾಗ್ರೇಸರನಕರವಂ ಪಿಡಿದು ಮಗಳ ಮನೆಗೈತಂದು ಸಚಿವಮಣಿಬಂದಿರುವವೃತ್ತಾಂತಮಂ ತಿಳಿಸಿ ನಮಿಸೆನಲು ಸುಶೀಲೆಯು ಧರ್ಮಗುಪ್ತಂಗೆ ಮಣಿದು ಎಲೈ ತಾತನೆ ಕೇಳು ಮುನ್ನ ಮುಂನೀರನರ್ಧಾಂಗಿಯಾಗಿರುವ ಸುರನದಿಯ ಮಜ್ಜನವಮಾಡಿ ಬರಬೇಕೆಂದು ತಾತನಾಜ್ಞೆಯಿಂ ತಾನು ಬಹುಮಂದಿ ಸಖಿಯರಿಂದೊಡಗೂಡಿ ಪೋಗಲಾ ಸಮುದ್ರದೊಳು ವಿದ್ಯಾಧರಸ್ತ್ರೀಯರು ಅಪ್ಸರಾಂಗನೆಯರು ಗಂಧರ್ವ ಮಾನಿನಿಯರು ನಾಗಕನ್ನಿಕೆಯರು ಸ್ನಾನಾರ್ಥವಾಗಿ ಬಂದಿರಲಾ ಸಮೂಹದೊಳೊರ್ವ ನಾಗಕನ್ನಿಕೆ ಶೇಷಾಮಾತ್ಯನಾದ ದುಷ್ಟಬುದ್ಧಿಯೆಂಬ ನಾಗಾಧಿಪತಿಯ ಕುಮಾರಿ ಮದಾಲಸಾ ಎಂಬವಳು ಆ ಕನ್ನೆಯ ಸೌಂದರ್ಯಮಂವರ್ಣಿಸಲು ಶೇಷಗಳವಲ್ಲ. ಆಕನ್ನಿಕೆಯ ಶಿರಸ್ಸಿನಲ್ಲಿ ಅಮೋಘಮಾದ ಮಹಾಂಧಕಾರ ನಿವಾರಕವಾದ ಪ್ರಭಾವಿಶೇಷದಿಂ ಪ್ರಕಾಶಮಾದ ಶಿರೋಜೀವರತ್ನಮಂ ನೋಡಿ ತದ್ಗತಚಿತ್ತಳಾದಕಾರಣ ತಾನು ಆ ನಾಗಕನ್ನಿಕೆಯಡೆಗೈದಿ, ನಾನಾವಿಧೋಪಾಯದಿಂದನುಸರಿಸಿ, ವಿನಯದಿಂದಾಶಿರೋ

ರತ್ನವಂ ಪ್ರಾರ್ಥಿಸಲು ಆ ಮದಾಲಸೆಯು ಮಹದಹಂಕಾರದಿಂದ ತನ್ನೊಳತಿ ಕೋಪವಂ ಮಾಡಿ ಎಲೇ ನರಾಧಮಳೆ ನಾಗಕನ್ನಿಕೆಯರು ಧರಿಸಿರುವ ರತ್ನಮಂ ನೀನು ಧರಿಸಲು ಯೋಗ್ಯಳೆ ನಿನ್ನ ಯೋಗ್ಯತೆಯಂ ತಿಳಿಯದೆ ಬೇಡಿದೊಡೇನಾಯ್ತು ಈ ಬಾರಿ ಮನ್ನಿಸಿದೆ ಪೋಗಿನ್ನುಮೇಲೆ ಈ ವ್ಯಾರೆ ಮರ್ಯಾದಾತಿಕ್ರಮಣಮಂ ಮಾಡಿದೆಯಾದೊಡೆ ನಿನ್ನ ನಾಸಿಕಾ ಛೇದನವಂ ಮಾಡುವೆನೆಚ್ಚರದೊಳಿರೆಂದು ಬಹು ಜನರಮುಂದೆ ಅವಮಾನವಂ ಮಾಡಿ, ಸ್ವಲೋಕವಂ ಕುರಿತು ಪೋಗಲು ತಾನು ದುಃಖಪೀಡಿತಳಾಗಿ ತನ್ನ ಸಖಿಯರಿದ್ದೆಡೆಗೆಬಂದು ನಾನಾವಿಧಯೋಚನೆಯಂ ಮಾಡಿ ದುಃಖಪಾರವಶ್ಯದಿಂದೀ ಮದಾಲಸೆಯ ಶಿರೋರತ್ನಮಂ ಯಾವಾತ ತಂದು ಎನಗೀವನೋ ತನಿಗಾತನೇ ಕಾಂತನೆಂದು ಶಪಥಮಂ ಮಾಡಿದೆನಖಿಲ ದೇವತಾ ಸಾಕ್ಷಿಯಾಗಿ ಅದರಿಂದಲೀಶ್ವರಪ್ರಸಾದದಿಂದುತ್ಪನ್ನನಾಗಿರುವ ವೃಷಧ್ವಜರಾಯಂಗೆ ನಾಗಲೋಕಜಯಮೆಂಬುದೀ ಷತ್ಕರಮಲ್ಲದಸಾಧ್ಯಮಲ್ಲದರಿಂದ ನೀನು ಪೋಗಿ, ಈ ವೃತ್ತಾಂತಮಾತಂಗೆ ತಿಳುಹಿ ಕಾರ್ಯಮಂ ಸಾಧಿಸಿಕೊಂಡು ಬಂದೆಯಾದೊಡೆ ಎನ್ನ ಪಾಣಿಗ್ರಹಣಮನಾಯಾಸದಿಂದ ಆಗುವದು. ಅದಿಲ್ಲದೇನಾದೊಡೆಯು ದುರ್ಲಭಮೆಂದು ನುಡಿದಾಕೆಯಂ ನೋಡಿ ಕಿಂಚಿದಾಲೋಚನೆಯಂ ಮಾಡಿ ಈಶ್ವರಾನುಗ್ರಹಮುಳ್ಳವರಿಂಗೆ ಏನಸಾಧ್ಯಮೆಂತಾದಡೆಯು ಲೋಕಾಂತರ ವಿಚಾರಮದರಿಂದ ತಾನು ಪೋಗಿ ಈ ವೃತ್ತಾಂತಮೆಲ್ಲವಂ ರಾಯಂಗೆ ತಿಳುಹಿ ಕಾರ್ಯಸಿದ್ಧಿಯಂ ಮಾಡಿಕೊಂಡಾರಾಜಕುಮಾರನಿಂದೊಡಗೂಡಿ ಬರುವೆನೆಂದು ಧೈರ್ಯಮಂ ಪೇಳಿಮನದೊಳೀಕಾರ್ಯಮಸಾಧ್ಯಮೆಂದು ನಿಶ್ಚೈಸಿ ಪರರಾಷ್ಟ್ರದೊಡನೆ ಅಶಕ್ತತಾ ಪ್ರಕಟನೆಯಮಾಡಬಾರದೆಂದುತತ್ಕಾಲೋಚಿತಮಾದ ವಾಕ್ಯಮನಾಡಿ ದೇವಸೇನನಿಂದಪ್ಪಣೆಗೊಂಡು ಮಾಹಿಷ್ಮತೀನಗರಿಗಭಿಮುಖನಾಗಿ ಚಿಂತೆಯಿಂ ಕೃಶನಾಗಿ ಸತ್ವರಧಿ ಬಂದು ಸುಶರ್ಮರಾಯನೊಡನಖಿಲ ವೃತ್ತಾಂತಮಂ ವಿಜ್ಞಾಪನೆ ಮಾಡಲು ಸುಶರ್ಮನವಧರಿಸಿ ಮನದೊಳಗೆ ಮಥಿಸಿ ಮಾನುಷರಿಗಸಾಧ್ಯಮಾದ ಕಾರ್ಯಮಿದೆಂದು ನಿಶ್ಚೈಸಿ ಪ್ರಧಾನಂಗೆ ಬಹುಮಾನವಂ ಮಾಡಿ ನಗರದಲ್ಲಿರುವ

ಕ್ಷತ್ರಿಯೋತ್ತಮರಲ್ಲಿ ಜನಿಸಿರುವ ಸಲಕ್ಷಣವಾದ ಕನ್ನಿಕೆಯಂ ನಿಶ್ಚಯ ಮಾಡಿ ವಿವಾಹಸನ್ನಾಹವಂ ಮಾಡುತ್ತಿರಲು ವೃಷಧ್ವಜನಿದಂ ತಿಳಿದು, ತಾತನೆಡೆಗೈತಂದು ವಂದಿಸಲು ನೃಪತಿ, ಸುತನಂ ತೆಗೆದು, ತಕ್ಕೈಸಿ ಅಂಕದೊಳು ಕುಳ್ಳಿರಿಸಿ ಕುತ್ತುರಿಶಿ ವತ್ಸ ನಿನಗನುರೂಪವಾದಕನ್ನಿಕೆಯು ನೋಡಿಬಾರೆಂದು ಅಮಾತ್ಯನಂ ಕಳುಹಲಾ ಧರ್ಮಗುಪ್ತನು ನಿಖಿಲದೇಶಂಗಳಂ ತಿರುಗಿ ಕಾಶ್ಮೀರದೇಶಾಧಿಪತಿಯಾದ ದೇವಸೇನನ ಸುತೆಯ ವೃತ್ತಾಂತವಂ ತಿಳಿದು ಬರಲೊಂದು ಸಂಭಾವಿತವಾಗಿ ದೊರೆಯಲಿಲ್ಲದರಿಂದ ನಮ್ಮ ನಗರದೊಳಿರುವ ಕ್ಷತ್ರಿಯೋತ್ತಮನಾದ ಇಂದ್ರಗುಪ್ತನ ಕುವರಿ ಯತಿಚಲ್ವೆಯಾದಕಾರಣ ಸರ್ವಲಕ್ಷಣೋಪೇತಳಾದ ಕುಮುದ್ವತಿ ಎಂಬ ಕನ್ಯೆಯಂ ನಿನಗೆ ನಿಷ್ಕರ್ಷೆಮಾಡಿ ಸನ್ನಾಹವಂ ಮಾಡುತಿಹೆವೆಂದು ಪೇಳಿ ದುಗುಡದಿಂ ಚಿಂತಿಸುವ ಸುತನಭಿಪ್ರಾಯವಂ ತಿಳಿಯಬೇಕೆನುತ ವತ್ಸ ನಿನಗಭಿಮತವ್ರೋ ಇಲ್ಲವ್ರೋ ಪೇಳೆಂದು ಕೇಳಲಾ ವೃಷಕೇತು ಕೈಮುಗಿದು ತಾತಪಾದನೇ ಕೇಳು. ಪ್ರಥಮದಲ್ಲಿ ಯತ್ನವೇ ಮಾಡಬಾರದು ಮಾಡಿ ಕಾರ್ಯಾಂತವಂ ಕಾಣದಿರಬಾರದು. ಇದು ಮಹಾನುಭಾವರ ರೀತಿ ನೀನು ಸಕಲ ನರಪತಿಗಳೊಳು ಪ್ರಶಸ್ತವಾದ ಕೀರ್ತಿಯಂ ಪಡೆದು ಈಗ ಸರ್ವಧರಾಪತಿಗಳು ಯತ್ನವಂ ಮಾಡಿ ಪರಾಜಯಮನ್ನೈದಿದಂತೆ ನೀನು ತಟಸ್ಥನಾದಬಳಿಕ ಅಪಕೀರ್ತಿ ಬರುವದರಲ್ಲಿ ಸಂದೇಹವಿಲ್ಲ. ಅನೇಕಕಾಲದಿಂದುಪಾರ್ಜಿತವಾದ ಯಶಸ್ಸಿಗನುರೂಪವಾದ ವ್ಯವಸಾಯದೊಳು ನಿಶ್ಚಿತಬುದ್ಧಿಯಂ ಮಾಡಬೇಕೆಂದು ನುಡಿಯಲಾ ರಾಜನೀ ಬಾಲಂಗೆ ಸ್ವಾನುಭವಕ್ಕೆ ಬಂದಲ್ಲದೀ ಅಹಂಕಾರ ವಿಾಡೇರದಾಗಲೀ ಎಂದು ಧರ್ಮಗುಪ್ತನಂ ಕರೆದು ಸುತನಭಿಪ್ರಾಯಮನ್ನೊರೆದು ಸರ್ವ ಸನ್ನಾಹದಿಂ ಪೋಗಿಬಾರೆಂದು ಮೂರು ಅಕ್ಷೋಹಿಣೀ ಸೈನ್ಯಮನ್ನಿತ್ತು ಕಳುಹಲಪ್ಪಣೆಗೊಂಡು ಸೇನಾಸಹಿತನಾಗಿ ಬರುತಿರಲು ಈ ವಾರ್ತೆಯಂ ಕೇಳಿ ಪೂರ್ವದಲ್ಲಿ ದೇವಸೇನನಿಂದವಮಾನಿತರಾಗಿ ಪೋಗಿದ್ದ ನರಪತಿಗಳೊಳು ಪಲವರಿಗೆ ಸಮಯವೆಂದು ಅಮರ್ಷೆಯಿಂದ ತಮ್ಮತಮ್ಮ ಸೇನಾಸಮೇತರಾಗಿ ವೃಷ

ಧ್ವಜನೊಡನೆ ನಡೆತರಲು ಭೂಮಿಯಲ್ಲಾಡುತಿರೆ ಸೇನಾಪದಾಘಾತದಿಂದೆದ್ದು ವ್ಯಾಪಿಸುವಕೆಂಧೂಳಿಯಿಂದಭ್ರಮಲಿನವಾಗುತಿರೆ ಬಂದನಾಕಾಶ್ಮೀರದೇಶಕ್ಕೆ ಮೇಣಿಂತು ಬರುತಿರಲು ಸೇನೆಯೊಳು ಅರಣ್ಯಜವಾದೊಂದು ಗೋವು ವತ್ಸದಿಂದೊಡಗೂಡಿಬರುತಿರಲು ಆ ವತ್ಸವ್ರಾ ಸೇನೆಯೊಳುಬರುವಸ್ತ್ರಂಬೇರಮಪದಾಘಾತದಿಂದ ಮೃತವಾಗಲು ಅದಂ ಕಂಡು ನವಶಕುನಮಾಯ್ತೆಂದು ಚಿಂತಿಸುತ್ತಿರಲು ಆ ಗೋವು ಮೃತವತ್ಸವಂ ಪುನರುಜ್ಜೀವನವಂ ಮಾಡುತೆಬ್ಬಿಸಿ ಅದರಿಂದೊಡಗೂಡಿ ತನ್ನ ಮಾರ್ಗಮಂ ಪಿಡಿದು ಪೋಗಲು ಧರ್ಮಗುಪ್ತನು ವೃಷಧ್ವಜನು ಮನದೊಳಾಲೋಚಿಸಿ ಮಹತ್ತಾದ ಸಂಕಟವು ಪ್ರಾಪ್ತವಾಗಿ ಈಶ್ವರಾನುಗ್ರಹದಿಂದ ಪರಿಹಾರವಾಗುವುದೆಂಬರ್ಥವಂ ನಿಶ್ಚಯಮಾಡಿ ತ್ವರೆಯಿಂದ ಮುಂದೆ ಬರುತಿರಲು ಆ ಕಾಶ್ಮೀರದೇಶದೊಳಿರುವ ಅಧಿಕಾರಿಗಳು ಸಮುದ್ರಮೇರೆತಪ್ಪಿದಂತೆ ಬರುವ ವೃಷಕೇತುವಂ ನೋಡಿ ಸತ್ವರದಿರಾಯನಿಗೆ ಬಿನ್ನಹಮಾಡೆ ದೇವಸೇನರಾಯನು ಸುಮತಿಯಂ ಕರೆದು ಸೇನಾಸಮೇತನಾಗಿ ಮಹಾಪ್ರತಾಪಶಾಲಿಯಾದ ವೃಷಧ್ವಜನೆಂಬ ಸುಶರ್ಮನ ತನಯನು ಬರುವನವಮಹಾನುಭಾವನದರಿಂದೆನ್ನಮಗಳಮನೋರಥವನನುಕೂಲಮಾಡಿಕೊಂಡಲ್ಲದೆ ಬಾರನದರಿಂದ ನೀನು ನಿಖಿಲಸೇನಾಸಮೇತನಾಗಿ ಸಕಲವೈಭವದಿಂದೆದುರ್ಗೊಂಡು ಅಧಿಕಸನ್ಮಾನದಿಂಕರೆದುತಾರೆಂದು ಕಳುಹಲು, ಸುಮತಿಯು ಸಕಲಸೇನಾಸಮೇತನಾಗಿ, ವೃಷಕೇತುವಿನೆಡೆಗೆ ಬಂದು, ಮಹಾ ತೇಜಸ್ವಿಯಾಗಿರುವ ಸುಂದರನಂ ಕಂಡು ಮಹಾ ಸಂತೋಷಯುಕ್ತನಾಗಿ, ದೇವಸೇನನಿತ್ತ ವಸ್ತ್ರಾಭರಣಗಳನಿತ್ತು, ಪೂರ್ವಪರಿಚಿತನಾದ ಧರ್ಮಗುಪ್ತನಂ ಕಂಡು, ಕೃತಕಾರ್ಯರಾಗಿ ಬಂದಿರುವರೋ ನೀವು, ಮಿಗಿಲಾದಮಹೀಪತಿಗಳಂತೆ ಬಂದಿಹರೊ ಎಂದು ಕೇಳಲು, ನಿಂಮರಸನ ಮಗಳಮನೋರಥವೆಂಬುದು ಅಸಂಭಾವಿತಮದರಿಂದ ಆ ಪ್ರಶ್ನೆಯಿಂ ಪ್ರಯೋಜನವಿಲ್ಲವದಂತಿರಲಿ, ವಿವಾಹಮಂ ಮಾಡಿಕೊಡುವಂತೆ ರಾಯನಿಗೆ ತಿಳಿಯಪೇಳುವದೇ ಯುಕ್ತವೆಂದು ನುಡಿಯಲು, ಸುಮತಿಯು ಸಚಿವನಾಡಿದ ಅಭಿಪ್ರಾಯಮಂ ತಿಳಿದು, ಇಂ

ದ್ರಾವತೀನಗರದ ಸಮೀಪದೊಳು, ಸೇನಾಸಮೇತನಾದ ವೃಷಕೇತುವಂನಿರಿಸಿ, ತಾನು ಪುರಪ್ರವೇಶವಂ ಮಾಡಿ, ರಾಯನೊಡನೆ ಅಭಿಪ್ರಾಯವಮಂ ತಿಳಿಸೆ, ದೇವಸೇನನು ಖತಿಯಿಂದ ಕನ್ಯಾಮನೋರಥಪೂರ್ತಿಮಾಡಲಾರದ ಬಳಿಕ, ಈ ಆಡಂಬರದಿಂದೇನುಪ್ರಯೋಜನ, ಬಂದಂತೆ ಪೋಗೆಂದು ಖಂಡಿತೋಕ್ತಿಯಿಂ ಪೇಳಬಾರೆಂದು ನುಡಿಯಲು, ಸುಮತಿಯು ವೃಷಧ್ವಜನೆಡೆಗೆ ಬಂದು, ರಾಯನಭಿಪ್ರಾಯವಮಂ ತಿಳಿಸಲು, ವೃಷಕೇತುವು ರೋಷಯುಕ್ತನಾಗಿ, ಎಲೈ ಸುಮತಿಯೇ ಕೇಳು, ಕನ್ಯಾಮನೋರಥ ಪೂರ್ತಿಯಂ ಮಾಡಬೇಕೆಂಬ ಕಾರ್ಯವ್ಯಾಜದಿಂದ, ನಿಖಿಲಮಹೀಪತಿಗಳ ಮಾನಭಂಗವಂ ಮಾಡಿರುವ ಅಪರಾಧವನು, ಈಗ ಕನ್ನಿಕೆಯು ನಿತ್ತಯಾದೊಡೆ ಕ್ಷಮಿಸುವೆನು. ಅಲ್ಲದೆ ಸಮಸ್ತನರಪತಿಗಳಂ ಜಯಿಸಿದೆನೆಂಬ, ಅಹಂಕಾರದಿಂ ವಕ್ರಮಾರ್ಗವಂ ಪಿಡಿದು; ಮುಷ್ಕರಮಾಡೆ ಸೇನಾಸಹಿತಮಾದ ನಿಂನನಗರಮಂ, ಬಾಣಾಗ್ನಿಯಿಂದ ದಹಿಸಿ, ನಿಂನಹಂಕಾರಮಂ ನೆಲಗೊತ್ತಿ, ಕಂನಿಕೆಯಂ ಪಿಡಿದು ಪೋಗುವೆನೆಂದು ಕರವಾಳವಂಝಡಿದು, ನುಡಿವ ವೃಷಕೇತುವಂ ನೋಡಿ, ಸುಮತಿಯು ಪ್ರಳಯಭೈರವನಂತಿರುವ ವೃಷಕೇತುವಂಕಂಡು ಭಯಯುಕ್ತನಾಗಿ, ಸಾಮೋಕ್ತಿಯಿಂ ಸಮಾಧಾನವಂಮಾಡಿ, ಅಪ್ಪಣೆಗೊಂಡು ನಗರವಂಪೊಕ್ಕು, ವೃಷಕೇತುವಾಡಿದನುಡಿಗಳಂಪೇಳಿ, ಎಲೈ ಮಹೀಶನೆ ಕೇಳು, ಮಹಾತೇಜಸ್ವಿಯಾಗಿರುವ, ಇಂತಲ್ಲದನೇಕಾಕ್ಷೋಹಿಣೀಸೇನೆಯಿಂದೊಡಗೂಡಿ ಬಂದಿರುವನು. ಕೆಲವುಮಂದಿಮಹೀಶರು, ಪೂರ್ವವೈರಾನುಸಂಧಾನದಿಂ ತಂಮತಂಮ ಸೇನೆಯಿಂಸಹಿತಮಾಗಿ, ಬಂದಿದರು. ಅದರಿಂದ ಈಗ ಯುದ್ಧದೊಳು ಜಯಿಸುವುದು ಅಸಾಧ್ಯಮಾಗಿತೋರುತಿದೆ. ಅಂತುಮಲ್ಲದೆ ಸುಶೀಲಾಮನೋರಥವೆಂಬುದಸಂಗತ, ನಿಖಿಲಕಾರ್ಯಾಕಾರ್ಯವಿಚಕ್ಷಣನಾದನಿನ್ನಡಿಗೆ ತಾನು ಬಿಂನಹಮಾಡಲು ಸಮರ್ಥನೆ, ತಾನು ಚಿತ್ತದೊಳು ಏನುವಿಹಿತವಾಗಿ ತೋರುವುದೋ ಅಂತಾಗಲೆಂದು ಬಿಂನಹಮಾಡಲು, ದೇವಸೇನನು ಬಲಾವಲೇಪದಿಂ ಯುಕ್ತನಾಗಿ, ರೋಷಾಮರ್ಷೆಯಿಂದ ಮಂತ್ರಿಯ ಮನೋಭಿಪ್ರಾಯ

ಮಂ ಮನಕೆತಾರದೆ, ಸಕಲ ಸೇನಾಸಮೇತನಾಗಿ ಪುರದಿಂ ಹೊರಟು ಯುದ್ಧಾರ್ಥವಾಗಿ ವೃಷಧ್ವಜಂಗೆ ಅಭಿಮುಖವಾಗಿ ಬರಲು, ವೃಷಧ್ವಜನು ತಾನು ಸಮಸ್ತ ಸೇನಾಸಮೇತನಾಗಿ, ಯುದ್ಧವ ಮಾಡಿ ಮಹಾ ಪರಾಕ್ರಮಿಯಾದ, ದೇವಸೇನರಾಯನೊಡನೆ ತಂನ ಭುಜಬಲದಿಂದ ಸೆಣಸಿ, ಮೂರುಬಾಣಗಳಂದ ದೇವಸೇನನ ಚಾಪವಂ ಖಂಡಿಸಲು, ದೇವಸೇನರಾಯನು ಮತ್ತೊಂದು ಧನುವಂ ಪಿಡಿದು ಬಾಣವರ್ಷವಂ ಸುರಿಯಲದಂ ಖಂಡಿಸುತ ನಿಂತು ಪ್ರಾತರಾರಭ್ಯ ರವಿಯಸ್ತಮಯ ಪರ್ಯಂತಂ ಯುದ್ಧವಂ ಮಾಡಿ, ಮಹಾನುಭಾವನಾದ ವೃಷಧ್ವಜನ ಬಾಣಗಳಂದ ಛಿಂನಾಭಿಂನವಾದ ಶರೀರ ಮುಳ್ಳವನಾಗಿ, ದೇವಸೇನನು ಮೂರ್ಛೆಯನೈದಿ ನಿರ್ವಹಿಸಲಾರದೆ, ಹತಶೇಷ ಸೇನಾವಿಷ್ಟನಾಗಿ ಪುರಮಂ ಪ್ರವೇಶವಂ ಮಾಡಿ ಮಗಳ ಮನೆಗೈತಂದು ಸಕಲ ವೃತ್ತಾಂತವಂ ತಿಳುಹಿ, ವೃಷಕೇತುವಿನ ಶೌರ್ಯಪರಾಕ್ರಮ ಸೌಂದರ್ಯಾದಿಗುಣಗಳಂ ವರ್ಣಿಸಿ, ನೀನು ಆತನ ಪಾಣಿಗ್ರಹಣವಂ ಮಾಡದಿರೆ, ಎಂನ ರಾಜ್ಯಕೋಶ ದೇಹ ಮೊದಲಾದ ಸರ್ವಸ್ವವಂ, ನೀಗುವದರಲ್ಲಿ ಸಂಶಯವಿಲ್ಲೆಂದು ಭೀತಿಯಿಂ ನುಡಿವ ತಂದೆಯಂನೋಡಿ, ಸುಶೀಲೆಯು ಎಲೈ ತಂದೆಯೇ ಕೇಳು ಯುದ್ಧದೊಳು ಜಯಪರಾಜಯವೆಂಬುದೀಶ್ವರಾಧೀನವದ ನೀನಿಂತ ಭಯಪಡಬೇಡ ಈ ರಾತ್ರಿಯೊಳು ವೃಷಧ್ವಜನ ಪಾಡೇನಹುದೊ ನೋಡುವಂತೆ ಪ್ರಾತಃಕಾಲದೊಳು ಈಗ ಮನೆಗೆಪ್ಪೋಗೆಂದು ನುಡಿಯಲು ದೇವಸೇನನದೇನಹುದೆಂದು ಪ್ರಶ್ನೆಯಂ ಮಾಡೆ ಸುಶೀಲೆಯು ತನಗೆ ಕಾಳೀಪ್ರಸಾದವಾಗಿರುವುದಂ ಪೇಳಿ ಕಳುಹಲಾ ದೇವಸೇನನರಮನೆಗೆಬಂದು ಸ್ನಾನಭೋಜನವಂ ಮಾಡಿ, ಚಿಂತಾಕ್ರಾಂತನಾಗಿ ಇರಲು ಸುಶೀಲೆಯು ತಂದೆಯಂ ಕಳುಹಿ ಮಂಗಳಸ್ನಾನವಂ ಮಾಡಿ ಮಡಿಯುಟ್ಟು ಪೂಜಾಸಾಧನ ದ್ರವ್ಯಂಗಳಂ ತೆಗದುಕೊಂಡು ಕಾಳಿಯಾಲಯಕೆ ಬಂದು ವಂದನೆಯಂ ಮಾಡಿ, ಷೋಡಶೋಪಚಾರ ಪೂಜೆಯಂಮಾಡಿ, ಬಹುವಿಧ ಸ್ತೋತ್ರವಂ ಮಾಡಿದಡೆಯುಂ ದೇವಿ ಪ್ರಸಂನಳಾಗದಿರಲು ಸುಶೀಲೆಯು ಪರಮ ಕ್ಲೇಶಯುಕ್ತಳಾಗಿ,

ತನ್ನ ಶೀರ್ಷವಮಂ ಕತ್ತರಿಸಿ ಸರ್ವ ಮಂಗಳೆಯ ಅಡಿದಾವರೆಗೆ ಸಮ ರ್ಪಿಸುವೆನೆಂದು ನಿಶ್ಚಯಮಾಡಿ, ಖಡ್ಗಮಂ ಕರದೊಳಾಂತು ಕಂಧರವಮಂ ಕತ್ತರಿಸುವನಿತರೊಳು ಪರಮ ಕರುಣಾಶಾಲಿಯಾದ ಕಾಳಿಯು ಪ್ರಸನ್ನ ಳಾಗಿ ಸುಶೀಲೆಯ ಸಾಹಸಕೆಮೆಚ್ಚಿ, ವತ್ಸೆ ನಿನ್ನಿಷ್ಟಾರ್ಥಮಂ ಪೇಳು. ಸಾಧಿಸಿ ಕೊಡುವೆನೆಂದು ನುಡಿಯಲು. ಸುಶೀಲೆಯು ತಾಯೆ ನೀನಿತ್ತ ನುಡಿಯೇನಾದುದೆಂದು ಬಿನ್ನಹ ಮಾಡಲಾ ದೇವಿ ಯದಂತಿರಲಿ,ತನ್ನನುಡಿ ತಪ್ಪುವುದೇ ಈಗ ಅವಶ್ಯವಾಗಿರುವ ಕಾರ್ಯಮಂ ಪೇಳೆನಲು, ಸುಶೀ ಲೆಯು ವೃಷಕೇತುರಾಯನತ್ಯಧಿಕ ಬಲಗರ್ವಿತನು, ಸೇನಾಸಹಿತನಾಗಿ ಬಂದು ತಂದೆಯಂ ಸದೆದು ಸೇನೆಯಂ ಸಂಹರಿಸಿ ನಾಳೆ ಈ ನಗರಮಂ ಲಗ್ಗೆಯಂ ಮಾಡಿ ತನ್ನೊಯ್ವಗಡ, ನಿನ್ನಡಿಯನಂಬಿದೆನಗಿಂತು ಅವಮಾ ನಮಾಡುವುದೆಂದು ಕಂಬನಿದುಂಬಲು, ಕಾಳೀದೇವಿಯು ಈ ರಾತ್ರಿಯೇ ಆತನ ಧಟತನಮಂ ಬಿಡಿಸಿ ಓಡಿಸುವೆನೆಂದು ಅಭಯಮನಿತ್ತು ಪ್ರಮಥ ಶಂಕರನಂ ಕರೆದು ವೃಷಕೇತುವಿನಸೈನ್ಯಮಂ ಸದೆದು ಆತನಹಂಕಾರ ಮಂನೆಲಗೊತ್ತಿ ಈ ರಾತ್ರಿಯೇ ಪಲಾಯನಮಾಡುವಂತೆ ಭಯಮಂ ತೋರಿಬರುವುದೆಂದು ಅಪ್ಪಣೆಯಿತ್ತು ಈ ವೃಷಕೇತುವೇ ಮದಾಲಸಾ ಶಿರೋರತ್ನಮಂ ತಂದಿತ್ತು ಮುಂದೆ ನಿನ್ನಯ ಪಾಣಿಗ್ರಹಣಮಂ ಮಾಡು ವನೆಂದು ಪೇಳುತಂತರ್ಧಾನಮಂ ನೈದಿದಳೆಂಬಲ್ಲಿಗೆ ದ್ವಿತೀಯಾಧ್ಯಾಯಂ.

## ತೃತೀಯಾಧ್ಯಾಯಂ.

---

ಸುಶೀಲೆಯಾದೇವಿಯಾಜ್ಞಾಪಿಸಿದ ನುಡಿಯಂಕೇಳಿ ವಿಸ್ಮಿತಳಾಗಿ ಹರ್ಷಕ್ಲೇಶಗಳಿಂದ ಕೂಡಿ ಪ್ರಮಥರೀನಿಶಿಯೊಳಗೆವೃಷಕೇತುರಾಯ ನನ್ನೇನುಮಾಡುವರೋ ಎಂದು ಚಿಂತಿಸುತ್ತಾ ಮನೆಗೆಬಂದು ಯೋಚಿ ಸುತ್ತಿರಲು ಆ ಮಹಾ ನಿಶಿಯೊಳು ವೃಷಕೇತುವಿನ ಸೇನೆಯಂ ಪ್ರೊ ಕ್ಕು ಮಹತ್ತಾದ ಯುದ್ಧಮಂ ಮಾಡಲು, ವೃಷಕೇತುವಾಪ್ರಮಥರೊ ಡನೆ ಪರಾಕ್ರಮದಿಂದ ಬಂದು ಯಾಮಪರ್ಯಂತಮ್ರು ಯುದ್ಧಮಂ ಮಾಡಿ ಶ್ರಾಂತನಾಗಿ ಹತಾವಶಿಷ್ಟಸೇನಾಸಮೇತನಾಗಿ ದುಗುಡದಿಂ ಯುದ್ಧಮಾ

ಡುವರ ಮೂಲಮಂತಿಳಿಯದೆ ಪಲಾಯನವಂ ಮಾಡಿಪೋಗಲು, ಪ್ರಾತಃ ಕಾಲದೊಳು ಪ್ರಾಕಾರದಮೇಲಿದ್ದ ಕಾವಿಲರೈತಂದು ಯಾಮಿನಿಯೊಳು ಯಾಮಾರ್ಧ ಪರ್ಯಂತ ಮಹದ್ಯುದ್ಧವಾಗಿ ಸಹಿಸವಮಾಡಲಾರದೆ ವೃಷಕೇತು ಪಲಾಯನವಂಮಾಡಿದನೆಂದು ಪೇಳಲು, ದೇವಸೇನನು ವಿಸ್ಮಿತನಾಗಿ ಸುಮತಿಯಂಕರೆಸಿ ನೀನೇಪೋಗಿ ನೋಡಿಬಾರೆಂದು ಪೇಳಲು ಸುಮತಿಯು ಬಂದು ನೋಡಿ ಎರಡಕ್ಷೋಹಿಣೀ ಬಲವು ಹತವಾಗಿ ರಕ್ತಕರ್ದಮದಿಂದ ದುರ್ಗಮವಾದ ರಣಭೂಮಿಯಂ ಕಂಡು ಅನೇಕ ರಥ ಕರಿ ತುರುಗ ಪದಾತಿಗಳಿಂದ ಹಾಸಿರುವ ಭಯಂಕರವಾದ ಯುದ್ಧಮಂ ಮಹಾಶೂರನಾದ ವೃಷಧ್ವಜನೊಡನೆ ಮಾಡಿದವರಾರೋ ಎಂದು ಆಶ್ಚರ್ಯಯುಕ್ತನಾಗಿ ಅಲ್ಲಿದ್ದ ಧನಕನಕಾದಿ ವಸ್ತುಗಳನಪರಿಮಿತವಾಗಿ ಪುರಕೆ ಸಾಗಿಸುತಿರಲು, ದೇವಸೇನನು ತಾನು ಬಂದು ರಣಭೂಮಿಯಂ ನೋಡಿ ಪರಮ ವಿಸ್ಮಯದಿಂದ ಮಂತ್ರಿಯೊಡನೆ ಮಗಳ ಪ್ರಭಾವಮನಾಡುತ್ತಾ ಪುರಮಂ ಪ್ರವೇಶಮಾಡಲು, ಇತ್ತಲಾ ವೃಷಧ್ವಜನು ನೇತ್ರಾವತೀತೀರಕ್ಕೆಬಂದು ಅಲ್ಲಿ ಸೇನೆಯಿಂದ ಸಹಿತನಾಗಿ ನಿಂತು ಪರಾಜಯಪ್ರಯುಕ್ತ ಮನಃಖೇದದಿಂ ಬಹು ಚಿಂತಾಕ್ರಾಂತನಾಗಿ ರವಿಯಸ್ತಮಯಾನಂತರ ನಿದ್ರೆಬಾರದೆ ಶಯ್ಯೆದೊಳಗಿರುವ ಸಮಯದೊಳು ಮಹಾನಿಶಿಯಲ್ಲಿ, ಸ್ತ್ರೀರೋದನಧ್ವನಿಯಂ ಕೇಳಿ, ಇದೇನಾಶ್ಚರ್ಯ ಮಿಾಮಹಾನಿಶಿಯಲ್ಲಿ ಈ ಮಹದರಣ್ಯದೊಳು, ಅಳುವ ಮಾನಿನಿಯದಾರೋ ನೋಡಬೇಕೆಂದು ಒರ್ವನೇ ನಿರಾಯುಧನಾಗಿ ಧ್ವನಿಯುಪಥಮಂ ಪಿಡಿದು ಅಳುವ ಮಾನಿನಿಯೆಡೆಗೆಬಂದು ಏಕೆ ರೋದನಮಂ ಮಾಡುವೆ. ಪ್ರಿಯವಿಯೋಗಜನಿತಾತ್ಯಂತ ಸಂತಾಪದಿಂದಲೋ, ಸಮಾನಸಖೀವಿರಹದಿಂದಲೋ, ರೋಗಾದ್ಯುಪದ್ರದಿಂದುತ್ಪನ್ನವಾದ ವೇದನಾಜನಿತ ಖೇದದಿಂದಲೋ ಎಂದು ನಾನಾವಿಧಕಲ್ಪದಿಂ ಪ್ರಶ್ನೆಯಂಮಾಡುವ ರಾಜಕುಮಾರನಂ ನೋಡಿ ಚಿರಕಾಲದಿಂ ಸ್ವಸಮಾನ ಜಾತೀಯ್ಯ ಪುರುಷರಂಕಾಣದಾಕಸ್ಮಿಕವಾಗಿ ಬಂದ ರಾಜಕುಮಾರನಂ ಕಂಡು ಮತ್ತು ಮನದಳಲುಬ್ಬಿ ರೋದನವಂ ಮಾಡಲು ವೃಷಕೇತು ತತ್ಕಾಲೋಚಿತಸಾಮೋಕ್ತಿಗಳಂ ಸಮಾಧಾನವಂ ಮಾ

ಡಿ ನಿನ್ನ ವೃತ್ತಾಂತವಂ ಪೇಳೆನಲು ಮಿತ್ರವಿಂದೆಯು ರಾಜಕುಮಾರನಂ ಕುರಿತು ಎಲೈ ಸುಭಗನೆ ಕೇಳು. ಇಂದ್ರಾವತೀನಗರಮನಾಳುವ ಇಂದ್ರಸೇನರಾಯನ ಮಗಳು ಹೇಮಮಾಲಿನಿಯೆಂಬ ಮಾನಿನಿಯು ಅತಿಚಲ್ವೆಯಾಕೆ ಯೊಂದುದಿನ ಕನಸಿನೊಳು ಒರ್ವ ಸುಕುಮಾರನೊಡನೆ ರಮಿಸಿ ಕಂದೆರದುನೋಡಿ ಕಾಣದಳುತ್ತಾ ಕನಸಿನಲಿಕಂಡ ರತಿಚೋರನ ಸುಂದರಾಕಾರವಂ ಚಿತ್ರಪಟದೊಳ್ ಬರೆದು ಸಹಸ್ರಜನ ದೂತಿಯರ ಕರೆದು, ಒಂದೊಂದು ಪಟವನಿತ್ತು, ಅವರಿಗೆ ವಸ್ತ್ರಭೂಷಣಾದಿಗಳನಿತ್ತು ದೇಶದೇಶಕ್ಕೆಪೋಗಿ, ಈ ಚಿತ್ರಪಟದೊಳಗಿರುವ ರೂಪಲಾವಣ್ಯಕ್ಕೆ ಸರಿಯಾದ ಪುರುಷನಂ ನೋಡಿ, ಸಿಕ್ಕಿದೊಡೆ ಆತನ ಕುಲ ಗೋತ್ರನಾಮಗಳ ತಿಳಿದು, ಮಗುಳಾತನಂಕಂಡು ಮಾತಾಡೆ ಸಂದರ್ಭಮಾದೊಡೆ ಕಂಡು ಮಾತಾಡಿ ತಂನಿರವನಾತಂಗೆ ತಿಳುಹಿ, ಬರುವನೋ ಮರುಗುವನೋ ಏನೊರೆವನೋ ಕೇಳಿ ವತ್ಸರಂ ತುಂಬದ ಮುಂನಲೆ ಬರುವದೆಂದು ಕಟ್ಟಲೆಯುಂಮಾಡಿ ದಾಸೀಸಹಸ್ರಮಂ ದೇಶದೇಶಕ್ಕೆ ಕಳುಹಿ ತಾನಿರಲು, ಕೆಲವುದಿವಸದಮೇಲೆ ಹೋಗಿದ್ದ ದೂತಿಯರೊಳು ಕೆಲಬರೈತಂದು ನುಡಿದರೆಲೆ ತಾಯೆ, ಬಹುದೇಶಮಂ ನೋಡಿದೆವು, ನಿನ್ನಯುಮನಶ್ಚೋರನಂ ಶೂರನಂ ಕಾಣಲಿಲ್ಲವೆಂದು ಪೇಳಲು, ಕೇಳಿ ಪರಿತಾಪಯುಕ್ತಳಾಗಿ ಶೇಷರಾಗಮನಮಂ ಪ್ರತೀಕ್ಷಿಸುತ್ತಿರಲು ತಜ್ಜನಕನಾಕೆಯ ವಿವಾಹಮಂ ಮಾಡಬೇಕೆಂದು ವರನಿಶ್ಚಯಮಂ ಮಾಡಿ ನಗರಾಲಂಕಾರಮಂ ಮಾಡಿಸಿ ಬಂಧುಜನರಂ ಕರೆಸಿ ವಿವಾಹಸೂಚಕವಾದ ಭೇರಿ ತಾಡನಾದಿಗಳಂ ಮಾಡಿಸಲು ಹೇಮಮಾಲಿನಿಯು ದೂತಿಯರಂಕರೆದು ಇದೇನುತ್ಸವವೆಂದು ಕೇಳಲು ದೂತಿಯರು ಎಲೈತಾಯೆ ನಿನ್ನ ವಿವಾಹಮಂ ನಿಶ್ಚಯಮಾಡಿ ನಾಳೆ ಪ್ರಾತಃಕಾಲದೊಳ್ ಲಗ್ನವೆಂದು ನಿನ್ನ ಜನಕನು ಭೇರಿತಾಡನಾದಿಗಳಂ ಮಾಡಿಸುವನೆಂದು ಪೇಳಲು, ಕೇಳಿ ಶೋಕಮೂರ್ಛಿತಳಾಗಿ ಎನ್ನಂಕರೆದು; ಮಿತ್ರವಿಂದೆಯೆ; ಕೇಳು ಎಂನಮನೋರಥಕ್ಕೆ ಯಡರು ಬಂದುದು. ಮುಂದೇನಮಾಡಬೇಕೆಂದು ಕಂಬನಿದುಂಬಲು ಈರ್ವರಾಲೋಚನೆಯುಂಮಾಡಿ, ಇನ್ನೊಂದುಪಾಯಾಂತರಮುತೋರದೆ ಬಾಲ್ಯಬುದ್ಧಿ

ಯಿಂದ ತಾವೀರ್ವರೂ ರೂಪಾಂತರವಂ ಧರಿಸಿ ಚೋರಮಾರ್ಗದಿಂದ ರಾತ್ರಿಯಂನಡೆದು, ಬಹುದೂರ ಮಾರ್ಗವಂಕಳೆದು, ಸ್ತ್ರೀಯರನಾಥರಾಗಿ ಬಂದೂಮುಂದ ಗಾಣದೆ, ಒಂದುಮಾಸ ನಿಂತಲ್ಲಿನಿಲ್ಲದೆ ತಿರುಗುತ್ತ ಅನಂತರದಲ್ಲಿ ಈ ನೇತ್ರಾವತೀತಿರಕ್ಕೆಬಂದು, ಕಂದಮೂಲಗಳತಿಂದು, ಒಂದುದಿನ ವಾಸವಂಮಾಡಿ ಸಾಯಂಕಾಲವಾಗಲು, ಆ ಅರಣ್ಯದೊಳಿರಲಂಜಿ ಆ ನೇತ್ರಾವತೀತೀರದಲ್ಲಿರುವ ಸೈಕತಪ್ರದೇಶದೊಳು ಕುಳಿತು ಚಿಂತಿಸುತಿರಲು, ರಾತ್ರಿಯಾದನಂತರದೊಳು ಅನೇಕ ವಿಮಾನಂಗಳ ತಿಪ್ರಕಾಶವಾಗಿ ಗಗನದಿಂದಿಳಿಯುತ್ತಿರಲು, ಅದಂನೋಡಿ, ಇದೇನಾಶ್ಚರ್ಯವೆಂದು ನೋಡುತಿರಲಾ ವಿಮಾನಪಂಗ್ತಿಗಳಿಳಿಯುವ ಸರಿಸದೊಳು ಭೂಮಿಯಿಂದೆದ್ದದೊಂದು ರತ್ನಖಚಿತವಾದ ನಗರವಾಪುಟಭೇದನದಂತರಾಳದೊಳು ಇಳಿದುದಾವಿಮಾನಾವಳಿಗಳದಂನೋಡಿ, ವಿಸ್ಮಿತರಾಗಿ ನಗರವಂಪೊಕ್ಕು ನೋಡುವೆವೆಂದು ಅಲ್ಲಿಂದಎದ್ದು ನಗರವಂಪೊಕ್ಕು ತನ್ಮಧ್ಯದೊಳಿರುವ ಅರಮನೆಯಂ ಕಂಡು ಅದರೊಳಪೊಕ್ಕುನೋಡುತ್ತಿರಲು, ಆ ಗೃಹಾಂತರದೊಳು ಅನೇಕ ಜೀವರತ್ನಗಳಿಂದ ನಿರ್ಮಿತವಾದ ಸಭೆಯಲ್ಲಿ ದಿವ್ಯಸಿಂಹಾಸನದೊಳು ಅನೇಕ ಅಪ್ಸರಸ್ತ್ರೀಯರಿಂದ ಸೇವಿತಳಾದ ದೇವಕನ್ನೆಯುಂಕುಡು ಆ ಮಾನಿನಿಯ ಲಾವಣ್ಯವಂನೋಡಿ ಮೂರ್ಛಿತರಾಗಿ ನಿಂದಿರಲು, ಹೇಮಮಾಲಿನಿಯಂ ಕಂಡು ದೇವಮಾನಿನಿಯು ನಿಂನ ವೃತ್ತಾಂತವೇನು ಇಲ್ಲಿಗೆ ನೀನೆಂತ್ಯೆದಿದೆ ಎಲ್ಲಿಂದಬಂದೆ ಎಂದುಕೇಳಲು, ಹೇಮಮಾಲಿನಿಯು ಅಂಜಿ ತನ್ನ ವೃತ್ತಾಂತವೆಲ್ಲವಂ ಯೆಳ್ಳನಿತು ಬಿಡದೆ ಯಥಾರ್ಥವಾಗಿಪೇಳಲು, ದೇವಕಂನೆಯು ಕೇಳಿ, ವಿಸ್ಮಿತಳಾಗಿ ಎಲೈ ಹೇಮಮಾಲಿನಿಯೆಕೇಳು, ನಿನ್ನ ಲಕ್ಷಣಗಳಂನೋಡಿದರೆ ದೇವತಾಯೋಗ್ಯಳಾಗಿರುವೆಯದರಿಂದ ತನ್ನೆಡೆಯೊಳಿರೆಂದು ನುಡಿಯಲು, ಹೇಮಮಾಲಿನಿಯದಂಕೇಳಿ, ಪ್ರತ್ಯುತ್ತರವನಾಡಲಂಜಿ ಅಂಗೀಕಾರವಂಮಾಡಲು, ಆ ದೇವಕನ್ನೆಯು ದೂರದೊಳು ನಿಂದಿರುವ ತಂನಂಕಂಡು ತಂನ ದೂತಿಯರಂಕರೆದು ಆಕೆಯಂ ನಗರಾದ್ಬಹಿರರಣ್ಯದೊಳು ಗೋಪ್ಯವಂಮಾಡಿರಿಸಿ ಈ ಸುದ್ದಿ ಹೊರಗಾ

ಗದಂತೆ ಎಂದಾಜ್ಞಾಪಿಸಲದಂ ಕೇಳಿ, ತಾನು ಸಂಹಾರವಮಾಡುವರೆಂದು ನಿಶ್ಚಯಿಸಿ ಆ ದೂತಿಯರು ಎಂಸೆಡೆಗೆ ಬರುವನಿತರೊಳು ತಾನಲ್ಲಿಂದ ಮೆಲ್ಲಮೆಲ್ಲನೆಸರಿಗಿ ಸತ್ವರದಿ ಪುರಬಹಿರ್ಭಾಗಕ್ಕೈತಂದು ವನಪ್ರವೇಶ ವಂಮಾಡಿ ರಾತ್ರಿಯಂನಡೆದು ಆ ಪ್ರದೇಶವಮುಂದಾಂಟ ಅಂದಿನಾರಭ್ಯ ಅಂನಾಹಾರಗಳಿಲ್ಲದೆ ಸಖೀವಿಯೋಗನಂ ಸಹನವಮಾಡಲಾರದೆ ಒಂದುವತ್ಸರದಿಂದ ಅನಾಥಳಾಗಿ ಈ ನದೀತೀರವನಾಶ್ರೈಸಿ ಕಂದಮೂಲಾದಿಗಳ ಭಕ್ಷಿಸುತ ರೋದನವೇಮುಖ್ಯ ಪುರುಷಾರ್ಥವಾಗಿ ಕಾಲವುಂಕಳೆಯುತಿರುವೆ, ಇದು ಎಂನ ವೃತ್ತಾಂತವೆನಲು. ವೃಷಧ್ವಜನು ಮಿತ್ರವಿಂದೆಯುಂಕಂಡು ಎಲೈ ಮಾನಿನಿಯೆ ತನಗೆತೋರಿದಡೆ ಹೇಮಮಾಲಿನಿಯಂ ಕರಕೊಂಡು ಬರುವೆನೆಂದು ನುಡಿಯಲು, ಮಿತ್ರವಿಂದೆಯು ಕೇಳಿ, ಎಲೈ ಮರುಳೆ ನೀನಲ್ಲಿಗೆ ಸರ್ವಾತ್ಮನಾಪ್ಪೋಗದಿರು. ಅಭಿನವಸುಮಾಸ್ತ್ರನಂತೆ ತೋರುತಿಹೆ, ನಿಂನಂಕಂಡು ಆ ದುರಾತ್ಮಳೇನಮಾಡುವಳೊ ಬೇಡಬೇಡೆಂದು ಬಹುಪ್ರಕಾರವಾಗಿ ಪೇಳಲು, ಅದಂಕೇಳದೆ ನೀನು ಪ್ರಾಣಭಯಪೀಡಿತಳಾಗಿ ಇಂತೊರವೆಯಾದರೇನಾಯ್ತು, ನೀನಾಪ್ರದೇಶಕ್ಕೈದಲಿಬೇಡ, ದೂರದೊಳುನಿಂದು ತೋರಿಸಿದೆಯಾದೊಡೆ ತಾನು ಪ್ಪೋಗಿಬರುವೆನೆಂದು ನುಡಿದಾತನ ನಿರ್ಬಂಧವುಂಮೀರಲಾರದೆ ಕೆಟ್ಟನಿವನೆಂದು ನಿಶ್ಚೈಸಿ ಆ ರಾಜಕುಮಾರನೊಡನೆ ಆ ಪ್ರದೇಶಕ್ಕೆಪ್ಪೋಗಿ ಆ ಮಧ್ಯರಾತ್ರಿಯೊಳು ಚಂದ್ರಬಿಂಬದಂತೆ ಪ್ರಕಾಶವಾಗಿರುವ ರತ್ನಖಚಿತವಾದ ನಗರವುಂತೋರಿ, ಆ ಮಿತ್ರವಿಂದೆಯು ಒಂದು ಮಹತ್ತಾದ ವೃಕ್ಷವನೇರಿ ಇವನೇನಾಗುವನೊನೋಡುವೆನೆಂದು ಕುಳಿತಿರಲು, ವೃಷಧ್ವಜನಾನಗರವುಂ ನೋಡಿ ವಿಸ್ಮಿತನಾಗಿ ಬರುತ ಜಾಂಬೂನದಮಯ ಪ್ರಾಕಾರವುಂನೋಡಿ ಇದೇನಮರಾವತಿಯೊ ಬಲಿಯಾಲಯವ್ಪೋ ಎಂದು ಯೋಚಿಸುತೊಳಪ್ಪೊಕ್ಕು ಬೀದಿಬೀದಿಯೊಳು ಬರುತಿರಲು ಎಲ್ಲಿನೋಡಿದೊಡೆಯುಂ ಸ್ತ್ರೀಸಮಾಜದಿಂ ಶೋಭಿಸುವ ಪುರಸಮೃದ್ಧಿಯಂ ನೋಡಿ ಒಬ್ಬೊಬ್ಬ ಕನ್ನೆಯಂ ವರ್ಣಿಸಲು ಶೇಷಗಳವಲ್ಲ. ಈ ಪುರಕ್ಕರಸಿಯಾದವಳೆಂತಿರುವಳೋ ಎಂದು ಕುತೂಹಲಧಿಂದ ಬರುತ ಅಗ್ನಿ

ಮಂಡಲದಂತೆ ಪ್ರಕಾಶಮಾಗಿರುವ ಅರಮನೆಯಂ ಕಂಡು ಬರುತ ವಿಚಿತ್ರ ರತ್ನ ಖಚಿತಸಭಾಸ್ಥಾನಮಂ ನೋಡಿ ಆ ಸಭೆಯಲ್ಲಿ ದಿವ್ಯಸಿಂಹಾಸನದಿಂ ಮೆರೆಯುತಿಹ ಕನ್ನೆಯಂನೋಡಿ ಮೂರ್ಛಿತನಾಗಿ ಈ ಕನ್ನೆಯ ಪಾಣಿ ಗ್ರಹಣಮಂಮಾಡಿದವನೇ ಪುರುಷನೆಂದು ನಾನಾವಿಧದಿ ಹಂಬಲಿಸು ತಿರೆ ಕಾವಲಕಾಮಿನಿಯರೀತನಂಕಂಡು ಪುರುಷನಾಗಮನಮಂ ದೇವಿಗ ರುಹಲು ಸುಗಂಧಿನಿ ಕೇಳಿ ಕಿಂಚಿತ್ಕುಪಿತಳಾಗಿ ಸುರಭಿಯಂಕರೆದು ನೀ ನೇಪೋಗಿ ಆತನವೃತ್ತಾಂತಮಂತಿಳಿದುಬಾರೆಂದೆನಲು ಮಂತ್ರಿಯಾದ ಸುರಭಿನಾಮಕಮಾನಿನಿಯು ರಾಜಕುಮಾರನಿದ್ದೆಡೆಗೆಬಂದು ಎಲೈ ಮರು ಳೆ ನೀನಿಲ್ಲಿಗೇತಕೆಬಂದೆ, ಸುರಾಸುರರು ಬರಲಂಜುವರು ಎಂದು ಕೇಳ ಲು, ಆ ವೃಷಧ್ವಜನು ಕ್ರೋಧಯುಕ್ತನಾಗಿ ಎಲೈ ಮಾನಿನಿಯೆ ಕೇಳು ಯವ್ವನದಮದದಿಂದ ಮುಂದೋರದಾಡಿದರೆ ನಾಲಿಗೆಕೊಯ್ವೆ ನೆಚ್ಚರ ದೊಳರು. ತಾನು ಕೋಸಲದೇಶಾಧಿಪತಿಯಾದ ಸುಶರ್ಮಮಹಾರಾಯನ ಕುಮಾರ ವೃಷಧ್ವಜನೆಂಬ ನಾಮ, ಮೃಗಯಾರ್ಥಮಾಗಿ ಬಂದಿಲ್ಲಿ ದೈವ ಗತಿಯಿಂಕಂಡೆ ನೀನಗರಮಂ ಅನಂತರದೊಳು ನಗರಪ್ರವೇಶಮಂಮಾಡಿ ನಿಂಮೊಡತಿಯಂಕಂಡೆನೆನಲಾಸುರಭಿಯು ಎಲಾ ಆತ್ಮಘಾತಕನೆ ನಂಮರ ಸಿಯಾದ ಸುಗಂಧಿನಿ ಕೇಳಿದಡೆ ನಿನಗುಚಿತಶಿಕ್ಷೆಯಂಮಾಡುವಳು ಇಲ್ಲಿ ಪರು ಮಾನಿನಿಯರಿವರಿಂದಲೇನಹುದು ಎಂದು ಮಾತಾಡದಿರು. ಎನಲು, ವೃಷಕೇತನತ್ಯಂತರೋಷದಿಂ ನುಡಿದನೆಲೆ ಮಂದಮತಿಯೆ ಕೇಳು, ನಿಂ ನರಸಿಯಾದ ಸುಗಂಧಿನಿಯು, ಎಂನರಸಿಯಾದಡುತ್ತಮವಾಯ್ತು, ಅ ಲ್ಲದಿದ್ದುದರಹಂಕಾರದಿಂದ ಅನಂಗೀಕಾರಮಮಾಡಿದಡೆ ಈ ಪಟ್ಟಣವನು ಟ್ಟ ನಿಂನೊಡತಿಯಂ ಕೈಶರೆಯಪಿಡಿವೆನೆಂದಾರ್ದುಬೊಬ್ಬಿರಿಯಲು, ಆ ಸುಗಂಧನಿಯೇ ಮೊದಲಾದ ಸರ್ವಮಾನಿನಿಯರು ಸಿಂಹನಾದಮಂಕೇಳಿ ಜರ್ಝರಿತಹೃದಯರಾಗಿ ಅತ್ಯಂತಭಯದಿಂದ ತಿರಸ್ಕರಿಣಿಯ ಮುಖ ಮಂನೋಡಲಾ ತಿರಸ್ಕರಿಣಿಯು ತಾಯೇ ಕೇಳೆನಗೆ ಈ ಭುವನ ಮಾನುಷ ತ್ಕರಂ ಪಸುಳೆಯಿಂದೇನಹುದು ಭಯಬೇಡ, ಮುಂನಬಂದಿದ್ದವರೊಲೀ ತನಂಮಾಡುವೆನು. ಎಂದು ತಿರಸ್ಕರಿಣಿಯು ಅಲ್ಲಿಂದೆದ್ದು ಮಂತ್ರಸುತ್ತ

ಬರಲು ವೃಷಧ್ವಜನು ಸಂಭ್ರಾಂತನಾಗಿ ಆ ತಿರಸ್ಕರಿಣಿಯೆಲ್ಲೆಲ್ಲಿ ಪ್ರೋಗುವಳೋ ಅಲ್ಲಲ್ಲಿ ತಾನು ಮರುಳಾಗಿ ಹಿಂದೆ ಬರುತಿರಲು, ತಿರಸ್ಕರಿಣಿಯು ಪುರಾದ್ಬಹಿರ್ಭಾಗಕ್ಕೈತಂದು ಮಂತ್ರಿಸಿದ ಭಸ್ಮವಂ ವೃಷಧ್ವಜನ ಮೇಲೆಸೆಯಲು ಆಕ್ಷಣದೊಳು ವೃಕ್ಷರೂಪಾದನೇಂ ಚಿತ್ರವೋ ಕೇಳರಸ ಇಂತಾಗಲಾ ವಿತ್ರವಿಂದೆ ನೋಡುತ್ತ ಮನದೊಳತಿ ಕರುಣದಿಂ ಮರುಗುತ್ತ ಯಥಾಪ್ರಕಾರ ತಾನಿರುವ ಪ್ರದೇಶಕ್ಕೆ ಬಂದು ಬಹುಕ್ಲೇಶ ಪಡುತಿರಲು ಇನೋದಯವಾಗಲಾ ಧರ್ಮಗುಪ್ತನು ಸ್ನಾನವಂಮಾಡಿ ನಿತ್ಯನಿಯಮಂಗಳಾಚರಿಸಿ ರಾಜಕುಮಾರರೆಡೆಗೆ ಬಂದು ನೋಡಿಕಾಣದೆ ರಾಜಕುಮಾರನೆಲ್ಲಿಹನೆಂದು ಪರಿಚಾರಕರಕರೆದು ಕೇಳಲು, ಆ ಪರಿಚಾರಕರು ಆರ್ಯ, ಮಹಾನಿಶಿಯೊಳೆದ್ದು ಪ್ರೋದನು, ಅರಣ್ಯಾಭಿಮುಖವಾಗಿ ಕೆಲವುಜನರು ಹಿಂದೆ ಪ್ರೋಗುತಿರಲು, ಅವರು ಬರಬೇಡವೆಂದು ನಿಷೇಧಮುಂಮಾಡಿ ತಾನೊರ್ವನೇ ನಿರಾಯುಧನಾಗಿ ಪ್ರೋದನೆಂದು ಬಿಂನೈಸಲು ಧರ್ಮಗುಪ್ತನದಂ ಕೇಳಿ ಬಹು ದುಃಖಿತನಾಗಿ ಈತನಿಂತವಿವೇಕಿಯೆಂದರಿಯದೆ, ಈತನೊಡನೈತಂದೆನೆಂದು ಬಹುಪ್ರಕಾರ ಯೋಚನೆಯಂಮಾಡಿ ನಿರ್ವಿಣ್ಣನಾಗಿ ತಾನು ಆ ಅರಣ್ಯವಂ ಪ್ರವೇಶಮಾಡಿ ಭೋ ವೃಷಧ್ವಜ ಹಾ ಸುಕುಮಾರ, ಹೇ ಕಲಾವತೀತನಯ, ಎಂದೊರಲುತ್ತ ತರುಗಳನು ಮೃಗಪಕ್ಷಿಗಳನು ಕೇಳುತ್ತ ಬಳಲುತ್ತ ದೈವಗತಿಯಿಂದ ಆ ರಾಜಕುಮಾರನು ವೃಕ್ಷವಾಗಿರುವೆಡೆಗೆ ಬಂದು ಪುನಶ್ಚ ಭೋ ವೃಷಕೇತೂ ಎಂದು ಕೂಗಲು, ಆ ವೃಕ್ಷವಾಗಿರುವ ವೃಷಕೇತುರಾಯನು ಹೋ ಎಂದು ಪ್ರತಿಧ್ವನಿಗೊಡಲು, ಬಹು ಸಂತೋಷದಿಂದ ಆ ತರುವಿನಸಮೀಪಕ್ಕೆ ಬಂದು, ಆಲಿಂಗನವಂ ಮಾಡಿ ಕುಶಲಪ್ರಶ್ನೆಯಂ ಮಾಡೆ, ಪ್ರತ್ಯುತ್ತರವನಾಡದಿರಲು, ಭೋ ರಾಜಕುಮಾರ ಎಂದು ಪುನಶ್ಚ ಕೂಗಲು ಹೋಯೆಂದು ಪ್ರತಿಧ್ವನಿಮಾತ್ರಕೊಡಲು ಧರ್ಮಗುಪ್ತನು ಕೇಳಿನೋಡಿ, ಆಗ ಈ ರಾಜಕುಮಾರಂಗೆ ತರುಭಾವ ಏನುನಿಮಿತ್ತ ಬಂದುದೋ ಎಂದು ಮನದೊಳಾಲೋಚನೆಯಮಾಡಿ ಕೊನೆಗಾಣದೆ ಆ ವೃಕ್ಷದಡಿಯಲ್ಲಿ ಬಹು ದುಃಖದಿಂದ ಪ್ರೊರಳಿ ಕಂಬನಿಯಸುರಿದು ಮರುಗುತ್ತ ಒಂದು ಯೋಜ

ನಮಾತ್ರ ಪ್ರದೇಶವಂಕಳೆದು ಹಿಂದಿರಿಗಿ ಬರುವಸಮಯದೊಳು ಆ ಮಿತ್ರವಿಂದೆಯು ಒಂದು ಮಂದಾರತರುವಿನಡಿಯಲ್ಲಿ ರೋದನವಂಮಾಡುತ್ತ ಕುಳಿತಿರಲು, ಅವಳಂಕಂಡು ಪ್ರಧಾನನಾಕೆಯಡೆಗೈತಂದು ವತ್ಸೆ ಈ ಅರಣ್ಯದೊಳೊರ್ವಳೇಕುಳಿತು ರೋದನವಂಮಾಡುವದಕ್ಕೆ ಹೇತುವೇನೆಂದು ಕೇಳಲು, ಆರ್ಯ, ತನ್ನೊಡನೆಮಾತಾಡೆ, ಭವ ಬೆನ್ನಬಿಡದವರಿಂಗೆ, ತಾನಂತಪ್ಪ ಪಾಪಿಯುದರಿಂದ ಬಂದುತೆಪ್ಪೋಗೆಂದು ನುಡಿವಾಕೆಯಂ ನೋಡಿ, ಸ್ವಕಾರ್ಯಾರ್ಥವಾಗಿ ಅಮಾತ್ಯ ನಾಕೆಯನೊಡಂಬಡಿಸಿ ನಿಂನೆಡರ ಪರಿಹಾರವಮಾಡುವೆನು ಭಯಬೇಡ ಹೇಳೆನಲು, ಅಳುತ್ತಿದ್ದ ಮಿತ್ರವಿಂದೆಯಾನುಡಿಯಂಕೇಳಿ ನಗುಲು, ಧರ್ಮಗುಪ್ತ ನಾಕೆಯನೇಕೆ ನಗುವ ಎಂದುಕೇಳಲು, ಮಿತ್ರವಿಂದೆಯು ಆರ್ಯನೇ ಕೇಳು, ನಿಂನೆ ಮಹಾನಿಶಿಯೊಳು ಸುಮಾಸ್ತ್ರನಂ ಪ್ರೊಲ್ವ ಸುಕುಮಾರನು ಈ ನೇತ್ರಾವತಿ ತೀರದೊಳು ಪ್ರಿಯಸಖೀವಿಯೋಗದಿಂ ಸಮುತ್ಪನ್ನವಾದ ಖೇದದಿಂ ರೋದನವಮಾಡುವೆಂನೆಡೆಗೆ ಬಂದು ನಿಂನಂತೆ ಮಾತಾಡಿ ವೃಕ್ಷರೂಪಾಗಿ ನಿಂದಿಹನು. ನೀನೇನು ಯೌನ ಭಯಪರಿಹಾರವಮಾಳ್ಪೆಯೆಂದತ್ಯಂತ ಕ್ಲೇಶದಿಂ ರೋದನವಂಮಾಡಲು, ಧರ್ಮಗುಪ್ತನು ಕೇಳಿ, ವಿಸ್ತಾರವಾಗಿ ಪೇಳೆಂದು ಬಹುಪ್ರಕಾರದಿಂ ಸಮಾಧಾನವಂಮಾಡಿ ಕೇಳಲು, ಮಿತ್ರವಿಂದೆಯು ಸಕಲವೃತ್ತಾಂತಮಂ ವಿಸ್ತರಿಸಿ ಪೇಳಿ, ವೃಷಕೇತು ವತ್ಯಂತ ಬಾಲ್ಯಬುದ್ಧಿಯಂಮಾಡಿ ದೂರದಾಲೋಚನೆಯ ಮಾಡದೆ ಈ ಮಾಯೆಯಿಂ ವೃಕ್ಷರೂಪಾದನೆಂದತ್ಯಂತದುಃಖದಿಂ ಮೈಮರೆಯೆ, ಧರ್ಮಗುಪ್ತನುಕೇಳಿ, ವಿಸ್ಮಿತನಾಗಿ ಹಾಗಾದಡೆ ಆಮಂಗಳಾಂಗ ಗಂಗಾಧರಾಂಗನಾಪಾಂಗದಿಂ ಹಿಂಗಬೇಕಲ್ಲದೆ ಅಸ್ಮದುಪಾಯಾದಿಗಳಿಂದ ಸಾಧ್ಯಮಲ್ಲೆಂದು ನಿಶ್ಚೈಸಿ ಈ ಕಾಂತಾರದೊಳು ತಾನು ಕುಳಿತು ಮಿತ್ರವಿಂದೆಯಂತೆ ದುಃಖಪಡಲೇನು ಗುಣಮುಂಟು, ಎಂದು ಆ ಮಿತ್ರವಿಂದೆಗಭಯಮನಿತ್ತು ಆಕೆಯಿಂದೊಡಗೂಡಿ ಶಿಬಿರಮಂ ಪ್ರೊಕ್ಕು ಸಂಗಡಬಂದಿದ್ದ ಮಂಡಲಾಧಿಪರಂಕರೆಸಿ ರಾಜಕುಮಾರನ ವೃತ್ತಾಂತಮಂ ಯಥೋಚಿತವಾಗಿತಿಳಿಸಿ ಅವರಿಗಪ್ಪಣೆಯಿತ್ತು ಹತಾವಿಶಿಷ್ಟ ನಿಜಸೈನ್ಯದಿಂದೊಡ

ಗೂಡಿ, ದುಗುಡದಿಂ ಮಾಹಿಷ್ಮತಿಯ ಪ್ರೊಕ್ಕು, ರಾಯನಿಗೆ ಮೊಗದೋ
ರಲಾರದತ್ಯಂತ ಕ್ಲೇಶದಿಂ ತನ್ನ ಮನೆಗೈದಲು ಸುಶರ್ಮರಾಯನತ್ಯಂತ
ಭಯಕಲಿತ ದುಃಖದಿಂ ತರಹರಿಸಲಾರದೆ, ಮಂತ್ರಿಯ ಮನೆಗೆ ಬಂದು,
ಮಂತ್ರಿಯುಂ ಕರೆದು ಮಾತಾಡಿಸಲು ಶೋಕಮೂರ್ಛಿತನಾಗಿ ಇನ್ನೇನು
ಗತಿ ಎಂತು ರಾಯಂಗೆ ಮೊಗದೋರಲಿ, ಆತನೊಡನೆ ತಾನೆಂತು ಮಾತ
ನಾಡುವದು, ಬಹುಕಾಲ ತಪಗೈದು ಪಡೆದ ಕುವರನಂ ತಾನು ಕೈಯ್ಯಾ
ರಣೀಗಿ ವನದೊಳಗೆ ವೃಕ್ಷವಂ ಮಾಡಿ, ತಾನು ಮನೆಗೈದಿದನು, ಇಷ್ಟು
ಪ್ರಕಾರದಿಂ ರಾಯನೆಮ್ಮ ಪ್ರೊರೆದುದಕೆ ಸಾಫಲ್ಯಮಾದುದೆಂತಕಟ ಎನುತ
ನಾನಾತೆರದಿ ಹಂಬಲಿಸಿ ಮರುಳಾಗಿ, ಧರಣಿಪನ ಪಾದದೊಳು ಬಿದ್ದು
ಹೊರಳುತ್ತಲಿರಲು, ಆ ಸುಶರ್ಮರಾಯನೊಂದುಂ ತಿಳಿಯದೆ ಭಯವಿಹ್ವ
ಲನಾಗಿ ಮಗನು ಮೃತನಾದನೆಂದು ಮನದಿ ನಿಶ್ಚೈಸೆ, ಅಮಾತ್ಯ ಧರ್ಮ
ಗುಪ್ತ, ಯೆನ್ನ ಮಗ ನೆಲ್ಲಿಡಪೇಳು ಯಿಂತು ರೋದನಮಾಡೆ ಕಾರಣ
ಮದೇನು, ಪೇಳು, ತಿಳುಹು, ಯೆಂದು ಮೂರ್ಛಿತನಾದ ಮಂತ್ರಿಗು
ಪಚಾರವಂ ಮಾಡಲು ಧರ್ಮಗುಪ್ತನು ಧೈರ್ಯಾವಲಂಬನೆಯ ಮಾಡಿ,
ಗದ್ಗದ ಸ್ವರದಿಂದ ಸಕಲ ವೃತ್ತಾಂತವಂ ವಿಜ್ಞಾಪನೆಮಾಡಿ, ವೃಷ
ಕೇತು ವೃಕ್ಷರೂಪಾಗಿರುವದಂ ಪೇಳಲು, ಆ ಮಹೀಶನು ಸುದ್ವೇಲಶೋ
ಕದಿಂ ಮೂರ್ಛೆಯನೊಂದಿ ಧರಣಿಯೊಳು ಬಿದ್ದನತಿ ಕಠೋರಕುಠಾರದಿಂ
ತರಿದ ಸುರತರುವಂತೆ, ಧರ್ಮಗುಪ್ತನು ಮೂರ್ಛಿತನಾದ ನೃಪತಿಯಂ
ತನ್ನೆದೆಯಮೇಲೊರಗಿಸಿ ಶೈತ್ಯೋಪಚಾರವಂ ಮಾಡಲು, ಕಣ್ದೆರದು
ಹಾ ವತ್ಸ, ಹಾ ಬಾಲಚಂದ್ರ, ಹಾ ಗುಣಸಾಂದ್ರ, ಹಾ ಅಭಿನವಮ
ನೋಭವ, ಎಂದು ಹಂಬಲಿಸಿ ಕಂಬನಿಗರೆದು ಎಲೈ ಧರ್ಮಗುಪ್ತನೆ
ಕೇಳು, ಯೆನ್ನ ಮನೋರಥವು ಬಯಲಾದುದು, ಪುತ್ರಹೀನನು ಎಂ
ದು ಯೆನ್ನ ಬೈವರು. ಜನರು ಇನ್ನು ಮಾಡುವದೇನು, ಎನ್ನಂ ಕಲಾವ
ತಿಯ ಮನೆಗೆ ಕರದೊಯ್ಯುವದೆನೆ, ಮಂತ್ರಿ ರಥದೊಳೇರಿಸಿ ಅರಮನೆಗೆ
ಕರತಂದು ಬಿಡಲು, ನರಪತಿಯು ಕಲಾವತಿಯೊಡನೆ ಅಖಿಲವೃತ್ತಾಂ
ತವಂ ವಿವರಿಸಿ ಪೇಳಲು, ಕಲಾವತಿಯು ಬಾಲಕನ ವೃತ್ತಾಂತವಂ

ಕೇಳಿ, ಮೂರ್ಛೆಯನ್ನೈದಿ ನೆಲಕ್ಕೆ ಬೀಳಲು, ದವಾನಲ ಶಿಖಾಸಂಸ್ಪಲಿಷ್ಟ ಮಾಲತಿಯಂತೆ, ಕುಮುದಿನಿಯು ಕಲಾವತಿಗೆ ಶೈತ್ಯೋಪಚಾರವಂ ಮಾಡೆ ಮೂರ್ಛೆತಿಳಿದೆದ್ದು ನಾನಾವಿಧದಿ ಹಂಬಲಿಸಿ ಮರುಗಿ, ತನ್ನುದರವಂ ಕರಗಳಿಂ ಬಡಿದು, ಹಾ ಕಂದ ದಿವ್ಯಸೌಧಾಗ್ರದೊಳು ಮಂತ್ರಿಮಾನ್ನೆಯರಿಂದ ಕ್ರೀಡಿಸುವ ನೀನೊಬ್ಬನಡವಿಯೊಳು ಘೋರವಾದ ಮೃಗಪಕ್ಷಿಯಕೂಡ ಛಳಿಘಾಳಿಯೊಳಗೆಂತಿರುವೆ, ಹಾ ವತ್ಸ ನಿನ್ನ ಮುಖವಂ ನೋಡದೆ ಪುಣ್ಯವಿಲ್ಲದಂತಾಯ್ತೆನಗೆ, ಪಾರ್ವತೀರಮಣ ಹಾ ಜಯ ಕರುಣಾಪೂರ್ಣಹೃದಯ ನೀಂ ದಯಗೈದ ಬಾಲಕನು, ಯಿಂತಪ್ಪುದುಚಿತವೆ ನಿನಗೆ, ಅಥವಾ ಜಗತ್ಸಂಹಾರವಂ ಮಾಡುವಾತೆಂತೆ ಕರುಣಮಿಲ್ಲಿಹುದು, ತಾನು ಬರಿದೆ ಹಲುಬಿದೊಡೆ ಫಲವೇನು ನಿನ್ನರಸಿಯಡಿದಾವರೆಯ ನಿರಂತರ ಭಜಿಸುತಿರುವ ಶಾಂತಿಮಾಲಿನೀದೇವಿಗೆ ನಿರ್ವ್ಯಾಜದಿಂ ಮಾಡಿದ ಪಚಾರಕಾದುದೀಫಲವೆಂದು ಧ್ಯಾನಿಸುತ ಧರಣಿಯೊಳುಬಿದ್ದು ಪೊರಳುತ ಬಾಯ್ದೆರದು ಜೇಡುತ್ತ ಅಭಿಮನ್ಯು ಪೋದಂದರಸಿ ಪೊಲುಬಿದೊಲು, ಕುರರಿಯಂ ಶೊರಲುತ್ತ, ಪುತ್ರಶೋಕಗ್ರಹಗ್ರಸ್ತೆ ಳೋಪಾದಿಯಲ್ಲಿ ರಾಯನಡಿಯೊಳು ಬಿದ್ದು ಪೊರಳುವ ಮಾನಿನಿಯಂ ಕಂಡು, ನಿರಂತರಾನವಚ್ಛಿನ್ನಹೃಯಂಗವೀನಾಜ್ಯ ಧಾರೆಯಿಂದಭಿವೃದ್ಧನಾದ ವೈಶ್ವಾನರನಂತೆ, ಅತ್ಯುದ್ವೇಲವಾದ ಶೋಕದಿಂದ ದಗ್ಧಹೃದಯನಾಗಿ ತನ್ನೊಳುತಾನು ಧೈರ್ಯವಂ ಮಾಡಿ, ಮನದೊಳಾಲೋಚಿಸಿ ನಿರ್ಜರರಿಂದ ಪ್ರಾರ್ಥನೀಯ್ಯವಾದ ರಾಜ್ಯಲಕ್ಷ್ಮಿಯೊಳ್ನಿರಾಶೆಯಂಮಾಡಿ, ದೇಹದೊಳು ಮಮತೆಯಂ ಬಿಟ್ಟು ನುಡಿದರೆಲೆ ಕಾಂತೆ, ಸಾಕ್ಷಾನ್ನಿಟಲಾಕ್ಷನ ಕಟಾಕ್ಷದಿಂದುತ್ಪನ್ನನಾದ ಸರ್ವಗುಣೋಪೇತನಾದ ಪುತ್ರನೀರೀತಿಯಾದ ಬಳಿಕ ಈ ದೇಹ, ರಾಜ್ಯಕೋಶ ಮೊದಲಾದ ಸಂಪದಗಳಿಂದೇನುಫಲ, ಪುತ್ರಹೀನರಿಗೆ ಇಹಪರದಲ್ಲಿ ಗತಿಯಿಲ್ಲವೆಂದು ವೇದಶಾಸ್ತ್ರಗಳೊರಲುತಿದೆ ಆದುದರಿಂದ ಬಹ ಮಾತಿನಿಂದೇನು ವೃಕ್ಷರೂಪಾಗಿರುವ ಕಂದನೆಡೆಗೈದಿ ದೇಹಗಳ ಬಿಡುವದೇ ಲೇಸು ಇನ್ನು ಇಲ್ಲಿರುವದುಚಿತವಲ್ಲೆಂದೊಡಂಬಡಿಸಿ ಆ ಕ್ಷಣದಿ ಪರಮಾಪ್ತನಾದ ಧರ್ಮಗುಪ್ತನಂ

ಕರೆಸಿ, ಎಲೈ ಧರ್ಮಗುಪ್ತನೆ ಕೇಳು, ಮೂಗಿಲ್ಲದಮೊಗದಂತೆ, ರವಿಯಿಲ್ಲ ದಾಗಸದಂತೆ, ಗಿಣಿಯಿಲ್ಲದ ಬನದಂತೆ, ಶಾಸ್ತ್ರಾಭ್ಯಾಸಮಂಮಾಡದಕ ವಿಯಂತೆ, ಸಾಹಿತ್ಯವಿಲ್ಲದ ಪಂಡಿತನಂತೆ, ಸ್ವಾತಂತ್ರ್ಯವಿಲ್ಲದ ನರಪತಿ ಯಂತೆ, ಮಕ್ಕಳಿಲ್ಲದ ಮನೆಯದರಿಂದ ಮತ್ಪುತ್ರನಗವಾಗಿರುವ ಬನಕೆ ತಾವೀರ್ವರೂ ಪೋಗಿ ಕರತರುವ ಸಂನಾಹಮಂಮಾಡಿ, ಸಾಗದಿರೆ ಆ ವೃಕ್ಷದಡಿಯಲ್ಲಿ ದೇಹಮಂಬಿಡುವೆ ವಿದು ಫಲಿತಾರ್ಥ ವೆಂದಾಡಿದರಸ ನಂನೋಡಿ ನುಡಿದನೆಲೈ ಜೀಯ್ಯ, ನೀನಿಲ್ಲದೀ ನಗರದೊಳು ತನಗೇನು ಕಾರ್ಯ ಒಂದು ಕ್ಷಣ ನಿಂನಡಿಯನಗಲಿಯಿರಲಾರೆನದರಿಂದ ತಾನು ನಿಂನೊ ಡನೆ ಬರುವುದೇ ಸತ್ಯವೆಂದ ಮಂತ್ರಿಯಂನೋಡಿ, ಮೂರ್ಖತನ ಮಾಡದಿರು ದೂರದಾಲೋಚನೆಯಮಾಡಿನೋಡಿರ್ವರುಂಪೋಗೆ ಪ್ರತ್ಯ ರ್ಥಿನೃಪರೆದ್ದು ಇದೇಸಮಯವೆಂದು ಬಂದು ರಾಜ್ಯಮನಾಕ್ರಮಿಸಿ ಕೊಂಬುವರು ಈಶ್ವರಾನುಗ್ರಹದಿಂದ ಪುತ್ರನು ಜೀವಿಸಿದಡೆ ತಾವ್ಮೆದಿ ಎಲ್ಲಿ ನಿಲ್ಲಲಿಬೇಕು ಅದರಿಂದೆಂನನುಡಿಯುಂಕೇಳು ರಾಜ್ಯಮನಾಳುವ ಪುತ್ರನಭ್ಯುದಯಕೋಸುಗ ವಿಪ್ರರುಗಳಿಂದ ಜಪತಪಾದಿಗಳಂನುಮಾ ಡಿಸಿ, ನಿಂನ ಪೆಸರೆಂತು ಸಾರ್ಥಕವಾಗಬೇಕೋ ಆ ರೀತಿಯಿಂದ ರಾಜ್ಯಪ ರಿಪಾಲನೆಯಂ ಮಾಡುತಿರೆಂದು ಮಂತ್ರಿಯಂ ಬಹುಪ್ರಕಾರ ಒಡಂಬಡಿಕೆ ಯಂಮಾಡಲು. ಧರ್ಮಗುಪ್ತನು ಸ್ವಾಮಿಯ ನಿರ್ಬಂಧಮಂಮೀರಲಾರ ದೆ ಸುಮ್ಮನಿರೆ ವೃಕ್ಷರೂಪಾಗಿ ತನಯ ನಿರುಪತಮಿಯಂತೋರಿಸಲು, ಚಾರನೋರ್ವನಂ ಕರೆದುಕೊಂಡು ದಂಪತಿಗಳೀರ್ವರೂ ನಿಶೀಥಕಾಲದಲ್ಲಿ ನಾಗರಿಕರರಿಯದಂತ ರಹಸ್ಯವಾಗಿ ತೆರಳಿ, ದೇಶದೇಶಂಗಳಂದಾಂಟ ಸಾ ರ್ವಭೌಮನಾದ ಸುಶರ್ಮರಾಯನು ಪಿಶಾಚಗ್ರಸ್ತನೋಪಾದಿಯಲ್ಲಿ ಪತ್ನಿ ಯಿಂದೊಡಗೂಡಿ ಅನ್ನಪಾನಗಳಿಲ್ಲದೆಅತ್ಯಂತಕೃಶನಾಗಿ ಮಾಸತ್ರಯಂ ನಡೆದು ನೇತ್ರಾವತೀತೀರಕ್ಕೆಬಂದು ಕಂಡರು ಮಹಾರಣ್ಯಮಂ ಚಾರ ನಂಕರೆದು ಇದೇನರಣ್ಯಕಾಣುತಿದೆ ಎಂದುಕೇಳಲು. ಚಾರನು ಈ ಘೋರವಾದರಣ್ಯದೊಳು ಮಹಾನುಭಾವನಾದ ವೃಷಧ್ವಜ ನುಹಾರಾ ಯನು ತರುರೂಪಾಗಿರುವನೆಂದು ಮಂತ್ರಿ ತನಗೆ ತೋರಿಪನೆಂದು ನುಡಿ

ಯಲದಂ ಕೇಳಿ; ಮೂರ್ಛಿತರಾಗಿ ತಿಳಿದೆದ್ದು ವನವೆಲ್ಲವಂ ತಿರುಗಿನೋಡು ತ್ತ ಶೋಕಸಂತಾಪದಿಂ ಮೈಮರೆದು ಕೇಳಿದರು ತರುಲತಾ ಮೃಗಪಕ್ಷಿ ಗಣಗಳಂ ಅವು ಮಾತಾಡದಿರಲು ಅತ್ಯಂತದುಃಖದಿಂ ಭೋಪುತ್ರ ಹಾ ವೃಷಕೇತು ಎಂದು ನಾನಾವಿಧದಿ ಕೂಗುತ್ತ ಬರುತಿರಲು ವೃಕ್ಷರೂ ಪಾಗಿರುವ ವೃಷಧ್ವಜನು ಹೋಯೆಂದು ಪ್ರತಿಧ್ವನಿಗೊಡಲು ದಂಪತಿ ಗಳು ಸುತನ ಗಂಭೀರನಿಸ್ವನವಂ ಕೇಳಿ, ಕುತುಹಲದಿಂದ ಧ್ವನಿಯು ಪ ಥವಿಡಿದು ಬರುತ ಕಾಣದೆ ಆ ವೃಷಕೇತು ವೃಕ್ಷರೂಪಾಗಿರುವ ತರುವಿನ ಡಿಯಲ್ಲಿ ನಿಂದು ಪುನಶ್ಚ ವತ್ಸ ವೃಷಧ್ವಜಯೆಂದು ಕೂಗಲು, ಹೋ ಯೆಂದು ಪ್ರತಿಧ್ವನಿಗೊಡಲು ಇವನೇ ತನಯನೆಂದು ನಿಶ್ಚೈಸಿ, ಉಭ ಯತ್ರರೂ ವೃಕ್ಷವನಾಲಿಂಗಿಸಿ ಹಾ ಪುತ್ರ ನಿನ್ನ ವಿಧಿಯಿಂತಾದುದೆ ಎಂದು ಮೋಹದಿಂ ಕರಕರಗಿ ನೇವರಿಸಿ ವೃಕ್ಷವಂ ಮಾತಾಡಿಸಲು. ತರುರೂಪಾಗಿರುವ ತನಯನುಡಿಯುದಿರೆ ಈರ್ವರೂ ಮತ್ತಕಂಗರಾಗಿ ರೋಧನವಂಮಾಡಲು ಯಥಾ ಪೂರ್ವವಾಗಿ ನಿಶಿಯಲ್ಲಿ ನಗರಭೂಮಿಯಿಂ ದೆದ್ದು ವಿಮಾನನಿಳಿಯಲ್ಕಲ್ಲಿ ದೇವಕನ್ನೆಯರೆಲ್ಲ ನೆರದು, ಕ್ರೀಡಿಸು ತ್ತಿರಲು, ಕಾವಲವರ್ಬಿದಿ ವಿಜ್ಞಾಪನಂಗೈಯ್ಯಲು ಆ ಸುಗಂಧಿನಿ ಕೇಳಿ ನಸುನಗುತ ತಿರಸ್ಕರಣಿಯೂನನವಂನೋಡಿ, ಆ ತರುವಿನ ಸಮೀಪ ದೊಳಗಳುವರ್ಯ್ಯಾರೊ ನೋಡಿ, ವಿಚಾರಿಸುತ್ತ ಅವರನುಂ ಮೋಣುವ ನಂತೆ ಮಾಡಿಬಾರೆಂದೆನಲು ತಿರಸ್ಕರಣಿಎಂಬ ದೇವತೆಯು ಬಂದು ನೋಡಿ, ಈ ಬಾಲಕನ ಮಾತಾಪಿತೃಗಳಿವರೆಂದು ನಿಶ್ಚೈಸಿ ಅವರಂ ತರುಗಳಂಮಾಡಿ, ಇನಿತಾದಡೆಯು ಕರುಣವಿಲ್ಲದೆ ಬಂದು ಎಲೈ ಸು ಗಂಧಿನಿಯೆ ಕೇಳು, ಆ ರಾಜಕುಮಾರನ ಜನನಿಜನಕರೀರ್ವರೂ ಬಹು ವಿಧಕ್ಲೇಶದಿಂದಳುತಿರಲವರಂವನದೊಳಗೆ ಪಾದಪವಮಾಡಿ ತಾಂ ಬಂದೆ ನೆಂದೊರೆಯಲು. ಆ ಸುಗಂಧಿನಿಯುವ್ವನದ ಮದದಿಂದ ಕಾರ್ಯಾ ಕಾರ್ಯವೊಂದು ನರಿಯದೆ ಮುದವಂತಾಳಿ ಸುಖದಿಂದಿರಲು. ಈ ರಾಜ ನೊಡನೆಬಂದಿದ್ದ ಚಾರನು ಈರ್ವರೂ ವೃಕ್ಷರೂಪಾದ ವಿಧಿಯಂ ನೋ ಡಿ ದೂರದೊಳ್ಪ್ರಚ್ಛನ್ನನಾಗಿದ್ದು ಇನನುದಯದೊಳಗೆದ್ದು ಮೆಲ್ಲ

ಮೆಲ್ಲನೆ ಗಹನವುಂದಾಂಟ ಬರಲು ದುಃಖದಿಂ ಬಂದು ಮಂತ್ರಿಯೊಡನಖಿಲ ವೃತ್ತಾಂತಮಂ ನೊರೆಯಲು ಧರ್ಮಗುಪ್ತನು ಕೇಳಿ, ಅತ್ಯಂತ ವಿಷಾದದಿಂ ದನ್ನಾಹಾರಗಳಬಿಟ್ಟು ಚಿಂತಿಸಿ ಕಡೆಗಾಣದೆ ಧೀರನಾದ ಧರ್ಮಗುಪ್ತನು ಚಿರಕಾಲ ಮೌನದಿಂದಾಲೋಚನೆಯಮಾಡಿ, ಸಂವಿಧಾನವುಂ ಮನದಿ ನಿಶ್ಚೈಸಿದನದೇನೆಂದೊಡೆ, ರಾಯನು ತಾನೆಂತು ಪೇಳದಡೆಯು ಸಾಧ್ಯಾಸಾಧ್ಯಕಾಲದೇಶಗಳೊಂದುನಂ ಪರ್ಯಾಲೋಚನೆಯಂ ಮಾಡದೆ, ಪುತ್ರಶೋಕದಿಂ ತಾನು ಪತ್ನೀಸಹಿತನಾಗಿ ತದ್ವಾವನಮನೈದಿದನು. ಇಂನದಾವನು ಆ ಕಾಂತಾರವಮಂ ಪ್ರೋಕ್ಕಡಿದೇತರನಾಗುವನು. ಸಂಶಯವಿಲ್ಲ, ಮಾನುಷೋಪಾಯದಿಂ ಸಾಧ್ಯವಾದ ಕಾರ್ಯವಿದಲ್ಲವದರಿಂದ ಹಂಬಲಿಸಿ ಫಲವೇನೆಂದು ಅಮಾತ್ಯರೇ ಮೊದಲಾದ ಸಕಲ ಪ್ರಕೃತಿಗಳಂ ಕರಸಿ ಸರ್ವರಿಗೂ ಈ ವೃತ್ತಾಂತನೆಲ್ಲವಂ ಸವಿಸ್ತಾರವಾಗಿ ತಿಳಿಸಿ, ಇವರನ್ನು ಪುನಶ್ಚ ಉಜ್ಜೀವನ ಮಾಡಲು, ಮಾನುಷೋಪಾಯದಿಂದೇನಹುದು, ದುರ್ಘಟವೆಂದು ಈ ಕಾರ್ಯಮಶಕ್ಯವೆಂಬರ್ಥವಂ ತೋರಿ, ಮುಂದೆ ರಾಜ್ಯಕ್ಕೆ ಪತಿಯಿಲ್ಲದಿರೆ ಅರಾಜಕವೆಂದು ಪರಕೀಯ ದೇಶಾಧಿಪತಿಗಳು ಸುಮ್ಮನಿರರದರಿಂದ ನೀವೆಲ್ಲ ಸಕಲ ವೈದಿಕ ಲೌಕಿಕ ವ್ಯವಹಾರವುಂ ತಿಳಿದಭಿಜ್ಞರದರಿಂದ ಮುಂದೆ ಮಾಡತಕ್ಕ ಕಾರ್ಯಮಂ ಪರ್ಯಾಲೋಚನೆಮಾಡಿ ನಿಶ್ಚೈಸಿ ಪೇಳಬೇಕೆಂದು ನುಡಿದ ಅಮಾತ್ಯನಂ ನೋಡಿ ಸರ್ವರೂ ಮುಂದೋರದೆ ಸುಮ್ಮನಿರೆ ಧರ್ಮಗುಪ್ತನು ತನಗೆ ತೋರಿದಾಲೋಚನೆಯ ಪೇಳುವೆನೆಂದೆನಲು ಸರ್ವರೂ ಆ ಮಾತಗಂಗೀಕಾರಮಾಡೆ ಧರ್ಮಗುಪ್ತನು ಮಹಾರಾಜನ ಜ್ಯೇಷ್ಠ ಪತ್ನಿಯಾದ ಗುಣವತಿಯಾದ ಮಹಾನುಭಾವಳಾದ ಕಾಂತಿಮಾಲಿನೀದೇವಿಯು ಸಪತ್ನಿಯಾದ ಕಲಾವತಿಯ ದುರ್ಬೋಧನಾಸಕ್ತನಾದ ರಾಜನಿಂದ ದೂಷಿತಳಾಗಿ ಪುರಾದ್ಬಹಿರುದ್ಯಾನದೊಳು ಕಾರಾಗಾರದೊಳಿರುವ ಆ ದೇವಿಯ ಬಳಿಗೆಲ್ಲರು ಪೋಗಿ ಸನ್ಮಾನದಿಂ ಕರೆತಂದು ಯೆಲ್ಲರಾಕೆಯ ಶರಣಾಗತರಾಗಿ ಒಡಂಬಡಿಸಿ ಸಿಂಹಾಸನದಿ ಕುಳ್ಳಿರಿಸಿ ಆಕೆಯ ಅಡಿದಾವರೆಯಮರೆಯಲ್ಲಿ ರಾಜಾಭ್ಯುದಯಪರಿಯಂತ ಜೀವನಮಾಡಬಹುದೆಂ

ದುನುಡಿದ ಅಮಾತ್ಯನಂನೋಡಿಸರ್ವಜನರಂಗೀಕಾರವುಂಮಾಡಿ ಸಾಧುಸಾಧುವೆಂದು ಸರ್ವರೂಶ್ಲಾಘನೆಮಾಡಲು ಸರ್ವಪ್ರಕೃತಿಗಳಿಂದ ಸಹಿತನಾಗಿ ಸಕಲವಸ್ತ್ರಭೂಷಣವಾಹನಾದಿ ಸಂಭಾರವಂ ತೆಗದುಕೊಂಡು ಪುರೋದ್ಯಾನಕ್ಕೈತಂದು ಗೃಹಾದ್ವಹಿರ್ಭಾಗದೊಳ್ಕುಳಿತುವೃದ್ಧರಾದ ವಿದಗ್ಧೆಯರಾದಪೂರ್ವಪರಿಚಿತರಾದ ಅಂತಃಪುರದಮಾನಿನಿಯರಂ ಕರೆದು ಹತ್ತಿರದುಮುಂದಿಯಂಕಳುಹಲು ಅವರು ಒಳಪೊಕ್ಕು ಸಾಕ್ಷಾತ್ ಶಚಿಯಂತೆ ಗೌರಿಯಂಪೂಜಿಸುತ ಕುಳ್ಳಿರುವ ಕಾಂತಿಮಾಲಿನಿಯಂ ಕಂಡು ವಂದನೆಯಂಮಾಡಲು, ಕಾಂತಿಮಾಲಿನೀದೇವಿಯುವರಂನೋಡಿ ವಿಸ್ಮಿತಳಾಗಿ ಇದೇನೋ ಕಾರಣಾಂತರವಿರುದುದೆಂದು ಪೂಜಾಪೂರ್ತಿಯಂಮಾಡಿ ಪುಷ್ಪಾಂಜಲಿಯನಿತ್ತು ವಿಸರ್ಜನೆಮಾಡಿ. ಎಲೈ ಕಲಕಂಠಿ ಎಲೈ ಮೋಹನತರಂಗಿಣಿ ಹೇ ಮಧುರಭಾಷಿಣಿ ಎಲೈ ಮಂದಗಮನೆ ಎಂದವರವರ ಸಂಭೋಧನೆಯಂ ಮಾಡಿ ಕರೆದು ಇದೇನಿದು ನೀವು ಬಂದಿರುವ ಹದನಾವುದು ರಾಜಾಧಿರಾಜನೇಂ ಕುಶಲದಲ್ಲಿಹನೆ ಗೃಹಾದ್ವಹಿರನೇಕವಾದ್ಯಧ್ವನಿಯಿದೇನೆಂದು ಕೇಳಲು ಆ ದೂತಿಯರು ಕೈಮುಗಿದು ಅಮಾತ್ಯಧರ್ಮಗುಪ್ತನು ಸಮಸ್ತ ಪ್ರಕೃತಿಗಳಿಂದ ಸಮೇತನಾಗಿ ಭವಚ್ಚರಣನಳಿನದರ್ಶನಾರ್ಥವಾಗಿ ಬಂದಿರುವನೆಂದು ವಿಜ್ಞಾಪನೆಯಂ ಮಾಡಲು ಅಲ್ಲಿಂದಲೆದ್ದು ಆ ಸಖೀಜನರಿಂದೊಡಗೂಡಿ ಘನಕದಂಬದಿಂದ ಹೊರಗೆ ಬಂದ ಶಂಪಾಲತೆಯಂತೆ ಪ್ರಕಾಶನಾದ ದೇವಿಯಂ ಕಂಡು, ಸಮಸ್ತ ಪ್ರಜೆಗಳು ವಂದನೆಯಂ ಮಾಡಿ ಸ್ತುತಿಸುತ್ತಿರಲು ಧರ್ಮಗುಪ್ತನು ವೃದ್ಧರಾದ ಸಚಿವರಿಂದೊಡಗೂಡಿ ಸಮೀಪಕ್ಕೆ ಪೋಗಿ, ಕಾಣಿಕೆಯಿತ್ತು ನಮಿಸಲು ದೇವಿಯರಿದೇನೈಯ್ಯ ಸಚಿವಾಗ್ರೇಸರನೆ ಬಂದಿರುವ ಹದನೇನು ಧರಾಧೀಶನೇಂ ಕುಶಲಿಯೆ ಕಲಾವತಿ ಸುಖದಿಂದಿರುವಳೆ ವತ್ಸ ವೃಷಕೇತು ಅಭಿವೃದ್ಧನಾಗುತಲಿಹನೆ ಎಂದು ಕೇಳಲು ಮಹಾ ಬುದ್ಧಿಶಾಲಿಯಾದ ಧರ್ಮಗುಪ್ತನು ಆದ್ಯಂತವಾಗಿ ಸಕಲ ವೃತ್ತಾಂತವುಂ ಈ ಮೂವ್ವರೂ ದೇವಕನ್ನೆಯ ಕೋಪದಿಂ ವೃಕ್ಷರೂಪಾದ ಪ್ರಕ್ರಿಯುವುಂ, ರಾಜ್ಯಕ್ಕೆ ಪತಿಯಿಲ್ಲದರಿಂದ ಸಮಸ್ತ ಪ್ರಜೆಗಳು ಭಯಾತುರರಾ

ಗಿ ಚರಣಸನ್ನಿಧಿಗೆ ಬಂದಿರುವ ಅಭಿಪ್ರಾಯವಂ ವಿಸ್ತಾರವಾಗಿ ವಿಜ್ಞಾಪನೆಮಾಡಲು, ಕೇಳಿ ಕಾಂತಿಮಾಲಿನಿಯು ಶೋಕಸಂವಿಗ್ನ ಮಾನಸಳಾಗಿ ನಾನಾವಿಧ ಪ್ರಲಾಪವಂ ಮಾಡಿ ಮೈಮರೆದು ಮೂರ್ಛೆಯನೈದಲು, ಸಮಸ್ತ ಪ್ರಜೆಗಳು ಮಹಾ ವಿಕಾರಿಯಾದ ಪತಿಯಂ ಸಪತ್ನಿಯಂ ವೃಷಕೇತುವಂ ನೆನದು ಹಂಬಲಿಸುವಾಕೆಯಂ ನೋಡಿ ಈಕೆಯಂ ಪೋಲ್ವ ಸತಿಯರೀ ಇಳೆಯೊಳುಂಟೆ ಎಂದು ಈ ಸತಿಯು ಸಂಕಟದಿಂದ ಈ ರೀತಿಯಾದುದೆಂದು ಮರುಗಲು ಅತ್ಯಂತ ದುಃಖದಿಂ ಮೂರ್ಛೆಯನೈದಿದ ಸತಿಯು ಸಮಿಾಪಕ್ಕೆ ಧರ್ಮಗುಪ್ತನೇ ಮೊದಲಾದ ಸರ್ವ ವೃದ್ಧಸಚಿವರು ಬಂದು ಸಾಮೋಕ್ತಿಗಳಿಂದ ಸಮಾಧಾನವಂ ಮಾಡಿ ತಾಯೆ ಕೇಳು ಬರಿದೆ ದುಃಖಮಾಡಿ ಫಲವೇನು ಮುಂದೆ ರಾಜ್ಯಕ್ಕೆ ಒಡೆಯರಿಲ್ಲದರಿಂದ ನಿರರ್ಥಕವಾಗಿ ರಾಜ್ಯ ಪರಾಕ್ರಾಂತವಾಗಿ ಪೋಗುತ್ತೆ ಪ್ರಜೆಗಳೆಲ್ಲಾ ಮಾತಾಪಿತೃಗಳಿಂದತಿಶಯನಾಗಿದ್ದ ರಾಜನಿಂ ವಿರಹಿತರಾಗಿ ಅನಾಥರಾದೆವೆಂದು ಭಯಶೋಕದೊಳು ಮಗ್ನರಾಗಿ ನಿನ್ನ ಪಾದಾವಲಂಬನದಿಂದ ಜೀವಿಸಬೇಕೆಂಬ ಅಭಿಲಾಷೆಯಿಂದ ನಿನ್ನ ಶರಣಾಗತರಾಗಿ ಬಂದಿಹರು ಇವರಂ ನೋಡಿ ಶೋಕವಂ ಬಿಟ್ಟು ಪ್ರಜಾಪಾಲನೆಯಲ್ಲಿ ತತ್ಪರಳಾಗಿ ಪುರವಂ ಪೊಕ್ಕು ಸಿಂಹಾಸನಾರೂಢಳಾಗಿ ರಾಜ್ಯವಂ ಪರಿಪಾಲನೆಯಂ ಮಾಡುತಿರಲು, ದೈವಾನುಗ್ರಹದಿಂದ ತೆರುಭಾವ ಪೋಗಿ ರಾಯನು ಬಂದಡೆ ನಿಮ್ಮ ಮೇಲಣ ದುಃಖ ಪರಿಹರವಾಗುವದು. ರಾಜ್ಯವು ಪರಾಕ್ರಾಂತವಾಗದೆ ಸ್ವಾಧೀನವಾಗಿರುವದು ಅಂತುಮಲ್ಲದೆ ನೀತಿಶಾಸ್ತ್ರದಲ್ಲಿ ಪ್ರಭುಶಕ್ತಿ ಉತ್ಸಾಹಶಕ್ತಿ ಮಂತ್ರಶಕ್ತಿಯೆಂಬ ಶಕ್ತಿತ್ರಯಮುಂಟದರಲ್ಲಿ ಮಂತ್ರೋತ್ಸಾಹಶಕ್ತಿಗಳಿಗೆ ಮೂಲಭೂತವಾದದ್ದು ಪ್ರಭುಶಕ್ತಿ ಅದರಿಂದ ಪ್ರಭುತ್ವಮಾತ್ರ ಸ್ವಾಧೀನವಾಗಿರಲು ಸರ್ವವೂ ಸ್ವಾಧೀನವಾಗುವದದು ಕಾರಣ ನಮ್ಮ ಪ್ರಾರ್ಥನೆಯಂ ಮನದಂದು ಅಂಗೀಕಾರ ಮಾಡಬೇಕೆಂದು ಬಿನ್ನೈಸಲವರಂ ನೋಡಿ ಎಲೈ ಧರ್ಮಗುಪ್ತನೆ ಕೇಳು ಪತಿಯಿಲ್ಲದ ಸತಿಯರಿಂಗೆ ರಾಜ್ಯಭೋಗಾದಿಗಳು ಸಲುವುದೇ ಪರಗತಿಗೆ ಮಾರ್ಗವ ಹುಡೆ ಸರ್ವಾತ್ಮನಾಯೆನ್ನ ಮನವೊಡಂಬಡದೆಂದು ವಾಚಿಸುವ ಮಾನಿನೀ

ರತ್ನವುಂನೋಡಿ ಸಮಸ್ತಪ್ರಜೆಗಳುಕೈಮುಗಿದು ಪೂರ್ವದಲ್ಲಿಬಹುಮಂದಿರಾಜಪತ್ನಿಯರುಪತಿಯದೃಶ್ಯನಾದಕಾಲದಲ್ಲಿ ರಾಜ್ಯಭಾರವುಂನಾಡಿ ನಿರ್ವಹಿಸಿರುವರದರಲ್ಲಿ ಸಂಶಯವಿಲ್ಲ ದೈವಗತಿಯಿಂದರಸಬಂದನಾದಡೆ ಸಾರ್ಥಕವಾಗುವುದು ಸಜ್ಜನರಿಂಗೆ ಬಂದೆಡರುಸ್ಥಿರವಲ್ಲ ಪಾಪಿಗೆ ಬಂಪಭ್ಯುದಯದಂತೆಧರ್ಮವಿದ್ದಲ್ಲಿ ಈಶ್ವರಾನುಗ್ರಹದಿಂದ ಸತ್ವರದಿ ಕಷ್ಟ ಪರಿಹಾರವಾಗುವದು ಅಥವ ಆಗದಡೆ ಪತಿಗುತ್ತಮಗತಿಯಾಗುವಂತೆ ಧರ್ಮದಿಂ ರಾಜ್ಯವುಂ ಪೊರೆದರದರಿಂದ ಸಕಲ ಸಂಪಾದನೆಯುಮಾಡಬಹುದೆಂದು ಇಂತಲ್ಲದೆ ನೀನು ಸಿಂಹಾಸನವನೇರದೆ ಪರರಿಂಗೆ ರಾಜ್ಯವುಂ ಕೊಟ್ಟಿಯಾದೊಡೆ ಪರರಾಷ್ಟ್ರದರಸುಗಳು ಕೇಳುತಾಕ್ರಮಿಸುವರು ತಮ್ಮ ನುಡಿಲಾಲಿಸಲು ಸ್ವಕಾರ್ಯಸಿದ್ಧಿಯಹುದದರಲ್ಲಿ ಸಂಶಯವಿಲ್ಲ ಬರಿದೆ ಶೋಕವುಂ ಮಾಡದಿರು ಎಂದು ಬಹುಪ್ರಕಾರವಾಗಿ ಪ್ರಾರ್ಥನೆಯುಂ ಮಾಡಲು, ಆ ದೇವಿ ಮನಸೊಳಾಲೋಚನೆಮಾಡಿ ಪತಿಯು ತರುವಾಗಿರುವ ಕಾಂತಾರವುಂ ಪೊಕ್ಕು ತಾನು ಮಾಡುವದೇನು ಬಹುಮಂದಿ ರಾಜರಾಗಹನವುಂ ಪೊಕ್ಕು ನಗಮಾಗಿ ಇರುವರಾತ್ಮಜನ ಶೋಕದಿಂ ಪೋಗುತೀರ್ವರು ತದ್ಭಾವವುನ್ನೈದಿದರು, ತಾನು ಪೋದಡೆಯು, ತದ್ಗತಿಯೋ ನಿಶ್ಚಯವು ತಾನು ತರುವಾದೊಡಾಪತಿಗೆ ಗುಣಮೇನುಂಟು, ರಾಜ್ಯವುಂ ವಶಗೈದು ಪ್ರಭುಶಕ್ತಿಯಿಂಗೂಡಿ ದಾನಧರ್ಮಾದಿಗಳ ಮಾಡಿ ದಾಕ್ಷಾಯಣೀಕರುಣದಿಂ, ಪತಿಗೆ ತರುಭಾವವುಂ ಪರಿಹಾರವುಂ ಮಾಡಬಹುದಿಂತಲ್ಲದಾತ್ಮಜನ ವೃತ್ತಾಂತವೇನಾದುದೋ ಕಂದನೇನಾದನೋ ದಾಸಿ ಎಲ್ಲಿರುವಳೋ, ಅದವಿಚಾರಿಸಿ ಕರತರುವವನಿಂಗೆ ಪಟ್ಟಾಭಿಷೇಕ ಮುಂಮಾಡಿ ಅದುವರಿಗೆ ಪತಿಗೆ ತರುಭಾವಪೋಗದಿರೆ ತಾನು ಆ ಅರಣ್ಯವುಂ ಪೊಕ್ಕಡೆಯು ಎಡೆರಿಲ್ಲವದರಿಂದಲೀ ಸಚಿವರಾಡಿದ ನುಡಿಯನಾಗೀಕಾರವುಂ ಮಾಡುವದೇ ಯುಕ್ತವೆಂದು ನಿಶ್ಚಯಮಾಡಿ, ಧರ್ಮಗುಪ್ತನೆ ಕೇಳುಬಹುಮಂದಿ ವೃದ್ಧರಾಡುವ ನುಡಿಯನತಿಕ್ರಮಿಸಲಳವಲ್ಲ ಇನಯುನಂಕಾಣದಾನೆಂತು ಸೈರಿಸುವೆನಕಟಕಟ, ಮುಂದೋರದೆನಗೆ ನೀನೆಂತು ಪೇಳುವೆಯೋ ತಾನಂತು ಕೇಳುವೆನೆಂದೊಡಂಬಡಲು, ಸಚಿವ ಕೈಮು

ಗಿದು, ಕೇಳ್ತಾಯೆ, ನೀನು ಸಿಂಹಾಸನವನೇರಿದನಂತರದೊಳಾತನು ಜೀವನೋಪಾಯಮಂ ಮಾಡುವೆನು ಧೈರ್ಯವಂ ಮಾಡು, ನೀನೆಂದೆನುತ ವಿಜ್ಞಾಪನಂಗೈದು, ದೇವಿಯರಿಗೆ ಮಂಗಳಮಜ್ಜನಮಂ ಮಾಡಿಸಿ, ದಿವ್ಯದುಕೂಲಾಭರಣಗಳಿಂದಲಂಕರಿಸಿ, ಚತುರಂಗಯಾನದೊಳ್ ಕುಳ್ಳಿರಿಸಿ, ಸರ್ವ ವೈಭವದಿಂದ ಸಾಕ್ಷಾತ್ ಸಾರಸಾಲಯಳ ಕರೆತರುವವೋಲ್, ಕಾಂತಿಮಾಲಿನಿಯ ಕರೆತಂದು, ಶುಭಮುಹೂರ್ತದೊಳು ಸಿಂಹಾಸನದಮೇಲೆ ಕುಳ್ಳಿರಿಸಿ, ಸರ್ವರೂ ಕಾಣಿಕೆಯನಿತ್ತು, ಪರಮಸಂತೋಷದಿಂದಿರುವ ಪ್ರಕೃತಿಗಳನೋಡಿ, ಸಮಸ್ತರಿಗೂ ವಸ್ತ್ರಭೂಷಣಾದಿಗಳನಿತ್ತು, ಪ್ರತಿದಿವಸದಲ್ಲಿಯೂ ಧರ್ಮಾಭಿವೃದ್ಧಿಯಂ ಮಾಡುತ ದೇವಬ್ರಾಹ್ಮಣವೃತ್ತಿಯಂ ಪೂರ್ವಾಪೇಕ್ಷೆಯಿಂದಧಿಕವಾಗಿತ್ತು, ರಾಜ್ಯಭಾರವಂ ಮಾಡುತ್ತಿರುವ ಸಮಯದೊಳು ರಾಜ್ಯದೊಳು ಪೂರ್ವಕ್ಕಿಂತತಿಶಯವಾದ ಸಂಪತ್ಸಮೃದ್ಧಿಯಿಂ ಪ್ರಜೆಗಳು ಸುಖದಿಂದಿರಲು, ಒಂದುದಿನ ಕಾಂತಿಮಾಲಿನಿಯು ಪುತ್ರನಂ ನೋಡಬೇಕೆಂಬ ಕುತೂಹಲದಿಂದ ರಹಸ್ಯವಾಗಿ ಧರ್ಮಗುಪ್ತನಂ ಕರೆಸಿ, ಸುತನವೃತ್ತಾಂತವಂ ವಿಸ್ತಾರವಾಗಿ, ಪೇಳಲು, ಧರ್ಮಗುಪ್ತನು ವಿಸ್ಮಿತನಾಗಿ, ಪರಮಸಂತೋಷದಿಂ ಸಕಲದುಃಖಂಗಳಂ ಮರೆದು, ಜನನಿ ನಿನ್ನಣುಗನಿರವಂ ಮನದಿ ಧ್ಯಾನಿಸುತ, ಆತನ ಭಾವಚಿತ್ರಮಂ ಬರೆದು, ದಯಮಾಡೆ, ಮೇಣಾತನೆಲ್ಲಿಹನೋ, ಚಾರರಂ ಕಳುಹಿ ವರ್ತಮಾನವಂ ತರಿಸಿ, ತದನಂತರದಿ ತಾನೇಪೋಗಿ ಕರೆತರುವೆನೆಂದು ಬಿನ್ನಹಮಾಡಿದನು. ಆಗಲಾಅಮಾತ್ಯನಂ ನೋಡಿ, ಕಾಂತಿಮಾಲಿನಿಯು ಆ ಸುತನರೂಪವಂ ಧ್ಯಾನಿಸುತ, ಪುತ್ರನಾಕಾರಮಂ ಚಿತ್ರಪಟದೋಳ್ಬರೆದು, ನೋಡಿ ಮೂರ್ಛೆಯನೈದಿ, ಯೆಚ್ಚೆತ್ತುನೋಡಿ ಮುದ್ದಾಡಿ ಹಾ ವತ್ಸ ಎಲ್ಲಿರುವೆ, ಎಂತು ನಿನ್ನಯ ಮುದ್ದುಮೊಗವ ಕಾಣುವೆನೆಂದು ನಾನಾವಿಧಪ್ರಲಾಪವಂ ಮಾಡುತಿರಲು, ಧರ್ಮಗುಪ್ತನು ಕಾಂತಿಮಾಲಿನಿಯ ಕರದೊಳಿಹ ಚಿತ್ರದಾಕಾರವಂ ನೋಡಿ, ಮರುಳಾಗಿ ಮೇಣೀರೂಪುನೋಡಿದರೆ ಮಾನುಷವ್ಯಕ್ತಿಯಾಗಿ ತೋರುವುದಿಲ್ಲ, ಸಾಕ್ಷಾತ್ ಕುಮಾರನೇ ಕುಮಾರನಾದಂತ

ತೋರುತಿದೆ, ಈತನೇ ದೊರೆತನಾದಡೆ ಚಿಂತೆಯಂ ಮಾಡಲೇತಕೆ, ರಾಜಂಗೆ ತರುಭಾವವೆಲ್ಲಿಹುದು ಈ ಸತಿಯು ದ್ರೋಹದಿಂದೀರೀತಿಯಾದುದಿದುವೆ ನಿಶ್ಚಯವೆಂದು ಮನದೊಳಾಲೋಚನೆಯಮಾಡಿ, ಪರಮಹರ್ಷೋಪೇತನಾಗಿ, ಧೈರ್ಯದಿಂ ನುಡಿದನು. ಎಲೆ ತಾಯೆ, ಮಗನಲ್ಲವಿದು ಚಿತ್ರಪಟವು, ಇದನೆನ್ನ ಕರದೊಳಿತ್ತಡೆ ನಿಮ್ಮ ಕುಮಾರನಂ ಕರೆತರುವೆನೆನಲಾ ಕಾಂತಿಮಾಲಿನಿಯು ಆ! ಅಹುದು ಸಾಕ್ಷಾತ್ ಪುತ್ರನೆಂದಳುವೆನೆಂದು, ಆ ಚಿತ್ರಪಟಮಂ ಧರ್ಮಗುಪ್ತನ ಹಸ್ತದೊಳೀಯ್ಯಲು ಆಕಾರವಂ ನೋಡಿ, ಚನ್ನಾಗಿ ಪರಿಭಾವನೆಯಂಮಾಡಿ, ಸಪ್ತದ್ವೀಪವನಾಳುವನ ಮಂತ್ರಿ ತಾನೆಂಬ ಹರ್ಷೋದ್ರೇಕದಿಂ ಚಿತ್ರಗಾರರಂ ಕರೆಸಿ ಆಸ್ಥಾನಮಂಟಪದಿ ಕುಳಿತು ಚಿತ್ರಪಟಮನೀಯ್ಯಲು, ಆ ಚಿತ್ರಗಾರರು ನೋಡಿ, ಪರಮಾಶ್ಚರ್ಯ ಯುಕ್ತರಾಗಿ, ಸಕಲದೇವತೆಗಳ ಆಕಾರವಂ ಬರೆವೆವಿಂತುರೂಪಾತಿಶಯವಾದದೇವರಿಲ್ಲ ಜೀಯ! ಮಾನುಷರೊಳಿಂತಪ್ಪ ಶಿಶುವುಂಟೇ ಎಂದು ವಿಸ್ಮಿತರಾಗಿ, ನೋಡುತಿರಲು, ಧರ್ಮಗುಪ್ತನವರೊಳತಿ ಚತುರರಂ ಕರೆದು, ಈ ಚಿತ್ರಪಟದೊಳಗಿರುವ ಶಿಶುವಿಂಗೆ ದ್ವಾದಶಾಬ್ದಗಳಾಗಿರುವುದಾವಯಸ್ಸಂಪನ್ನನಾಗಿರುವ ಭಾವವಂ ಬರೆಯೆ; ನಿಮ್ಮಿಷ್ಟಾರ್ಥಸಿದ್ಧಿಯಂ ಮಾಡುವೆನೆಂದಭಯವೀಯ್ಯೆ; ಆ ಚಿತ್ರಗಾರರೆಲ್ಲರೊಂದಾಗಿ, ಅತ್ಯಂತ ಚಾತುರ್ಯದಿಂ ದ್ವಾದಶವರ್ಷದಾಕಾರವಂ ಭಾವದಿಂ ಬರೆದು, ಮಂತ್ರಿಗರ್ಪಿಸಲು ನೋಡಿ, ವಿಸ್ಮಿತನಾಗಿ, ಸರ್ವಕಾರ್ಯಂಗಳಂ ತೊರೆದು, ಇದೇಮೇರೆಗೆ ಸಹಸ್ರಪಟಮಂಬೇರೆಬೇರೆ ರಚಿಸುವುದೆಂದು, ಬಹುಮಾನವನಿತ್ತು ಮನೆಗೈದಲು, ಮೂರಾರುದಿನದೊಳಾ ಚಿತ್ರಪಟ ಸಹಸ್ರಮಂ ರಚಿಸುವರು, ಅನಿತರೊಳು ಧರ್ಮಗುಪ್ತನು ಬುದ್ಧಿಶಾಲಿಗಳಾದ ಸಹಸ್ರ ಚಾರರಂ ಕರೆದು, ಅವರೊಡನೆ ಎಂತುಪೇಳಬೇಕೊ ಅಂತೆ ತಿಳಿಸಿ; ಬಹುದ್ರವ್ಯಮನಿತ್ತು ದೇಶದೇಶಂಗಳಂ ತಿರುಗಿ ಎಲ್ಲಿರುವನೋ ನೋಡಿ, ಕಂಡಾತಂಗೆ ನಮಿಸಿ ಕರತರುವುದೆಂದೊರೆದು ಚಿತ್ರಪಟಂಗಳನಿತ್ತು, ದೇವಿಯರ ಬಳಿಗೆ ಅವರ ಕರೆತಂದು ಅಪ್ಪಣೆಯಾದಡಿವರಂ ಕಳುಹುವೆನೆಂದು, ಬಿನ್ನಹಮಾಡಲಾಕೆಯವರವರಿಂಗೆ, ಪೇ

ಳುವ ನಿಧಾನವಂ ತಿಳಿಸಿ ಕಳುಹಲು, ಆ ದೂತರು ದೇಶದೇಶದೊಳ
ರಸಿ ಕೆಲಬರೈತಂದು ತಾವು ಕಳುಹಿದ್ದ ದೇಶದೊಳು ಗ್ರಾಮ ಪುರ
ಮನೆ ದುರ್ಗ ವನ ಗುಹೆ ಬೆಟ್ಟ ಖರ್ವಟ ಶಿಬಿರ ಮೊದಲಾದ ಠಾಣದೊ
ಳ್ತಿರಿಗಿ, ನೋಡುತ್ತ ಕಾಣದೈತಂದೆವೆಂದು ವಿಜ್ಞಾಪನೆಯಂ ಮಾಡಲು,
ಮಂತ್ರಿ ಚಿಂತಿಸುತ, ಶೇಷರಾಗನುನಮಂ ಪ್ರತೀಕ್ಷಿಸುತ, ದೇವಿಯಡಿ
ದಾವರೆಗೆ ತಿಳುಹುತ್ತಲಿರಲಾಕೆ ಇನ್ನು ಬರುವರಾತನಂ ಕಂಡು ಬರು
ವರು, ಸಚಿವ ನೀಂ ಚಿಂತಿಸದಿರೆಂದು, ಧೈರ್ಯವಂ ಪೇಳುತ ಸರ್ವಮಂ
ಗಳಾಚರಣ ಕಮಲಪ್ರಸಾದದಿಂದ ಸುಖದಿಂ ರಾಜ್ಯವಂ ಪೊರೆಯುತಿ
ರ್ದಳೆಂಬಲ್ಲಿಗೆಇತಿಶ್ರೀಬ್ರಹ್ಮಾಂಡೋಪಪುರಾಣೆಉತ್ತರಭಾಗೆಲಲಿತೋ
ಪಾಖ್ಯಾನೆ ಪೂರ್ವಖಂಡೆಹ ಯುಗ್ರೀವಾಗಸ್ತ್ಯಸಂವಾದೆ ದೇವೀಪ್ರಸಾದ
ಪ್ರಭಾವಕಥನಂನಾಮತೃತೀಯೋಧ್ಯಾಯಃ—ಶ್ರೀ ಶ್ರೀ

---

## ಚತುರ್ಥಾಧ್ಯಾಯಮ್.



ಜಯತ್ಯರಿಧರಾಧೀಶಮಸ್ತಕನ್ಯಸ್ತಪದಾಂಬುಜಃ।
ರಾಜರಾಜಇವಶ್ರೀಮಾನ್ಕೃಷ್ಣರಾಜಧರಾಪತಿಃ॥

---

ಸಕಲ ದೀನಲೋಕವಿತಾನಕಲ್ಪರುಹನೇ ಕೇಳು, ಆ ಕಾಂತಿಮಾ
ಲಿನಿಯೆಂಬ ರಾಜಪತ್ನಿಯು, ಸಂಪೂರ್ಣವಾದ ಅಪರ್ಣಾಚರಣಾನು
ಗ್ರಹದಿಂದ ನೀತಿಶಾಸ್ತ್ರಮನತಿಕ್ರಮಿಸದೆ, ಅಮಾತ್ಯರಾಲೋಚನೆಯ
ನುಲ್ಲಂಘಿಸದೆ, ಧರ್ಮಹ್ರಾಸಮಿನಿತಿಲ್ಲದೆ, ಸ್ವಕಾರ್ಯವಂ ಮರೆಯದೆ,
ವ್ಯವಹಾರದೊಳಗಿನಿತಾದರೂ ಪಕ್ಷಪಾತವನಾಚರಿಸದೆ, ವಿಪಕ್ಷರಿಗಾಸ್ಪ
ದವ ನೀಯ್ಯದೆ, ಕನಸಿನಲ್ಲಾದಡೆಯು ಕ್ಷುದ್ರರಿಗೆ ಕಿವಿಗೊಡದೆ,
ಮರ್ಯಾದೆಯಂ ಮೀರದೆ, ಅತ್ಯಂತ ಜಾಗರೂಕಳಾಗಿ, ತಿರೆಯಂ ಪೊರೆ
ಯುತ್ತಲಿರಲು, ಸಕಲದೇಶದೊಳು ತುಂಬಿತೀಕೆಯ ಕೀರ್ತಿ, ಬಡವರೆ
ಲ್ಲರಿಗಾದುದು ಮನೋರಥಪೂರ್ತಿ, ಪರಿಹಾರವಾದುದಖಿಳ ಸಜ್ಜನ
ರಾರ್ತಿ, ಮನೆಮನೆಯೊಳೀಕೆಯಂ ಪೊಗಳುತಿಹರಿಂತು, ರಾಜ್ಯವಂ

ಮಾಡುತಿರಲು, ಅರಸನೆ ಸಾವಧಾನದೊಳವಧರಿಪುದು, ಆ ಮತಂಗಿಯೆಂಬ ದಾಸಿಯು ಮೃದುಭಾಷಿಣಿಯೆಂಬ ಸಖಿಯಂ ಕರೆದುಕೊಂಡು, ಶಿಶುವನೆತ್ತಿ ಮುಸುಕಿಟ್ಟು, ತಾನೆ ಧನ್ಯಳೀಧರೆಯೊಳೆಂದು ಸಂತೋಷದಿಂ ಚೋರಮಾರ್ಗದಿಂ ಪೊರಟು, ಅತಿತ್ವರೆಯಿಂದ ದಿವಾನಿಶಿಯು, ಮನುಷ್ಯರಿಂದಗಮ್ಯವಾದ ಮಾರ್ಗದಲ್ಲಿ ನಡೆದು, ಕೋಸಲದೇಶವಂ ದಾಂಟಿ; ದೇಶಾಂತರದೊಳತಿ ಮನೋಹರವಾದ ವಿಶ್ವನಾಥಪುರವೆಂಬ ಅಗ್ರಹಾರದೊಳು ಬಂದು ನೋಡಿದಳದೆಂತಿರ್ದುದೆನೆ, ವನದಂತೆ ಬಹು ದ್ವಿಜಾಶ್ರಯವಾಗಿ, ಯುವತಿಯ ವಕ್ಷಸ್ಥಲದಂತೆ ಮುಕ್ತಾಹಾರ ಶೋಭಿತವಾಗಿ, ಕಾಸಾರದಂತೆ, ಕವಿಸಮೂಹರಂಜಿತವಾಗಿ, ಸತ್ಯಲೋಕದಂತೆ ಶುದ್ಧಸತ್ವಮಯವಾಗಿ, ತೋರುತಿರಲಾ ಅಗ್ರಹಾರದೊಳು, ಮಧ್ಯಪ್ರದೇಶದೊಳೊಂದಾಲಯವಂ ಬೆಲೆಮಾಡಿ, ತೆಗೆದುಕೊಂಡಾನಿಲಯದೊಳು, ಈರ್ವರೂ ಕ್ಷಣಮಾತ್ರವಗಲದೆ ಸಾಕ್ಷಾತ್ ಹರಿಯನಾ ಯಶೋದೆ ಪಾಲಿಸಿದಂತೆ ನಿಮಿತ್ತಮಾತ್ರಕಾರ್ಯೆಯುತಿರಲು, ಆ ಶಿಶುವು ಶೈಲಕನ್ಯಾಕರುಣದಿಂ ಪ್ರತಿಕ್ಷಣವೂ ಪೂರ್ವಪಕ್ಷದುಡುಪತಿಯಂತೆ, ಬೆಳೆಯುತ ಪಂಚವತ್ಸರವಾಗಲು, ಆ ರಾಜಕುಮಾರನು ಬಾಲಕರೊಡನೆ ಬೀದಿಯೊಳಾಡುತಿರೆ, ಆಅಗ್ರಹಾರದೊಳು ಸ್ತ್ರೀಪುರುಷರೆಲ್ಲರೂ ನೋಡಿ, ಲೋಚನಾಸೇಚನಕ ಮಿಾ ಬಾಲಕನ ರಾಮಣೀಯ್ಯಕಮಿಾ ಕುಮಾರನ ಪಡದವಳಾವಳೋ ಎಂದು ನಾನಾವಿಧದಿ ವರ್ಣಿಸುತ್ತ, ತಮ್ಮ ನಯನಂಗಳಿಂದ ಬಾಲಕನನೀಂಟುತ್ತ ಆ ಬಾಲಕ್ರೀಡೆಗಳಂ ನೋಡುತ್ತ, ಮುಗ್ಧರಾದರು. ಜನರು ಈರೀತಿಯೊಳು ಬಾಲಕರೊಡನಾಡುತಿರೆ, ನೋಡಿ ಭೂಸುರರು ವಿಸ್ಮಿತರಾಗಿ, ಈ ಬಾಲಕನೀಕಾಂತೆಯುದರದೊಳು ಜನಿಸಿದನದೆಂತಹಹ ಇದಂ ತಿಳಿಯಬೇಕೆಂದು, ದಾಸಿಯಾಲಯಕ್ಕೈದಿ, ವೃದ್ಧರಾದವರೆಲ್ಲ ಕೇಳಲು, ಮತಂಗಿಯುವರಡಿಗೆ ನಮಿಸಿ, ತಾನು ಕೋಸಲದೇಶಾಧಿಪನಾದ ಸುಶರ್ಮರಾಯನ ದಾಸಿ, ಆ ಮಾಹಿಷ್ಮತೀನಾಮ ನಗರದೊಳು, ಆತನರಮನೆಯಲ್ಲಿರುತಿರಲು, ಆ ಮಹೀಪತಿಯೆನ್ನೊಳನ ರಾಗಯುಕ್ತನಾಗಿ, ಒಂದುದಿನ ಋತುಸ್ನಾನವಂ ಮಾಡಿ ಮಲಗಿರಲು,

ಬಹುಕಾಲದಿಂ ನಿರೀಕ್ಷಿಸಿಕೊಂಡಿದ್ದವನಾದಕಾರಣ ತತ್ಕ್ಷಣದೊಳತ್ಯಂತ ಕಾತುರನಾಗಿ ತನ್ನೊಡನೆ ರಮಿಸಲು, ಈ ಸುಕುಮಾರನುದಯಿಸಿದ ನೀ ಶಿಶುವಂ ನೋಡಿ, ಆ ರಾಜಪತ್ನಿಯುರೇಗೈವರೋ ಎಂದು, ಭಯದಿಂ ಚೋರವೃತ್ತಿಯೊಳಾನು ತದ್ದೇಶವಂ ಬಿಟ್ಟು, ಬ್ರಹ್ಮತೇಜೋಭರಿತ ಮಾದ ಈ ಅಗ್ರಹಾರವಂ ಕಂಡು, ತಮ್ಮ ಭರವಸದಿಂದ ಇಲ್ಲಿ ನಿಂದೆನು. ಇಲ್ಲಿಂದಮುಂದೆ ನೀವೆಲ್ಲರತ್ಯಂತ ಕರುಣದಿಂ, ಕಾಪಾಡಬೇಕೆಂದು, ಮಣಿ ಯಲು ಆ ಭೂಸುರರು ತಥ್ಯವೆಂದು ತಿಳಿದು, ಪರಮಸಂತೋಷದಿಂದ ಈಭುವನದೊಳು ನಿನ್ನ ಸುಕೃತಕ್ಕೆ ಸರಿಯಿಲ್ಲ, ಮರೆಯುಮಾತೇ ನಿನ್ನ ಸಕಲ ಲಕ್ಷಣಮುಳ್ಳವನು ಈ ತನೀ ಸಪ್ತದ್ವೀಪಮನಾಳುವನು, ನಿಶ್ಚ ಯುವಿದರಲ್ಲಿ ಸಂಶಯುವಿಲ್ಲ ತಮ್ಮ ತಪಃಪರಿಪಾಕದಿಂ ಸಂತುಷ್ಟನಾದ ಪರಮೇಶ್ವರನ ಕೃಪೆಯಿಂದ ಈ ಪ್ರದೇಶಕ್ಕೆ ಬಂದೆ ನೀನೆಂದು ಸಂಮೋ ದದಿಂ ತಮ್ಮತಮ್ಮಾಲಯಕೆ ತೆರಳಿದರು. ಮತಂಗಿಯೆಂದಿನಂತೆ ನಿರ್ಭ ಯುದಿಂದ ಬಾಲಕನ ಪೊರೆಯುತ್ತಿರಲು, ಮನಬುದ್ಧಿಬರುವ ಸಂದರ್ಭ ವಂ ನೋಡಿ, ದಾಸಿಯು ಬ್ರಾಹ್ಮಣರ ದೆಸೆಯಿಂದ ಅಕ್ಷರಾಭ್ಯಾಸ ಮೊದ ಲಾದ ವಿದ್ಯೆಗಳ ಕಲಿಸಿ ತದನಂತರದೊಳು ವಿಷ್ಣುಶರ್ಮನೆಂಬೋರ್ವ ಬ್ರಾಹ್ಮಣೋತ್ತಮಗೆ ಯಥಾಭಿಲಷಿತದ್ರವ್ಯಮನಿತ್ತು, ಮತಂಗಿ ಯು ಸರ್ವಶಾಸ್ತ್ರಂಗಳಂ ಪೇಳುವಂತೆ ನಿಶ್ಚಯುಮಂ ಮಾಡಲು, ಆ ವಿ ಷ್ಣುಶರ್ಮನೆಂಬ ಬ್ರಾಹ್ಮಣನು ಲೋಕೋತ್ತಮನಾದ ಶಿಷ್ಯನಂ ದಕ್ಷಿ ಣಾಮೂರ್ತಿಯೇ ದಯಮಾಡಿದನೆಂದು ಸಂತೋಷಯುಕ್ತನಾಗಿ, ಶುಭ ದಿವಸದೊಳುಪಕ್ರಮಿಸಿ ಪೇಳಲು, ರಾಜಕುಮಾರನು ವಿನಯದಿಂ ಮ ರೆತವನು ಕಲಿವಂತೆ, ಸರ್ವಶಾಸ್ತ್ರಂಗಳಂ ಕಲಿತನೇನೆಂಬನಾಶ್ಚರ್ಯಮ ನರಸ ಬಾಲಕನ ಜ್ಞಾನಾತಿಶಯುವಿನ್ನೆಂತುಟೋ? ಇಂತಿರಲು ಒಂದು ದಿನ ವಿಪ್ರಬಾಲಕರೆಲ್ಲರುತ್ಸವದಿಂದ, ತಮ್ಮತಮ್ಮ ಸಹಜಾತೆಯರ ಕರೆ ತರುವ ಹಬ್ಬಮೆನುತೆಲ್ಲರುತ್ಸಾಹದಿಂ ಪೊರಮಟ್ಟು, ಪೋಗುತಿರಲು, ರಾಜಕುಮಾರನು ಎಲೈ ವಟುಗಳಾ ನೀವೆಲ್ಲಿಗೈದುವಿರಿ, ಇದೇನುತ್ಸವ ವೆಂದು ಕೇಳಲು, ಆ ವಟುಗಳು ಎಲೈ ರಾಜಕುಮಾರನೆ ನಾಳೆ ಪ್ರಾತಃ

ಕಾಲದೊಳಗೊಂದು ಹಬ್ಬವೀಹಬ್ಬದೊಳು ತಂಗಿಯರ ಪತಿಯರ ಗೃಹದಿಂದ ಕರೆತರಲುಬೇಕಪರಿಂದ, ತಾವು ತಮ್ಮ ಸಹಜಾತೆಯರ ಕರೆತರಲು ಪೋಪೆವೆಂದೆನಲು, ಅದಂಕೇಳಿ ರಾಜಕುಮಾರನು ತಾನು ತನ್ನ ತಂಗಿಯಂ ಕರೆತರುವೆನೆಂದು ಹೊರಟು ತಾನೊಬ್ಬನೇ ಬರುತ ಘೋರವಾದಅರಣ್ಯವಂ ಪೊಕ್ಕು, ತಂಗಿತಂಗಿಎಂದು ಕೂಗುತ್ತಬರುತಿರಲು, ಸೂರ್ಯಾಸ್ತಮಯವಾಗುತಿರಲಳವಳಿದು, ಬಸವಳಿದು, ಕ್ಷುತ್ಪಿಪಾಸೆಗಳಿಂದ ಬಾಯಾರಿ ತುಟಿಯೊಣಗಿ, ಬಹು ಶಾಂತನಾಗಿ ಒಂದುಪಾದಪದಡಿಯ ಸೇರಿ ಕುಳ್ಳಿರಲು, ಆ ಜಗನ್ಮಾತೆಯು ತನ್ನಣುಗನಿಂತು ತಂಗಿಯರಂ ಕರೆತರುವುದಂ ನೋಡಿ. ತಿಳಿಯದೆ ತಾನೂ ತನ್ನ ತಂಗಿಯಂ ಕರೆತರುವೆನೆಂದು ಮಹದರಣ್ಯವಂ ಪೊಕ್ಕು, ತಂಗೀತಂಗೀಎಂದು ಬರಿದೆ, ಕೂಗೀಕೂಗಿ, ಬಳಲಿ, ಬೆಂಡಾಗಿ, ನಿಂತಿರುವ ಕುಮಾರನಂನೋಡಿ, ಪರಮಾನುಕಂಪದಿಂ ಗಜಮುಖನ ಕರೆದು, ತಾನು ನಾತಿದೂರದೊಳು ನಗರನಿರ್ಮಾಣವಂ ಮಾಡಿಕೊಂಡಿರುವೆ, ನೀನು ರೂಪಾಂತರದಿ ಬಾಲಕನ ಕರೆತಂದು, ಬಿಡು, ಎಂದು, ನುಡಿಯಲು, ಅ ಗಣಪತಿಯು ವಿಪ್ರವಟುವಾಗಿ ಪಥಿಕನಂದದೊಳು ಮಾರ್ಗದೊಳು ನಡೆತಂದು ಈ ರಾಜಕುಮಾರ ಕುಳ್ಳಿರುವ ಪಾದಪದಡಿಯಲ್ಲಿ ಬಂದು ಕುಳಿತು, ನೀನ್ಯಾರೆಂದು, ರಾಜಕುಮಾರನಂ ಕೇಳಲು. ಎನ್ನ ತಂಗಿಯಂ ಕರೆದೊಯ್ಯಲೈದಿದೆನೆನಲು. ಕಪಟವಿಪ್ರವಟುವು ಅಸ್ತಮಯಕಾಲವಾದುದು, ನಿನ್ನ ತಂಗಿಯ ಗ್ರಾಮವಿದೆ ಎಂದು, ಪೇಳಿ, ತಾನು ಪೋಗುವೆನು ನೀನು ಬರುವೆಯಾ ಎನ್ನೊಡನೆ ತೋರುವೆನು. ನಿನ್ನ ತಂಗಿಯಾಲಯವನೆಂದು, ಕರೆಯಲಾ ರಾಜಕುಮಾರನು ಸಂಗಡಬರಲು, ಆ ಕುಮಾರನನೊಡಗೊಂಡು ಬರುತ, ನಾತಿದೂರದೊಳು ದಿವ್ಯನಗರವಂ ಕಂಡು ಪ್ರಾಕಾರದೊಳಪೊಕ್ಕು, ವಿಪ್ರವಟುವು ಎಲೈ ಕುಮಾರನೆ ತಾನು ತನ್ನಯ ತಂಗಿಯಾಲಯಕ್ಕೈದುವೆನು, ನಿನ್ನ ತಂಗಿಯ ಮನೆಯದೇ ನೋಡೆಂದು, ತಾನು ಮರೆಯಾಗಲಾ ಬಾಲಕನು ಬಳಲಿ, ಬಾಯಾರಿ, ಆ ಮನೆಗೆ ಬರುತಿರಲು, ಸರ್ವಾಭರಣಭೂಷಿತಳಾಗಿ, ಸಾಕ್ಷಾತ್ ಗಿರಿಜಾತೆ ಮಾನುಷಸ್ತ್ರೀಯಂತೆ ಮನೆಯ ಬಾಗಿಲೊಳು ನಿಂದಿರುತ

ಕಂಡೀವನ ದೂರದೊಳು ಮನವುರುಗಿ, ಎಲೈ ವತ್ಸ ಬಂದೆಯಾ ಎಂದು, ಸಮೀಪಕ್ಕೆ ಬಂದು, ಬಿಗಿದಪ್ಪಿ, ಮುದ್ದಾಡುತ್ತ, ಲಾಲಿಸಿದಳೀಂ ಸುಕೃತಿಯೋ ಬಾಲಕನು ತತ್ಕರಸ್ಪರ್ಶಮಾತ್ರದಿಂ ಶ್ರಮವೆಲ್ಲಾ ಪರಿಹಾರವಾಗಿ, ಅಮೃತವಾರಿಧಿಯಲ್ಲಿ ಮುಳುಗಿದವನಂತೆ, ನಲವೇರಿ ನಡೆ ಪೋಪೆವೆಮ್ಮೂರಿಗೆನೆ, ಎಲೈ ವತ್ಸ ಪ್ರಯಾಣಸನ್ನಾಹವಂ ಮಾಡಿಕೊಂಡು, ನಿನ್ನಾಗಮನನನೆ ನೋಡಿಕೊಂಡಿರುವೆ, ಅಸ್ತಮಯಮಾದುದೀರಾತ್ರಿ ಇಲ್ಲಿದ್ದು, ರವಿಯುದಯದಲ್ಲೆದ್ದು ಪೋಗುವೆವೆಂದು, ಬಾಲಕನ ಸಂತೈಸಿ, ಮನೆಯೊಳಗೆ ಕರೆತಂದು ಮಜ್ಜನವಮಾಡಿಸಿ ದಿವ್ಯಾನ್ನಮನಿತ್ತು, ಪರ್ಯಂಕದೋಳ್ ಮಲಗಿಸಿ, ಉದಯಕಾಲದೊಳೆದ್ದು ಶೈಲಾಧಿಯನೇರಿ ಬಾಲಕನ ಸಂಗಡೈತರಲು, ಇತ್ತಲಾ ಮತಂಗಿಯು ಪುತ್ರನಂ ಕಾಣದೆ ಪ್ರಲಾಪಿಸುತ ಗ್ರಾಮಾದ್ಬಹಿರ್ಭಾಗಕ್ಕೈತಂದು ನಿಂತಿರಲು, ದ್ವಿಜವಟುಗಳೊರೋರ್ವರಾಗಿ ತಮ್ಮತಮ್ಮ ಸಹಜಾತೆಯರ ಕರೆತರುವದಂ ಕಂಡು, ತಂಗಿಯಾವಟುಗಳಂ ಕುರಿತು ತನ್ನಣುಗನಂ ಕೇಳುತಿರಲೋರ್ವನೆಲೆ ತಾಯೆ ತಾವೆಲ್ಲ ನಿನ್ನೆಯದಿವಸ, ತಂಗಿಯಂ ಕರೆತರುವೆವೆಂದು ಹೇಳಲು ತಾನು ತನ್ನ ಸಹಜಾತೆಯಂ ಕರೆತರುವೆನೆಂದು ಪೇಳಿದನು. ಇದುವೆ ತಾವು ಕೇಳಿದ್ದು ಪುನಶ್ಚ ತಾವಾತನಂ ಕಾಣಲಿಲ್ಲವೆಂದು ಪೇಳಲದಂ ಕೇಳಿ: ಶೋಕದಿಂ ತನ್ನ ಮರೆಪು ತನುವನು ಏನಮಾಡಲಿ, ತಾನು ಎಲ್ಲಿ ಪೋಗಲಿ ಎಂದು ಮನದೊಳಾಲೋಚಿಸುತ ನಿಂದಿರಲು, ದೂರದೊಳು ಬರುವ ಕುಮಾರನಂ ಕಂಡಳು. ಚಂದ್ರನಂ ಕಂಡ ಚಕೋರಿಯಂತೆ, ಪರಮಾಹ್ಲಾದಯುತಳಾಗಿ ಮತ್ತವನೊಡನೆ ವೃಷಭಮನೇರಿ ಬರುವ ಜಗನ್ಮಾತೆಯಂ ಕಂಡು ಈಕೆ ಯಾರೆಂದು ಮಾನಸದಿ ಯೋಚಿಸುತ್ತಿರಲು, ರಾಜಕುಮಾರನು ಮತಂಗಿಯಂ ದೂರದಲ್ಲಿ ಕಂಡು ಓಡಿಬಂದು ವಂದನೆಯಂ ಮಾಡಲು, ಸುತನಂ ತಗೆದಪ್ಪಿ ಮುದ್ದಾಡಿ, ಎಲೈ ಕುಮಾರನೇ ನೀನೆಲ್ಲಿಗೆ ಪೋಗಿದ್ದೆ ಎಂದು ಕೇಳಲು ತಂಗಿಯಂ ಕರೆತರಲು ಹೋಗಿದ್ದೆನಿದಕೊ ಸಹಜಾತೆಯೆಂದು ಹಿಂದೆ ಬರುವ ಜಗನ್ಮಾತೆಯಂ ತೋರಲು ಅನಿತರೊಳು ಸಮೀಪಕ್ಕೆ ಬಂದ ಸರ್ವಾಂಗಳೆಯಂ ಕಂಡು

ದಾಸಿ ವಿಸ್ಮಿತಳಾಗಿ ಇದೇನಾಶ್ಚರ್ಯವೆಂದು ಮನದೊಳಾಲೋಚನೆಯ
ಮಾಡಿ, ಈಕೆಯಂ ನೋಡಿದಡೆ ಮಾನುಷಸ್ತ್ರೀಯಾಗಿ ತೋರುವ
ದಿಲ್ಲ, ಸಾಕ್ಷಾತ್ ದಾಕ್ಷಾಯಣಿಯೇ ಬಂದಂತೆ ಕಾಣುತಿದೆ, ಈತಂಗೆ ತಂ
ಯಾರಾನರಿಯದಂತೆ, ಸಾವಕಾಶದೊಳಿದರ ಸಂಗತಿಯು ತಿಳಿಸಬೇಕಿದ
ಸಮಯವಲ್ಲೆಂದು, ಮೌನದಿಂ ನಮಿಸಿ, ಸಾಷ್ಟಾಂಗದಿಂ ಮನದೊಳಗ
ಕರೆತಂದಳೀರ್ವರಂ ಮನೆಗೆ ಸರ್ವಮಂಗಳೆಯ ಮನದಣಿಯನೋಡಿ, ದಿವ್ಯ
ಪರ್ಯಂಕದೊಳು ಕುಳ್ಳರಿಸಿ, ಸ್ನಾನವಂ ಮಾಡಿ, ಪರಿಶುದ್ಧಳಾಗಿ, ಸಕಲ
ಸಂಭಾರಮಂಜನದೊಳನುಗೈದು, ದೇವಿಯರಿಗೆ ಮಂಗಳಮಜ್ಜನವಂ
ಮಾಡಿಸಿ, ದಿವ್ಯದುಕೂಲಮನುಡಿಸಿಭಯಭಕ್ತಿಯಿಂದಿವ್ಯ ಷಡ್ರಸೋಪೇ
ತವಾದಭೋಜನವಂಮಾಡಿಸಿ, ತಾಂಬೂಲಮನಿತ್ತು, ಗೌರಿದೇವಿಯರ
ಪರ್ಯಂಕದೋಳ್ಕುಳ್ಳರಿಸಿ, ತಾನು ಸಮೀಪದೊಳು ಕುಳಿತು, ಸರ್ವಮಂ
ಗಳೆಗೆ ದಿವ್ಯರತ್ನಾಭರಣಗಳಿಂದಲಂಕಾರವಂಮಾಡಿ, ಮನನೊಳುಕ್ಕುವ
ಹರುಷದಿಂನೋಡೀನೋಡಿ, ಪರವಶಳಾಗಿ, ಈಕೆಯೇಜಗನ್ಮಾತೆಯೆಂದು,
ನಿಶ್ಚೈಸಿ, ತರಳನಂಕರೆದು, ಏಕಾಂತದೋಳ್ಕುಳಿತು ಕುಮಾರನನೆತ್ತಿ
ತೊಡೆಯಮೇಲೇರಿಸಿ ನೀನು ಸಹಜಾತೆಯಂ ಕರೆತರಲು ಪೋಗಿಬಂದ
ವೃತ್ತಾಂತವಂ ವಿಸ್ತಾರವಾಗಿ, ಪೇಳೆಂದುಕೇಳಲು, ರಾಜಕುಮಾರನು
ಎಳ್ಳನಿತುಬಿಡದೆ, ಸರ್ವವೃತ್ತಾಂತವಂ ಪೇಳಲು ಮತಂಗಿಕೇಳಿ ಮನ
ದೊಳಾಲೋಚನೆಮಾಡಿ ಈ ಪಸುಳೆಯ ಮನುತಾಪವಂನೋಡಿ ಸಾಕ್ಷಾತ್
ದಾಕ್ಷಾಯಣೀದೇವಿಯರೇ ಕರುಣದಿಂದೊಡಗೊಂಡು ಬಂದಿರುವರಿದುಸ
ತ್ಯ ಈ ಅರ್ಥವೀಗಲೇ ಕುಮಾರಂಗೆ ತಿಳಿಸಲಿಬೇಕು ದೇವತಾವಿಷ
ಯ ಉತ್ತರಕ್ಷಣದೊಳೇನಾಗುವದೋ ಎಂದು ಮನದಿ ನಿಶ್ಚಯಮಾಡಿ
ಎಲೈ ಕುಮಾರನೇ ಕೇಳು ಈ ಬಂದಿರುವಾಕೆ ಸಹಜಾತೆಯಲ್ಲ ಸಾಕ್ಷಾ
ತ್‌ಗೌರಿದೇವಿಯರು ತಾ ನಿನ್ನ ತಾಯಲ್ಲ, ನಿಮ್ಮ ಜನನಿಯು ದಾಸಿನಿನ್ನ
ವೃತ್ತಾಂತಮನೊರವೆಸಾವಧಾನದೊಳವಧರಿಪುದೆಂದುಪಕ್ರಮಿಸಿದಳು.
ಕೇಳೈಬಾಲಕನೇ ಕೋಸಲದೇಶಾಧಿಪತಿಯಾದ ಸುಶರ್ಮಮಹಾರಾಯ
ನೇ ನಿನ್ನಯ ತಾತನಾನಾತನ ಜ್ಯೇಷ್ಟಪತ್ನಿಯಾದಕಾಂತಿಮಾಲಿನಿಯೇ

ನಿನ್ನಯ ಜನನಿ, ಆಕೆಯಿಂದಾಬಾಲ್ಯವಾಗಿ ಪೂಜಿತಳಾದ ಸಾಕ್ಷಾತ್ ಗೌರಿದೇವಿಯರೇ ಈಗೈದಿ ಬಂದಿರುವಾಕೆ ತಾನು ನಿನ್ನಯ ಜನನಿಗತ್ಯಂತ ಪ್ರೀತಿವಿಷಯಳಾದ ಮತಂಗಿ ಯೆಂಬ ದಾಸಿ, ಸಾಕ್ಷಾತ್ ಪರಮೇಶ್ವರನ ಪ್ರಸಾದದಿಂದುತ್ಪನ್ನನಾದ ಕುಮಾರನು ನೀನು, ನಿನ್ನ ತಂದೆ ಸುಖದಲ್ಲಿರುವನು, ತಾಯಿಯೆಂತಿಪ್ಪಳೋ ತಿಳಿಯದಿದು ವೃತ್ತಾಂತವೆಂದು ನುಡಿದಾಕೆಯಂ ನೋಡಿ, ವಿಸ್ಮಿತನಾಗಿ ಇಂತಾದಡೀ ದೆಸೆಯು ತನಗೇಕೆ ಬಂದುದೆಲೆ ತಾಯೆ ಪೇಳೆನಲು, ಮರುಗಿ ಕಂಬನಿದುಂಬಿ ನುಡಿದಳೆಲೆ ವತ್ಸ, ನಿನ್ನ ಮಾತೃಸಪತ್ನಿಯಾದ ಕಲಾವತಿಯಿಂ ಬಂದುದದಱ ವೃತ್ತಾಂತವಂ ಕೇಳೆಂದು ಎಳ್ಳನಿತುಬಿಡದೆ ವಿಸ್ತಾರವಾಗಿ ವಿವರಿಸಲು, ಕೇಳುತತಿದುಃಖದಿಂ ಜನನಿಯೆಂತಿಹಳೋ ಎಂದು ಅಳುವ ಬಾಲಕನ ಸಾಂತ್ವವಚನಗಳಿಂದ ಸಮಾಧಾನವಂ ಮಾಡಿ ಈ ಜಗನ್ಮಾತೆ ನಿನ್ನಯ ಮೊರೆಯಂಕೇಳಪರವು ಕಾರುಣ್ಯದಿಂದ, ಬಂದಿರುವಳಾದಕಾರಣ ಇದೇ ಸಮಯನೋಡೆಂದು ನುಡಿಯಲು, ಕುಮಾರನಾ ಮತಂಗಿಯ ವಾಕ್ಯವಂ ಕೇಳಿ, ಸತ್ವರದೊಳನುದಯದೊಳಗೆದ್ದು, ಮಜ್ಜನಮಾಡಿ ಪೀತಾಂಬರವನುಟ್ಟು, ಪರಿಶುದ್ಧನಾಗಿ ಮಾನುಷಸ್ತ್ರೀಯಂತೆ ಮಂಚದೊಳು ಕುಳ್ಳಿರುವ ಜಗನ್ಮಾತೆಯಂ ನೋಡಿ ಭಯಕಲಿತಭಕ್ತಿಯಿಂದೆರಗಿ ತತ್ಪುರೋಭಾಗದೋಳ್ ಅಂಜಲಿಯಂ ಕಟ್ಟಿನಿಂದು ಗದ್ಗದ ಧ್ವನಿಯಿಂದ ನುತಿಸಿದನದೆಂತೆನಲು, ಜಯಜಯಜಗಜ್ಜನನಿ, ಜಲರುಹಾಕ್ಷಿ ಭವಾನಿ, ನರಸುರೋರಗ ವಿನುತೆ, ನತನಿಕರ ಕಲ್ಪಲತೆ, ಭೂಮಿಧರತನುಜಾತೆ, ಭುವನದೊಳು ವಿಖ್ಯಾತೆ, ಪತಿತಪಾವನ ಲೀಲೆ, ಪರಿಶುದ್ಧಜನಪಾಲೆ, ಜಗವ ಮೊರೆಯಂಕೇಳಿ ಜವದೊಳಸುರರಸೀಳಿ, ಒಲಿದುಪಾಲಿಸುವೆಶಿವೆ, ವಾಚಿಸಲು ಎನ್ನಳವೆ, ನಿನ್ನಮಹಿಮೆಯ ಗೌರಿ, ಮುನ್ನದಕ್ಷಕುಮಾರಿ, ಮೌನಿಜನ ಹೃನ್ನಿಲಯೆ, ಮುಕ್ಕಣ್ಣಗತಿಪ್ರಿಯೆ, ದಾರಿತಾನತದುರಿತೆ, ದಳಿತಾಶುಭವ್ರಾತೆ, ನಿರವದ್ಯಗುಣಭರಿತೆ, ನಿನ್ನನುಬಿದೆ ಮಾತೆ, ಶರಣ್ಯಸುಖಪತಿವರದೆ, ಸಲಹೆನ್ನ ಮರೆಯದೆ, ಎಂದು ನುತಿಮಾಡಲು, ಆ ಸಾಕ್ಷಾತ್ ಕುಮಾರಜನನಿಯು, ಅತ್ಯಂತ ಪ್ರಸನ್ನಾಂತಃಕರಣವುಳ್ಳವ

ಳಾಗಿ, ಕುಮಾರನಂ ತೆಗೆದು ತಕ್ಕೈಸಿ, ಅಂಕದೊಳು ಕುಳ್ಳಿರಿಸಿ, ಶ
ಜನ್ಮ ನಂದದಲಿ ಲಾಲಿಸುತ ಸುತನೆ ಕೇಳಾನು, ನಿನ್ನಯ ಮೊರೆಯನ
ಕೇಳಿ ಸಹಜಾತೆಯನುತಲೈದಿದೆನು, ಈತನೆನಂಬಿನಿಂನಕರೆತಂದಾತನೆ
ರಿವದನ ಎಂದು ಪೇಳಿ ತನ್ನ ನಿಜರೂಪವನುಂ ತೋರಿ, ನಿಮ್ಮ ತಂ
ಯಾದ ಸುಶರ್ಮನು, ಪರಮೇಶ್ವರಪ್ರಸಾದದಿಂ ಲಬ್ಧವಾದ ರಸಾಲಫಲವ
ಪಕ್ಷಪಾತದಿಂ ಕಲಾವತಿಗೆ ಕೊಡಲು, ಆ ಕಲಾವತಿಯು ರಸದೆಗೆದು ತ
ಲೋಸುಗ ತನ್ನ ಸಖಿಯಂ ಕರೆಯುಲವಳಿಲ್ಲದಂತೆ ಮಾಡಿ, ಆ ಸಖೀರ
ಪವನುಂ ತಾಳಿ ನಾಂ ತೆಗೆದೆಯಿದು, ಫಲರಸವಕಿಂಚಿವಾಕೆಗೆತೆಗೆಜಿತ್ತು
ವಿಶಿಷ್ಟಫಲವನುಂ ತಂದು ನಿಮ್ಮ ತಾಯಿಗಾನಿತ್ತೆನದರಿಂದಲುದಯಿಸಿದೆ
ನೀನು ಇಂದುಮೊದಲಾಗಿ, ಕೋರಿಷ್ಟಗಳೆಲ್ಲಾ ತಕ್ಷಣದೊಳಾಗುವುದು
ಸಮಸ್ತ ಭೂಮಂಡಲವೂ ನಿನ್ನ ಸ್ವಾಧೀನವಾಗುವುದು, ಬಂದ ವಿ
ತ್ತೆಲ್ಲ ಪರಿಹಾರವಾಗುವುದು, ಸಮಸ್ತ ಧರಾಪತಿಗಳು ನಿನಗಂಜಿ ಶರ
ಣಾಗತರಾಗುವರು, ಸ್ವರ್ಗಮರ್ತ್ಯಪಾತಾಳಲೋಕಗಳಲ್ಲಿ ನಿನಗಸಾಧ್ಯ
ವಾದ ಕಾರ್ಯವೇ ಇಲ್ಲದಂತಹುದು ಕಿಂಬಹುನಾ ನಿರಂತರದಲ್ಲಿ ನಿನ್ನ
ಬೆನ್ನಬಿಡದೆ ಕಾದಿರುವೆನು, ಭಯಬೇಡವೆನುತ ಅಭಯಪ್ರದಾನವನುಂ
ಮಾಡಿ ವರಗಳನೀಡಿ, ನಿನ್ನ ಜನನಿಯಾದ ಕಾಂತಿಮಾಲಿನಿಯು ನಿನ್ನನು
ಈ ಮತಂಗಿಯ ಕರದೊಳತ್ತು ಕಳುಹುವಾಗ ಸಹಸ್ರಾಯುವಾಗೆಂದು
ಹರಸಿ ಕಳುಹಿದಳಾದಕಾರಣ ಎನ್ನ ಭಕ್ತೆಳಾಡಿದ ನುಡಿಯಮೃತವಾಗ
ದದುಕಾರಣ, ನೀನು ಸಹಸ್ರಪರಿಮಿತಾಯುಸ್ಸುಳ್ಳವನಾಗಿ ರಾಜ್ಯ
ವನಾಳು. ನಿನಗದೆ ನಾಮವೆಂದೊರೆದು ಪ್ರಯಾಣಾಭಿಮುಖಿಯಾದ ಜ
ಗನ್ಮಾತೆಯಡಿಯೊಳು ಬಿದ್ದು, ತಾಯೆ ನೀಂ ದಯಮಾಡಿ ಒಂದುದಿನವಾ
ಯಿತು, ಇನ್ನೆರಡುರಾತ್ರೆ ಇರಬೇಕೆಂದು ಬಹುವಿಧದಿ ಬೇಡಿಕೊಳ್ಳಲು,
ಅವನ ಭಕ್ತಿಯಂ ನೋಡಿ ಭಕ್ತಪರಾಧೀನಳಾದ ದೇವಿಯು ಬಾಲಕನ
ಯಾಚನೆಯ ಮೀರಲಾರದೊಡಂಬಟ್ಟು ವಾಸವಮಾಡಲು ಆಕಾಲದಲ್ಲಿ
ಸರ್ವಭೂಮಂಡಲದಲ್ಲಿಯು ಅಮೃತಮಯ ವೃಷ್ಟಿವರ್ಷಿಸಿತು; ಸಸ್ಯಂ
ಗಳು ತರುಲತಾದಿಗಳು ಸಫಲವಾದುವು ಪ್ರಜೆಗಳೆಲ್ಲರೂ ಪರಮಸಂತ

ಷ್ಟರಾಗಿ ಎಲ್ಲಿನೋಡಲು ಕನಕಮಯವಾಗಿರಲು ಅದಂ ಕಂಡು ಚಾತು ರ್ವರ್ಣದವರು ತತ್ಕಾರಣಮಂ ಕಾಣದಾಶ್ಚರ್ಯಪಡುತಿರಲು ತ್ರಿರಾತ್ರಾ ನಂತರದಲ್ಲಿ ಸಹಸ್ರಾಯುವಿಗೆ ಪೂರ್ಣಾನುಗ್ರಹಮಂ ಮಾಡಿ, ತತ್ಕೃತ ಪೂಜಾದಿಗಳ ಮನದಂದು ವೃಷಭಾರೂಢಳಾಗಿ ಪ್ರಯಾಣಮಂ ತೆರಳೆ ಆ ಅಗ್ರಹಾರದ ಬೀದಿಯೊಳು ಮೆಲ್ಲಮೆಲ್ಲನೆ ಪೋಗುತಿರುವ ಸಮಯದಲ್ಲಿ ಸಹಸ್ರಾಯುವು ಸಾಕ್ಷಾತ್ ಶಂಕರಾರ್ಧಶರೀರಿಣೀಪಾದಕಮಲ ವಿ ಯೋಗದುಃಖಮಂ ಸಹನಮಾಡಲಾರದೆ ಮೆಲ್ಲಮೆಲ್ಲನೆ ಹಿಂದೆ ಬರುತಿರ ಲು ಆ ಅಗ್ರಹಾರದಲ್ಲಿರುವ ಚಾತುರ್ವರ್ಣದವರು ದೇವಿಯಂ ನೋಡಿ ಜ್ಞಾನಿಗಳಾದ ದ್ವಿಜೋತ್ತಮರು ಮಾನುಷವ್ಯಕ್ತಿಯಲ್ಲವೆಂದು ನಿಶ್ಚಯಿ ಸಿ, ಚಿಹ್ನೆಗಳಿಂದ ಸರ್ವಮಂಗಳೆ ಈಕೆಯೆಂದರಿದು ಈ ಜಗನ್ಮಾತೆಯಾಗ ಮನದಿಂದೀ ಧರೆಯೆಲ್ಲ ಸುರಲೋಕವಂತಾದುದೆಂದು ಮನದಿ ನಿಶ್ಚಯ ಮಾಡಿ ಎಲ್ಲರೊಂದಾಗಿ ದೇವಿಯಂ ಸುತ್ತುಕಟ್ಟಿ ಸಾಷ್ಟಾಂಗದಿಂ ನಮಿಸಿ ನಾನಾವಿಧಸ್ತೋತ್ರಮಂ ಮಾಡಿ ತಮ್ಮಾತಮ್ಮಾಲಯಕ್ಕೆ ದಯಮಾಡ ಬೇಕೆಂದು ಪ್ರಾರ್ಥನೆಯಂ ಮಾಡಲು, ಪರಮದಯಾಶಾಲಿಯಾದ ಸತಿ ಯು ಇಲ್ಲಿಂದ ಮುಂದೆ ಪ್ರತಿಸಂವತ್ಸರದಲ್ಲಿಯು ಭಾದ್ರಪದ ಶುಕ್ಲತೃ ತೀಯೆಯಲ್ಲಿ ನಿಮ್ಮಾಲಯಕೆ ಬಂದು ನಿಮ್ಮಿಂದ ಪೂಜಿತಳಾಗಿ ಸರ್ವಸೌ ಭಾಗ್ಯಮಂ ಕೊಡುವೆನೆಂದಭಯಮನಿತ್ತು, ತಕ್ಷಣದೊಳಂತರ್ಧಾನಮ ನೈದಲು. ಸರ್ವರೂ ಪ್ರಣಾಮಮಂ ಮಾಡಿ ಈ ಜಗನ್ಮಾತೆಯನೀಪರಿ ಯೊಳೊಲಿಸಿಕೊಂಡಿರುವ ಈ ಕುಮಾರನಾವನೋ ಎಂದು ವಿಸ್ಮಿತರಾಗಿ, ಸಹಸ್ರಾಯುವಿನ ಮನೆಗೈತಂದು ಧನಕನಕ ವಸ್ತುವಾಹನಗಳಿಂದ ಸ ಮೃದ್ಧನಾದ ರತ್ನಖಚಿತಾಲಯದ ವಿಸ್ತಾರಮಂ ನೋಡಿ ಪರಮಾಶ್ಚ ರ್ಯಭರಿತರಾಗಿ ತಮ್ಮಾತಮ್ಮಾಲಯಮನೈದಲು, ಸಹಸ್ರಾಯುವು ದುಗು ಡದಿಂ ಮನೆಗೆ ಬರಲು, ಮತಂಗಿ ಬಾಲಕನ ಸಿಂತೈಸಿ, ಸುಖದಿಂದಿರ್ದಳು, ಆ ಗ್ರಾಮವಾಸಿಗಳು ಅಂದಿನಾರಭ್ಯವಾಗಿ ಅತ್ಯಂತ ವಾತ್ಸಲ್ಯದಿಂ ರಕ್ಷಿ ಸುತಿರಲು ಒಂದುದಿನ ಸಹಜಾತಿಗಳಾದ ವಟುಗಳಿಂದೊಡಗೂಡಿ, ಗ್ರಾ ಮಾದ್ಬಹಿರ್ಭಾಗಕ್ಕೈತಂದು ಕ್ರೀಡಿಸುತ್ತ ಯಾವದಿಕ್ಕಿಗೆ ಪೋಗುವೆವೆಂ

ದು ಕುಮಾರನು ಕೇಳಲು, ಆ ಮಾತುಗಳು ಉತ್ತರದಿಗ್ಭಾಗವನುಳಿದು ಮಿಗಿಲಾದ ಯಾವದಿಕ್ಕಿಗೆ ಪೋದಡೆಯು ತೊಡರಿಲ್ಲವದರಿಂದ ದಕ್ಷಿಣವಾಗಿ ಪೋಗುವುವೆಂದು ನುಡಿಯಲು ರಾಜಕುಮಾರನವಂ ಕೇಳಿ ಅದೇಕೆಂದು ಪ್ರಶ್ನೆಯಂ ಮಾಡಲು ಆ ದಿಕ್ಕಿನೊಳು ಮಹದ್ಭಯವುಂಟದರಿಂದ ಪೋಗಕೂಡದೆಂದೊರೆಯಲು; ತಾನಿರುವೆ ಭಯಬೇಡ ಬರುವುದೆಂದಾಡಲು, ನಮ್ಮ ಹಿರಿಯರು ತಮ್ಮೊಡನೆ ಪ್ರಮಾಣವಂ ಮಾಡಿಸಿಕೊಂಡಿರುವರದರಿಂದ ಬರಲೆಂತಹುದೆಂದು ನುಡಿಯಲು, ಸಹಸ್ರಾಯುವು ಹಾಗಾದಡಾಂ ಪೋಗಿಬರುವೆನೆಂದುವಾತುಗಳಂ ಬಿಟ್ಟು, ಒರ್ವನೆ ಉತ್ತರಾಭಿಮುಖನಾಗಿ ಮಹಾದರಣ್ಯವಂ ಪುಗುತಿರಲು ವೃದ್ಧನಾದೊರ್ವ ಶೂದ್ರನು ಈಕುಮಾರನಂಕಂಡು ಎಲೈ ಬಾಲಕನೆ, ಮೃತ್ಯುಗ್ರಸ್ತವಾದ ಈಅರಣ್ಯಾಭಿಮುಖನಾಗಿ ಏನುಕಾರಣ ಪೋಗುವೆ ಎಂದು ಕೇಳಲು. ಸಹಸ್ರಾಯುವು ಮೃತ್ಯುವೆಂದಡೇನದೆಂದು ಕೇಳಲು ಆವೃದ್ಧ ಪಾದಜನು ಒಂದು ಬ್ರಹ್ಮರಾಕ್ಷಸನು ಬಹುಕಾಲದಿಂದೀ ಗಹನವನಾಶ್ರೈಸಿ ಬಂದ ಪ್ರಾಣಿಗಳ ಭಕ್ಷಿಸುತ್ತಿರುವನದರಿಂದ ಮೃಗಪಕ್ಷಿಗಳು ಮೊದಲಾಗಿ, ಈ ಆರಣ್ಯವಂ ಪುಗುವದಿಲ್ಲವೆಂದು ನುಡಿಯಲು ಹಾಗಾದಡೆ ಆ ಬ್ರಹ್ಮರಾಕ್ಷಸನನಿಲ್ಲಿಂದ ಪೊರಡಿಸಿಬರುವೆನೆಂದು ಪೇಳಲು, ವೃದ್ಧನು ಅತ್ಯಂತ ಮನೋಹರನಾದ ಸುಕುಮಾರನಂ ನೋಡಿ, ಮನದೊಳು ಮರುಗಿ ಸಮೀಪಕ್ಕೈತಂದು ಎಲೈ ಬಾಲಕನೆ ಬಹುಮಂದಿ ರಾಯರೀಯತ್ನವಂ ಮಾಡಿ, ಮೃತವಾದ್ದರಿಂದ ಬಾಲಬುದ್ಧಿಯಂ ಮಾಡದಿರೆಂದು ಕರವಂ ಪಿಡಿಯಲಾ ಸಹಸ್ರಾಯುವು ಕರವನೊದರಿ ಹಾಗಾದಡೆ ನೋಡೆನ್ನ ಸಾಹಸವನೆಂದು, ಮುಂದಕಡಿಯಿಟ್ಟು ಸತ್ವರದಿ ಪೋಗಲು ವೃದ್ಧನು ಬಹುಪ್ರಕಾರಮರುಗುತ್ತ ತನ್ನ ಮಾರ್ಗವಂ ಪಿಡಿಯೆ ಸಹಸ್ರಾಯುವಾ ಕಾಂತಾರವಂ ಪೊಕ್ಕು ಬರುತ, ಮಹದುನ್ನತವಾದ ವಟವೃಕ್ಷವಂ ಕಂಡು ತತ್ಪರಿತಃ ರಕ್ತಕರ್ದಮದಿಂದ, ಅಸ್ಥಿರಾಶಿಗಳಿಂದ, ನರಕಪಾಲಗಳಿಂದ, ಹಾಸಿರುವ ಭೂಮಿಯಂ ನೋಡಿ ಘೋರವಾದ ಈ ಪ್ರದೇಶವೇ ರಾಕ್ಷಸನಿಗಾಶ್ರಯವೆಂದು ನಿಶ್ಚಯಮಾಡಿ, ರಾಕ್ಷಸನ ಕಾಣದೆ ಎಲ್ಲಿಪೋಗಿರುವ

ನೋ ಎಂದು ಶ್ರಾಂತನಾಗಿ ನಿರ್ಭಯದಿಂದ ಆ ವೃಕ್ಷದಡಿಯಲ್ಲಿ ಮಲಗಲು ಆ ವಿಪ್ರರಾಕ್ಷಸನು ಉದರಭರಣಾರ್ಥವಾಗಿ, ಬಹುದೂರ ಸಂಚಾರವಂ ಮಾಡಿ ಆಹಾರಾಭಾವಪ್ರಯುಕ್ತ ಖೇದವಿಂ ತನ್ನ ನಿಜಸ್ಥಾನವಂ ಕುರಿತು ಬಂದು ಚಂದ್ರಬಿಂಬದಂತೆ ಮಲಗಿರುವ ಸುಕುಮಾರನು ಕಂಡು, ವಿಸ್ಮಿತನಾಗಿ ಈ ಗಹನವಂ ಪುಗುವದಕ್ಕೆ ಸುರಾಸುರರಂಜುವರು. ಇ ವನದಾವನೋ ಕಾಣೆ ದೈವಗತಿಯಿಂದೆನಗೆ ಅನ್ನ ದೊರಕಿತು ಎಂದು, ಕಿಂಚಿತ್ಸಮೀಪಕ್ಕೆ ಬಂದು, ಸುಕುಮಾರನಾಕಾರವಂ ನೋಡಿ ಭಕ್ಷಿಸಲು ಮನಬಾರದಿವನದಾರೋ ಕಾಣೆ, ಈತನರಿಯದೆ ಈ ಅರಣ್ಯವಂ ಪ್ರವೇಶವಾಡಿದನೋ ಎನ್ನ ನಿಗ್ರಹಮಾಳ್ಪೆನೆಂದು ಬಂದಿರುವನೋ, ಅಥವಾ ಎನ್ನುದ್ಧಾರಕಾಲವೀಗೊದಗಿದುದೋ ಎಂದು ನಾನಾವಿಧದಿ ಚಿಂತಿಸಿ ಆಗಲೀಪ್ರೋತನಂ ಕೆಣಕಿ ನೋಡುವೆನೆಂದು ಘೋರವಾದ ಆಕಾರವಂ ತಾಳಿ ಬೊಬ್ಬಿರಿದು ಧ್ವನಿಮಾಡಲು ಸಹಸ್ರಾಯುವು ನಿದ್ರೆ ತಿಳಿದೆದ್ದು ಬ್ರಹ್ಮರಾಕ್ಷಸನಂ ಕಂಡು, ನಿರ್ಭಯದಿಂದೇನಮಾಡುವನೋ ನೋಡುವೆನೆಂದು ಕುಳಿತಿರಲು ಆ ಬ್ರಹ್ಮರಾಕ್ಷಸನು ಎಲವೋ ಮಾನುಷಪ್ರೋತ ಮೃತ್ಯುರೂಪಾಗಿರುವ ಎನ್ನನರಿಯದೆ, ಈ ಗಹನವು ನೇತಕ್ಕೈತಂದೆ ನೋಡೀಗ ನಿನ್ನ ಮುರಿದು ನುಂಗುವೆನೆಂದು ಬೊಬ್ಬಿಡುತ್ತ, ಬಳಿಗೆ ಬರಲು, ಕಾಳಿಯಾಬಾಲಕನ ಸುತ್ತ, ಜ್ವಾಲಾಕಾರವಾಗಿ ಜ್ವಲಿಸುತಿರಲದಂ ಕಂಡು ಭಯದಿಂದ ಹಿಮ್ಮೆಟ್ಟಿ ಭೀತಿಯಿಂದ ನಿಂದಿರುವ ರಾಕ್ಷಸನಂ ನೋಡಿ ಸಹಸ್ರಾಯುವು ಕೇಳೆಲವೋ ರಾಕ್ಷಸಾಧಮನೆ ನಿನ್ನ ಸುವನೀಗುವೆನು ನೋಡೆಂದು ಸಿಂಹನಾದವಂ ಮಾಡುತೇಳಲು ಸಿಡಿಲು ಶಿರಕೆರಗಿದಂತೆ ಶಬ್ದಮಾತ್ರಕೆ ರಾಕ್ಷಸನ ಎದೆಯೊಡೆದು ಮೂರ್ಛೆಯಿಂದ ಭೂಮಿಯನ್ನೈದಲು ಸಹಸ್ರಾಯು ನೋಡುತಿರೆ ಮೂರ್ಛೆ ತಿಳಿದೆದ್ದು ಭಯದಿಂದ ನಡನಡುಗಿ ಘೋರರೂಪವಂ ತ್ಯಜಿಸಿ ದ್ವಿಜನಾಗಿ ವಂದನೆಯಂಮಾಡಿ ಕೇಳೈ ಮಹಾಪುರುಷ ನಾನು ನಿನ್ನ ಶರಣಾಗತನಾಗಿರುವೆ. ನಿನ್ನ ಮಹಿಮೆಯನೋಡಬೇಕೆಂದು ಪಾಪಿಸಿದೆ ಎನ್ನನುದ್ಧಾರವಂ ಮಾಡಬೇಕೆಂದೆನುತ ಬಹುವಿಧದಿಂದ ಪ್ರಾರ್ಥನೆಯಂ ಮಾಡಲು, ಸಹ

ಸ್ರಾಯುವು ನಸುನಗುತ ಮಾತೆಯುಡಿದಾವರೆಯು ನೆನವೆಲವೊ ಪಿಶಾಚಾ
ಧನುನೆ, ನಿನ್ನನುದ್ಧಾರವಂ ತಾನುಮಾಡುವದೇನು, ನೀನಾರು ನಿನ್ನ
ವೃತ್ತಾಂತವಂ ಪೇಳೆನಲು, ರಾಕ್ಷಸನು ಕೇಳುತಾಶ್ಚರ್ಯದಿಂದ, ಮಾ
ನುಷಂಗೆ ಈ ಧೈರ್ಯವೆಲ್ಲಿಹುದು, ಸಾಕ್ಷಾತ್ ತ್ರ್ಯಕ್ಷನೇ ತನ್ನನುದ್ಧಾ
ರವಂ ಮಾಡಲು, ಬಂದಿರುವನಿದು ನಿಶ್ಚಯವೆಂದು, ನುಡಿದನೆಲೈ ಕುಮಾ
ರನೇ ಕೇಳು, ತಾನು ಬ್ರಾಹ್ಮಣನು, ಮಹರ್ಷಿಯ ಅನುಗ್ರಹದಿಂದ ಸ
ಕಲವಿದ್ಯಾಸಿದ್ಧಿ ಎನಗುಂಟು, ದೇವಕನ್ನಿಕೆ ಶಾಪದಿಂದಿಂತು ಪಿಶಾಚನಾ
ಗಿರುವೆ ಬಹುಕಾಲದಿಂ, ನೀನಿದನು ಕರುಣದಿಂ ಪರಿಹಾರವಂ ಮಾಡಿದಡೆ
ಎನಗೆ ಬರುವ ಅಖಿಳ ವಿದ್ಯೆಗಳನುಪದೇಶಮಾಳ್ಪೆ ನಿದು ಸತ್ಯವೆಂದೊ
ರೆಯಲು, ಅದುಂ ಕೇಳಿ ರಾಜಕುಮಾರನು ನಿನಗೆ ಪಿಶಾಚತ್ವವೆಂತು ತ
ನ್ನಿಂದ ಪರಿಹಾರವಾಗುವುದು, ದೇವಕನ್ನಿಕೆಯು ಶಾಪ ನಿನಗೆಂತು ಬಂ
ದುದವರ ವೃತ್ತಾಂತವಂ ವಿಸ್ತರಿಸಿ ಪೇಳೆನಲು, ರಾಕ್ಷಸನು ಮನದೊ
ಳಾಲೋಚಿಸಿ, ಎಲೈ ರಾಜಕುಮಾರನೇ ಕೇಳು ಸಾವಧಾನದೊಳೆಂದುಪ
ಕ್ರಮಿಸಿದನದೆಂತೆನಲು, ಕಳಿಂಗವಿಷಯದೊಳು, ಚಂದ್ರವನನೆಂಬ ಅಗ್ರ
ಹಾರದೊಳು, ಚಿರಕಾಲವಾಸಿಯಾದ ಧರ್ಮವ್ರತನೆಂಬ ಭೂಸುರೋತ್ತ
ಮನು ತನ್ನಯತಂದೆ, ತನಗೆ ವಿದ್ಯಾನಿಧಿಯೆಂಬ ನಾಮ, ಪಿತೃಸನ್ನಿಧಿ
ಯಲ್ಲಿ ಬ್ರಹ್ಮಚರ್ಯದಿಂ ವೇದಶಾಸ್ತ್ರಗಳನಭ್ಯಾಸವಂ ಮಾಡುತಿರಲು,
ಮಾತಾಪಿತೃವಿಯೋಗವಾಗಲತ್ಯಂತ ದುಃಖದಿಂದಿರ್ವರಿಗೆ ಪರಲೋಕ
ಕೃತ್ಯವಂ ಯಥಾಶಕ್ತಿಯಾಚರಿಸಿ, ತನದಂತರದೊಳನ್ನಾಹಾರಗಳಿಗೆ
ಮಾರ್ಗವಿಲ್ಲದೆ, ಇಲ್ಲಿದ್ದು ಫಲವೇನೆಂದು, ದೇಶಾಟನವಮಾಡುತ್ತಾ ಬ
ರುತೊಂದುಬಿನ ಮಾರ್ಗವಂ ತಪ್ಪಿ, ಮಹದ್ಗಹನವಂ ಪ್ರವೇಶಮಾಡಿ,
ಪಾರಗಾಣದೆ ಬಹುದಿವಸ ವನದೊಳು ಸಂಚಾರಮಾಡುತ್ತಾ, ಕಂದಮೂಲ
ಗಳಿಂದ ಕ್ಷುತ್ಪಿಪಾಸೆಯಂ ಕಳೆದು ಬರುತಿರಲು, ಬಹುವಿಸ್ತಾರವಾ
ದೊಂದು ಪರ್ವತವಂ ಕಂಡು, ಆ ಪರ್ವತಾರೋಹಣವಂ ಮಾಡಿ, ನೋ
ಡುತ ಬರುತಿರಲು ಅದರಸಾನುವಿನಲ್ಲಿ ರಮಣೀಯವಾದ ತಪೋವನ
ವಂ ಕಂಡು, ಪರಮಸಂತೋಷದಿಂದಾತಪೋವನವಂ ಪ್ರೇಕ್ಷ್ಯ, ನಿ

ರ್ಭಯದಿಂದ ನೋಡುತ್ತ ಬರುತಿರಲು, ಚಿರಕಾಲಾನುಷ್ಠಿತವಾದ ಮಾನ ತಪಃ ಸರಿಪಾಕಜನಿತಾವಿಷಹ್ಯತೇಜೋ ವಿಶೇಷದಿಂದ ಅಪರಭಾನುವಿ ನಂತೆ ಪ್ರಕಾಶಿಸುತ್ತಿರುವ ವೃದ್ಧಮುಖಜಾತನಂ ಕಂಡು, ಸಡಗರದಿಂದ ಬಳಿಗೈದಲಂಜುತಂಜುತೆ ಮೆಲ್ಲಮೆಲ್ಲನೆ, ಎಡೆಗೈದಿ, ಬಹುಕಾಲ ಕಾದಿರ ಲೊಂದುದಿನ ಕಂಡೆರದು, ಎನ್ನನು ನೋಡಲನಿತರೊಳು ತಾನೆದ್ದು ಸಾ ಷ್ಟಾಂಗದಿಂ ನಮಿಸಲು, ಕರುಣದಿಂ ತನ್ನ ವೃತ್ತಾಂತಮಂ ಕೇಳಿ, ಕರುಣಾಶಾಲಿಯಾದ ಮಹರ್ಷಿಯು, ತನ್ನಂ ಕುರಿತು ವತ್ಸ ಕೇಳೆಮ್ಮ ಅಂತೇವಾಸಿ ವಿಷ್ಣುಪದಿಗೈದಿ, ಸ್ನಾನಮಂ ಮಾಡಿ ಸುರನದಿಯ ದಿವ್ಯೋ ದಕವತಂದು ಎನಗೆ ಸ್ನಾನಮಂ ಮಾಡಿಸುವೆನೆಂದು, ಅಪ್ಪಣೆಗೊಂಡು ಪೋಗಿ, ಬಹುಕಾಲಮಾದುದು. ತಮ್ಮ ಸಮಯಕೊದಗುವನಂತೆ, ಕಾಣಬರಲಿಲ್ಲ, ಎಮ್ಮ ಸೇವೆಯಂ ಬಹುಕಾಲಮಾಡಿಯು ಎಮಗೆ ಬರುವ ನಿಖಿಲ ವಿದ್ಯೆಗಳಂ ಪಡೆಯುವದಕ್ಕೆ ಪಾತ್ರನಾಗದೇ ಪೋದನು, ಲಭ್ಯ ವಿಲ್ಲದ ಬಳಿಕ ತಾವು ಮಾಡುವದೇನು. ಅದರಿಂದ ನೀನು ಸತ್ಕುಲಪ್ರ ಸೂತನಾಗಿ, ಆಸ್ತಿಕ್ಯಬುದ್ಧಿಯುಳ್ಳವನಾಗಿ, ಕಾಣುತಿಹೆ, ವೃದ್ಧನಾದೆ ನ್ನ ಶುಶ್ರೂಷೆಯಂ ಮಾಡಿಕೊಂಡಿದ್ದು ಎಮ್ಮ ನಿರ್ಯಾಣವಾದನಂತರ ದಲ್ಲಿ ಯಥೋಕ್ತಕರ್ಮಗಳಿಂದಲೆಮ್ಮ ಪ್ರೇತತ್ವನಿವರ್ತಿಯಂ ಮಾಳ್ಪೆ ನೆಂದು ಭರವಸವನಿತ್ತಡೆ, ನಿನಗೆ ಮೃತಸಂಜೀವಿನೀ ಪರಕಾಯಪ್ರವೇ ಶವೇ ಮೊದಲಾದ ಮಹಾವಿದ್ಯೆಗಳನುಪದೇಶಮಂ ಮಾಳ್ಪೆವೆಂದು ಅಭ ಯವನೀಯಲು ತಾನು ಹರುಷದಿಂ ದಡಿಗೆರಗಿ, ಭವದಾಜ್ಞಾನುಸಾರ ಮಾಗಿ, ನಡೆಯುವೆನೆಂದು ಅವರಪಾದಕಮಲಂಗಳ ಮುಟ್ಟಿ, ಶಪಥವ ಮಾಡೆ ಪರಮಾಹ್ಲಾದದಿಂ ಶುಶ್ರೂಷೆಯಂ ಮಾಡಿಕೊಂಡಿರು ಎಂದು, ಆಜ್ಞಾಪಿಸಿ, ತಪಗೈಯುತಿರಲು ತಾನು ಭಯಭಕ್ತಿಯಿಂದ ಅವರಪೂ ರ್ಣಾನುಗ್ರಹಾಪೇಕ್ಷೆಯಿಂ, ಶುಶ್ರೂಷೆಯಂ ಮಾಡಿಕೊಂಡು ದಿನಮೊಂ ದು ತ್ರುಟಿಯಾಗಿ ಕಳೆಯುತಿರಲು ಅವರಿಂಗೆ ಚರಮಸಮಯಬರಲು, ಎನ್ನ ಕುಲಶೀಲಸದಾಚಾರ ಶುಶ್ರೂಷೆ ಭಕ್ತಿಗಳ ಮನದಂದು, ಪ್ರಸಾದಾಭಿ ಮುಖರಾಗಿ ಎಲೈ ಪುಣ್ಯಶಾಲಿಯೆ ಬಾರೆಂದು ಸಮೀಪಕ್ಕೆ ಕರೆದು,

ವೈದಡವಿ, ಕರುಣದಿಂ ನುಡಿದರೆಲೈ ವತ್ಸ ನಿನ್ನಯಪುಣ್ಯಕ್ಕೆಣೆಗಾಣೆ. ಮೆಚ್ಚಿದೆನು. ತವುಗೆ ಚರಮಾವಸ್ಥೆಯಾವುತ್ರಯಾವಧಿಯು, ಅನಿತರೊಳು ಸಕಲ ವಿದ್ಯೆಗಳನ್ನು ಉಪದೇಶಮಾಡುವೆವು. ಈ ದಿವ್ಯ ಕಾಸಾರದೊಳು ಸ್ನಾನಮಂ ಮಾಡಿ ಬಾರೆಂದು, ಆಜ್ಞಾಪಿಸಲು, ಸತ್ವರದಿ ಆ ಪುಣ್ಯತೀರ್ಥದೊಳು ಮಜ್ಜನಮಂ ಮಾಡಿ, ಮಡಿಯುಟ್ಟು ಬಂದು, ಸಾಷ್ಟಾಂಗದಿಂ ಮಣಿದು, ಅಂಜಲಿಬದ್ಧನಾಗಿ ಇದಿರ್ಗೆ ನಿಲ್ಲಲು, ತಮ್ಮ ವಾಮಭಾಗದೊಳೆನ್ನ ಪೂರ್ವಾಭಿಮುಖನಾಗಿ ಕುಳ್ಳಿರಿಸಿ, ದಕ್ಷಿಣಕರ್ಣದೊಳು ಸಕಲವೇದಂಗಳಂ ಅರ್ಥ, ನೀತಿ, ಧರ್ಮ, ನ್ಯಾಯ, ಶಬ್ದ, ಯೋಗ, ಪೂರ್ವೋತ್ತರಮೀಮಾಂಸಾ, ಶಾಸ್ತ್ರಗಳೇ ಮೊದಲಾದ ಸಕಲ ಶಾಸ್ತ್ರಂಗಳಂ ಮೃತಸಂಜೀವಿನೀ ಪರಕಾಯಪ್ರವೇಶ, ಆಕರ್ಷಣೋಚ್ಚಾಟನ, ಇಂದ್ರಜಾಲ, ಮಹೇಂದ್ರಜಾಲ, ಮೊದಲಾದ ಮಹಾವಿದ್ಯೆಗಳಂ ಪಾದುಕಾಸಿದ್ಧಿ, ಘುಟಿಕಾಸಿದ್ಧಿಯೇ ಮೊದಲಾದ ಮಹಾಸಿದ್ಧಿಗಳಂ ಇವೆ ಮೊದಲಾದ ಸಮಸ್ತ ವಿದ್ಯೆಗಳ ಸಮಗ್ರಾನುಗ್ರಹದಿಂದಲುಪದೇಶಮಾಡಿ, ಮುಂದೆ ತಾನಿರುವ ಕ್ರಮಮಂ ಪೇಳಿ ತನಗಾಗುವ ಫಲಾಫಲಂಗಳ ಪೇಳುತಿರುವ ನಿತರೊಳು ಚರಮಸಮಯ ಪ್ರಾಪ್ತವಾಗಲು ತನಗೆ ಪೇಳುವ ಅರ್ಥವನುಪಸಂಹಾರಮಂ ಮಾಡಿ, ಸ್ಥಿರಾಸನದಲ್ಲಿ ಕುಳಿತು ಪ್ರಾಣಾಯಾಮಪೂರ್ವಕಮಾಗಿ ವಾಯುಧಾರಣೆಯಂ ಮಾಡಿ, ಬ್ರಹ್ಮನಾಡಿಯಿಂ ಶಿರೋಮಧ್ಯಮನೊಡೆದು ಈ ಪಾಂಚಭೌತಿಕ ಸ್ಥೂಲಕಳೇಬರವನು ನೊದೆದು ಮೃತಿಯಸ್ಯೆದಲಾ ಗಾತ್ರಮಂ ತಾನು, ಸಮಾಹಿತನಾಗಿ ಮಂತ್ರಾಗ್ನಿಯಿಂ ಸಂಸ್ಕಾರಮಾಡಿ ಪುತ್ರನಂತೆ ಅವರ ಕರ್ಮಗಳನಿಃಷನ್ಯೂನಾತಿರೇಕವಿಲ್ಲದಂತೆ, ಯಥಾಶಕ್ತಿಮಾಡಿ ಅಪರ ಕರ್ಮಗಳ ಸಮಾಪನಮಾಡಲು ತಕ್ಷಣದೊಳಾಪ್ರೇತತ್ವನಿವರ್ತಿಯಾದುದರಿಂದಸೂರ್ಯದ್ಯುತಿಗೆಸಮಾನಮಾದಶರೀರಮಂಪಡೆದು ಅಂತರಿಕ್ಷದೊಳು ಮಾರ್ತಾಂಡನಂತೆ ಬೆಳಗುತ್ತ ಇನಬಿಂಬಮನುಗಿದು ನಡೆಯಲು, ಅದನ್ನವರ ಪ್ರಸಾದದಿಂ ನೋಡಿ, ಪರಮವಿಸ್ಮಿತನಾಗಿ, ವಂದನೆಯಂ ಮಾಡಿ, ಆ ತಪೋವನದೊಳೊಂದು ಸಂವತ್ಸರ ವಾಸಮಾಡಿ, ಗುರೂಪದಿಷ್ಟ

ವಿದ್ಯೆಗಳಂ ದೃಢಮಾಡಲು, ಆಚಾರ್ಯೋಕ್ತಾನುಷ್ಠಾನ ತತ್ಪರನಾಗಿ ರ್ದು, ತದನಂತರದೊಳಲ್ಲಿಂದ ಪೊರಟು, ಕಾಂತಾರಮಂ ದಾಂಟಿ, ಕೃತ ಕೃತ್ಯನಾಗಿ, ದೇಶದೇಶಂಗಳಂ ತಿರುಗುತ್ತಾ, ಗೃಹಿಯಾಗಬೇಕೆಂದು, ಸಂಚಾರಮಾಡುತ್ತಾ, ಮಾರ್ಗವಶಾತ್ ನೇತ್ರಾವತೀತೀರಕ್ಕೈದಿದೆನೆಲ್ಲೈವ ತ್ಸ ಸಾಯಾಹ್ನಮಾಗಲು, ಅಲ್ಲಿಂದ ಮುಂದೆನಡಿಯುವದಕ್ಕೆ ಪೊತ್ತಿಲ್ಲ ದಾನದೀತೀರದೊಳುನಿಂದು, ಸ್ನಾನಮಂಮಾಡಿ, ಸಾಯಾಹ್ನನಿಯಮಗ ಳನಾಚರಿಸಿ, ಸಮಸ್ತ ಚರಾಚರ ಪ್ರಪಂಚ ಪಾಂಚಲಿಕಾನಟನ ಸೂತ್ರ ಧಾರನಾದ ಪರಮೇಶ್ವರನ ಪದಾರವಿಂದಗಳ ನೆನೆಯುತ್ತಲಾ ನಿಮ್ನಗಾ ಪುಳಿನಪ್ರದೇಶದೊಳು ವಿದ್ಯಾಭ್ಯಾಸವಂಮಾಡುತ್ತಾ, ಕುಳಿತಿರಲು ರಾ ತ್ರಿ ದ್ವಿಪಂಚಘಟಿಕಾನಂತರದೊಳಂತರಿಕ್ಷದೊಳಂತಃಕರಣ ಹರಮಾದ ವೀಣಾಮೃದಂಗ ಮುರಜ ಮೊದಲಾದ ವಾದಿತ್ರಕರಮಧುರ ಸ್ವರಮಿಳಿ ತವಿದ್ಯಾಧರೀ ಗಾನಮಂ ಕಿವಿಗಿಂಪಾಗಿ ಕೇಳಿ, ವಿಸ್ಮಿತನಾಗಿ, ದಿಕ್ಕುಗ ಳನ್ನೋಡುತಿರಲಾಗಿ, ಆಗಸದೊಳನೇಕ ಶಂಪಾಸಮೂಹಮೊಂದಾಗಿ ಇಳಿವಂತೆ, ರತ್ನಮಯವಿಮಾನಂಗಳಂ ಕಂಡು, ಪರಮಾಶ್ಚರ್ಯಯುಕ್ತ ನಾಗಿ, ನೋಡುತ್ತಿರಲಾ ವಿಮಾನಾವಳಿಗಳಿಳಿಯುವಸರಿಸದೊಳು ಆಶ್ಚ ರ್ಯಕರಮಾದ, ವಿಶಾಲಮಾದ, ದಿವ್ಯಾನರ್ಘ ಜಾಂಬೂನದಮಯ ಪ್ರಾಕಾ ರ ಪರಿಘಾವಲಯ ಶೋಭಿತಮಾದೊಂದು ನಗರವಿಳಿಯಿಂತಿದ್ದುದೇನೆಂ ಬೆನಾಶ್ಚರ್ಯಮಂ, ಸುಭಗ ಆನಗರದಂತರಾಳದೊಳಿಳಿದುದಾವಿಮಾನಪ ಙ್ಕ್ತಿಗಳದಂ ಕಂಡು, ಪರಮಾದ್ಭುತಮಿದೇನಿದಂ ನಿಶ್ಚಯಿಸಿನೋಡಬೇಕೆಂ ದು, ಉಪಕ್ರಮಿಸಿದ ವಿದ್ಯೋಪ ಸಂಹಾರಮಂಮಾಡಿ, ಅಲ್ಲಿಂದೆದ್ದು, ಮೆಲ್ಲಮೆಲ್ಲನೆ, ಪುರದ್ವಾರದೆಡೆಗೈದಲು, ದ್ವಾರಪಾಲಕಿಯರಿರಲವರಿರವಂ ನೋಡಿ, ವಿಸ್ಮಿತನಾಗಿ, ಒಳಪೊಕ್ಕು, ಆನಗರಮಧ್ಯದೊಳು ಸಾಕ್ಷಾತ್ ಶಚೀದೇವಿಯಾಲಯದಂತ, ವಿಚಿತ್ರತರ ರತ್ನಖಚಿತಾಲಯಮಂಕಂಡು, ಕ ಕ್ಷ್ಯೆಗಳಂದಾಂಟಿ, ಪೋಗುತ್ತಿರಲು ಎಲ್ಲಿನೋಡಿದಡೆಯುಮಪ್ಸರಸ್ತ್ರೀ ಸಮಾಜದಿಂ ಪರಿರಕ್ಷಿತಮಾಗಿಲವರೆನ್ನಂಕಂಡು, ತಡೆಯಡೆ ಸುಮ್ಮನಿರ ಲು ಆಗೃಹಮಧ್ಯದೊಳುಅನೇಕವಿದ್ರುಮಸ್ತಂಭಗಳಿಂದ ಸ್ಫಟಿಕಮಯ

ಭಿತ್ತಿಯಿಂ ವಜ್ರಖಚಿತವಿಟಂಕಗಳಿಂದ ಇಂದ್ರನೀಲರಚಿತ ತೋಲೆಗಳಿಂದ ಪುಷ್ಯರಾಗ ನಿರ್ಮಿತ ಜೋದಿಗೆಗಳಿಂದ ಅನರ್ಘ್ಯಮುಕ್ತಾಸರರಚಿತತೋರಣಗಳಿಂ ಸಾಕ್ಷಾತ್ ವಿಶ್ವಕರ್ಮನಿರ್ಮಿತವಾದ ಇಂದ್ರನೊಡ್ಡೋಲಗದಂತೆ ಪ್ರಕಾಶಿಪ ಸಭಾಸ್ಥಾನವಂಕಂಡು, ಆ ಸಭಾಮಂಟಪದ ದಿವ್ಯಸಿಂಹಾಸನದೊಳೋರ್ವದೇವಕನ್ನೆಯತಿರಮಣೀಯವಾದ ಅಂಗಸೌಷ್ಟವದಿಂದ ಸಾಕ್ಷಾತ್ ರತಿಯಂತೆ, ಜಗನ್ಮೋಹನಾಕಾರದಿಂ ಕುಳಿತಿರುವ ದೇವಕನ್ನೆಯಂಕಂಡು, ಪರಮವಿಸ್ಮಯದಿಂದ ಅನೇಕ ಅಪ್ಸರಮಾನಿನಿಯರಿಂದುಪಾಸ್ಯಮಾನಳಾಗಿ, ಕುಳಿತಿರುವಳೆಡೆಗೆ ತಾನೆಯ್ದಲು, ಆ ಮಾನಿನಿಯು ಎನ್ನನಪಾಂಗದಿಂನೋಡಿ ಮರ್ಯಾದೆಯಂಮಾಡದೆ, ಅಹಂಕಾರದಿಂದ ಈತನಾರಿಲ್ಲಿಗೆಂತೈದಿದನು, ಕೇಳೆಂದು, ಸಹಚರಿಯರಿಂಗಾಜ್ಞಾಪಿಸಲು, ಆಕೆಯವಲೇಪವಂನೋಡಿ ನಾವು ಮುಖಜಾತರು ನಿನ್ನಸೌಭಾಗ್ಯವಂನೋಡಲೈತಂದೆವೆನಲು ಆ ಮಾನಿನಿಯು ಯೌವನದ ಮದದಿಂದ ಮುಂದುಗಾಣದೆ, ಈತನಂ ಬಂಧಿಸುವುದೆಂದು ದೂತಿಯರಿಗಾಜ್ಞಾಪಿಸಲು, ತಾನು ಕಿಂಚಿತ್ಕುಪಿತನಾಗಿ ಗುರುಕೃಪಾಲಬ್ಧವಾದಿಂದ್ರಜಾಲವ ನೀಷತ್ಪ್ರಯೋಗಿಸುತ ಮೋಹಿಸಲು, ಆ ಮಾನಿನಿಯು ಭೀತಿಯಿಂನಡುನಡುಗಿ, ಈ ವಿಪ್ರನೆಮಗೆ ದಕ್ಕುವನಲ್ಲವೆಂದು ನಿಶ್ಚಯಿಸಿ, ಆ ದೇವಕನ್ನೆ ಪೀಠದಿಂದೆದ್ದು ಆಸನವನಿತ್ತು, ಸಾಂತ್ವವಚನಗಳಿಂದ ಸಮಾಧಾನವಂಮಾಡಿ, ಬಹುಮಾನಪೂರ್ವಕವಾಗಿ ತಾವಿಲ್ಲಿಗೆಯ್ದಿದ ಕಾರ್ಯವೇನೆಂದೆನಲು, ತಾನು ಕಾರ್ಯಾರ್ಥಿಯಾದುದರಿಂದ ಮನದಿಯೋಚಿಸಿ, ದೇವಿ ತೀರ್ಥಯಾತ್ರಾಪ್ರಸಂಗದಿಂದೀನೇತ್ರಾವತೀತೀರಕ್ಕೈದಿದೆನು. ಕಂಡೆನೀರಾತ್ರಿಯೊಳು ಮಯಮಾಯದಂತೆ ನಿರ್ಮಿತವಾದನಗರವಂ, ಇದೇನಾಶ್ಚರ್ಯವೋ ನೋಡಬೇಕೆಂದು ಪುರವಂ ಪೊಕ್ಕು, ಜಗನ್ಮೋಹಿನಿಯಾದ ನಿನ್ನಂಕಂಡೆ, ತನಗೆ ವಿವಾಹವಿಲ್ಲದರಿಂದಲೆನಗೆ ತದುಪಯುಕ್ತವಾದದ್ರವ್ಯವಂ ನೀಯ್ಯೆ ಪೋಗುವೆನೆಂದು ತಾನು ನುಡಿಯಲು, ಆ ದೇವಮಾನಿನಿಯು ಪರಮಸಂತೋಷದಿಂದ ಅನೇಕ ಜೀವರತ್ನಗಳಂ ಲಕ್ಷಸಂಖ್ಯಾತವಾದನಿಷ್ಕವಂನಿತ್ತು, ಪೋಗಿ, ನೀವಿಲ್ಲಿಕಂಡ ವೃತ್ತಾಂತವಂ ಪ್ರಾಣಿಮಾತ್ರಕ್ಕೆ ತಿಳಿಸಿದಡೆ

ಪಿಶಾಚತ್ವವನ್ನೈದುವಿರಿ ಪ್ರೋಗೆಂದು ಶಾಪವನೀಯ್ವಲು, ತಾನುಕ್ರೋಧವಮೂರ್ಛಿತನಾಗಿ, ಎಲೈ ಮಂದಮತಿಯೆ! ಮುಂದೋರದೆ ಎನಗೆ ಶಾಪವನಿತ್ತೆ, ಪಾಂಚಭೌತಿಕ ಶರೀರವಾದುದರಿಂ ಮರೆತು ಕನಸಿನಲ್ಲಾದೊಡೆಯುಂ ಪ್ರಾಣಿಮಾತ್ರಕ್ಕೆ ಒರೆದಿನಾದೊಡೆ ತನಗೆ ಪಿಶಾಚತ್ವಂಬರಲಾರದು, ಆದೊಡೆಯುಂಸಹಿಸಿದೆನು. ನಿನ್ನವೃತ್ತಾಂತವಂ ತಥ್ಯವಾಗಿವಿಸ್ತರಸಿ ತನಗೆ ವಿಶಾಪವಿತ್ತೊಡೆ ಪ್ರೋಗುವೆನು,ಇಲ್ಲದಿರೆಪ್ರತಿಶಾಪವನೀವೆನೆಂದುಕುಪಿತನಾಗಲು, ಆ ದೇವಮಾನಿನಿಯು ಬ್ರಹ್ಮತೇಜಸ್ಸಹನವಾಡಲಶಕ್ಯವೆಂದಂಜಿಎಲೈ! ಭೂಸುರೋತ್ತಮನೆ! ಈಪ್ರತಿಗ್ರಹದ್ರವ್ಯವಂ ಸದ್ವ್ಯಯವಮಾಡಿದೊಡೆಪಿಶಾಚತ್ವ ನಿವೃತ್ತಿಯಾಗುವದು,ಕ್ರೋಧವಂ ಮಾಡದಿರು ತನ್ನವೃತ್ತಾಂತವಂ ಲಾಲಿಪ್ಪುದು; ಕೇಳೆಂದು,ನುಡಿದಳದೆಂತೆನೆ, ಪೂರ್ವಕಾಲದಲ್ಲಿ ಮುಂಡನೆಂಬಋಷಿಯು ಚಿರಕಾಲಬ್ರಹ್ಮಚರ್ಯದಿಂ ತಪಗೆಯ್ದು ಕದಾಚಿತ್ ಬಹಿರ್ಮುಖನಾಗಿ ಕಂದಮೂಲಾಹರಣಾರ್ಥವಾಗಿ ಅರಣ್ಯದೊಳು ತಿರುಗುತ್ತಿರಲು, ಆ ವಿಪಿನವೊಳಗೊಂದು ಪುಷ್ಪಿತರಸಾಲವೃಕ್ಷದೊಳು ಶುಕದಂಪತಿಗಳನೇಕ ಪುತ್ರ ಪೌತ್ರಾದಿ ಬಂಧುವರ್ಗಗಳಿಂದ ಪರಸ್ಪರವಾಗಿ ಪರಮಾಹ್ಲಾದದಿಂದ ಆಲಿಂಗನ ಚುಂಬನಚಾಟುವಚನ ಪ್ರಣಯ ಕಲಹ ಸಮವಿಷಮರತಿಗಳಿಂ ಕ್ರೀಡಿಸುವದಂನೋಡಿ, ದೈವಗತಿಯಿಂದಲಾ ಋಷಿಯು ವಿಷಯಾನುಭವದೊಳಗೆ ಬುದ್ಧಿಯಂಮಾಡಿ, ವನವಂತಿರುಗುತಿರಲು, ಜಗನ್ಮೋಹನಾಕಾರದಿಂದಾವಿಪಿನದೊಳು ಬರುತಿರುವ ತಿಲೋತ್ತಮೆಯೆಂಬ ದೇವಮಾನಿನಿಯಂಕಂಡು, ಮದನತ್ರಿಭುವನ ವಿಜಯಲಕ್ಷ್ಮಿಯೋ, ವನದೇವತೆಯೋ ಕ್ಷಣರುಚಿಯೆ ಸಾಕಾರವಾಂತುಬಂದಿರುವುದೋ, ಶೃಂಗಾರರಸವೆಮೂರ್ತೀಭವಿಸಿತೊ ಎಂಬಂತೆ ತೋರುತಿರಲಾಕೆಯಡೆಗೆಯ್ತಂದು ಮದನಬಾಣದಿಂಕ್ಷತನಾಗಿ, ಮೆಯ್ಮರೆದು, ಮುಂದೋರದಾದೇವಮಾನಿನಿಯನಾಲಿಂಗನವಮಾಡೆ ಪ್ರೋಗಲು, ಆ ತಿಲೋತ್ತಮೆನೋಡಿ,ಚಿರಕಾಲಸ್ಯೆದತಪಃಪ್ರಭಾವದಿಂ ಪ್ರಜ್ವಲಿಪ ವೈಶ್ವಾನರನಂತೆ ತೋರುತಿಹ ಋಷಿಯನತಿಹರ್ಷದಿಂಕಂಡು, ಈತನರಿತವನಲ್ಲ ವೈಷಯಿಕಾನಂದವಂ, ಎಂದರಿದು ನಸುನಗುತ ಋಷಿಯಂ

ಕೆರಿತು ಎಲೆ! ಮಹಾನುಭಾವನೆ! ತಾನುಮೃಗಮಲ್ಲೀಮಾನಿನಿಯು ತೊಡರಿಲ್ಲದಾಲಿಂಗನವ ಮಾಡಲೈತರುವೆ, ತಾನಾರು ನೀನಾರು ನಿಲ್ಲುನಿಲ್ಲೆಂದೆನಲು, ಋಷಿಯೆಂದನೆಲೆ ಮಂದಗಮನೆ ತಾನು ಬರಿದೆಯಾಲಿಂಗನವಮಾಡಬರಲಿಲ್ಲ ಮನಸಿಜನ ಬಾಧೆಯಿಂ ನಿನ್ನೊಡನೆ ಕ್ರೀಡಿಸಲು ಬಂದಿರುವೆನೆಂದು ತನ್ನ ವೃತ್ತಾಂತಮಂವಿಸ್ತರದೊಳೊರೆಯಲು, ಆದೇವಮಾನಿನಿಯು ಮತ್ಸಂಗಮಕ್ಕುಚಿತ ನಿವನೆಂದು ನಿಶ್ಚಯಮಾಡಿ, ದ್ವಾದಶಾಬ್ದಪರ್ಯಂತ ಎನ್ನೊಡನೆ ಕ್ರೀಡಿಸುತ್ತಿರುವೆಯಾದೊಡೆ ಅಂಗೀಕಾರಮಾಡುವೆನು, ಇಲ್ಲದಿರೆಬಂದಂತೆ ಪೋಗೆನಲು, ಆ ಋಷಿಯು ಎಲೈ ಕಾಮಿನಿಯೆ, ನೀನಾರುನಿನ್ನವೃತ್ತಾಂತಮಂಪೇಳೆಂದು ಕೇಳಲು, ಆ ತಿಲೋತ್ತಮೆಯುತನ್ನ ಪೆಸರ್ವೇಳೊರೆದು, ದೂರ್ವಾಸ ಶಾಪದಿಂದಿಳೆಯೊಳಗೆ ಮಾನುಷಮಾನಿನಿಯಾಗಿಬಂದೆನವಧಿದ್ವಾದಶವರ್ಷವೆಂದೆನಲು, ಋಷಿಯು ವಿನಯದಿಂದಏನುಕಾರಣ ಕುಪಿತನಾದನಾಮಹರ್ಷಿಯೆನಲು, ಒಂದುದಿನ ಇಂದ್ರದೇವರ ಸಭೆಗೆಋಷಿಯುದಿಗಂಬರನಾಗಿ ಬರಲವನಂಕಂಡು ತಾವು ನಗಲದಂನೋಡಿ ಕ್ರೋಧದಿಂ ಶಾಪಮನಿತ್ತನವಧಿತೀರಿದಬಳಿಕ ತ್ರುಟಿಕಾಲತಾನಿರುವುದಿಲ್ಲವೆಂದುನುಡಿವ ಮೃದುಭಾಷಿಣಿಯಂನೋಡಿ ಮದನಪೀಡಿತನಾದ ಋಷಿಯೊಡಂಬಟ್ಟು ಆಕೆಯ ಕರಮಂ ಪಿಡಿದು ರಮಿಸಿ, ಈ ನೇತ್ರಾವತೀತೀರದೊಳುಪರ್ಣಶಾಲೆಯಂ ರಚಿಸಿ, ಚಿರಕಾಲನಾನಾವಿಧವಿಷಯಸುಖವನನುಭವಿಸುತಿರಲು, ತಿಲೋತ್ತಮೆಯು ಗರ್ಭಮಂ ಧರಿಸಿ ಪಡೆದಳು ತನ್ನನುತ್ತಮಕ್ಷೇತ್ರದೊಳು ಬಿದ್ದಪರಮೊತ್ಕೃಷ್ಟಬೀಜಮದನೋಘಮಾಗುವುದೇ? ಅನಂತರದೊಳೆನ್ನಪೊರೆಯುತ್ತಲಿರಲು, ಎನ್ನ ಜನನಿಗೆ ದ್ವಾದಶಾಬ್ದವು ತುಂಬಿ ಶಾಪಾಂತಕಾಲಬಂದುದು, ತಾನು ನಾಕಾರೂಢಳಾದೊಡೆಮುಂದೆ ಈ ಬಾಲೆಗಿನ್ನೇನುಗತಿಯೆಂದೆನಲು, ವೈಷಯಿಕ ಸುಖದಿಯತ್ತಮಂತಿಳಿದು ಲಜ್ಜಿತನಾಗಿ, ಯೋಗಾನಂದಲಹರಿಯಂನೆನೆದು, ತಪಸ್ಸಿಗೆ ಪೋಗಲುದ್ಯುಕ್ತನಾಗಿ ಸಮಯಬಂಧಮಂ ಮೀರಲಾರದೆಇದ್ದ ಋಷಿಯು ಎನ್ನ ಜನನಿಯ ನುಡಿಯಕೇಳಿ ಪರಮಸಂತೋಷಭರಿತನಾಗಿ, ಆದೊಡೇನಾದುದೆಂದಾಕ್ಷಣದಿ ತನ್ನತಪಃಪ್ರಭಾವದಿಂವಿಮಾನನಗರಾಪ್ಸರಸ್ತ್ರೀ

ಸಮಾಜಗಳ ತಕ್ಷಣದಿ ನಿರ್ಮಾಣಮುಂಮಾಡಿ, ದಿವದೊಳುಮೇದಿನಿಯೊಳದೃಶ್ಯವಾಗಿರುವಂತೆ ರಾತ್ರಿಯೋಳುದಯಿಸುವಂತೆ ನಗರಾಭಿಮಾನಿದೇವತೆಗೆ ವರವನಿತ್ತು, ದಿವದಲ್ಲಿ ತಾನಿರುವುದಕ್ಕೆ ಅಂತರಿಕ್ಷದೊಳು ಸ್ಥಾನಮಂ ಕಲ್ಪಿಸಿ ತನ್ನ ಸೇವಿಸಿಕೊಂಡಿರುವಂತೆ ಅಪ್ಸರ ಸ್ತ್ರೀಯರಿಗೆ ಆಜ್ಞೆಯನ್ನಿತ್ತು ವತ್ಸ ಕೇಳಪ್ಪ ಸರ್ವಲೋಕಗಳಲ್ಲಿ ಸಂಚಾರಮಾಡುವದಕ್ಕೆ ಕ್ಷಮವಾದ ವಿಮಾನಗಳಿದರಲ್ಲಿ ಕುಳಿತು ಸಂಚಾರಮಾಡುವದು ದಿವದಲ್ಲಿ ಗಗನದಲ್ಲಿರುವ ಸ್ಥಾನಮನ್ನೈದುವುದು ಯಾಮಿನಿಯೊಳೀಪುಟಭೇದನದಲ್ಲಿ ವಾಸಮಾಡುವುದು ಎಂದುಪೇಳಿ ಜೀವಿಸುವದಕ್ಕೆ ಅಕ್ಷಯಪಾತ್ರೆಯನಿತ್ತು ಅಪ್ಸರಸ್ತ್ರೀಯರಂ ತನ್ನಧೀನಮಾಡಿ, ಇನ್ನೆಲ್ಲವೆ ಮೊದಲಾದ ತನ್ನ ಸಂರಕ್ಷಣೆಯಂ ಮಾಡಿಕೊಂಡುಬರುವಂತೆ ತಿರಸ್ಕರಣಿಯೆಂಬ ದೇವತೆಯಂ ತನ್ನ ಸ್ವಾಧೀನಮಾಡಿ ಇತ್ತು, ಅಂಜಬೇಡೆಂದೆನಗೆ ಅಭಯಮನಿತ್ತು ಈ ನಗರಾಭಿಮಾನದೇವತೆಗೆ ದೃಶ್ಯಾದೃಶ್ಯಾವಸ್ಥೆಯಾವನಿಂದ ಪೋಗುವುದೋ ಆತನೇ ನಿನಗೆ ಪತಿಯಾಗುವನು ಆತನ ಕರಗ್ರಹಣಮಂಮಾಡಿ ಸುಖದಲ್ಲಿರುವುದೆಂದು ವರವನಿತ್ತು ತಪೋವನಕ್ಕಭಿಮುಖನಾಗಿಪೊರಡಲು, ಜನನಿಯಾದತಿಲೋತ್ತಮೆಯು ಎನ್ನನೆತ್ತಿ ಮುದ್ದಾಡಿ ಕಂಬನಿದುಂಬಿ ಶಿರವನಾಘ್ರಾಣಿಸಿ ಸಖೀಜನರಿಂದ ಸಂಚಾರಮಾಡುವುದಕ್ಕೆ ತಾನುವಿಮಾನವನಿತ್ತು ಮಾನುಷದೇಹಮಂಬಿಟ್ಟು ನಿಜರೂಪಮನ್ನೈದಿ ತನ್ನಂಕುರಿತುವತ್ಸೆ ಈತನ್ನಮಾನುಷ ಕುಣಪಮಂ ಈ ನಗರದ ದಕ್ಷಿಣ ಭಾಗದಲ್ಲಿರುವ ಶಾಲ್ಮಲೀವೃಕ್ಷದಗ್ರದೊಳಿಟ್ಟು ಪೋಗುವೆನು ನಿನಗಲ್ಲದೀದೇಹಯಕ್ಷರಕ್ಷಃಪಿಶಾಚ ಗರುಡ ಗಂಧರ್ವರಿಗದೃಶ್ಯವಾಗಿರುವುದಿದು ದೇವತಾರಹಸ್ಯಂ, ಸಾಕ್ಷಾತ್ ಗೌರೀಕಟಾಕ್ಷವುಳ್ಳವನೋರ್ವ ಮಹಾನುಭಾವನಾದ ಕ್ಷತ್ರಿಯನು ಬಂದು ಈ ದೇಹಸಂಸ್ಕಾರಮಂ ಮಾಡುವನು. ತಕ್ಷಣದೊಳೀ ವಿಮಾನಂಗಳದೃಶ್ಯವಾಗುವವು. ಆತನೇ ನಿನಗೆ ಪತಿಯಾಗುವನು.ಬಿಡದೆ ನೀನಾತನ ಕರಗ್ರಹಣಮಂಮಾಡೆಂದು ಪೇಳಿ ವಿಮಾನಾರೂಢಳಾಗಿ ತನ್ನನಗಲಲಾರದೆ ಮರುಗುತ್ತು ಕಿಂಚಿದಾಲೋಚನೆಯಂಮಾಡಿ ದಿವ್ಯಾ

ಮ್ಲಾನಕೆನಕಾರವಿಂದ ಮಾಲಿಕೆಯಂ ತನ್ನ ಕಂಠದೊಳ್ಹಾಕಿ ನಾಕಾಭಿ ಮುಖಳಾಗಿ ಗಗನಮಂಸೇರಿದಳು. ತಂದೆ ತಪಕ್ಕೈದಿದನು. ಇದು ಎನ್ನ ವೃತ್ತಾಂತಂ,ಪೇಳದಿರುಮನುಜರಿಗೆ ಪೋಗೆಂದು ವಂದನೆಯಂಮಾಡಲು, ತಾನಾಕೆಗಾಶೀರ್ವಾದಮಂಮಾಡಿ ಆಕೆ ಇತ್ತ ದ್ರವ್ಯರತ್ನಗಳಂ ಪೊತ್ತು, ಅಲ್ಲಿಂದಪೊರಟು ತಾನೈದುವನಿತರೊಳು ಸೂರ್ಯೋದಯಮಾಗಲು ಆನಗ ರಮದೃಶ್ಯಮಾದುದು. ಆ ದಿವ್ಯಮಾನಿನಿಯತಿರಮಣೀಯಮಾದ ಸಖೀ ಜನರನೊಡಗೂಡಿ ವಿಮಾನಗಳನೇರಿಗಗನಕ್ಕೆನಡದರಿಂನೆಂತುಟೋ ಋಷಿ ಯತಪಃಪ್ರಭಾವವೆಂದಾಶ್ಚರ್ಯಯುಕ್ತನಾಗಿ, ಪ್ರಾತಃಕಾಲದೊಳು ತಾ ನು ನೇತ್ರಾವತೀತೀರಕ್ಕೈತಂದು ಸ್ನಾನಸಂಧ್ಯಾವಂದನಾದಿಗಳನಾಚರಿಸಿ, ಅಲ್ಲಿಂದಪೊರಟು ಬಹುದೂರಮಾರ್ಗಮಂ ಕಳೆದು ಸೌವೀರದೇಶಮಂ ಪೊಕ್ಕು ಬರುತೊಂದು ದ್ವಾದಶ ಯೋಜನವಿಶಾಲಮಾದ ವಿಪಿನಮಂಪೊ ಕ್ಕು ಮಾನುಷರಂಕಾಣದೆ ಚಿಂತೆಯಿಂದ ಬರುತಿರಲು. ಆ ಗಹನದೊಳೆ ಈ ರ್ವ ಕ್ಷತ್ರಿಯನು ಪರ್ಣಶಾಲೆಯಂ ಕಟ್ಟಿ ಇರುತಿರಲು ಆ ಪರ್ಣಾಲಯ ಮಂಕಂಡು ತನ್ನೆಡೆಯೊಳಿದ್ದ ರತ್ನವಿತ್ತಂಗಳನಾಪರ್ಣಶಾಲೆಗೆ ನಾತಿದೂರ ದೊಳು ಭೂಮಿಯೊಳು ಸ್ಥಾಪನಮಂಮಾಡಿ, ರಿಕ್ತಹಸ್ತದೊಳುಪರ್ಣ ಶಾಲೆಯಂ ಪೊಕ್ಕು ನೋಡುತ್ತಿರಲು, ಅಲ್ಲಿರುವ ರಾಜರ್ಷಿಯು ತನ್ನಂ ಕಂಡು ಭಕ್ತಿಯಿಂದ ಮಧುಪರ್ಕಾದಿಗಳನಿತ್ತು ಸತ್ಕರಿಸಿ, ಮಣಿದು ಯ ಥೇಚ್ಛವಾಗಿ ಕಂದಮೂಲೋದಕಗಳ ನೀಯಲತ್ಯಂತ ಸ್ವಾದುವಾಗಿರಲು, ಅದಂಭಕ್ಷಿಸುತ ತೃಪ್ತಿಯನೈದಿ, ಪರಮಸಂತೋಷದಿಂದ್ವೀರ್ವರೊಂದಾಗಿ ಕುಳಿತು ಕುಶಲಪ್ರಶ್ನೆಯಂಮಾಡುತ್ತಲಾತನತಿವಿನಯಾದಿಸಂಪದವನೋ ಡಿ, ಆತನು ಸಾಧಾರಣನಾಗಿತೋರದಿರಲು ತಾನಾತನಂಕೇಳದೆನೆಲೈ ಬಾಹು ಜಪ್ರವರ ನಿನ್ನ ಲಕ್ಷಣಮಂನೋಡೆ ಧರಣೀಪತಿಯಾಗಿ ಕಾಣುತಿರುವೆ ನಿನ ಗೀಗಹನದೊಳು ವಾಸಮೇನುಕಾರಣವೆಂದು ಕೇಳಲಾ ರಾಜರ್ಷಿಯು ಅಶ್ರುವಂಬಿಡುತಲತ್ಯಂತ ದುಃಖದಿಂದ್ವಿಜವರನೆ ಕೇಳು, ತಾನು ಚೇರದೇ ಶಾಧಿಪತಿಯು ಎನಗೆ ವೈರಿಯಾದ ಚೋಳದೇಶಾಧಿಪತಿಯು ಪರಾಕ್ರಮ ದಲ್ಲದ್ವಿತೀಯನಾದಕಾರಣ ಯುದ್ಧರಂಗದೊಳಾತನಿಂ ಪರಾಜಯಮನೈದಿ

ತಾಡನಪ್ರಹಾರಮಂತಾಳಲಾರದೆ ಪಲಾಯನಪರಾಯಣನಾಗಿ,ದೇಶಾಂತರ ಮನೈದಲಾಚೋಳನು ತನ್ನರಾಜ್ಯಮನಪಹರಿಸಿ ಸರ್ವಸ್ವಮಂತನ್ನಸ್ವಾಧೀನಮಾಡಿಕೊಳ್ಳಲು, ಅವನಂ ಜಯಿಸುವದಕ್ಕುಪಾಯಮಂ ಕಾಣದೆ ಅರಣ್ಯದೊಳು ಪೊಕ್ಕು ಶಚೀಪತಿಯಂ ಕುರಿತು ಚಿರಕಾಲ ತಪಮಂಮಾಡೆ, ಶಚೀಪತಿಯೈತಂದು ಯಾತಕೆನ್ನಂಕುರಿತು ತಪಮಂ ಗೈವೆ ಎನಲುತಾನು ಕಣ್ದೆರದುನೋಡಿ ಸಾಷ್ಟಾಂಗದಿಂದ ನಮಿಸಿ ಎನ್ನಭಿಪ್ರಾಯಮಂವಿಜ್ಞಾಪನೆಮಾಡಲು, ಸಹಸ್ರಾಕ್ಷನೊಂದುಕ್ಷಣ ನಾಲೋಚನೆಯಂ ಮಾಡಿ ನಿನ್ನ ವೈರಿಯಾದ ಚೋಳನು ಶುಕ್ರಾಚಾರ್ಯನಂಕುರಿತು ತಪಗೈದು ತದ್ದತ್ತವರದಿಂದ ದೃಪ್ತನಾಗಿರುವನದರಿಂದಲವನಂ ಜಯಿಸುವದಸಾಧ್ಯವದಕೊಂದುಪಾಯಮನೊರವೆಕೇಳು, ಪೂರ್ವದಿಕ್ಕಿನೊಳು ಕನಕಾದ್ರಿಯೆಂಬ ಪರ್ವತವಿಹುದು ಆ ಗಿರಿಯೊಳು ಯೋಜನವಿಶಾಲಮಾದ ಗುಹೆಯಿರುವುದಾಗುಹೆಯೊಳೆರಡು ಕಕ್ಷ್ಯಗಳಿಹುವು. ಅದರೊಳಂತರಾಳಕಕ್ಷ್ಯದೊಳು ದಕ್ಷಯಜ್ಞದೊಳು ನಿಜದಯಿತಾವಿನಾಶಕ್ಷುಭಿತ ಧೂರ್ಜಟಿ ಜಟಾಜೂಟದಿಂದುತ್ಪನ್ನನಾದ ಸಕಲಲೋಕಕಭಯಂಕರನಾದ ವೀರಭದ್ರನತ್ಯಂತ ರೋಷಾವೇಶದಿಂಯಜ್ಞಶಾಲೆಯನೈದಿತತ್ಕ್ಷಣದಿದಕ್ಷಪ್ರಜೇಶ್ವರನ ಕಂಧರವಂ ಕಡಿದ ಮಹಾ ಖಡ್ಗವನ್ನು ಆಗುಹಾಂತರಾಳ ಪ್ರಥಮ ಕಕ್ಷ್ಯದೊಳರಿಸಿರುವನಾಖಡ್ಗಂ ಜಾಜ್ವಲ್ಯಮಾನದಹನ ಜ್ವಾಲೆಯಂತೆ ಪ್ರಾಜಿತಮಾಗಿರುವದು. ಅದುಯಾರಿಂಗವಿದಿತಂ ವಿದಿತಮಾದೆಡೆಯು ಸಮೀಪಕ್ಕೆ ಪೋಗಕೊಡದು. ಪೋದಡೆಯು ದೇವಾಸುರರಾದೊಡೆಯುಂ ಸಂಹರಿಸುವುದು. ಅದರಲ್ಲಿ ಸಂಶಯವಿಲ್ಲ. ಆ ಕರಾಳ ಕರವಾಳಂ ನಿನ್ನ ಸ್ವಾಧೀನಮಾಗುವ ಉಪಾಯಮನೊರವೆ. ನೀನು ಆ ರೀತಿಯಿಂ ಪ್ರಯತ್ನಮಂ ಮಾಡಿದೊಡೆ ಖಡ್ಗಂಸ್ವಾಧೀನಮಪ್ಪುದದರಿಂದ ಶತ್ರುಜಯವಹುದು. ಬಹುಮಾತಿನಿಂದೇನು? ಸರ್ವರೂ ನಿನ್ನ ಸ್ವಾಧೀನವಹರು. ಉಪಾಯನೇನೆಂದೊಡೆ ಗೌರೀ ಪ್ರಸಾದಮಾದೊಡೆ ಸ್ವಾಧೀನಮಾಗುವುದೆಂದು ತನ್ನಸಮೀಪಕ್ಕೆ ಕರೆದುಗೌರೀಮಂತ್ರವನ್ನುಪದೇಶಮಾಡಿ ಈ ಮಂತ್ರದಿಂದೇವೀಪ್ರಸಾದಮಂ ಸಂಪಾದಿಸಿ ದ್ವಿತೀಯಕ್ಷ್ಯಕ

ಷ್ಯದೊಳು ಆಖಡ್ಗರಕ್ಷಣಾರ್ಥವಾಗಿ, ವೀರಭದ್ರನಿಂನಿಯಮಿತವಾದ ಮಹಾ ಭೂತಕ್ಕೆ ಅನುರೂಪವಾದ ಬಲಿಯನಿತ್ತೆಯಾದೊಡೆ, ಖಡ್ಗವಿರುವಂತರಾಳಕ್ಕೆ ಬಿಡುವುದು. ಅಲ್ಲಿಂದ ದೇವಿಯಂ ಚೆನ್ನಬಲಮಾಡಿಕೊಂಡೈದಿ ಖಡ್ಗಕ್ಕೆವಂದಿಸಿನುತಿಸಿದೊಡೆ ಸೌಮ್ಯರೂಪದಿಂ ಸ್ವಾಧೀನವಾಗುವುದು. ಅದು ಸ್ವಾಧೀನವಾಗಲು, ಮೂರುಲೋಕವು ನಿನ್ನ ಸ್ವಾಧೀನವಾಗುವದರಲ್ಲಿ ಸಂಶಯವಿಲ್ಲನೆಂದು ಪೇಳುತಂತರ್ಧಾನವನೈದಲು, ಅಲ್ಲಿಂದ ಪೊರಟು ದೇವಿಯಂ ಕುರಿತು ತಪಗೈಯಲೋಸುಗ ಈ ಅರಣ್ಯವಂ ಪ್ರೊಕ್ಕು ಪರ್ಣಶಾಲೆಯಂ ನಿರ್ಮ್ಮಣಮಂಮಾಡಿದೆನು. ಇತಃಪರಗತಪಗೈಯಬೇಕೆಂದು ನಿಶ್ಚಯಮಾಡಿರುವೆ, ಇಂತಪ್ಪ ದುರ್ಗತಿಯು ತನಗೆ ಬಂದಿರುವುದದುಕಾರಣವೀ ಆರಣ್ಯದೊಳಗಿರುವೇನಿದು ಎನ್ನ ವೃತ್ತಾಂತಂ ನಿಮ್ಮ ವೃತ್ತಾಂತವೇಂನೆಂದು ಕೇಳಲು, ತನ್ನ ವೃತ್ತಾಂತವಂ ಯಥಾರ್ಥವಾಗಿ ಪೇಳಿದ ಬಳಿಕ ತಾನೂ ಯಥಾರ್ಥವಾಗಿ ಪೇಳಬೇಕೆಂದು ತನ್ನ ವೃತ್ತಾಂತವಂ ತಿಳಿಸಿ ಮರೆದು ನೇತ್ರಾವತೀತೀರದಾಶ್ಚರ್ಯವಂ ನೀಕ್ಷತ್ತು ಬಿಡದೇ ಪೇಳುತ್ತಮಿಗಿಯುವನಿತರೊಳು ಆ ಮಹಾಗಹನದೊಳೊಂದು ವ್ಯಾಘ್ರಂ ಮಚಿಸುತ್ತಿರ್ವ್ವರಂ ಸಂಹಾರವಂ ಮಾಡಲು, ಆ ಕ್ಷಣನೇ ದುರ್ಮ್ಮರಣವಾದುದರಿಂದಾತಂಗೆ ಪಿಶಾಚತ್ವವಾತ್ರಂಬಂದುದು. ತಾನುಶಾಪಗ್ರಸ್ತನಾದುದರಿಂದ ಬ್ರಹ್ಮರಾಕ್ಷಸಶರೀರಂ ಬಂದುದು, ರಾಜಕುಲಕಂಠೀರವನೆ,ಬಹುಕಾಲದಿಂದೀಪರಿಯೊಳಿಹೆನು, ಆ ವಿತ್ತರತ್ನಂಗಳ ಸ್ಥಾಪನೆಯಮಾಡಿರುವತಾಣದೊಳು ಪೂರ್ವದೊಳೋರ್ವಚಾದ್ರಕುಲೋತ್ಪನ್ನನಾದ ಮಹೀಪತಿಯು ಪಟ್ಟಣವಕಟ್ಟವನಮಂ ಜನಪದವಂ ಮಾಡಿ ಆ ನಗರಕ್ಕೆ ಮಿಥಿಲಾ ಎಂಬ ನಾಮವನಿಟ್ಟು, ರಾಜ್ಯಮಂಮಾಡಿದನಾತನವಂಶಜನೇ ಈಗಲಾನಗರದೊಳು ರಾಜ್ಯಮಂಪಾಲಿಸುತ್ತಿರುವ ನಾತನರಮನೆಯ ಭೂಮಿಯೊಳೆಸಿಕ್ಕಿರುವುದೆನ್ನ ವಿತ್ತವಾದ್ರವ್ಯವಂ ಸತ್ಯಸಂಧನಾದನೀನು ಧರ್ಮ್ಮವ್ಯಯಮಂಮಾಡಿ, ತತ್ಪುಣ್ಯವನೆನಗೆ ಧಾರೆಯನೆರದೆಯಾದೊಡೆ ಈ ಅತ್ಯಂತದುಷ್ಟವಾದ ಲೋಕೋದ್ವಿಘ್ನಕರವಾದ ರಾಕ್ಷಸಜನ್ಮಪೋಗುವುದು. ಪ್ರತಿಗ್ರಹ

ಮಾಡಿದರ್ಥಂ ಧರ್ಮ ವ್ಯಯವಾದಲ್ಲದೆ ಈ ಜನ್ಮ ಪರಿಹಾರವಾಗುವದಿಲ್ಲ, ಈ ಕಾರ್ಯವಿನ್ನೊರ್ವರಿಂದ ಸಾಧ್ಯವುದುಕಾರಣ ನಿನ್ನ ಶರಣಾಗತನಾದೆನೆಂದು ಪೇಳಲು, ಸಹಸ್ರಾಯು ಕೇಳಿ ವಿಸ್ಮಿತನಾಗಿ ಮನದೊಳಾಲೋಚನೆಯಂಮಾಡಿ, ಮಹಾನುಭಾವನಾದ ಸಕಲವಿದ್ಯಾವಿಶಾರದನಾದ ಈ ದಿವ್ಯವಿಪ್ರವರಂಗೆ ಕರ್ಮವಶದಿಂದೀದುಷ್ಟಶರೀರಬಂದಿರುವದುಇದಂ ಪರಿಹಾರಮಾಡಲೀಶ್ವರಪ್ರೀತಿಯುಂಟು. ತನಗೆ ಸಕಲವಿದ್ಯಾ ಪ್ರಾಪ್ತಿಯುಹುದು ಆದೊಡಸಾಧ್ಯವಾಗಿರುವದೇನುಪಾಯಮಂಮಾಡುವೆನೆಂದಾಲೋಚಿಸಿ, ಎಲೈ ವಿದ್ಯಾನಿಧಿಯೇ, ಕೇಳು, ಪ್ರಬಲನಾದ ಮಹೀಪತಿಯ ಗೃಹಾಂತರಾಳದೊಳು ನಿನ್ನ ವಿತ್ತ ಸ್ಥಾಪಿತವಾಗಿರುವದು, ತತ್ಪರಾಜಯವಾದಹೊರತು ಸ್ವಾಧೀನವಾಗದು ಎನಗೆ ರಥವಿಲ್ಲ ಧನುರ್ಬಾಣನಿಷಂಗಗಳಿಲ್ಲ ಸೇನೆ ಮೊದಲೇ ಇಲ್ಲ, ಇಂತಪ್ಪ ಎನಗೆ ಆ ದ್ರವ್ಯವೆಂತು ಸ್ವಾಧೀನನಾಗಿ ಬರುವುದೆಂದಾಲೋಚಿಸುವೆನೆನಲು, ಆ ದ್ವಿಜಾಸುರನು ಕೈಮುಗಿದು ಎಲೈ ಮಹಾನುಭಾವನೆ, ಕೇಳು ಲೋಕೈಕವೀರನಾದ ಸಾಕ್ಷಾತ್ ದಾಕ್ಷಾಯಣೀ ಪ್ರಸಾದೈಕ ಸಹಾಯಮುಳ್ಳ ನಿನಗಸಾಧ್ಯವಾದ ಕಾರ್ಯವೀಲೋಕತ್ರಯದೊಳುಂಟೆ ತಿಳಿದಿರುವೆನೆನ್ನಂವಂಚಿಸಬೇಡ, ಎನ್ನನ್ನುದ್ಧಾರಮಾಡೆಂದು ಬಹುವಿಧಪ್ರಾರ್ಥನೆಯಂಮಾಡಿ, ಪ್ರಥಮದೊಳು ಪ್ರಮಥನಾಥನಾದ ವೀರಭದ್ರನ ಕರಾಳಖಡ್ಗಮಂ ಸ್ವಾಧೀನಮಾಡಿಕೊಂಡು ಅಲ್ಲಿಂದಮುಂದೆ ಮಿಥಿಲಾಪುರಿಗೆ ದಯಮಾಡಿ ತನ್ನನ್ನುಧ್ಧಾರಮಂ ಮಾಡಬೇಕೆಂದೆನಲು, ಕರುಣದಿಂದಭಯವನಿತ್ತು ಪೋಗುವೆನೆಂದು ಎದ್ದು ಪ್ರಣಾಮಮಂಮಾಡಲು ರಾಕ್ಷಸನು ಅತ್ಯಂತ ಸಂತೋಷದಿಂ ಬಹುಪ್ರಕಾರದಿಂ ಹರಸಿ ಕಳುಹಿದನೆಂಬಲ್ಲಿಗೆ ಚತುರ್ಥೋಧ್ಯಾಯಃ. * * * * * * * *

## **ಪಂಚಮಾಧ್ಯಾಯಂ.**

ಅನಂತರದೊಳಲ್ಲಿಂದಪೊರಟು ಬಹುದೂರಮಾರ್ಗಮಂನಡೆದು, ಮಾಸದ್ವಯಾನಂತರದೊಳಾಕನಕಾಚಲಮಂಕಂಡು ಮತ್ತಲ್ಲಿಗುಹದ್ವಾರಮಂ

ಪ್ರೊಕ್ಕು, ಅತಿಭಯಂಕರವಾದಗುಹಾಂತರಾಳದೊಳು ನಿರ್ಭೀತನಾಗಿಬ ರುತ್ತಿರುವ ರಾಜಕುಮಾರನಂಕಂಡು, ಪ್ರಾವಾರ್ಂತರಾಳದೊಳು ಕಾದಿರುವ ಮಹಾಭೂತನು ಬಹುಕಾಲದಿಂಕ್ಷುಧಿತನಾಗಿರುವೆನಗೆ ದೈವಾನುಗ್ರಹ ದಿಂದ ಸಲಕ್ಷಣವಾದ ಆಹಾರದೊರೆತುದೆಂದತ್ಯಂತವೋದದಿಂ ನಿಜರೂ ಪವಂ ಧರಿಸಿ, ಇದಿರ್ಗೆಬಂದು ಗರ್ಜಿಸಿ ನೀನಾರೆಂದುಕೇಳೆ, ಸಹಸ್ರಾ ಯುನಸುನಗುತ ತನ್ನ ವೃತ್ತಾಂತವಂಪೇಳಿ ಖಡ್ಗಾರ್ಥವಾಗಿ ಬಂದಿ ರುವೆನೆಂದು ನುಡಿಯಲು, ಆ ಮಹಾಭೂತವು ದಿಕ್ಕುಗಾಣದೆ ಬಂದವನಲ್ಲ ಸಾಕ್ಷಾತ್ ದೇವಾಂಶನೋಪಾದಿಯಲ್ಲಿ ಕಾಣುತಿಹನು. ಮಹಾಸತ್ವವು ಳ್ಳವನಾಗಿತೋರುತಿದೆ ದೇವೀಕಟಾಕ್ಷದಿಂ ಕವಚಿತನಾದವನಾದಕಾರಣ ಖಡ್ಗಾಪೇಕ್ಷೆಯಿಂದಲೀಗುಹಾಂತರಾಳವಂ ಪ್ರೊಕ್ಕಿರುವನು. ಸಾಮಾನ್ಯ ರಿಗೀಧೈರ್ಯಸ್ಥೈರ್ಯವೆಲ್ಲಿಹುದು, ಅದರಿಂದಿವನೊಡನೆ ಬರಿದೆ ಕಣದಾಡಬಾ ರದು, ಸ್ವಕಾರ್ಯವು ಕೆಟ್ಟುಹೋದೀತೆಂದು ಮನದಿನಿಶ್ಚಯಮಾಡಿ.ಎಲೈ ರಾಜಕುಮಾರನೆ ಕೇಳು ಎನಗನುರೂಪವಾದ ಬಲಿಯಂ ವಿಧ್ಯುಕ್ತವಾ ಗಿತ್ತೆಯಾದೊಡೆ ಬಿಡುವೆನಿಲ್ಲದಿದ್ದರೆ ಬಂದಪಥವಿಡಿದು ಪೋಗೆನಲು, ಸಹಸ್ರಾಯುವದಂಕೇಳಿ ಹಾಗೆಆಗಲೆಂದೆ.ಅಡುಬಟ್ಟು ಹಿಂತಿರುಗಿ, ಆ ಮ ಹಾಗಹನದೊಳು ಪರ್ವತಾಕಾರವಾದ ಒಂದು ಮತ್ತೇಭನತ್ಯಂತ ಬಲಗರ್ವಿತನಾಗಿ ಅರಣ್ಯದೊಳಗಿರುವ ಸಕಲಜಂತುಗಳನೊರಸುತ್ತ ಪಾದವಿನ್ಯಾಸದೊಳು ಭೂಮಿಯನಲ್ಲಾಡಿಸುತಿರಲು ದಿಕ್ಕುಂಭಿಯಂತೆ ಬರುವಕರಿಯಂಕಂಡು, ಸಹಸ್ರಾಯು ವಿಸ್ಮಿತನಾಗಿ ಧರಣಿಯೊಳು ಈ ಪರಿಯೊಳಿರುವಗಜವುಂಟೇ ಎಂದು ತಲೆದೂಗಿದೆವೀಪ್ರಸಾದದಿಂದೀಹ ಸ್ತಿದೊರೆದುದು. ಇದನೆ ಭೂತಬಲಿಯ ಮಾಡುವೆನೆಂದು ಮನದೊಳಾ ಲೋಚನೆಯಂಮಾಡಿ, ನಿರ್ಭೀತನಾಗಿ ಹಸ್ತಿಯಡೆಗೈದಿ ತತ್ಪುರೋಭಾ ಗದೊಳು ಕೈಮುಗಿದು ನಿಂದಿರಲು, ಆ ಮಹಾಗಜವು ನೋಡಿ ವಿಸ್ಮಿತ ನಾಗಿ ಸಿಂಹಾದಿ ಜಂತುಗಳು ತನಗೆ ಇದಿರಾಗಲಂಜುವರು ಈ ಮಾನುಷ ಪೋತಂ ನಿರ್ಭಯದಿಂದ ಬರುವನೇನಾಶ್ಚರ್ಯವೋ ಎಂದು ಮೌನದೊ ಳಿರಲು, ಸಹಸ್ರಾಯುವಾಗಜಸಮೀಪಕ್ಕೆಬಂದು ಭಯಗ್ರಸ್ತನಾಗಿ ಶರ

ಣಾಗತಿಗೆ ಬರುವಪ್ಪೊಲು ಪಿಂತಿರುಗಿ ನೋಡುತ, ಅಂಜಲಿಯಂಕಟ್ಟಿ ಇದಿ
ರ್ಗೆ ನಿಂದಿರಲು, ಆ ಕರಿಯು ಈತನಂನೋಡಿ ಯಾರು ನೀನುನನಿಗೆ
ಮತ್ತಾರಿಂದ ಭಯವೆನ್ನಮರೆಯಂಪ್ರೊಕ್ಕವನಂತೆ ಎನ್ನಿದಿರ್ಗೆ ಅಂಜಲಿ
ಬದ್ಧನಾಗಿ ನಿಂದಿರುವೆ ನೀನೆಲ್ಲಿಂದಬಂದೆ ಈ ಮಹಾಗಹನಮನೇನುಕಾ
ರಣ ಪ್ರವೇಶಮಂ ಮಾಡಿದೆ ಪೇಳೆಂದೆನಲು, ಸಹಸ್ರಾಯುವಾಹಸ್ತಿ
ಯಂನೋಡಿ ತಾನು ಕೋಸಲದೇಶಾಧಿಪತಿಯಕುಮಾರ ಸಹಸ್ರಾಯು
ವೆಂದೆನ್ನನಾಮ ಗಜರಾಜನೇ ಕೇಳು ತೀರ್ಥಯಾತ್ರಾರ್ಥವಾಗಿ ದೇಶ
ದೇಶಂಗಳಂ ತಿರುಗುತ್ತಬರುತಿರಲು, ಪಥತಪ್ಪಿ ವಿಪಿನಮಂ ಪೊಕ್ಕು
ಮಾರ್ಗಮನರಸುತ್ತಲಿರುತಿರಲು; ಒಂದುಮಹೋಗ್ರನಾದ ದುಷ್ಟಕೇಸ
ರಿಯು ಬಂದು ಎನ್ನಂಸಂಹಾರಮಂಮಾಡುವೆನೆಂದುಮಹಾಟ್ಟಹಾಸಮಂ
ಮಾಡುತಟ್ಟಿಕೊಂಡುಬರಲು, ಏನೆಂಬೆಗಜರಾಜ, ಯಾವದಾದರೂ ಒಂ
ದುಜಂತುಮಾತ್ರಸ್ವಾಧೀನವಾಗಿ ದೊರಕಿದ್ದೊಡೆ ಸಿಂಹಮಂ ಸುಟ್ಟು
ಬೂದಿಯುಮಾಡಿಬಿಡುತಿದ್ದೆನಷ್ಟುಮಾತ್ರ ದೊರೆಯದೇ ಹೋದಕಾರಣ
ಏನುಮಾಡುವೆನೆಂದು ದೆಶೆದೆಶೆಗಳಿಗೆ ಓಡುತಿರೆ, ಬಿಡದೆ ಬೆನ್ನಟ್ಟಿ ಸಂಹಾ
ರಮಂಮಾಡುವನಿತರೊಳು ದೈವಾನುಗತಿಯಿಂದ ನಿನ್ನಾಗಮನಮಂಕಂಡು
ನಿನ್ನ ಶೌರ್ಯೋದ್ಯಮ ಪರಾಕ್ರಮಕಂಜಿ ಎನ್ನಂಬಿಟ್ಟು ಈ ಪರ್ವತಕ್ಕೆ
ದಕ್ಷಿಣಭಾಗದಲ್ಲಿರುವ ಗುಹೆಯಂಪ್ರೊಗಲು ನಿನ್ನದೆಸೆಯಿಂದ ಪ್ರಾಣೋ
ದ್ಧಾರಮಾದುದರಿಂದ ನಿನಗೆ ಶರಣಾಗತನಾಗಿ ವಂದನೆಯಂ ಮಾಡಿ ಪೋ
ಗುವೆನೆಂದು ನಿನ್ನ ಸಮೀಪಕ್ಕೆ ಬಂದೆನಪ್ಪಣೆಗೊಡಲು ಮುಂದೆ ತೀರ್ಥ
ಯಾತ್ರಾರ್ಥವಾಗಿ ಪೋಗುವೆನೆಂದು ನುಡಿಯಲು, ಆ ಮಹಾಹಸ್ತಿಯು
ರಾಜಕುಮಾರನನುಡಿಯಂಕೇಳಿ, ಈತನ ವಂಚನೆಯನರಿಯದೆ ಭಯ
ಯುಕ್ತನಾಗಿ, ಎಲೈ ರಾಜಕುಮಾರನೆ ಆ ಕೇಸರಿ ಪೋದಮಾರ್ಗಮಂ
ತೋರಿಸಿದೆಯಾದೊಡೆ, ಆ ಮಾರ್ಗಮಂಬಿಟ್ಟು ಮಾರ್ಗಾಂತರದಿಂದಒಂ
ನ್ನೊಂದುವನಾಂತರಕ್ಕೆ ಪೋಗುವೆನೆಂದು ಭಯಾತುರನಾಗಿ ನುಡಿಯಲ
ದಂಕೇಳಿ, ಎಲೈ ಗಜರಾಜನೆಕೇಳು ನಿನ್ನಂಕಂಡಂಜಿ ಗುಹೆಯಂಪೊಕ್ಕ
ಕೇಸರಿಗೆ ನೀನಂಜಿವನಾಂತರಕ್ಕೆ ಪೋಗುವೆ ಏತಕೆ ಧೈರ್ಯಮಂಮಾಡಿ

ಎನ್ನೊಡನೆಬಂದೆಯಾದೊಡೆ, ನಿನ್ನಿಂದಕೇಸರಿಯಸಂಹಾರವುಂಮಾಡಿಸು ನೆ ನೆನ್ನ ಸಾಹಸವುಂ ನೋಡೆಂದು ನುಡಿವ ಕುಮಾರನಂನೋಡಿ, ಮಂ ದಮತಿಯಾದ ಗಜವು ತನ್ನಿಂದ ಸಿಂಹನುಂ ಕೊಲಿಸುವುದೆಂತು ಪೇಳೆಂ ದು ಕೇಳಲು, ಸಹಸ್ರಾಯುವು ಮಾರ್ಗಕ್ಕೆಬಂದುದೆನ್ನಕಾರ್ಯಂಕೂಡಬ ರುವಂತೆ ತೋರುತಿದೆ, ಎಂದು ಉತ್ಸಾಹದಿಂ ಗಜದೊಡನೆ ಕ್ರಿಯಾವುಂ ತ್ರಶಕ್ತಿಯಿಂಕೊಲಿಸುವೆನು ನೋಡೆಂದೆನಲು ಆದಂತಿಯು ಎಂತಾದೊಡೆ ಯುಂ ಶತ್ರುಸಂಹಾರವಾಗುವುದೆ ತನಗಿಷ್ಟವೆಂದು ಅಂಗೀಕರಿಸಲು, ಸಹಸ್ರಾಯುವು ತಾನು ನಿರ್ಮಲೋದಕದಲ್ಲಿ ಸ್ನಾನವಂಮಾಡಿ, ಆಮಾ ತಂಗವುಂಗವುಂತೊಳೆದು ರಕ್ತಪುಷ್ಪಮಾಲಿಕೆಯಿಂದಲಂಕರಿಸಿ, ಆಪಾದ ಮಸ್ತಕವಂ ಮುಟ್ಟಮಂತ್ರಿಸುವನಂತೆ ಭೂತಬಲ್ಯರ್ಥವಾಗಿ ಸಂಕ ಲ್ಪವಂಮಾಡಿ, ದಂತವುಂಪಿಡಿದು ಗಜವನೊಡಗೊಂಡು ಗುಹಾದ್ವಾರದಲ್ಲಿ ನಿಲ್ಲಿಸಿ; ಸಿಂಹವೆಲ್ಲಿರುವದೋ ಏನುಮಾಡುವುದೋ ನೋಡಿಬರುವೆನೆಂ ದು ಗಜದೊಡನೆ ಪೇಳಿ ತಾನೊಳಪೊಕ್ಕು, ಮಹಾಭೂತನುಂಕರೆದು ಸಂಕಲ್ಪಪೂರ್ವಕವಾಗಿ ಅರ್ಚನೆಯುಂಮಾಡಿ, ಬಲಿಯುಂ ತಂದಿರುವೆ ಕ್ಷ ಣಾರ್ಧದಲ್ಲಿ ಸಂಹರಿಸಿ ಭಕ್ಷಿಸುವುದೆಂದು ಭೂತಕ್ಕೆ ಪೇಳುತಲ್ಲಿಂದ ಗು ಹಾದ್ವಹಿರ್ಭಾಗಕ್ಕೈತಂದು ಹಸ್ತಿಯೊಡನೆ ಕೇಸರಿಯು ಮಾರ್ಗಶ್ರಮ ದಿಮಲಗಿರುವುದಿದು ಸಮಯತಾನು ನಿನಗೆ ಸಹಾಯನಾಗಿಬರುವೆ ನೀನಂ ಜಬೇಡೆಂದು ಪೇಳಿ, ದಂತವುಂಪಿಡಿದು ಗುಹಾಂತರಾಳಕ್ಕೆ ಕರದೊಯ್ಯ ಲು, ಆ ಮಹಾಭೂತವು ರಕ್ತಮಾಲ್ಯಗಳಿಂದಲಂಕೃತಮಾದ ಪರ್ವತೋ ಪಮಮಾದ ಮತ್ತಮಾತಂಗವುಂ ಕಂಡು, ಪರಮಸಂತೋಷದಿಂಬರಲು, ಇದಕೊ ಬಲಿಯೆಂದು ಪೇಳಿತಾನು ಕಣ್ಣುಮರೆಯಾಗಲು, ಮಹಾಭೂತ ಪಾರ್ಭಟಿಸಿ ಮತ್ತಮಾತಂಗವುಂಬಡಿದು ಯಥೇಚ್ಛರಕ್ತಪಾನವಂಮಾಡಿ ತನಗನುರೂಪಮಾದ ಬಲಿಯನಿತ್ತ ಸಹಸ್ರಾಯುವಂ ಅಡಿಗಡಿಗೆ ಪೊಗ ಳುತ್ತ ವಿಶಿಷ್ಟ ಗಜದೇಹವುಂ ಭಕ್ಷಿಸಿ ಪರಮಾಹ್ಲಾದಭರಿತನಾಗಿವೀ ರಭದ್ರನಿದ್ದೆಡೆಗೆ ನಡೆಯುತ್ತಿರಲು, ಇತ್ತಲಾ ಸಹಸ್ರಾಯುವು ಅತ್ಯಂತ ಸಂಭ್ರಮದಿಂದ ಖಡ್ಗಸ್ವಾಧೀನವಾದುದೆಂದುನಿಶ್ಚೈಸಿದ್ವಿತೀಯಾಂತರಾ

ಳಕ್ಕೆ ಪೋಗಲುದ್ಯುಕ್ತನಾಗಿ ಗಂಗಾಧರಾಂಗನಾಪಾಂಗತರಂಗಗಳಿಂದ
ಕವಚಿತ ಸರ್ವಾಂಗಮುಳ್ಳ ಸಹಸ್ರಾಯುವತಿನಿರ್ಭಯದಿಂದ ಅಡಿಗಡಿಗೆ
ವಂದಿಸುತ ಬಹುವಿಧ ಸ್ತೋತ್ರಮಂಮಾಡುತ ದ್ವಿತೀಯಾಂತರಾಳ
ಮಂಪೊಕ್ಕು, ಮಧುಮಾಸಮಧ್ಯಾಹ್ನಗತಮಾರ್ತಾಂಡನದ್ಯುತಿಯಂತೆ
ಅವಿಷಹ್ಯಮಾನ ಖಡ್ಗ ಪ್ರಭಾಪಟಲದಿಂದೀಷನ್ಮುಕುಳಿತನಯನದ್ವಯ
ಮುಳ್ಳವನಾಗಿ, ನಿಂತು ಮೆಲ್ಲಮೆಲ್ಲನೆ ಕಂದೆರದು ನೋಡಿದನಾ ಖಡ್ಗಮನದೆಂ
ತಿರ್ದುದೆನೆ, ಯುಗವತ್ಸಕಲ ಭುವನಕಬಳೀಕರಣ ಸಮುತ್ಸರ್ಪದತಿಕಠೋ
ರಸಂವರ್ತ ಸಮಯಕುಪಿತ ಧೂರ್ಜಟಿ ನಿಟಿಲನಯನೋದ್ಗತಹುತಾಶ
ಜ್ವಾಲೆಯಂತೆಯುಂ, ಅಕಾರ್ಯಕರಣವಿಚಕ್ಷಣದಕ್ಷಪ್ರಜೇಶ ನಿರ್ವ್ಯಾಜ
ಕೃತಾಗಃಪರಂಪರಾಜನಿತ ರೋಷಾಮರ್ಷತೃಷಾಪರವಶತಯಾ ತದೀ
ಯಾಗಾಧ ಕುಕ್ಷಿಪೂರಿತ ಶೋಣಿತಹ್ರದಪಿಪಾಸಾಪ್ರಸಾರಿತ ಕೃತಾಂತ
ಹರದುರಂತ ಜಿಹ್ವೆಯಂತೆಯುಂ, ನಿಜಪ್ರತಾಪ ವಿದ್ರಾವಿತ ಗೌರೀಜನ
ಕ ಮಹಾಧ್ವರ ಸಮಾಗತದೇವತಾಗಣ ವೀರಭದ್ರ ಭುಜಾಕ್ರಾಂತವಿ
ಜಯಲಕ್ಷ್ಮೀದುರಾಸದವೇಣೀಲತೆಯಂತೆ, ಸುರುಚಿರವಾದ ಮಹಾಕರಾ
ಳ ಕರವಾಳಮಂ ಕಂಡು, ವಿಸ್ಮಿತನಾಗಿ ಮುಂದಕ್ಕಡಿಯಿಡಲಂಜಿ ಗೋತ್ರ
ಸುತಾಚರಣ ಕಮಲಯುಗಳ ಧ್ಯಾನಮಂಮಾಡಿ, ಹೃದಯಾರವಿಂದದೊ
ಳು ಮಾನಸಪೂಜೆಯಂ ಯಥಾವಿಧಿಯಿಂದ ಮಾಡಿ ಕಂದೆರದು ಖಡ್ಗರಾ
ಜನಂ ಸ್ತುತಿಗೈವುತ್ತ ಮೆಲ್ಲಮೆಲ್ಲನೆ ಮುಂದಕ್ಕಡಿಯಿಡಲು, ಆ ಮಹಾತ
ರವಾರಿ ವಿಮಲಕರವಾರಿಧಾರಯಂತೆ ಸೌಮ್ಯವಾಗಿ ತೋರಲುತ್ಸಾಹ
ದಿಂದೆಡೆಗೈದಿ, ಸಾಷ್ಟಾಂಗದಿಂ ನಮಿಸಿ ಕೈನೀಡೆ, ಸುಂದರತರಕುಂದಕು
ಸುಮಮಾಲಿಕೆಯಂತೆ ಕೈಗಳ ಪಟ್ಟುಬರಲು, ಆ ಮಹಾದೇವಿಯನುಗ್ರ
ಹದಿಂದ ಲೋಕತ್ರಯಂ ತನಗೆ ವಶವಾದುದೆಂದು ಖಡ್ಗಮಂ ಕರದೊ
ಳಾಂತು, ಮನಮುಳುಗಿದುತ್ಸಾಹದಿಂದ ಬಹಿರ್ಭಾಗಕ್ಕೈತಂದು ಗುಹಾ
ದ್ವಾರಮಂ ಸ್ಥೂಲವಾದ ಶಿಲೆಯಿಂಮುಚ್ಚಿ ಪೊರಮಟ್ಟು ನಂಬಿಕಾಚರಣಾ
ನುಗ್ರಹಮುಳ್ಳವರಿಗಿದೇನಚ್ಚರಿಯೆ ಕೇಳರಸ, ಅನಂತರದೊಳಾಸಹ
ಸ್ರಾಯುಮನದೊಳಾಲೋಚನೆಯಮಾಡಿ, ಮಿಥಿಲಾನಗರಮಂ ಪೊಕ್ಕು

ಬರಲುದ್ಯುಕ್ತನಾಗಿ ಅಲ್ಲಿಂದಪ್ರೊರಟುಬರುವದೇಶವಂದಾಂಟಿ ತದ್ದೇಶದೊಳು ಬರುತಿರಲು, ಒಂದುದಿನಪಥಿಕಜನರೊದಗಲವರೊಡನೆ ಮಾತಾಡುತ್ತೈತರುತಿರಲು ಅಸ್ತಮಯ ಸಮಯಮಾಗುತಿರಲು, ಪಥಿಕಜನರುಭಯದಿಂದ ನುಡಿದರೆಲೈ ರಾಜಕುಮಾರ ರವಿಯು ಚರಮಾಚಲವನವಲಂಬಿಸುತ್ತಿಹನು ಜವದಿಂದ ನಗರಮನೈದಬೇಕೆನಲು, ಸಹಸ್ರಾಯುವದೇಕೆಂದುಕೇಳಲು ಈ ನಗರದ ಬಹಿರ್ಭಾಗದೊಳ್ ಒಂದು ಕೇಸರಿಯು ವಾಸಮಂಮಾಡಿಕೊಂಡಿರುವುದು. ಆ ಹರಿಯುಸಂಹಾರಮಂಮಾಡಲುದ್ಯುಕ್ತನಾಗಿ ಈ ದೇಶಾಧಿಪತಿಯು ಸೇನಾಸಮೇತನಾಗಿ ಇದಿರಾಗಲು, ಆ ಪಂಚಾಸ್ಯನತ್ಯಂತ ಕ್ರೋಧಯುಕ್ತನಾಗಿ ಸೇನೆಯಂ ಸಂಹರಿಸಿ ನೃಪತಿಗಿದಿರಾಗಿ ಸರ್ವಶಸ್ತ್ರಾಸ್ತ್ರಗಳಿಗೀಷತ್ತು ಭಯಗೊಳ್ಳದೆ ನರಪತಿಯ ಸಂಹಾರಮಂಮಾಡಲೈತರಲು, ಆ ಕಂಠೀರವನಾರ್ಭಟೆಗೆ ನಿಲ್ಲಲಾರದೆ ಪುರಮನೈದಿದನು. ತದಾದಿಯಾಗಿ ಆ ಮೃಗಪತಿಯು ನಗರೋಪವನದಲ್ಲಿ ವಾಸಮಮಾಡಿಕೊಂಡಿರುವುದು, ಆ ಕೇಸರಿಯು ಅಸ್ತಮಯಮಾಗುವುದುಂ ನಗರದ ಸುತ್ತಲು ಸಂಚಾರಮಾಡುತ ಪ್ರಾಣಿಮಾತ್ರಇದಿರಾದರೆಸಂಹಾರಮಮಾಡುವುದು, ಅದರಿಂದ ಅಸ್ತಮಯಾತ್ಪೂರ್ವದಲ್ಲಿ ಪುರದ್ವಾರಮಂ ಬಂಧಿಸುವರದರಿಂದ ತ್ವರೆಮಾಡಬೇಕೆಂದು ನುಡಿದೆವೆನಲು, ರಾಜಕುಮಾರನು ಮನದೊಳಾಲೋಚನೆಯಮಾಡಿ, ಈ ನರಪತಿಯನುಪಕಾರಮುಖದಿಂದ ಸ್ವಾಧೀನಮಾಡಿಕೊಳ್ಳಲುಪಾಯದೊರೆತುದೆಂದು ನಿಶ್ಚಯಮಾಡಿ ಪುರದ್ವಾರದೆಡೆಗೈದುವನಿತರೊಳ್ ಆ ದ್ವಾರಪಾಲಕರು ಪುರದ್ವಾರಕವಾಟಮಂ ಬಂಧಿಸುತ್ತಿರಲು, ಸಹಸ್ರಾಯುವವರಂಕರೆದು ಅಸ್ತಮಯಾತ್ಪೂರ್ವದಲ್ಲಿ ಪುರದ್ವಾರಮಂ ಏಕೆ ಹಾಕುವಿರೆನಲು, ದ್ವಾರಪಾಲಕರು ಕೇಸರಿಯಭಯದಿಂದೆನಲು, ರಾಜಕುಮಾರನು ಈ ನಗರದೊಳ್ ಕ್ಷತ್ರಿಯನಿಲ್ಲವೋ ಏನೆಂದು ಕೇಳಲು, ದ್ವಾರಪಾಲಕರು ಈ ರಾಜಕುಮಾರನಂಕಂಡು ವಿಸ್ಮಿತರಾಗಿ ಎಲೈ ರಾಜಕುಮಾರನೇ ಕೇಳ್ ಮಾತಾಡುವರೆ ಸಮಯಮಲ್ಲಿದು ಕೇಸರಿಯಾಗಮನಕಾಲಬಂದುದುಜವದೊಳೊಳಗೈದಿದರೆ ಕವಾಟಮಂಹಾಕುವೆವೆಂದುನುಡಿಯಲು, ಸಹಸ್ರಾಯು ಪಾಮರರೊಳಧಿಕೋ

ಕ್ತಿಯುಕ್ತಮಲ್ಲೆಂದು ಒಳಪೊಕ್ಕು ವಾಸಮಾಡುವದಕ್ಕೆ ನಿಲಯಮನ ರಸುತ್ತ ಬೀದಿಯೊಳು ಓರ್ವ ವೃದ್ಧಳಾದಜ್ಜಿ ತನ್ನಾಲಯದ್ವಾರದೊಳು ನಿಂದಿರಲು ಅವಳನೆಡೆಗೇಳೆ ವೃದ್ಧಬ್ರಾಹ್ಮಣಿಯು ಸುಭಗನಂನೋಡಿಮಮತೆಯಿಂದವಶ್ಯವೆನ್ನಾಲಯದೊಳಿಳಿಯಬೇಕೆನುತ ಬಹುಪ್ರಕಾರವಾಗಿ ಪ್ರಾರ್ಥನೆಯಂಮಾಡಲು, ಆಕೆಯಾಲಯದೊಳಪೊಕ್ಕು ನಿರ್ಮಲವಾಗಿ ವಿಜನವಾಗಿ ಮನೋಹರವಾಗಿರಲು, ಜರಠೆಯಂಕರೆದು ಭೋಜನಾದಿಗಳಿಗನುಕೂಲಮಾಡೆಂದು ತದುಪಯುಕ್ತವಾದ ದ್ರವ್ಯಮನೀಯಲು, ಆ ಮುದುಕಿ ಸತ್ವರದೊಳನುಕೂಲಮಂಮಾಡೆ ಸ್ನಾನಭೋಜನಮಾಡಿ ವಿಗತಮಾರ್ಗಗ್ಲಾನಿಯುಳ್ಳವನಾಗಿ ಈ ಪುರದ ವೃತ್ತಾಂತವೇನೆಂದು ಮುದಕಿಯಂಕೇಳಲು, ಆ ಮುದುಕಿಯು ರಾಜಕುಮಾರನೇ ಕೇಳು ಈ ಮಹೀಪತಿಗೆ ಪುತ್ರರಿಲ್ಲದರಿಂದ ವಿಪ್ರವರರಂ ಕರಸಿ ಬಹುವಿಧೋಪಾಯದಿಂದವರನುಗ್ರಹವಪಡೆದು ಅವರಾಜ್ಞೆಯಿಂದ ಸಂತಾನಪ್ರದವಾದ ಜಪವ್ರತಹೋಮ ದಾನಾದಿಗಳಮಾಡಲು ಈಶ್ವರಾನುಗ್ರಹದಿಂದ ಸತಿಯಗರ್ಭದೊಳು ಉದಯಿಸಿದಳೋರ್ವ್ವಕನ್ನಿಕೆಯು ಗ್ರಾಮದೊಳು ಸತಿಯಂತೆ ತಿರೆಯೊಳು ವೈದೇಹಿಯಂತೆ ಘನದೊಳು ಕ್ಷಣರುಚಿಯಂತೆ ಕಾಣೆನಾಕನ್ನಿಕೆಗೆ ಸರಿಯಾದ ಚಲ್ವೆಯನೀಧರೆಯೊಳದೊಂದು ವಿಶೇಷ ಪೆರತೆಲ್ಲಲೋಕಾನುಗುಣವಾಗಿಹುದೆನುತ ನುಡಿಯುತ್ತಿರುತಿರಲು, ಇತ್ತಲಾದ್ವಾರಪಾಲಕರು ಪುರದ್ವಾರಮಂ ಬಂಧಿಸುತ ವರದಿಯೆರೆಯುವ ಸಮಯಕ್ಕೈತಂದು ಪ್ರಾಕಾರದಧಿಕಾರಿಗೀ ರಾಜಕುಮಾರನಾಡಿದನುಡಿಯನಾತನಾಕಾರಮಂ ವರ್ಣಿಸಲು, ತತ್ಕ್ಷಣದೊಳವರಿಂದಲೊಡಗೂಡಿ ಮಹೀಪತಿಗೆಡೆಗೈತಂದು ಬಿನ್ನೈಸಲು, ನರಪತಿಯುಕ್ಕೇಳಿ ಜವದೊಳಾತನತಾಣವರಿದೆನಗೆ ತಿಳುಪೆಂದು ಮಂತ್ರಿಗಾಜ್ಞಾಪಿಸಲು, ಅಮಾತ್ಯನಾಲೋಚನೆಯಂಮಾಡಿ ಜೀಯ ಈ ನಗರದೊಳಗೆರಸಲಳವಲ್ಲವದರಿಂದ ಇನ್ನೊಂದುಪಾಯಮಂಮಾಡಿದೊಡೆ ತಿಳಿಯಬಹುದೆಂದೆನುತ ಆಉಪಾಯಮಂ ಬಿನ್ನೈಸಲು ಹಾಗೆಮಾಡೆಂದು ರಾಜನಂಗೀಕಾರವಮಾಡಲು, ಅಮಾತ್ಯನಾಕ್ಷಣದಿ ಚರರಂಕರೆಯಿಸಿ ನಿಖಿಲಲೋಕೋಪದ್ರವಕರವಾದ

ದುಷ್ಟಕೇಸರಿಯನಾರು ಸಂಹಾರವಮಾಡಿದಡೆಯುಂ ಅವರಿಂಗೆ ಮಹೀಪತಿಯು ರಾಜ್ಯಾರ್ಧವನೀವನು. ಕೋಶಾರ್ಧಮಂ ಕೊಡುವನು, ಸಕಲಾಭಿಲಾಷೆಯುಂ ನೀವನೆಂದು ಬೀದಿಬೀದಿಯೊಳು ಸಾರುವುದು ಯಾರು ಸಂಹಾರಮಂಮಾಳ್ಪೆವೆಂದುಪೇಳ್ವವರೊ ಆತನಂ ರಾಜಸನ್ನಿಧಿಗೆ ಕರತರುವುದಿನನುದಯದೊಳಗೆಂದು ಕಟ್ಟಲೆಯುಂಮಾಡಿ ಮನೆಗೈದಲು, ಉದಯವಾಗಲುದಂಡಿಯುವರೆದ್ದು ಮಂತ್ರಿಯಾಜ್ಞಾನುಸಾರನಾಗಿ ಬೀದಿಬೀದಿಯೊಳುಸಾರುತ್ತಾ ಆ ಮುದುಕಿಯಾಲಯದೆಡೆಗೆಬರಲು, ಸಹಸ್ರಾಯು ವದಂಕೇಳಿ ಮುದುಕಿಯುಂಕರೆದು ಚರರಕರೆಯೊಳಗೆಸಲು ಮುದುಕಿಯಾ ಚರರನ್ನು ಒಳಗೆ ಕರೆಯಲು, ದಂಡಿಯುವರೊಳಪ್ರೊಕ್ಕು ಚಂಡಕುಮಾರ ನಂಕಂಡು ದಂಡಪ್ರಮಾಣಮಂಮಾಡಿ ವಿಸ್ಮಿತರಾಗಿನಿಲ್ಲಲು, ರಾಜಕುಮಾರನವರಂಕುರತು ಎಲೈ ಚರರುಗಳಿರಾ ಕೇಳಿ ಈ ಬಿನವೇಕೇಸರಿಯ ಶೀಳಬಿಡುವೆನು ಬೇಡ ಈ ಮಹತ್ಕಾರ್ಯಕ್ಕೆ ರಾಜ್ಯಾರ್ಧಮಂ ಕೊಡುವುದೇತಕೆ? ಆತಂಗೆ ರಾಜ್ಯಕೋಶಗಳೆಲ್ಲ ಸ್ಥಿರವಾಗಿರಲಿ ಎಂದು ಪೇಳದನೆಂದು ನಿಮ್ಮನರಪತಿಗೆ ಪ್ರೋಗಿ ಪೇಳುವುದೆಂದು ನುಡಿಯಲು, ಕೇಳುತಾಚರರು ನರಪತಿಯೆಡೆಗೆ ತಾವು ಬರಬೇಕೆಂದು ಬಿನ್ನೈಸೆ ಭಯಪಟ್ಟು ಜನದೊಳುಪ್ರೋಗಿ ನರಪತಿಗೆ ಬಿನ್ನೈಸಲು, ವೀರವರ್ಮನತ್ಯಾಶ್ಚರ್ಯಯುಕ್ತನಾಗಿ ಅಮಾತ್ಯನುಕರೆಯಿಸಿನೀನೇಪ್ರೋಗಿ ಕರತರುವುದೆಂದು ಆಜ್ಞಾಪಿಸಲು, ಅಮಾತ್ಯನು ಸಕಲವೈಭವದಿಂದ ಬಂದು ಸರ್ವಲೋಕವಭ್ಯುದಯಮೊಂದಾಗಿ ರೂಪಾಂತುಕುಳ್ಳಿರುವಂತೆ ಮೆರೆವರಾಜಕುಮಾರನಂನ್ನೋಡಿ ವಿಸ್ಮಿತನಾಗಿ ತದವಲೋಕನಮಾತ್ರದಿಂ ಭಯಭಕ್ತಿಯುಂಟಾಗಿ ಬಳಿಗೈತಂದು ಕೈಮುಗಿದು ತವಚರಣಯುಗಳವಂ ನೋಡಿಲುತ್ಕಂಠೆಯಿಂದೆನ್ನಕಳುಹಿದನುಮಹೀಶನೆಂದೆನಲು, ಕುಮಾರನು ಮಂತ್ರಿಯಂ ಕರೆದು ಮನ್ನಿಸಿ ಮಂತ್ರಿಶೇಖರನೇಕೇಳು ರಿಕ್ತಹಸ್ತದೊಳು ರಾಜರೆಡೆಗೈದಬಾರದು, ಅದುಕಾರಣ ನರಪತಿಗೆವೈರಿಯಾದ ಕೇಸರಿಯಂ ಕೊಂದು ತಚ್ಛಿನ್ನೆಯುಂಕರದೊಳಾಂತು ಬರುವೆನು ನೀಪ್ರೋಗೆಂದೆನಲು, ಮಂತ್ರಿಯು ರಾಜಾಧಿರಾಜನು ನೀನು ನಿನಗೆರಾಜನದಾರು ನಿನ್ನಚರಣಂಗಳಿಂದ

ಲೀಧರೆಯು ಯಾವಾಗ ಶೋಭಿಸಿತೋ ಅಂದೆ ಸಕಲಾಶುಭವು ದೂರ
ತೋಪಾಸ್ತವಾದುದು. ಕೇಸರಿಯು ಸಂಹಾರ ನಿನಗೆಂತುಟದಂತ್ರಿಗಲಿ,
ದಯುಮಾಡಬೇಕೆಂದು ಬಹುಪ್ರಕಾರದಿಂ ಪ್ರಾರ್ಥನೆಯಂ ಮಾಡಲು, ದಾ
ಕ್ಷಿಣ್ಯಶಾಲಿಯಾದ ಸಹಸ್ರಾಯುವಾತನ ನಿರ್ಬಂಧವಂ ಮೀರಲಾರದೆ ನಡೆ
ತರಲು, ಪ್ರೊಢಮಿಪತಿಯು ಸೌಧಮನೇರಿ ನೋಡುತ್ತ ಸಹಸ್ರಾಯು
ವಂ ಕಂಡು ವಿಸ್ಮಿತನಾಗಿ ಮನುಜರಿಂಗೀ ರೂಪುಲಾವಣ್ಯಮಾಧೈರ್ಯ
ಗಾಂಭೀರ್ಯಮಾತೇಜವೆತ್ತಣದು, ದಿವಿಜರೊಳಗಾವನೋ ಬಂದಿರುವನೆಂ
ದು ಜವದಿಂ ಸೌಧಮನಿಳಿದು ಇದಿರ್ಗೊಂಡು ಪ್ರೇಮಾಲಿಂಗನವಮಾಡಿ,
ತದಂಗಸಂಗ ಸುಖದಿಂ ಪರವಶನಾಗಿ ತಂನರಮನೆಗೆ ಕರೆತಂದು ದಿವ್ಯಸಿಂ
ಹಾಸನದಿ ಕುಳ್ಳಿರಿಸಿ, ಸಕಲೋಪಚಾರಮಂ ಮಾಡಿ, ಕಂಠೀರವನ ವೃ
ತ್ತಾಂತಮನೊರೆಯಲು, ರಾಜಕುಮಾರನು ಕೇಳಿ ನರಪತಿಗಭಯಮನಿ
ತ್ತು ಅಂದು ಭೋಜನವಗೈದು ಸರ್ವಭೂಷಣಂಗಳಿಂದಲಂಕೃತನಾಗಿ
ಪ್ರೊರಮಡಲು ವೀರವರ್ಮರಾಯನು ರಥತುರಗಗಜ ಚತುರಂತ್ರಯಾನವೇ
ಮೊದಲಾದ ಸಕಲವಾಹನ ಗ್ರಾಮಗಳನರಮನೆಯ ಬಾಗಿಲೊಳು ಸಿದ್ಧ
ಮಾಡಿಸಿಟ್ಟು ಸಹಸ್ರಾಯುವಿಂಗೆ ತೋರಿ ಇದರಲ್ಲಿ ಆವುದು ಚಿತ್ತಕ್ಕೆ
ಸಮರ್ಪಕವಾಗಿ ತೋರುವುದೋ ತದಾರೋಹಣವಂ ಮಾಡಿ ಪೋಗ
ಬೇಕೆಂದು ಬಹುಪ್ರಕಾರದಿಂ ಬೇಡಿಕೊಳಲು, ಅದನೊಡಂಬಡದೆ ಮೃಗ
ರಾಜನಂ ಕೊಲ್ವೆನೆಂಬ ಮನೋರಥವೇ ರಥವಾಗಿಯುಂ, ಸಕಲ ಭುವ
ನಂಗಳೀಷತ್ಕರಂ ತನಗೆಂಬ ಧೈರ್ಯಮೆ ಸಾರಥಿಯಾಗಿಯುಂ, ರಾಜಮಾ
ರ್ಗದೊಳು ವಿಜಯಲಕ್ಷ್ಮಿಯೇ ಬಹುರೂಪಾಗಿ ಪ್ರೂರ್ಣ್ಣಮಾಂಗದಿಂ
ನೋಡುವಂತೆ, ಪುರಸ್ತ್ರೀಯರನುರಾಗದಿಂ, ತಮ್ಮತಮ್ಮಾಲಯದ
ಸೌಧಗಳನೇರಿ ನೋಡುತ್ತಿರಲು ಏಕಾಂಗವೀರನಾದ ಸಹಸ್ರಾಯುವು
ಪುರಾದ್ಬಹಿರ್ಭಾಗದೊಳು ಹರಿಯಿರುವ ಬನಕಾಗಿ ಬರುತಿರಲು, ವೀರವ
ರ್ಮರಾಯನು ಖೇದಮೋದಾಶ್ಚರ್ಯಗಳಿಂದ ವಿಸ್ಮಿತನಾಗಿ, ಹರಿಯುಭಯ
ದಿಂ ಪುರದ್ವಾರಮಂ ಬಂಧಿಸುತ ಅಮಾತ್ಯರೇ ಮೊದಲಾದ ಸಕಲ ಪರಿ
ವಾರದೊಡನೆ ನಿಜಾಲಯದೊಳತ್ಯುಂನತವಾದ ಸೌಧವನೇರಿ ನೋಡು

ತ್ತಿರಲು, ಪುರದೊಳಿರುವ ಸ್ತ್ರೀವೃದ್ಧಬಾಲಕರು ಮೊದಲಾಗಿ ಸಕಲ ನಾಗರಿಕರೆಲ್ಲರೂ ಪುರಪ್ರಾಕಾರವನೇರಿ ಈ ದಿವ್ಯ ಸುಕುಮಾರನು ಉಗ್ರಹರ್ಯಕ್ಷನೊಳು ಸೆಣಸುತೇನಪ್ಪನೋ ಎಂದು ಮರುಗುತ್ತ ನೋಡುತ್ತಿರಲು, ಇತ್ತಲಾ ರಾಜಕುಮಾರನು ಹರ್ಯಕ್ಷನಿರುವ ಬನದಸವಿಾಪಕ್ಕೆ ಪೋಗಿ, ಘೋರಾಟ್ಟಹಾಸಮಂ ಮಾಡಿ ಬೊಬ್ಬಿರಿಯೆ ಧರೆ ಗಗನ ದಿಕ್ಕುಗಳೆಲ್ಲ ನಾದಮಯವಾಗೆ ನಾಗರಿಕರೆದೆಯೊಡೆದು ತಲ್ಲಣಿಸಿ, ಸಿಡಿಲು ಶಿರಕೆರಗಿದಂತಾಗಲಾ ಕೇಸರಿಯು,ಕನಲಿರೋಷಾವೇಶದಿಂದ, ಯುದ್ಧಧ್ವನಿಯ ಪಥಮಂ ಪಿಡಿದುಬಂದು ಮೃತ್ಯುರೂಪಾಗಿ ಬಂದಿರುವ ರಾಜಕುಮಾರನಂಕಂಡು ರೋಷಾಮರ್ಷದಿಂ ಬಂದೆರಗಲು, ಸಹಸ್ರಾಯುವು ಲಾಘವದಿಂ ಲಂಘಿಸುತ, ಗತಿಗಳಿಂ ಕೇಸರಿಯ ವಂಚಿಸುತ, ನುಡಿದನೆಲೆ ಮೃಗಾಧಮನೆ ನಿನ್ನಸುವ ನೀಗುವೆನು ನೋಡೆನುತಲೊಂದೆರಡುಘಳಿಗೆಯಿಾಪರಿಯೊಳಾಡುತಿರೆ ಕೇಸರಿಯು ಶಿರಕೆಬಂದೆರಗಲದಂ ತಪ್ಪಿಸಿಕೊಂಡು ಕ್ರೋಧಮೂರ್ಛಿತನಾಗಿ, ಮಹಾ ಖಡ್ಗಮಂ ಕೋಪದಿಂ ತೆಗೆದು ಪ್ರಹರಿಸಲು, ಹರಿಯೆರಡುತುಂಡಾಗಿ ಧರೆಯಮೇಲುರುಳಲು, ಆ ಮಹಾ ಕಾಯದಿಂದ ತೇಜಃಪುಂಜ ಪೊರಮಟ್ಟು ಸಿದ್ಧನಾಕಾರಮಂ ತಾಳಿ. ರಾಜಕಂಠೀರವಗೆ ಕೈ ಮುಗಿದು ನುತಿಮಾಡೆ, ಸಹಸ್ರಾಯು ವಿಸ್ಮಿತನಾಗಿ, ನೀನಾರು ನಿನಗೇನುಕಾರಣ ಈ ಕಳೇಬರಬಂದುದೆನಲು, ಆ ಪುರುಷನು ಕೇಳೈ ಮಹಾನುಭಾವನೆ ತಾನು ವಿದ್ಯಾಧರನು, ಗಗನಮಾರ್ಗದೊಳುಸಂಚರಿಸುತಲೊಂದುದಿನ ಪಮರತಟನಿಯೊಳು ಸ್ನಾನಮಂಮಾಡಲೋಸುಗ, ಮಹಾ ತಪಸ್ವಿಯಾದೊರ್ವ ಭೂಸುರೋತ್ತಮನು ಪತ್ನಿಯಿಂದೊಡಗೂಡಿಪೋಗುತಿರಲು, ತಾನಾತನಂಗನೆಯ ಲಾವಣ್ಯಮಂ ಕಂಡು ಮರುಳಾಗಿ ಮದನಶರಾಹತಿಗೆ ತಾಳಲಾರದೆ ಮನದೊಳಾಲೋಚಿಸುತ ಇವರೀರ್ವರಿಗೆ ಪರಸ್ಪರ ವಿಯೋಗವಾದಲ್ಲದೆ ತನ್ನ ಕಾರ್ಯಸಿದ್ಧಿಸಲರಿಯದೆಂದು ಹರ್ಯಕ್ಷದೇಹಮಂ ಧರಿಸಿ, ಘರ್ಜಿಸುತ ಬರಲು, ಆಕೆ ಅತ್ಯಂತ ಭೀತಿಯಿಂದ ಪ್ರಿಯಾಂಗಮನಾಲಿಂಗಿಸಲು, ಮುನಿಯು ಮನದೊಳಾಲೋಚಿಸುತ ಕೇಸರಿಯಿರುವ ತಾಣಮಲ್ಲಿದು ಬಂಧುದೆಂತೆನುತ ವಿಜ್ಞಾನದೃಷ್ಟಿಯಿಂ

ನೋಡಿ, ಕನಲುತ್ತಲಿಲೆ ವಿದ್ಯಾಧರಾವಶದ ಸತಿಯೊಳನುರಾಗದಿಂದ ಘನವನಾಚರಿಸಿ ಹರ್ಯ್ಯಕ್ಷದೇಹವುಂ ಧರಿಸಿದೆಯಾದಕಾರಣ ಈ ಘೋರವುಂಚಾಸ್ಯಕಳೇಬರವೇ ನಿನಗೆ ಸ್ಥಿರವಾಗಲೆಂದು ಶಾಪವನೀಯ್ಯಲು ತಾನು ನಷ್ಟದರ್ಪವುಳ್ಳವನಾಗಿ ಬಹು ಭೀತಿಯಿಂ ಮುನಿಯ ಚರಣದಿಬಿದ್ದು ಕರುಣಾಳುವಾದ ನೀನು ಎನ್ನಪರಾಧವುಂ ಮರೆದು ತನ್ನನುದ್ಧಾರವಮಾಡಬೇಕೆಂದು ಬಹುವಿಧದಿ ಬೇಡಿಕೊಳಲು, ತಾಪಸನು ಕೃಪೆಯಿಂದ ಚಿರಕಾಲಾನಂತರದಲ್ಲಿ ಸರ್ವಮಂಗಳಾಚರಣಾನುಗ್ರಹಕ್ಕೆ ಪಾತ್ರನಾಗಿ ತತ್ಪ್ರಸಾದದಿಂ ಪುಟ್ಟಿದವನೊರ್ವ ಮಹಾರಾಜನಿನ್ನುದ್ಧಾರವುಂ ಮಾಡುವನು ತತ್ಖಡ್ಗಪ್ರಹಾರಪ್ರಶಾಂತಕಳೇಬರನಾಗಿ, ತದ್ದರ್ಶನಸ್ತೋತ್ರದಿಂ ನಿಜರೂಪವನೈದಿ ಕೃತಾರ್ಥನಾಗುವೆ ಪೋಗೆಂದು ಅನುಗ್ರಹವಮಾಡುತ್ತ ಪತ್ನಿಯಿಂದೊಡಗೂಡಿ ಪೋದನಾ ತಾಪಸನು. ತಾನಂದಿನಾರಭ್ಯ ಈ ಘೋರದೇಹವನಾಂತು ಲೋಕೋಪದ್ರವಮಾಡುತ್ತಲಿದ್ದೆ, ಇಂದು ಮಹರ್ಷಿಯನುಗ್ರಹದಿಂದ ನಿನ್ನ ಚರಣವಂಕಂಡೆನು. ತಂನನುದ್ಧಾರವುಂ ಮಾಡಿದೆ ಇದಕೆ ಮಹಾನುಭಾವನಾದ ನಿನಗೆ ತಾನು ಪ್ರತ್ಯುಪಕಾರವುಂ ಮಾಡಲರ್ಹನೇ, ತದಪಿ ಎನ್ನೊಳಗೊಂದು ಮಂತ್ರಮಯ ಕವಚವಿಹುದು ಆ ಕವಚವುಂ ನಿನ್ನಂಗಕಳವಡಿಸಿ ಪೋಗುವೆನು ಕರುಣದಿಂದಪ್ಪಣೆಯನೀಯಬೇಕೆಂದೆನಲು, ರಾಜಕುಮಾರನು ನಗುತಲೊಡಂಬಡಲು, ಆ ವಿದ್ಯಾಧರನು ಕವಚವನಳವಡಿಸಿ ಅಪ್ಪಣೆಯನಾಂತು, ನೀನಾವಾಗ ನೆನೆಯಲಾವಾಗ ಬರುವೆನೆಂದು ನುಡಿದು ಸ್ವಲೋಕವುಂ ಕುರಿತು ನಡೆಯಲು, ಸಹಸ್ರಾಯುವು ಪುರಕಭಿಮುಖನಾಗಿ ಬರುತಿರಲು, ಸಾಮಾತ್ಯಪರಿವಾರನಾದ ವೀರವರ್ಮರಾಯನು ಇದೆಲ್ಲವುಂ ಕಂಡು ಪರಮಾಶ್ಚರ್ಯಭರಿತನಾಗಿ ಈತ ಮಾನುಷನಲ್ಲ, ಸ್ಕಂದನೀರೂಪಾಗಿ ಬಂದ ನಳಿನಾಪದವ ಪರಿಹಾರವಮಾಡಲೆದೆಂನುತ ನಿಶ್ಚಯವಮಾಡಿ ಪರಮಾನುರಾಗದಿಂ ಸಕಲಜನರೊಡಗೂಡಿ ಪೊಡವಿಪತಿ ಇದಿರ್ಗೊಂಡು ತಕ್ಕೈಸಿ ದಿವ್ಯ ರಥದೊಳು ಕುಳ್ಳಿರಿಸಿ, ಪರಮ ವೈಭವದಿಂದ ಪುರಾಂತಃಪ್ರವೇಶವುಂ ಮಾಡಿ, ತಂನಮನೆಗೆ ಒಡಗೊಂಡು ಪೋಗಿ ಹರ್ಯ್ಯಕ್ಷಪೀಠದೊಳು ಕುಳ್ಳಿರಿಸಿ, ಬಹು

ವಿಧ ಸ್ತೋತ್ರವಂ ಮಾಡಿ ರಾಜ್ಯಕೋಶಗಳೆಲ್ಲ ನಿನ್ನ ಪದಸರಸಿಜಕೆ ಒಪ್ಪಿಸುವೆ ಕರುಣೆಯಿಂ ಸ್ವೀಕರಿಸಬೇಕೆಂದು ಪೇಳಲು, ರಾಜಕುಮಾರನು ಆ ಮಹೀಶನ ನುಡಿಯಂ ಕೇಳಿ ಸಕಲಸಂಪದವೆಲ್ಲ ತನ್ನದೇಸರಿಯದಂತಿರಲಿ, ನಿನ್ನ ಅರಮನೆಯ ಭೂಮಿಯೊಳು ಮುನ್ನತಮ್ಮಹಿರಿಯರು ಬಂದು ಲಕ್ಷ್ಯಸಂಖ್ಯಾದ್ರವ್ಯವುಂ, ಜೀವರತ್ನಶತವುಂ ಸ್ಥಾಪನ ಮಾಡಿರುವರು. ಅದನಿತ್ತೊಯಾದೊಡೆ ತಾನು ಪೋಗುವೆನು. ಮುಂದೆ ನಮಗಿಹುದನೇಕ ಕಾರ್ಯಗಳೆನಲು, ವೀರವರ್ಮನತ್ಯಂತ ವಿಸ್ಮಯಯುಕ್ತನಾಗಿ ನಿಮ್ಮ ಹಿರಿಯರ ದ್ರವ್ಯವೆಮ್ಮರಮನೆಯ ಭೂಮಿಯೊಳಿರುವುದಕೆ ಕಾರಣವೇನೆನಲು, ನಿಮ್ಮಕೊಟಸ್ಥನೀ ನಗರವುಂ ನಿರ್ಮಾಣವುಂ ಮಾಡುವದಕ್ಕೆ ಮುನ್ನ ಈ ಭೂಮಿ ಮಹದರಣ್ಯವಾಗಿರ್ದುದು, ಆಗೊಂದು ಕಾರಣಾಂತರದಿಂದ ಸ್ಥಾಪನವಾಗಿರ್ದುದೆನಲು, ಆ ಮಹೀಪತಿಯು ರಾಜಕುಮಾರನಿಂದೊಡಗೂಡಿ ದ್ರವ್ಯವಿರುವ ತಾಣವುಂ ನೋಡಿ ಖನನಮಾಡಲು ಬ್ರಹ್ಮರಾಕ್ಷಸನು ಪೇಳಿದಂತೆ ಲಕ್ಷಸಂಖ್ಯಾದ್ರವ್ಯವು ಜೀವರತ್ನಶತವಿರಲು, ಸಹಸ್ರಾಯುವದಂ ತೆಗೆದುಕೊಂಡು ವೀರವರ್ಮರಾಯನಂ ಕುರಿತು ನೀನ್ನೈದುಲಕ್ಷ ದ್ರವ್ಯವುಂ ಕೊಡುವುದೆನೆ ನರಪತಿಯು ಮನದೊಳಾಲೋಚಿಸಿ ರಾಜ್ಯಕೋಶವನೊಲ್ಲದವರಿಗೆ ಇನಿತುದ್ರವ್ಯವುಂ ಬೇಡುವನನೇನುಕಾರಣವೋ ಎಂದು ರಾಜಕುಮಾರನಂ ಕುರಿತು ವಿನಯಮಧುರೋಕ್ತಿಯಿಂದಿದರ ವೃತ್ತಾಂತವುಂ ನಿನ್ನ ವೃತ್ತಾಂತವುಂ ತಿಳುಹಬೇಕೆಂದೆನಲು, ಸಹಸ್ರಾಯು ನಸುನಗುತ ಬಲು ಚದುರನದರಿಂದ ಪ್ರಕಾರಾಂತರದೊಳವರ ಮನಸ್ಸಮಾಧಾನವುಂಮಾಡೆ, ಸಂತೋಷಯುಕ್ತನಾಗಿ ದ್ರವ್ಯವುಂ ಕೆಲವು ರತ್ನಗಳನಿತ್ತು, ವಾಹಕರನಿತ್ತು, ದಿವ್ಯಾಂಬರ ಭೂಷಣಾದಿಗಳಿಂದ ಸುಕುಮಾರನನಲಂಕರಿಸಿ ಕಣ್ಣುದಣಿಯಲು ನೋಡಿ ಅಗಲಲಾರದೆ ಕೂಡಿ ಮರುಗಿ ಬಂಬಲುವಾಗಿ ನಿರ್ಬಂಧವುಂ ಮಾಡಲಾರದೆ ಅಪ್ಪಣೆಯನಿತ್ತು ದಿವ್ಯ ರತ್ನಮಯ ರಥದೊಳಗೆ ಕುಳ್ಳಿರಿಸಿ ತಾನು ಸಮಸ್ತ ವೈಭವದಿಂದ ಸಂಗಡ ಹೊರಟು ರಾಜಬೀದಿಯೊಳು ಬರುತಿರಲು, ನಾಗರಿಕಜನ ಮಾನಿನಿಯರೆಲ್ಲ ಸುಕುಮಾರನಂ ಕಂಡು ಮ

ನವೊಳತ್ಸ್ಯಾತುರದಿ ಈತನುಂಪಡೆವ ಮಾನಿನಿಯಾವಳೋ ಮೇಣವಳ ಪುಣ್ಯಕ್ಕೆಣೆಯಿಲ್ಲ, ಲೋಚನಾಸೇಚನಕ ವಿೞಾ ರಾಜಕುಮಾರನ ಲಾವಣ್ಯವೆಂದೆನುತ ಅನ್ಯೋನ್ಯವಾಗಿ ಮಾತಾಡುತಿರಲು, ಸಹಸ್ರಾಯು ಪುರದಿಂ ಪೊರಟು ಸಪರಿವಾರನಾದ ನರಪತಿಗೆ ಅಪ್ಪಣೆಯಿತ್ತು ಪುರಕೆ ಕಳುಹಿ ತಾನು ಜವದಿಂದಮುಂದೆನಡೆದು,ಧರ್ಮಮಂಮಾಡುವದಕ್ಕೆ ತಾಣವ ನರಸುತ್ತ ಬರುತಿರಲು, ಒಂದುದಿನ ಬಹುದೊಡ್ಡ ಮಾರ್ಗಮಂ ಕಂಡು, ಇದೆಸ್ಥಳವೆಂದು ನಿಶ್ಚೈಸಿ ಮನದೊಳಗೆ ಸುಕ್ತನೋಡುತ್ತಲಿರಲು, ಆ ಮಾರ್ಗಕ್ಕೆ ಪಶ್ಚಿಮದಲ್ಲಿ ನಾತಿದೂರದೊಳು ಪರ್ವತಯುಗ್ಮಮಂ ಕಂಡು, ತತ್ಸಮೀಪಕ್ಕೆ ಪೋಗಿ ತದಂತರಾಳವನುನೋಡಿ ಪರಮಸಂತೋಷದಿಂದಲ್ಲಿ ನಿಂತು, ಗಿರಿದ್ವಯಕ್ಕ ಸೇತುವೆಯೋಪಾದಿಯಲ್ಲಿ ತಟಾಕವಂ ಕಟ್ಟಿಸಿ, ಪರ್ವತಯುಗಾಗ್ರದೊಳು ಹರಿಹರಾಲಯಂಗಳನತಿವಿಚಿತ್ರಮಾಗಿ ರಚಿಸಿಸಿ,ತತ್ತಟಾಕತೀರದೊಳು ಅಗ್ರಹಾರಮಂ ಕಟ್ಟಿಸಿ ಸಸೋಪಸ್ಕರವಾದಶತಾಲಯಂಗಳಂ ಕಟ್ಟಿಸಿ,ವೃತ್ತಿಶತಮಂ ಮಾಡಿಸಿ, ಭೂಮಿಯಂ ವೃತ್ತಿಗಳಿಗೆ ಸಮವಾಗಿ ಭಾಗಮಂಮಾಡಿ ಭೂಸುರೋತ್ತಮರಿಂಗೆ ಧಾರೆಯನೆರೆದು, ಜೀವರತ್ನಶತಮಂ ವೃತ್ಯನುಗುಣವಾಗಿ ವಿಪ್ರರಿಗಿತ್ತು, ದೇವತಾಉತ್ಸವಂಗಳಂಮಾಡಿಸಿ, ಆಚಂದ್ರತಾರಕವಾಗಿ ದೇವತಾರಾಧನ, ಬ್ರಾಹ್ಮಣೋಪಜೀವನವು, ನಿರ್ಬಾಧೆಯಿಂ ನಡೆವಂತೆ ನಿರುಪಾಧಿಕವೃತ್ತಿಗಳಂ ಕಲ್ಪಿಸಿ, ಇನಿತುಲಕ್ಷದ್ರವ್ಯವು ಸರಿಯಾಗುವಂತೆ ದೇವದ್ವಿಜೋಪಯೋಗವಂ ಮಾಡಿ, ಅವರಿಂದನುಗ್ರಹೀತನಾಗಿ, ಅಪ್ಪಣೆಯಂ ಕೊಂಡು, ಬ್ರಹ್ಮರಾಕ್ಷಸನಿರುವ ಅರಣ್ಯಮಂ ಕುರಿತು ಪೊರಟು ಬಹುದೂರಮಾರ್ಗಮಂ ಕಳೆದು, ಸತ್ಯಸಂಧನಾದ ಸಹಸ್ರಾಯುವು, ದ್ವಿಜಾಸುರನಿರುವ ಅರಣ್ಯಮಂಪ್ರೊಕ್ಷ್ಯ, ತದಾಶ್ರಯಮಾದ ವಟತರುವಿನೆಡೆಗೆ ಬರುತಿರಲು, ಇತ್ತಲಾ ಬ್ರಹ್ಮರಾಕ್ಷಸನಿಗೆ ಪ್ರತಿಗ್ರಹೀತದ್ರವ್ಯರತ್ನಂಗಳು ಸದ್ವ್ಯಯವಾಗೆ ಅಘೋರಶರೀರವು ಅತ್ಯಂತ ಜೀರ್ಣವಾಗಿ ಗಮನಾಗಮನಶಕ್ತಿಯು ತಪ್ಪಿ, ತಜ್ಜನ್ಮಕೃತಪ್ರಾಣವಧಾದಿ ಮಹಾದುರಿತಗಳಿಂದುತ್ತಮಕಳೇಬರವು ಬಾರದೆ ,ದುಃಖದಿಂದ ಚೇತನಪ್ರಾ

ಯನಾಗಿ ಸ್ವನೇಹವಿಂತು ದುರ್ಬಲವಾದುದಕ್ಕೆ ಕಾರಣವನ್ನಾಲೋಚಿಸಿ, ನಿಶ್ಚಯಮಾಡಲಾರದತ್ಯಂತ ಕ್ಲೇಶದಿಂ, ಸಹಸ್ರಾಯುವಂ ನೆನೆನೆನೆದು ಬರುವನೋ ಬಾರನೋ ಎಂದು ನಾನಾವಿಧದಿ ಹಂಬಲಿಸಿ, ಮರುಗುತ್ತಂ, ದೂರದೊಳು ಧನಂಜಯಯಕ್ಷನ ಶರಮಂಪಡೆದು ಬರುವ ಧನಂಜಯನಂತೆ ಬರುವ ಸುಕುಮಾರನು ನಿಸ್ವನಿಕ್ಷೇಪವಂ ಕಂಡಂತೆ ನೋಡಿ ಸಹಸ್ರಾಯುವೀತನಹುದೋ ಅಲ್ಲವೋ ಎಂದು, ಸಂಶಯದಿಂದ ನೋಡುತಿರೆ, ಸಮೀಪಕ್ಕೈತಂದುನಿಲ್ಲಲು, ಆ ರಾಜಕುಮಾರನ ಸಂದರ್ಶನಮಾತ್ರದಿಂದ ಈಷಚ್ಚೈತನ್ಯಮುಳ್ಳವನಾಗಿ ಪರಮಾಹ್ಲಾದದಿಂದ ಬಹುಪ್ರಕಾರ ಸ್ತೋತ್ರಮಂಮಾಡಿ ಕುಶಲಪ್ರಶ್ನೆಯಂಗೈದು, ಪೋಗಿಬಂದ ವೃತ್ತಾಂತಮಂಕೇಳಲು, ಸಹಸ್ರಾಯು ವಂದನೆಯಂಮಾಡಿ, ಕರುಣದಿಂದ ಸಕಲವೃತ್ತಾಂತಮಂ ಪೇಳಿ, ತಾನು ಮಾಡಿದ ಪುಣ್ಯಧರ್ಮಂಗಳನ್ನೇಕಮನಸ್ಕನಾಗಿ ಧಾರೆಯನೆರೆದು, ಬ್ರಹ್ಮರಾಕ್ಷಸನಿಗೀಯಲು, ಅಶ್ವಮೇಧಮಂ ಮಾಡಿದೊಡೆಯುಂ, ನಾಶವಾಗದ ಪಾತಕರಾಶಿಗಳು ಘೋರವಾದ ಜನ್ಮವು, ಆ ಕ್ಷಣದೊಳು ವಿಚಕ್ಷಣನಾದ ಸಹಸ್ರಾಯುವು, ದೇಶಕಾಲಪಾತ್ರವಿಮರ್ಶೆಯಂತಲಸ್ಪರ್ಶವಾಗಿ ತಿಳಿದುಮಾಡಿ ಏಕಮನಸ್ಕನಾಗಿತ್ತ ಧರ್ಮಪ್ರಭಾವದಿಂ ಸಮೂಲನಾಶಮನೈದಿ ಸಾಕ್ಷಾದೃತಲೋಕಮನ್ನೈದುವದಕ್ಕೆ ಯೋಗ್ಯವಾದ ದಿವ್ಯ ತೇಜೋಮಯದ ಶುದ್ಧಸತ್ವಗುಣಪ್ರಧಾನವಾದ ಕಳೇಬರಮಂಪಡೆದು ಸಕಲದಿಕ್ಕುಗಳು ತುಂಬಿ ತುಳುಕುವ ಕಾಂತಿಯಿಂಮೆರೆವ ಭೂಸುರೋತ್ತಮನಂ ಕಂಡು, ಸಹಸ್ರಾಯುವು ವಿಸ್ಮಿತನಾಗಿ ತತ್ಪುರೋಭಾಗದೊಳು ಅಂಜಲಿಬದ್ಧನಾಗಿ ನಿಂದಿರಲು, ಪ್ರೊಡವಿಪತಿಯವಧರಿಸು ಭೂಸುರೋತ್ತಮನಾಗ ಅತ್ಯಂತಹೇಯವಾದ ಲೋಕೋಪದ್ರವಕರವಾದ ಶರೀರದಿಂ ಮುಕ್ತನಾಗಬೇಕೆಂಬ ಅಭಿಲಾಷೆಯಿಂ, ತನಗೆ ಶರಣಾಗತನಾದ ತನ್ನನು ಅನಾದಿಕಾಲದಿಂದ ಜನನಮರಣಾದಿ ನಾನಾವಿಧದುಃಖದಿಂ ತಿರುತಿರುಗಿ ಬಳಲಿಸುವ ಸಂಸಾರಚಕ್ರದಿಂದುದ್ಧಾರಮಂಮಾಡಿ, ಮೌನದಿಂದೆದುರಾಗಿ ಕೈಗಟ್ಟ ನಿಂದಿರುವ ರಾಜಕುಮಾರಂಗೆ ಪ್ರತಿಹಿತಮಾಡಲಿನ್ನೇನುಂಟು, ಭೂಸುರೋತ್ತಮನಾಗ ಪರ

ವಶನಾಗಿ,ಸಹಸ್ರಾಯುವಂತೆಗೆಡಪ್ಪಿ ತೊಡೆಯಮೇಲೆ ಕುಳ್ಳಿರಿಸಿ ಮಗನೆ ನಿನ್ನಯ ದಯದಿಂದ ತಾನು ಕೃತಾರ್ಥನಾದೆನು ಎಂದು ನಾನಾವಿಧದಿ ಸ್ತುತಿಮಾಡಿ ಪರಮಾನುರಾಗದಿಂ ಮೃತಸಂಜೀವಿನೀಮೊದಲಾದ ಸಕಲ ಮಂತ್ರಗಳನ್ನು ಇಂದ್ರಜಾಲಪ್ರಮುಖ ಮಹಾವಿದ್ಯೆಗಳಂ ಪಾದುಕಾ ಸಿದ್ಧಿಮೊದಲಾದ ಸಿದ್ಧಿಗಳಂ ಪರಕಾಯಪ್ರವೇಶಾದಿ ಯೋಗಂಗಳಂ, ವೇದಾಂತಪ್ರಮುಖ ಸರ್ವಶಾಸ್ತ್ರಂಗಳಂ ಸಾಂಗೋಪಾಂಗವಾಗಿ ಯಥಾಕ್ರಮದಿಂ ಉಪದೇಶಮುಂಮಾಡಿ, ಮೂರುಲೋಕದೊಳು ನಿನಗಸಾಧ್ಯವಾದ ಕಾರ್ಯಮೇ ಇಲ್ಲವೆಂದು ಪೂರ್ಣಾನುಗ್ರಹವಮಾಡಿ ನೇತ್ರಾವತೀತೀರದಲ್ಲಿರುವ ವೃತ್ತಾಂತಮಂ ತಿಳಿದು ನಿನ್ನಯಪುರಿಗೆ ಪೋಗೆಂದು ಪೇಳಿ ರಾಜಕುಮಾರನಪ್ಪಣೆಗೊಂಡು ದಿವ್ಯವಿಮಾನಾರೂಢನಾಗಿ ಸತ್ಯಲೋಕಮನೈದಲು, ಸಹಸ್ರಾಯುವು ದ್ವಿಜೋತ್ತಮನಿಂದುಪದಿಷ್ಟಮಾದ ವಿದ್ಯೆಗಳನುಷ್ಠಾನಮಂ ಕಿಂಚಿತ್ಕಾಲ ಅರಣ್ಯದೊಳು ಅಭ್ಯಾಸಮಾಡುತಲಿರ್ದು ಅನಂತರ ಭೂಸುರೋತ್ತಮನ ನುಡಿಯಂ ನೆನೆದು ನೇತ್ರಾವತೀತೀರದಲ್ಲಿರುವ ವೃತ್ತಾಂತಮಂ ತಿಳಿಯಬೇಕೆಂದು ಅರಣ್ಯದಿಂ ಪೊರಟು ಮಾರ್ಗವಶದಿಂದ ಪುನರಪಿ ಮಿಥಿಲಾಪುರಿಗೆ ಬಂದು ಪೂರ್ವಪರಿಚಿತಮಾದ ವೃದ್ಧಬ್ರಾಹ್ಮಣೀಗೃಹವನರಸುತ್ತ ರಾಜಬೀದಿಯೊಳು ಬರುತಿರಲು ಧರಣಿಪತಿತಿಲಕ ಮೇಣಲ್ಲಿಂದ ಮುಂದೆ ಮಹದಾಖ್ಯಾನ ನಡೆದುದೇನೆಂಬೆ ನದ್ಭುತವ, ಸಾವಧಾನದೊಳವಧರಿಪುದದೆಂತೆನಲು ಆ ಮಿಥಿಲಾಪತಿಯಾದ ವೀರವರ್ಮರಾಯಂಗೆ ಈಶ್ವರಾನುಗ್ರಹದಿಂದ ಉತ್ಪನ್ನಳಾದ ಧಾನ್ಯಮಾಲಿನೀಎಂಬ ಕನ್ನಿಕೆಗೆ ಶೈಶವಾವಸ್ಥೆಯು ತೊಲಗೆ ಸರ್ವಾಂಗಮನಾವರಿಸಿ ಯವ್ವನಂ ತುಂಬಿ ತುಳುಕಾಡುತಿರಲು, ಆಸುಕುಮಾರಿಯೆಂತಿರ್ದಳೆನೆ ಶಾಣೋಲ್ಲೀಢಮಾದ ಗಿಳಿದೇರನಮಲತರವಾರಿಯಂತೆ ವಸಂತಾಗಮನ ಪಲ್ಲವಿತಕುಸುಮಸ್ತಬಕಾನಮ್ರ ಮಲ್ಲಿಕಾಲತೆಯಂತೆ ಸಮಸ್ತಯುವಜನ ಮನೋವಿತ್ತಮನಪಹರಿಸಲೋಸುಗ ಕೃಪಾರಸಕಲಿತಾದಿಮರಸೋಪಾದಾನ ಕಾರಣದಿಂದ ರಚಿಸಿದನಂಗದಸ್ತ್ರವಿನಮಾಯೆಯಂತೆ, ರಾಜಿಸುತ್ತಿರ್ದಳಂತು ಮಲ್ಲದೆಯುಂ, ಮುಕ್ತಾಹಾರಮುಳ್ಳ

ವಳಾದೊಡೆಯುಂ ಯೋಗಿನಿಯಲ್ಲ ನಿರ್ಜರಮನೋಹಾರಿಣಿಯಾದೊಡೆಯುಂ ತಿಲೋತ್ತಮೆಯಲ್ಲ, ಕಾಲವಿಶೇಷದೊಳ್ಪುಷ್ಪವತಿಯಾದೊಡೆಯುಂ ಲತೆಯಲ್ಲ, ಇನಾವಲೋಕನೋತ್ಸುಕಿಯಾದೊಡೆಯುಂ, ಕಮಲಿನಿಯಲ್ಲ, ಇಂತಖಿಲ ಜಗನ್ಮೋಹಿನಿಯಾಗಿ ತೋರುವ ತನುಜಾತೆಯಂ ನೋಡಿ ವೀರವರ್ಮರಾಯನುತನ್ನ ಪ್ರಧಾನ ಪುತ್ರನಿಗೆ ಕೊಡುವದೇ ನಿಶ್ಚಯಮಾಡಿ ಪುರೋಹಿತಪ್ರಮುಖರಾದ ವಿಪ್ರರಂ ಕರೆಸಿ ಲಗ್ನವಂ ನಿಶ್ಚಯಮಾಡಿ ವಿವಾಹ ಸನ್ನಾಹಮಂ ಮಾಡುತ್ತಿರಲು, ಅದಂ ಕೇಳಿ ಧಾನ್ಯಮಾಲಿನಿಯು ಮನದೊಳಾಲೋಚಿಸುತ ತನಗನುರೂಪವಲ್ಲದವಂಗೆ ತನ್ನಂ ಕೊಡುವೆನೆಂದು ನಿಶ್ಚಯಮಾಡಿರುವ ತಂದೆ ಇದಕೆ ತಾನೇಗೈವೆನೆಂದು ಚಿಂತಾಯುಕ್ತಳಾಗಿ ಮರುಗುತ್ತ ತಂದೆಯೆಡೆಗೈತಂದು ಪಾದಕಭಿವಂದಿಸಲು, ಬಾಡಿದಾನನದಿಂ ನಿಂದಿರುವ ಸುಂದರಿಯ ತೆಗೆದಪ್ಪಿ ತೊಡೆಯಮೇಲಿರಿಸಿ ವತ್ಸೆನಿನ್ನ ವಿವಾಹೋತ್ಸವಂ ಬೆಳೆಯುತಿರೆ ನೀನು ಚಿಂತಿಪುದೇಕೆ ಪೇಳೆಂದು ಮುದ್ದಿಸಲು, ಧಾನ್ಯಮಾಲಿನಿಯು ತಲೆವಾಗಿ, ವಿವಾಹಶ್ಚ ವಿವಾದಶ್ಚ ಸಮಯೋರೇವಶೋಭತೆ ಎಂಬನುಡಿ ನಿನ್ನ ಡಿಗೆತೋರದಿರಲ್ಕೈತಂದೆನೆನಲು ನೃಪತಿಯು ಸುತೆಯ ಅಭಿಪ್ರಾಯಮಂ ತಿಳಿದು ವತ್ಸೆ, ನಮ್ಮ ಮುಖ್ಯಪ್ರಧಾನನಾದ ಸುಮತಿಯ ತನುಜಾತನ ತಿಚಲ್ವ, ಗುಣಾಢ್ಯನಾಗಿರುವ, ಕುಲಶೀಲಾದಿಗಳೆಲ್ಲ ಅನುರೂಪವಾಗಿರುವದು ಇದಲ್ಲದೆ ನೀನು ಪುಟ್ಟದಾಗಲೆ ತಾನು ವಾಗ್ದಾನಮಂ ಮಾಡಿರುವೆನಿದಂತಿರಲಿ ತತೋಪವಿತಿಶಯುವರ ನೀಗೆಲ್ಲಿಯೂ ಕಾಣೆನದುಕಾರಣ ಲಗ್ನಮಂ ನಿಶ್ಚೈಸಿ ಸರ್ವಸನ್ನಾಹಮಂ ಮಾಡುತಿಹುದುತ್ತರವನಾಡದಿರುಪ್ಪೋಗೆಂದು ಸಾಂತ್ವವಚನಗಳಿಂದಲೊಡಂಬಡಿಸಲು ಅದಂಕೇಳಿ ಧಾನ್ಯಮಾಲಿನಿಯಾಲೋಚನೆಯಂಮಾಡಿ ತತ್ಕಾಲಾನಿಶ್ಚಿತ ಸ್ವಸಮಾನಪತಿಯುಳ್ಳವಳಾದಕಾರಣ, ಪ್ರಕೃತೋಪಲಬ್ಧಫಲಪರಿತಾಪಿಗದಿಂದ ಅಭಿನವಯೌವನವ ಯೋಗಳಿತಮಾದ ನಂತರದಲ್ಲಿ, ಏನುಮಾಡುವೆನೆಂದು ಭಯಕಲಿತನಾನಾವಿಧಚಿಂತಾಶಬಳಿತ ಮನೋವೃತ್ತಿಯುಳ್ಳವಳಾಗಿ ಸುಮ್ಮನಲ್ಲಿಂದ ಅಪ್ಪಣೆಗೊಂಡು ಸಹಚರಿಯರಿಂವೆರಸಿ, ತನ್ನಂತಃಪುರ

ಕ್ಕೈತಂದು ನಿಡುಸುಯ್ಯುತಿರಲಾಕೆಯ ಅಭಿಪ್ರಾಯಮಂ ತಿಳಿದು, ವಿದಗ್ಧೆ ಯರಾದ ಸಖೀಜನರು, ಎಲೈ ತಾಯೆ ನಿನಗನುರೂಪವಾದ ಪುರುಷನು ಈ ಮಾನುಷರೊಳಿರುವಂತೆ ಕಾಣುವವಿಲ್ಲ, ದಿವಿಜರೊಳೆಂತೋ ನಾವರಿ ಯೆವು, ಪೂರ್ವದಲ್ಲಿ ಈ ಪುರಕ್ಕೊರ್ವ ಪುರುಷೋತ್ತಮನು ಬಂದು ಸಿಂಹವ ಸಂಹಾರವಂ ಮಾಡಿ ಪೋದನಾ ಸುಕುಮಾರನಂ ಕಂಡಿದ್ದೆವು, ಆ ರಾಜಕುಮಾರನಂ ಪೋಲ್ವ ಪುರುಷರು ದಿವಿಜ ಮನುಜರೊಳುಂಟೆ ಪುಸಿಯಲ್ಲ ವೀಜಗವರಿಯೆ, ನಿನಗೆ ಶೈಶವಾವಸ್ಥೆಯಾ ಸಮಯದೊಳು, ವತ್ಸೆ, ಸಾಕಾರಮಾಂತ ಕುಸುಮಾಸ್ತ್ರನಂತೆ, ಸಮಸ್ತಜನ ಮನೋ ಹರನಾಗಿ, ಈ ನಗರಕ್ಕೆ ಬಂದ ಮಹಾಪದವಂ ಪರಿಹಾರಮಾಡಿ ಪೋದ ನು. ಬಹುಮಾತಿನಿಂದೇನು, ಆ ರಾಜಕುಮಾರನಂ ಪಡೆದವಳೆ ಹೆಣ್ಣು, ಮಾನಿನಿ ಕೇಳು, ಬಹುಕಾಲ ತಪವಂ ಮಾಡಿದಡೆಯುಂ ದೊರೆವನೆ, ಆ ಕುಮಾರನ ಪಾಣಿಗ್ರಹಣ ಮಾಡಿದ ಮಾನಿನಿಯ ಪುಣ್ಯಕ್ಕೆಣೆಯಿಲ್ಲ. ಈ ಭುವನದೊಳೆಂದು, ಆ ರಾಜಕುಮಾರನ ವಯಸ್ಸೌಂದರ್ಯ ಪರಾಕ್ರ ಮಾದಿ ಗುಣಗಳಂ ವಿಸ್ತಾರವಾಗಿ ವರ್ಣಿಸಲು, ಅದಂ ಕೇಳಿ ಧಾನ್ಯ ಮಾಲಿನಿಯು, ಆ ಸಖೀಜನರ ವಾಕ್ಯವೆಂಬ ದರ್ಪಣದಲ್ಲಿ ಪ್ರತಿಬಿಂಬಿ ತನಾದ ಸಹಸ್ರಾಯುವಂ ಮನಸ್ಸಿನಿಂದ ಕಂಡು, ತತ್ಸಮ್ಬಂಧಾಭಾವ ಜನಿತ ವಿರಹ ಜ್ವರದಿ ಕಾತರಿಸಿ, ಕರಗಿ ಕಂಗೆಟ್ಟು ಕಂಬನಿಗರೆದು, ಮ ರುಗಿ ತೊಳಲಿ ಬಳಲಿ ನಿದ್ರಾನ್ನಪಾನಗಳ ತೊರೆದು ಕೃಶಳಾಗಿ, ಪಂಜರ ದ ಗಿಣಿಯ ಮಾತಾಡಿಸದೆ, ಸಖಿಯರುಪಚಾರಮಂ ಕೈಕೊಳದೆ, ಸ್ರಕ್ಚಂ ದನಾಭರಣ ದಿವ್ಯಾಂಬರಗಳ ನೊಲ್ಲದೆ, ಅತ್ಯಂತ ದುಗುಡದಿಂ ಬಿಸುಸು ಯ್ವುದ. ಈ ಸಖೀಜನರಗ್ನಿಯೊಳಗಾಜ್ಯಮಂ ಸೆರದಂತೆ ಅದೃಶ್ಯಾಲಭ್ಯ ವಸ್ತುವಂ ವಾಕ್ಯಮುಕುರದೊಳು ತೋರಿ, ಎನ್ನ ಸುವನಿಂತಳಲಿಸುವರೆಂ ಡವರ ಬಯ್ಯುತ್ತಲೊಂದುದಿನ ಸಾಯಾಹ್ನ ಸಮಯದೊಳು, ತದ್ವಿರ ಹವೇದನೆಯಂ ತರಹರಿಸಲಾರದೆ, ಆ ಸಖೀಜನರಿಂದೊಡಗೂಡಿ, ನಿಜಾ ಲಯ ಸೌಧಮನೇರಿ, ಪುರಾಂಗನಾ ಸೌಭಾಗ್ಯಮಂ ನೋಡುತ್ತ, ವೃ ದ್ಧ ಬ್ರಾಹ್ಮಣೀ ಗೃಹವ ನರಸುತ್ತ, ರಾಜಬೀದಿಯೊಳು ಬರುತಿರುವ

ಸಾಕ್ಷಾತ್ ಸಹಸ್ರಾಯುವಂ ಕಣ್ಣಾರ ತಾನೆ ನೋಡಿ ವಿಸ್ಮಿತಳಾಗಿ, ಮೈಮರೆದು, ಎಚ್ಚತ್ತು ಅಮೃತಾಸಾರ ಸಂಕ್ಲಿದ್ಯಮಾನ ನಿದಾಘ ಸಂತಪ್ತಮಾಲತೀ ಲತೆಯಂತೆ, ನಲವೇರಿ, ಸಹಚರಿಯರಂ ಕುರಿತು, ಚದುರೆಯರಿರಾ ನೀವು ಮೇಣತ್ತನೋಡಿ, ಅದಕೊ ಬೀದಿಯೊಳು, ಸ್ಫಟಿಕಮಯವೇದಿಕಾ ಮಧ್ಯಗತ ಮಲ್ಲಿಕಾಮಂಟಪದ ಸರಿಸದೊಳು, ವಿಮಲೋಡುನಿಕರಮಧ್ಯದೊಳಿರುವ ಕುಮುದ ಬಾಂಧವನಂತೆ ನಾಗರ ಸಮೂಹದೊಳು ಬರುವ ಪುರುಷೋತ್ತಮನನೆಂದು ನಿಜಾಂಗುಳಿಯಿಂದ ತೋರಲು, ಆ ಸಖೀಜನರು ಅತ್ಯಂತ ಸಂಭ್ರಮದಿಂದ ನೋಡಿ, ಸಹಸ್ರಾಯುವಂ ಕಂಡು ಪರಮ ವಿಸ್ಮಿತರಾಗಿ ನುಡಿದರೆಲೆ ತಾಯೆ, ಈತನೆ ಸಿಂಹವಂ ಸಂಹಾರವಂ ಮಾಡಿದ ಮಹಾ ಶೂರಮದನಾವತಾರ, ಇವನಿಲ್ಲಿಗೀಸಮಯದೊಳು ಬಂದನಪೇನು ಕಾರಣವೊ, ಈ ರಾಜಕುಮಾರಿಯ ಪುಣ್ಯಕ್ಕೆಣೆಯಿಲ್ಲವೆಂದು ಆಶ್ಚರ್ಯಯುಕ್ತರಾಗಿ, ರಾಜಕುಮಾರನಂ ಅನಿಮಿಷದೃಷ್ಟಿಯಿಂ ನೋಡುತಿರಲು, ಧಾನ್ಯಮಾಲಿನಿಯು ಕಾತರದಿ ಕಂಪಿಸುತ ಮನದೊಳಾಲೋಚನೆಮಾಡಿ, ಮಧುರಭಾಷಿಣಿ ಎಂಬ ಸಖಿಯಂ ಕರೆದು, ನೀನು ಪ್ರಚ್ಛನ್ನಳಾಗಿ ಪೋಗಿ, ರಾಜಕುಮಾರನಿಳಿದಿರುವ ತಾಣಮನರಿದುಬಾರೆಂದು ಕಳುಹಿ, ಸಹಸ್ರಾಯುವು ಕಣ್ಮರೆಯಾಗುವ ಪರಿಯಂತರವು ಅನಿಮಿಷ ದೃಷ್ಟಿಯಿಂ ನೋಡುತ್ತ ಚಿತ್ರಾರ್ಪಿತಳಂತೆ ನಿಶ್ಚಲಮಾಗಿ ನಿಂದು ಮೈಮರೆದು ಅನಂತರದೊಳಂತಃಪುರಮಂ ಪೊಕ್ಕು, ಮಜ್ಜನಮಂ ಮಾಡಿ ದಿವ್ಯದುಕೂಲಮನ್ನುಟ್ಟು ಸರ್ವಾಭರಣ ಭೂಷಿತಳಾಗಿ, ತದೀಯಸ್ಥಾನಮಂ ಕುರಿತು ಪೋಗುವುದೇ ನಿಶ್ಚಯಮಾಡಿ, ಸರ್ವಾಲಂಕಾರಮಂ ಮಾಡಿಕೊಳುತಿರಲಿತ್ತಲಾ ಮಧುರಭಾಷಿಣಿಯೆಂಬ ದೂತಿಯು, ಸಹಸ್ರಾಯುವಿನ ಬೆಂಬತ್ತಿ ತಾನಾತನಿಂದ ಗೋಚರಳಾಗಿ ಬರುತಿರಲು, ಮೆಲ್ಲಮೆಲ್ಲಗಾ ಸಹಸ್ರಾಯುವಜ್ಜಿಯ ಮನೆಯ ನರಸುತ್ತಲಾಕೆಯ ಮನೆಯಂ ಕಂಡು, ಒಳಪೋಗಲು, ಆ ವೃದ್ಧ ಬ್ರಾಹ್ಮಣಿಯು ಮನೆಗೆ ಬಂದ ಸಹಸ್ರಾಯುವಂ ಕಂಡು ಪರಮಾಶ್ಚರ್ಯಯುಕ್ತಳಾಗಿ, ದಿವ್ಯಪೀಠಮನೀಯಲು, ಕುಳಿತ ರಾಜಕುಮಾರನನ

ಪಚರಿಸಿ ಕುಶಲಪ್ರಶ್ನೆಯಂ ಮಾಡುತಿರಲು ಆ ಮಧುರಭಾಷಿಣಿಯು ರವಿಯಸ್ತಮಯಾನಂತರ ಮುಹೂರ್ತಮಲ್ಲಿದ್ದು, ರಾಜಕುಮಾರನು ಮಾರ್ಗವಶಾದಾದಿನವೆ ಈ ನಗರಕ್ಕೆ ಬಂದು ಮುದುಕಿಯಾಲಯದೊಳು ನಿಂತ ನಿಶ್ಚಯಮಂ ತಿಳಿದು, ಮುಂದೆ ಪ್ರಾತಃಕಾಲಕ್ಕೆ ತೆರಳುವಭಿಪ್ರಾಯಮನರಿದು, ಜವದೊಳೊಡತ್ತಿಯೆಡೆಗೈತಂದು ಧಾನ್ಯಮಾಲಿನಿಯೆಡೆಗೆ ಬಿನ್ನೈಸಲು, ಭೋಜನಮಂ ಮಾಡಿ ಕಾಲ ಪ್ರತೀಕ್ಷೆಯಂಮಾಡಿ ಪರಮರಹಸ್ಯವಾಗಿ, ಆಶಾ ಲಜ್ಜಾ ಎಂಬ ಸಖಿಯರೊಡನೈತರಲು ಮಧುರಭಾಷಿಣಿಯಿಂದೊಡಗೂಡಿ ಪ್ರಚ್ಛನ್ನಳಾಗಿ, ಉಪಾಯದಿಂದಜ್ಜಿಯ ನಿಲಯಕೈತಂದು, ವಾನರಧ್ವಜನೆಡೆಗೆ ಊರ್ವಶಿಯು ಬಂದಂತೆ, ಲಜ್ಜಾಭಯಸ್ಖಲಿತವಾದ ವಿನ್ಯಾಸದಿಂ ಮದನ ಮದಕರಿಯಂತೆ ನಡೆತಂದು, ಅಜ್ಜಿಯಾಲಯಮಂಪ್ರೊಕ್ಕು ಶಯ್ಯದೊಳ್ಕುಳಿತಿರುವ ರಾಜಕುಮಾರನ ಸಮೀಪಕ್ಕೈತಂದು ಸಾಷ್ಟಾಂಗದಿಂ ಮಣಿದು, ತಲೆವಾಗಿ ಮುಂದೆ ನಿಂದಿರಲು, ಸಹಸ್ರಾಯುವಾಧಾನ್ಯಮಾಲಿನಿಯಂ ನೋಡಿ, ವಿಸ್ಮಿತನಾಗಿ ನೈಮರೆದು, ಆ ರಾಜಕುವರಿಯಂ ಕುರಿತು, ಯಾರುನೀಂಲಲಿತಾಂಗಿ ಎನ್ನೆಡೆಗೆ ಬಂದ ಕಾರಣವೇನೆಂದು ಕೇಳಲು, ಆ ಧಾನ್ಯಮಾಲಿನಿಯು ಗದ್ಗದಸ್ವರದಿಂದ ತನ್ನ ವೃತ್ತಾಂತಮಂ ತಿಳಿಯಪೇಳಿ, ತನ್ನಕರಗ್ರಹಣಮಂಮಾಡಬೇಕೆಂದು ಬಹುಪ್ರಕಾರವಾಗಿ ಬಿನ್ನಹವನಾಡಲು, ಸಹಸ್ರಾಯು ಕಿಂಚಿತ್ಸ್ಮಿತನೋಪಾದಿಯಲ್ಲಿ ಎಲೈ ಮಾನಿನಿಯೆ, ಸತಿಯರಿಗೆ ಜನನೀಜನಕರಿರಲು ಸ್ವಾತಂತ್ರ್ಯವೆಲ್ಲಿಹುದು, ಸ್ವಚ್ಛಂದಾನುವೃತ್ತಿಯಂಬುವದು ಸತ್ಕುಲ ಪ್ರಸೂತಳಾದ ಅಂಗನೆಗೆ ಯುಕ್ತಮಲ್ಲಂತುಮಲ್ಲದೆಯು, ತಾನು ಬಹುಪತ್ನೀಕ, ರಾಜ್ಯಮಂ ತಿರುಗಿನೋಡಬೇಕೆಂಬ ಇಚ್ಛೆಯುಳ್ಳವನಾಗಿ ಬಂದಿರುವೆ. ಮುಂದೆ ನಾಳೆಯುದಯದೊಳೈದುವೆನು, ಇಂತಿರುವೆನ್ನ ಪಾಣಿಗ್ರಹಣಮಂ ಮಾಡಿದಡೆ ನಿನಗೆ ಸುಖವೇನಹುದು, ಬಾಲಬುದ್ಧಿಯಂ ಮಾಡದಿರೆಂದು ನಿರಾಕರಿಸಲು, ಆ ಧಾನ್ಯಮಾಲಿನಿಯು ರಾಜಕುಮಾರನನುಡಿಯಂ ಕೇಳಿ, ಮೈಮರೆದು ತಲೆವಾಗಿ ಪಾದದಂಗುಷ್ಠದಿಂದ ಭೂಮಿಯಂ ಬರೆಯುತ್ತಾ, ಅಶ್ರುಧಾರೆಗಳಿಂದ ಸ್ತನಕಲಶ ಕುಂಕುಮವ

ತೊಳೆಯುತ್ತ ಕರುಣಾರ್ದ್ರ ಹೃದಯನೇ ಕೇಳು, ಬಹುಮಾತಿನಿಂದೇ ನು, ತಾನು ಸನ್ಮಾರ್ಗವುಂಬಿಟ್ಟು ನಡೆಯುವಡೆದಾಸಿಯಲ್ಲ, ತನ್ನ ಮನ ದೆಣಿಕೆಯು ನೀನೊಪ್ಪದಿರೆ ಈ ತನುವನಿನಗೊಪ್ಪಿಸುವೆ, ಪ್ರುಸಿಯಲ್ಲವೀ ಮಾಶಿಗಖಿಳ ದೇವತೆಗಳೆ ಸಾಕ್ಷಿಯೆಂದಾಡಿ ಸುಮ್ಮನೆ ನಿಂದಿರುವ ರಾಜ ಕುವರಿಯ ನಿಶ್ಚಯಮಂ ತಿಳಿದು, ಕಾಂತೆ ನಿನ್ನಯ ಪಾಣಿಗ್ರಹಣವಂ ಮಾಡುವೆನು ಭಯಬೇಡವೆಂದಭಯವನಿತ್ತು, ಪೋಗೆಂದು ಅಪ್ಪಣೆಯ ನೀಯಲಾ ರಾಜಕುಮಾರಿಯು ಪರಮಾನಂದಲಹರಿಯೊಳ್ಮುಳುಗಿ ಪರವಶಳಾಗಿ, ಆತನಡಿದಾವರೆಯುಬಿಟ್ಟು ಬರಲಾರದೆ ಮರುಗಿ, ವಂದನೆಮಾ ಡಿ ಮೆಲ್ಲನೆ ಲ್ಲಸಿ ತಿರುಗಿತಿರುಗಿ ನೋಡುತ್ತ ತನ್ನ ಮನೆಗೆ ಬಂದು, ಇನನು ದಯವಾಗಲು ಜನಕನೆಡೆಗೈತಂದು, ವಂದಿಸಿ ಮುಂದೆ ನಿಂದಿರುವ ಸುತೆಯ ನಿಜರೂಪ ಜಿತರತಿಯನಂಕದೊಳಿಟ್ಟು ಲಾಲಿಸಿ, ಬಂದ ಹದನೇನೆಂದು ಕೇಳಲು, ಜೀಯ್ಯ ಕೇಳೆನ್ನ ಮನದೆಣಿಕೆಯಂ ನಿನ್ನಡಿಗೆ ಬಿನ್ನೈಸುವೆ ನು, ಅಜ್ಜಿಯಾಲಯದೊಳು ಮಾರ್ಗವಶಾದೊರ್ವ ರಾಜಕುಮಾರನು ನಿನ್ನೆ ಬಂದು ಇಳಿದಿರುವನಾತಂಗೆ ತನ್ನನಿತ್ತು ವಿವಾಹಮಾಡಿಕೊಡುವು ದೆಂದು ವಿಜ್ಞಾಪನೆಯಂ ಮಾಡಲು, ಅದಂ ಕೇಳಿ, ವೀರವರ್ಮರಾಯನು ಪರಮ ಚಿಂತಾಯುಕ್ತನಾಗಿ, ಮನದೊಳಾಲೋಚನೆಯುಮಾಡಿ, ಪ್ರಧಾನ ಪುತ್ರಂಗೆ ವಾಗ್ದಾನವಂ ಮಾಡಿರುವೆ, ತನ್ನ ನುಡಿಯನೃತವಾಗಬಾರ ದೆಂದು ಬಹುಪ್ರಕಾರ ವಡಂಬಡಿಕೆಯಂ ಮಾಡಲು, ಧಾನ್ಯಮಾಲಿನಿಯು ಕೈಮುಗಿದು ವಿನಯದಿಂದ, ತಂದೆ ವೃದ್ಧಬ್ರಾಹ್ಮಣೀಗೃಹದೊಳಿಳಿದಿರು ವ ರಾಜಕುಮಾರನಂ ವಿಚಾರಿಸಿ ನಿನಗೆ ಸಂಭಾವಿತವಾಗಿ ತೋರದಿರೆ ತರುವಾಯ ನಿನ್ನ ಚಿತ್ತಕ್ಕೆ ಬಂದಂತಾಗಲೆಂದು ಬಿನ್ನೈಸಿ, ತನ್ನಂತಃ ಪುರಕ್ಕೆ ಬರಲು, ವೀರವರ್ಮನು ಓರ್ವ ಅಮಾತ್ಯನಂ ಕರೆದು, ನೀನೇ ಪೋಗಿ ವೃದ್ಧ ಬ್ರಾಹ್ಮಣೀಗೃಹದೊಳಿಳಿದಿರುವ ರಾಜಕುಮಾರನಾರೊ ವಿಚಾರಿಸಿ ತನ್ನಡೆಗೆ ಕರೆತರುವುದೆಂದು ಕಳುಹಲು, ಅಮಾತ್ಯನು ತಾ ನೊರ್ವನೆ ಬಂದು ಸ್ನಾನವಂಮಾಡಿ ಖಂಡೇಂದುಮೌಳಿಯಂ ಪೂಜಿಸು ತ್ತಿರುವ ಸುಕುಮಾರನಂ ಕಂಡು, ಈತನೆ ಹರ್ಯಕ್ಷರಿಪುವೆಂದರಿದು, ಪ್ರ

ನಶ್ಚ ಈ ನಗರಿಗೇನುಕಾರಣ ಬಂದನೋ ಎಂದು ಯೋಚಿಸುತ ಸವಿಾಪಕ್ಕೈತಂದು ಸಾಷ್ಟಾಂಗದಿಂ ನವಿಸಿ, ಕುಶಲಪ್ರಶ್ನೆಯಂ ಮಾಡಿ, ಮಹೀಶನು ಭವನಾಗಮನವಂತಿಳಿದು ಕರೆತರುವ್ರುದೀಕ್ಷಣವೆಂದು ತನ್ನ ಕಳುಹಿದನೆಂದು ಬಿನ್ನಹಮಾಡಲು, ಸಹಸ್ರಾಯುವು, ಅಮಾತ್ಯಂಗೆ ಆಸನವನಿತ್ತು, ಬಹುಮಾನನಂ ಮಾಡಿ, ತಾನು ನಿಲ್ಲುವದಕ್ಕೆ ಸಾವಕಾಶವಿಲ್ಲ, ಮುಂದೆ ಪೋಗುವ ಕಾರ್ಯ ಗೌರವದಿ ಬಂದಿರುವೆನದರಿಂದ ಬರುವಂದು ಕಾಣುವೆನು ಎಂದು ನುಡಿಯಲು, ಮಂತ್ರಿಮಾರುತ್ತರವನಾಡಲಂಜಿ ಜವದೊಳಪ್ಪಣೆಗೊಂಡು ನರಪತಿಯೆಡೆಗೆ ಬಂದು, ಜೀಯ ಸಹಸ್ರಾಯುವು ಕಾರ್ಯಗೌರವದಿಂದ ಮುಂದೆ ಪೋಗಲು ಮಾರ್ಗವಶಾತ್ ಬಂದಿರುವನು, ಕರೆಯಲಿಂತೆಂದನೆಂದು ಬಿನ್ನಹಮಾಡಲು, ವೀರವರ್ಮರಾಯನು, ಹರ್ಷಪರವಶನಾಗಿ, ಮಗಳಪುಣ್ಯಕ್ಕೆಣೆಯಿಲ್ಲವೆಂದು ಮನದುಂಬಿದುತ್ಸಾಹದಿಂದ, ತಾನೇ ಪೊರಟು ಸಮಸ್ತ ವೈಭವದಿಂದ ಹಸ್ತಿಸ್ಕಂಧಮನೇರಿಬಂದು ಸಹಸ್ರಾಯುವಂ ಕಂಡು, ಪ್ರೇಮಾಲಿಂಗನವಂಮಾಡಿ, ಪರವಶನಾಗಿ ಕುಶಲಪ್ರಶ್ನೆಯಂಮಾಡಿ, ತನ್ನಮನೆಗೆ ಬಿಡದೊಡಂಬಡಿಕೆಯಂ ಮಾಡಿ ಕರೆತಂದು ಸ್ನಾನಭೋಜನಗಳಾದ ತರುವಾಯು ಸಮಸ್ತ ಸಚಿವಸಮಾಜದಿಂ ವೆರಸಿ, ರಾಜಕುಮಾರನಂ ದಿವ್ಯಸಿಂಹಾಸನದಿಕುಳ್ಳಿರಿಸಿ, ಸುತೆಯಂನಿನಗೀವೆ ಪಾಣಿಗ್ರಹಣಮಂ ಮಾಡಿ, ತನ್ನ ವಂಶೋದ್ಧಾರಮಂ ಮಾಡಬೇಕೆಂದು ಬಹುಪ್ರಕಾರವಾಗಿ ಪೇಳಿ ಒಡಂಬಡಿಸಿ, ಅಭಯಮಂ ತೆಗೆದುಕೊಂಡು, ದಿವ್ಯವಾದಾಲಯಮಂ ಬಿಡದಿಯಂಮಾಡಿ, ವೈಗಾವಲಿಗೆ ಸಹಸ್ರ ಸುಭಟರ ನಿರಿಸಿ ಲಗ್ನಮಂ ಪ್ರತೀಕ್ಷಿಸುತ್ತ ಸರ್ವಸನ್ನಾಹಮಂ ಮಾಡುತ್ತಲಿರ್ದನೆಂಬಲ್ಲಿಗೆ ಪಂಚಮಾಧ್ಯಾಯಂ.

ಶ್ರೀರಸ್ತು.

# ಆರನೇ ಅಧ್ಯಾಯ

## ಪ್ರಾರಂಭಃ.

ಅನಂತರದಲ್ಲಿ ಆ ಮುಖ್ಯ ಪ್ರಧಾನನು ಈ ವಾರ್ತೆಯಂ ಕೇಳಿ, ಶೋಕ ಸಾಗರದಲ್ಲಿ ಮುಳುಗಿ; ಮನದೊಳಾಲೋಚನೆಮಾಡಿ, ನೆಲೆಗಾಣದೆ, ದುಃಖಪಾರವಶ್ಯದಿಂದನ್ನಪಾನಗಳ ಬಿಟ್ಟು, ಶಯ್ಯೆದೊಳ್ಮಲಗಿರಲು, ಕನಕಾಂಗಿಯೆಂಬ ಆತನ ಕುಮಾರಿಯು, ತಂದೆಯೆಡೆಗೆ ಬಂದು, ಇಂತು ಚಿಂತಿಸಲೇನುಕಾರಣವೆಂದು ಕೇಳಲು, ಮಂತ್ರಿಯು ಕಂದೆರೆದು ವತ್ಸೆ ಪೇಳುವದೇನು, ತಮ್ಮ ಪೋಷಕನಾದ ರಾಯನುಪಚಾರವೇನೆಂಬೆ, ಮಗಳು ಜನಿಸಲು ನಿಮ್ಮಣ್ಣನಿಗೆ ಕೊಡುವೆನೆಂದು ಸಂಕಲ್ಪವಂ ಮಾಡಿ ತ್ರದಾದಿಯಾಗಿ, ಬಹ್ವಾವರ್ತಿ ಕೊಡುವೆನೆಂದು ಘಂಟಾಘೋಷವಾಗಿ ನುಡಿಯಲೀವಾರ್ತೆ ದೇಶದೊಳಗೆಲ್ಲ ವಿದಿತವಾದುದಿಂತಲ್ಲದೆ ಇತಃಪರ ಲಗ್ನ ಮುಂ ನಿಶ್ಚೈಸಿ, ವಿವಾಹ ಸಂಭಾರನುಂ ಮಾಡುತ್ತಲಿದ್ದು ಈಗ ಮೋಣಾಸಿಂಹನುಂ ಕೊಂದ ರಾಜಕುಮಾರನು ಪುನಶ್ಚ ಮಾರ್ಗವಶಾದೀನಗರ ಕೈತಂದ ವಾರ್ತೆಯಂ ಕೇಳಿ, ತಾನೆ ಆ ರಾಜಕುಮಾರನಿದ್ದೆಡಗೆ ಪೋಗಿ, ತನ್ನ ಮನೆಗಾತನಂ ಕರೆತಂದು ಮಗಳ ನೀವೆನೆಂದೊಡಂಬಡಿಸಿ, ಬೇರೆ ಬಿಡಧಿಯುಮಾಡಿ ಇರಿಸಿರುವನಂತೆ, ಲೋಕದೊಳಪಕೀರ್ತಿ ನಿಜಕಾರ್ಯ ಹಾನಿಯು ರಾಯನಿಂಗಣುಗರಿಲ್ಲದರಿಂದ ಕಂನೆಯ ನಿತ್ತಂವಗೆ ರಾಜ್ಯವು ನೀವನೆಲೆ ಕುಮಾರಿ ರಾಜ್ಯಕಸ್ವ್ಯಾಪ್ರಾಪ್ತ್ಯಭಯವುತಪ್ಪಿ ಜನರೊಳ ಪಹಾಸ್ಯವುನ್ನೈದುವಂತಾಯಿತು ಕೇಳದರಿಂದಲೀತನುವ ಬಿಡುವುದೆ ಲೇಸೆಂದು ಮಲಗಿರುವೆನೆಂದೆನಲು, ಕನಕಾಂಗಿ ಕೇಳಿ, ಒಂದು ಮುಹೂರ್ತ

ಮೌನದಿಂ ಮನದೊಳಾಲೋಚನೆಯಮಾಡಿ, ತಂದೆ ಕೇಳೆನ್ನ ಬಿನ್ನಪವ ಕಾರ್ಯವಿಭ್ರಂಶವಾದಂದು ಕಾಲ್ಗೆಟ್ಟರೇನುಂಟು, ತತ್ಸಾಧಕೋಪಾಯವ ನಾಲೋಚನೆಯಮಾಡದೆ ದೇಹವಂ ಬಿಡುವೆನೆಂಬೀಮಾತು ನಿನಗುಚಿತ ವಲ್ಲ, ಅಗಲೇ ನಾನು ಈ ಕಾರ್ಯವಂ ಸಾಧ್ಯವಂ ಮಾಡುವೆನು, ಚಿಂತಿಸಬೇಡ, ಭೋದೋಪಾಯವುಮಂಮಾಡಿ, ಬಂದಿರುವ ಮಾನುಷಾಧಮನಂ ಸಂಹಾರಮಾಡುವೆನು. ನಿನ್ನಾಣೆ ಭಯಬೇಡ ಏಳೆಂದೊಡಂಬಡಿಸಿ, ಕಾರ್ಯ ಸಂಗತಿಗಳ ಸೂಚನೆಮಾಡಿ, ತಿಳಿಸಲದಂಕೇಳಿ ಭೋಜನಕ್ಕೇಳಲಾ ಕನಕಾಂಗಿಯು ತನ್ನಂತಃಪುರಕ್ಕೆ ಪೋಗಿ ಮುಂದಿನ ಕಾರ್ಯಸಂಗತಿಗಳಾದ್ಯಂತವಾಗಿ ಮನದೊಳಾಲೋಚನೆಯಮಾಡಿ, ಸೂರ್ಯನಸ್ತಾಚಲವನೈದಿ ರಾತ್ರಿಯಾಪಾನಂತರದೊಳು, ಯಥೋಚಿತ ದ್ರವ್ಯವಂ ತೆಗೆದುಕೊಂಡು, ಅಜ್ಜಿಯಾಲಯಕ್ಕೆ ಬರಲಾವುದುಕಿ ಕನಕಾಂಗಿಯಂ ಕಂಡು ಪರಮಾಶ್ಚರ್ಯಭರಿತಳಾಗಿ ಬಹುಮಾನವಂಮಾಡಿ, ನಿಸ್ಸೀಮಭಾಗ್ಯಲಕ್ಷ್ಮಿಯರ ಸುತ್ರೈತರುವವ್ರೊಲು ಎನ್ನ ಮನೆಯ ನರಸಿ ರಾತ್ರಿಯೊಳು ಬಂದಿರುವ ಕಾರ್ಯವೇನೆಂದೆನಲು, ಆ ಕನಕಾಂಗಿಯು, ಲಜ್ಜೆಯಂ ನಟನೆಮಾಡುತ, ಎಲೈ ತಾಯೆ ಎನ್ನ ಪರಿತಾಪವ ನೇನೆಂದು ಪೇಳುವೆನು, ನಿನ್ನಾಲಯದೊಳಿರುವ ರಾಜಕುಮಾರನ ಸೌಂದರ್ಯಕ್ಕೆ ಮೋಹಿತಳಾಗಿ ಕಾಮಶರಾಹತಿಯಿಂ ಬಳಲಿ ಸೈರಿಸಲಾರದೆ, ಅನ್ಯಥಾ ಗತಿಯನರಸಿ ಕಾಣದೆ ಬಂದೆ ನಿನ್ನೆಡೆಗೆ, ತಾಯೆ, ನೀನಾತನು ತನ್ನೊಳನುರಕ್ತನಂ ಮಾಡಿಕೊಡಬೇಕಲ್ಲದಿ ನ್ನಿಲ್ಲಮಾರ್ಗಾಂತರಂ ತನಗೆ ಇಂತು ನೀಮಾಡದಿರೆ ತನ್ನ ದೇಹ ಸರ್ವಥಾ ನಿಲ್ಲಲರಿಯದು, ಕೊಡುವೆ ನಿನಗೆನಿತು ಭಾಗ್ಯಬೇಕಾದಡೆಯು ಎನ್ನ ಜೀವನವು ನಿನ್ನ ಹಸ್ತಗತವಾಗಿರುವುದೆಂದು ಬಹುಪ್ರಕಾರದಿಂ ಬೇಡಿಕೊಂಡು ತಂದಿದ್ದ ದ್ರವ್ಯಮನೀಯಲು, ಆ ಮುದುಕಿ ನಸುನಗುತ, ಎಲೈ ಬಾಲೆ, ಮೂರುದಿನಕ್ಕೆ ಮುಂಚಿತವಾಗಿ ನೀನು ಬಂದಿದ್ದೆಯಾದೊಡೆ ಪ್ರಯತ್ನಮಂ ಮಾಡಿ ನೋಡಬಹುದಾಗಿತ್ತು, ಈಗ ಎನ್ನ ಯತ್ನವಿಲ್ಲ, ತಾನೇಗೈವೆನೆಂದು ಸಂತಾಪಗೊಳಲು, ಕನಕಾಂಗಿಯುರಿಯದವಳಂತ, ಅದೇನೆಂದು ಕೇಳಲು, ಮಹೀಶನಿಂಗೆ ಈ ರಾಜಕುಮಾರನ್ನೆ

ದಿ ಬಂದಿರುವಸಂಬರ್ಧ ವಿದಿತವಾಗಲು, ಆತನೇ ಬಂದು ನಾನಾಪ್ರಕಾರ ದಿಂದೊಡಂಬಡಿಸಿ, ತನ್ನರಮನೆಗೆ ಕರದೊಯ್ದು ಅಲ್ಲಿಗೆ ಪೋದತೆರುವಾ ಯ ತನ್ನ ಕುಮಾರಿಯನಾತಂಗೆ ಕೊಡುವೆನೆಂಬರ್ಥವು ನಿಶ್ಚೈಸಿ, ಆತನನೊಡಂಬಡಿಸಿ, ಪ್ರತ್ಯೇಕವೊಂದರಮನೆಯೊಳು ನಿಖಿಳ ವೈಭವ ದಿಂದ ಇರಿಸಿ ಆತನ ವೈಗಾವಲಿಂಗೆ ಸಹಸ್ರ ಸಂಖ್ಯಾತ ಪಟುಭಟರನಿ ಟ್ಟಿರುವನೆಂದು ನಿಖಿಳ ಜನರು ಪೇಳುತಿಹರು, ಇನ್ನೆಂತು ಘಟನೆ ನಿನ ಗಾಗುವದೆನಲು, ಕನಕಾಂಗಿಯು ಮರುಗಿ ಕಂಬನಿಗರೆದು ಪ್ರಲಾಪಿಸುತ ಒಂದು ಮುಹೂರ್ತವಾಲೋಚಿಸುವಳಂತಿರ್ದು, ತಾಯೆ, ಕೇಳದಕೊಂ ದುಪಾಯವುಂ ಪೇಳುವೆನು, ಎನ್ನಲ್ಲಿ ಕರುಣದಿಂ ನೀನಂತುಮಾಡಿದಡೆ, ಘಟನೆಯಾಗುವುದೆಂದು ವಿನಯದಿಂ ಬಹುವಿಧವಾಗಿ ಪ್ರಾರ್ಥನೆಯಂ ಮಾಡೆ, ಮುದುಕಿಯು ಕರುಣದಿಂ ದ್ರವ್ಯದಾಕಾಂಕ್ಷೆಯಿಂದೊಡಂಬಡಲು ಕನಕಾಂಗಿಯಾಕೆಯಂ ತೋರೆಯಲುಚಿತವ್ರೆ ಅಂತೆ ಪೇಳಲು, ಸಂವಿಧಾ ನಸಂದರ್ಭವಾಗಿ ಮನಕೆ ತೋರಿದರಿಂದ, ಮುದುಕಿಯು ಅಂಗೀಕಾರ ಮಂಮಾಡಿ ಎಲೈ ವತ್ಸೆ, ತಾನಾತನಡೆಗೈದಿ ನೋಡಿಬರುವೆನು ನೀನು ಎನ್ನಾಲಯದೊಳೇ ಇರುವುದೆಂದು ಪೇಳಿ, ಸಡಗರದೊಳಾರಾಜಕುಮಾರ ನಿರುವ ಅರಮನೆಯೆಡೆಗೆ ಬಂದು, ದ್ವಾರದೊಳು ನಿಲ್ಲಲಾ ಕಾವಲ ಭಟರು ರಾತ್ರಿಕಾಲದಲ್ಲಿ ಬಂದುನಿಂದಿರುವ ಮುದುಕಿಯಂ ಕಂಡು ನೀನಾರು ಇಲ್ಲಿಗೀರಾತ್ರಿಯೊಳು ಏನುಕಾರಣ ಬಂದು ನಿಂದಿರುವೆ ಎಂದು ಕೇಳಲು ರಾಜಕುಮಾರಂಗೆ ಪೂರ್ವ ಪರಿಚಿತಳು ತಾನಾದಕಾರಣ ಕುಮಾರನು ಕಂಡು ಮಾತಾಡಲೋಸುಗ ಬಂದಿರುವೆ ನಾತಂಗರಿಕೆಯಂ ಮಾಡಿನೀವೆಂ ದೆನಲು, ದೌವ್ವಾರಿಕರು, ಮುದುಕಿಯ ನುಡಿಯಂ ಕೇಳನಗುತ ಎಲೈ ಜರಠೆಯೆ ಕೇಳು, ನಾಕಲೋಕವೆಲ್ಲಿ ನರಿಯಮೋರೆಯೆತ್ತ ರಾಜಕು ಮಾರನೆತ್ತ ನೀನೆತ್ತ ಪೋಗು ಪೋಗೆಂದೆನಲು, ಅದರೊಳೊರ್ವ ವೃದ್ಧನಾದವನು ಅವರ ನಿಂದಿಸುತಲೆಂದ ತಮಗೇನು ಈ ಸುದ್ದಿಯಂ ರಾಜಕುಮಾರಂಗೆ ಬಿನ್ನೈಸಿ, ಎಂತಾಜ್ಞೆಯಾಗೆ ಸೇವಿನಿತು ಮಾಡಿರಿ ಯಂದು ನುಡಿಯಲು, ಓರ್ವ ರಾಜಪುರುಷನು ಬಳಪೊಕ್ಕು, ರಾಜಕು

ಮಾಳಿಗೆ ಮಣಿದು ಜೀಯಾ, ದ್ವಾರದೊಳೋರ್ವ ವೃದ್ಧಬ್ರಾಹ್ಮಣಿಯು ಅಡಿದಾವರೆಯ ಕಾಣಬೇಕೆಂದು ಬಂದು ನಿಂದಿರುವಳು ಆಕೆಯಡಿದಾವರೆಯ ಪೂರ್ವಪರಿಚಿತಳೆಂದು ನುಡಿಯುತಿಹಳೆಂದೆನಲು, ತಡೆ ಏತಕೆ ಬಿಡುವುದೆಂದು ಅಪ್ಪಣೆಯನೀಯಲು, ದೌವಾರಿಕನು ಬಾಗಿಲಿಗೆಬಂದು ಮುದುಕಿಯಿಂದೊಡಗೂಡಿ, ಒಳಪೊಕ್ಕು ರಾಜಕಂಠೀರವನ ತೋರಿ ತಾನು ತನ್ನೆಡೆಗೆ ಬರಲು, ಮುದುಕಿಯು ಸಹಸ್ರಾಯುವಂ ಕಂಡು ಬಹುವಿಧವಾಗಿ ಹರಸುತ್ತ ಇದಿರಿಂಗೆನಿಲ್ಲಲು ಕುಮಾರನಾಕೆಗಭಿವಂದಿಸಿ ಕುಳ್ಳಿರಿಸಿ ನಿಶಿಯೊಳಗೆಬಂದ ಹದನೇನೆಂದುಕೇಳಲು, ಮುದುಕಿಯು, ವತ್ಸ, ಕೇಳೆನ್ನ ಕರ್ಮಾನುಭವವನೇನೆಂಬೆ ನೆನಗೆ ಪುಟ್ಟಿದಮಕ್ಕಳೆಲ್ಲರಂ ಕಾಡಿಗಾನಿಕ್ಕಿದೆನು, ಕಡೆಗೆ ಎನ್ನೆದೆ ಶೂಲವಾಗಿ ವೃದ್ಧಾಪ್ಯಕಾಲದೊಳು, ಸ್ವಸ್ಥವಾಗಿ ಶರೀರವಂ ಬಿಡದಂತೆನ್ನೈವಮಾಡಿದುದೆಂದು ದುಃಖಿಸಲು, ಪರಮಕರುಣಾಶಾಲಿಯಾದ ಕುಮಾರನು ತಾಯೆ ವೃತ್ತಾಂತವಂ ಪೇಳು ದುಃಖಿಪೆ ಏತಕೆಂದೆನಲು, ಕಪಟೋಪಾಯವಿಚಕ್ಷಣಳಾದ ಮುದುಕಿಯು ರಾಜಕುಲರತ್ನನೇ ಕೇಳು, ಎನಗೋರ್ವ ಸುತೆ ಇರುವಳವಳನು ಸತ್ಕುಲಪ್ರಸೂತನಾದೋರ್ವ ಶ್ರೋತ್ರಿಯ ವಟುವಿಗಿತ್ತು ವಿವಾಹವಂಮಾಡಿದೆನು, ಪತಿಯಗೃಹದಲ್ಲಿ ದರಿದ್ರಾನುಭವವಮಾಡಲಾರದೆ ನೆನ್ನಯನಾಲಯಕೆ ಬಂದು ಯುಷ್ಮದಾಖ್ಯಾನವಂಕೇಳಿ ಪರಮಹೃಷ್ಟಮನಸ್ಕಳಾಗಿ ತನ್ನಕರಕೊಂಡೈದಿ ತವಚರಣನಳಿನದೆಡೆಯಂ ಸೇರಿಸಿದೆಯಾದೊಡೆ ಆತನ ವಿವಾಹದೊಳು ತನ್ನ ದಾರಿದ್ರ್ಯವಂ ಪರಿಹಾರವಂ ಮಾಡಿಕೊಂಬುವೆನೆಂದು ಮರುಗುತ್ತಲೆನ್ನಂಕಳುಹೆ ಬಂದೆನಿನ್ನಡಿಗೆ ಬಿನ್ನೈಸಿ ಆಕೆಯಂ ನಿನ್ನಸನ್ನಿಧಿಯಲ್ಲಿ ಬಿಟ್ಟುಪೋಗುವೆನೆಂದು ಬಹುಪ್ರಕಾರವಾಗಿ ಹೇಳಿಕೊಳಲು, ರಾಜಕುಮಾರನು ಮುದುಕಿಯ ಕಪಟವನರಿಯದೆ ವಿವೇಕಿಯಾಗಿಯುಂ ಮುಂದಿನಾಲೋಚನೆಯಂ ಮಾಡದೆ ಕರುಣಾಶಾಲಿಯಾದಕಾರಣ ಅಪ್ಪಣೆಗೊಡಲು, ಮುದುಕಿಯು ಬಂದಕಾರ್ಯವಾದುದೆಂದು ಸಂಭ್ರಮಯುಕ್ತಳಾಗಿ ಅಪ್ಪಣೆಗೊಂಡು ತನ್ನ ಮನೆಗೈತಂದು ನಡೆದ ವೃತ್ತಾಂತವಂ ಕನಕಾಂಗಿಯೊಡನುಸುರೆ ಕೇಳುತ್ತಾನಂದಾಬ್ಧಿಯೋ

ಳ್ಳು ಳುಗಿ ವೈಮುರೆದು ತನ್ನಂಗದೊಳಗಿರ್ದ ಸರ್ವದಿವ್ಯಾಭರಣಗಳ ತೆಗೆ ದಾವುಮುಖಕಿಗಿತ್ತು ಮತ್ತೆ ನಾಳೆ ನಿನಗಧಿಕ ಧನಕನಕವು ನೀವೆನೆಂದು ಹೇಳಿ, ತನ್ನಮನೆಗೈತಂದು ನಿಶಿಯೆಲ್ಲ ಮುಂದಣಗತಿಯನಾಲೋಚಿಸುತ, ರವಿಯುದಯದೊಳಗೆದ್ದು ಮಜ್ಜನಮಾಡಿ ಮಡಿಯುಟ್ಟು ಸರ್ವಾಭರಣ ಭೂಷಿತಳಾಗಿ, ಬಹುಚಿಂತಾಕ್ರಾಂತಳೋಪಾದಿಯಲ್ಲಿ ವೇಷಮಂಧರಿಸಿ ಧಾನ್ಯಮಾಲಿನಿ ಯು ಅರಮನೆಗೆಬಂದು ಇದಿರ್ಗೆನಿಂದು ಕರವಮುಗಿಯಲು ಪ್ರಿಯಸಖಿಯಾದ ಕನಕಾಂಗಿಯು ಪರಮಚಿಂತಾಯುಕ್ತಳಾಗಿ ಬಂದಿರು ವ ಭಾವವಂನೋಡಿ ಕುಶಲಪ್ರಶ್ನೆಯಂಮಾಡಿ ಬಂದ ಹದನೇನೆಂದು ಕೇಳಲು, ಕನಕಾಂಗಿಯು ಪ್ರತ್ಯುತ್ತರವನಾಡದೆ ತಲೆವಾಗಿ ಕಂಬನಿಯಬಿಡಲು, ರಾಜಕುಮಾರಿಯು ಬಹುಪ್ರಕಾರವಾಗಿ ಸಮಾಧಾನವಂಮಾಡಿ ಇವಳಭೀಮೋಪಾಯಮನರಿಯದೆ, ಏತಕಳುವೆ ನೀನಂಜದೆ ಹೇಳೆಂದುಕೇಳಲು, ಕನಕಾಂಗಿಯು ಮನದಿ ಹರುಷವುಳ್ಳವಳಾಗಿ ಬಹಿರ್ದುಗುಡದಿಂ ರಾಜಪುತ್ರಿಯೊಡನೆ ಕೇಳ್ಳೆ ತಾಯೆ, ಎನಗಭಯಮನಿತ್ತೆಯಾದೊಡೆಬಿನ್ನೈಸುವೆನೆಂದು ನುಡಿಯಲು, ಕುಮಾರಿಯು ಅಭಯಮನಿತ್ತು ಪೇಳುವುದೆನಲು, ಜನನಿಕೇಳವ್ವ, ತನ್ನಗ್ರಜನಿಗೂ ತನಗೂ ಮಹಾದನರ್ಥವಿವಾದವಾಗಿ ವೈಮನಸ್ಯದಿಂದ ತಮ್ಮಣ್ಣನು ಭವತ್ಪಾಣಿಗ್ರಹಣಮಾದತರುವಾಯ ಸಕಲಧರಾಧಿಪತ್ಯತನಗೆಬರುವದು ಅನಂತರದಲ್ಲಿ ನಿನಗೆ ಅವಮಾನವಂಮಾಡಿ ಅಡವಿಯಂಹತ್ತಿಸುವೆನೆಂದು ಶಪಥಮಂಮಾಡಿ ಜರಿಯಲು, ತಾನು ಮಹದಾಗ್ರಹಬಂದು ಸರ್ವಪ್ರಕಾರದಿಂದಲು, ರಾಜಕನ್ಯಾಕರಗ್ರಹಣ ನಿನಗಾಗದಂತೆ ಮಾಡುವೆನು, ನೋಡೆನ್ನ ಸಾಹಸವನೆಂದು ತಾನುಶಪಥಮಂಮಾಡಿದೆನು, ಮುಂದಿನಾಲೋಚನೆಯನರಿಯದೆ ಬಾಲ್ಯಬುದ್ಧಿಯಿಂದದುಕಾರಣ ನಿನ್ನಡಿಗೆ ಶರಣಾಗತಳಾಗಿ ಬಂದಿರುವೆ ಎನ್ನನುಡಿಯಂ ನೀನುಮೇಲುಮಾಡಲು, ನಿನ್ನ ದಾಸಿಯಾಗಿರುವೆ ನೀಸಮಯದೊಳುಪೇಕ್ಷೆಯಂಮಾಡಿದೆಯಾದೊಡೆ ದೇಹವಂ ಕಳೆವೆನಲ್ಲದೆ ಜೀವಿಸುವನಿಲ್ಲಿದುವೆ ಫಲಿತಾರ್ಥ, ನಿನ್ನಡಿಯಾಣೆ ನಿಶ್ಚಯವೆಂದು ಕಂಬನಿದುಂಬಿ ಧಾನ್ಯಮಾಲಿನಿಯು, ಸ್ನೇಹಾನುಬದ್ಧ ಹೃದಯಳಾದಕಾರಣ ಸಖ್ಯ

ಮೊದೇತ್ರಿಳದು ಸ್ವಾಗತವಂ ತಿಳಿಸಿ, ರಾಜಪುತ್ರನ ವೃತ್ತಾಂತವಂ ಸ ವಿಸ್ತಾರವಾಗಿಪೇಳಲು, ಕನಕಾಂಗಿಯು ಪರಮಸಂತೋಷಾಭಿನಯ ಮಂಮಾಡಿ, ಈ ರಾಜಕುಮಾರನ ವಿವಾಹ ನಿನಗಾದಡೆ ಭವತ್ಪುಣ್ಯಕೆಣೆ ಯಿಲ್ಲ ಲೋಕೋತ್ತಮನಾದ ಪುರುಷನಾತನು ಪೂರ್ವದಲ್ಲಿ ಈ ನಗರ ಕೈತಂದು ಕಂಠೀರವನಕೊಂದು ಸರ್ವರನ್ನುದ್ಧಾರಮಾಡಿದಸಮಯದೊ ಳು ಆಸಕ್ತಿಯಿದ್ದರೂ ಅದೃಷ್ಟಹೀನಳಾದಕಾರಣ ಆ ಕುಮಾರನಂಗ ಸಂಗತನಗಾಗಲಿಲ್ಲ, ಮಹಾನುಭಾವಳಾದಕಾರಣ ನಿನಗೆ ಲಭ್ಯವಾದುದು ಎಂತಾದಡೆಯು ತಮ್ಮಣ್ಣನಿಗೆ ತಪ್ಪಿದಡೆ ತಾನು ಸುಕೃತಿಯೇ ಸರಿಯೆಂ ದು ಕನಕಾಂಗಿ ನುಡಿಯಲು, ಧಾನ್ಯಮಾಲಿನಿಯು ಆಶ್ಚರ್ಯಯುಕ್ತಳಾಗಿ ಎಲೈ ಪ್ರಿಯಸಖಿಯೇ ಏಕೋದರರಾದನಿವಿಮ್ಮರ್ವರಿಗೆಪಿಕಾದೃಶ ವೈರಾ ನುಸಂಧಾನವೇನುನಿಮಿತ್ತವೆಂದು ಕೇಳಲು, ಕನಕಾಂಗಿನುಡಿದಳೆಲೈ ತಾ ಯೆ ತಮ್ಮ ತಂದೆಯ ಸಮೀಪಕ್ಕೆ ಮಹಾತಪಸ್ವಿಯಾದ ಬ್ರಹ್ಮರ್ಷಿ ಯು ಬಂದು ಬಹುಪೂಜಿತನಾಗಿ ಕರುಣದಿಂ ಯಕ್ಷರಕ್ಷೋಗರುಡಗಂಧರ್ವ ದೇವತೆಗಳೇಮೊದಲಾದವರಿಂದ ಅವಧ್ಯವಾದ ದಿವ್ಯಮಾಲಿಕೆಯನಿತ್ತು ನಿಜಾಶ್ರಮವಂಕುರಿತುಪೋಗಲು, ತಮ್ಮತಂದೆಯಾಮಾಲಿಕೆಯಂ ತನ್ನ ಮೇಲಣ ಪ್ರೇಮದಿಂದೀಯಲು ಅದಂಕಂಡು ತಮ್ಮಣ್ಣನತಿದುಃಖಿತನಾ ಗಿ ಮಾಲಿಕೆಯುತನಗಾಗಬೇಕೆಂದು ಬಹುವಿಧವಾಗ ಪ್ರಾರ್ಥಿಸಲು ತಾ ನು ಆ ಮಾಲಿಕೆಯಂ ಕೊಡದಿರಲು, ಕೋಪದಿಂ ಪೂರ್ವೋಕ್ತವಾದ ವಿ ವಾದನಡದು ತನ್ನಲ್ಲಿರುವ ಮಾಲಿಕೆಯನ್ನು ಬಲಾತ್ಕಾರದಿಂದವಮಾನವ ಮಾಡಿ ಸಾಧಿಸುನೆನೆಂದು ಪ್ರತಿಜ್ಞೆಯಂಮಾಡಿ ಮಹಾದರಿದ್ರನಾದವಂಗೆ ನಿನ್ನ ವಿವಾಹವಂಮಾಡುವೆನೆಂದು ಶಪಥವಂಮಾಡಲು, ತಾನಂಜಿಮಾಲಿ ಕೆಯನೀಯಲುಪೋಗೆ ಪ್ರತಿಜ್ಞೆಯಂ ಮಾಡಿದಬಳಿಕ ಮುನ್ನಾಡಿದಂತೆ ಮಾಡುವೆನಲ್ಲದೆ ಮಾಲಿಕೆಯನೊಲ್ಲನೆಂದು ಧಿಕ್ಕಾರಮಾಡಲು, ತಾನು ಭ ಯಪಟ್ಟು ಬೇರೊಂದುಪಾಯಮಂಕಾಣದೆ ಶರಣಾಗತಳಾಗಿ ನಿನ್ನಡಿಯ ಸಮೀಪವನ್ನೈದಿದೆನಾದಕಾರಣ ಉಪೇಕ್ಷೆಯಂಮಾಡದೆ ಎನ್ನ ಪ್ರತಿಜ್ಞೆ ಯಂನಡಿಸಬೇಕೆಂದು ಪ್ರಾರ್ಥನೆಯಮಾಡಲು, ಆ ರಾಜಕನ್ಯೆ ಕನಕಾಂ

ಗಿಗಭಯವನಿತ್ತು ತಾನಿದ್ದಲ್ಲಿ ನೀನಿರೆಂದು ಕಟ್ಟಲೆಯಂಮಾಡಿ ಈರ್ವರು ಸುಖದಿಂದಿರುತ್ತಿರಲೊಂದುದಿನ ಈ ಕಪಟೋಪಾಯ ವಿಚಕ್ಷಣಳಾದ ಕನಕಾಂಗಿಯು ಧಾನ್ಯಮಾಲಿನಿಯಂ ಕುರಿತು ತಾಯೆ ಅವಧರಿಪುದೆನ್ನ ಬಿನ್ನಹವ ನಿನ್ನಿಂದ ಪತಿತ್ವೇನ ನಿಶ್ಚಿತನಾಗಿರುವ ರಾಜಕುಮಾರನು ಸೌಂದರ್ಯಪರಾಕ್ರಮಂಗಳಲ್ಲಿ ಅದ್ವಿತೀಯ್ಯನೀಲೋಕದೊಳು ಸಂಶಯವಿಲ್ಲ ಗುಣಶೀಲಾದಿಗಳೆಂತಿರುವುದೊ ತಿಳಿಯಕೂಡದು ಅದೇಕೆಂದರೆ, ಶೀಲಂಸಂಪಸತಾಜ್ಞೇಯಂ ತಚ್ಚಕಾಲೇನಭೂಯಸಾ॥ ಎಂಬನ್ಯಾಯವಿದೆಯಾದಪ್ರಯುಕ್ತ ಬಹುಕಾಲಸಹವಾಸ ಹೊರತಾಗಿ ಶೀಲಸ್ವಭಾವಗಳು ತಿಳಿಯಕೂಡದಾದಕಾರಣ ತನ್ನ ಮನೋವೃತ್ತಿ ವ್ಯಥಾಯುಕ್ತವಾಗಿರುವುದೆಂದುಮೇಣದು ತಿಳಿಯದವನಂ ವರಿಸಕೂಡದದುಕಾರಣವಿದಗ್ಧೆಯರಾದ ಸಖಿಯರ ನವನಲ್ಲಿಟ್ಟು ಪರೀಕ್ಷಿಸಿ ತಿಳಿಯಬೇಕೆಂದು ನುಡಿಯಲು, ಆ ರಾಜಕುಮಾರಿಯು ಯುಕ್ತವೆಂದು ತಿಳಿದು ಮನದೊಳಾಲೋಚನೆಯಮಾಡಿ ನಿನಗಿಂತ ಪರಮಾಪ್ತಳಾದ ವಿವೇಕಿಯಾದ ಮಾನಿನಿಯುಂಟೆ ಅದರಿಂದ ನೀನೆಪೋಗಿ ತಿಳಿದು ಬರಬೇಕೆಂದು ಪೇಳಲು, ಕನಕಾಂಗಿಯಂವಳೆಲ್ಲೈತಾಯೆ ನಿನ್ನಡಿಯದಾಸಿಯಾದೆನಗೆ ಮಾರುತ್ತರನಾಡಲೇನುಂಟು ಅಪ್ಪಣೆಯನೀಯ್ಯಲಾಂ ಪೋಗಬರುವೆನೆಂದೊಡಂಬಡಲು, ಧಾನ್ಯಮಾಲಿನಿಯು ಕನಕಾಂಗಿಗೆ ವಸ್ತ್ರಾಭರಣವನಿತ್ತು ಬಹುಮಾನವಂಮಾಡಿ ಹೋಗಿಬಾರೆಂದು ಅಪ್ಪಣೆಯನಿಯ್ಯಲು,ಕನಕಾಂಗಿಯು ತಾನುಪೋದಡೆ ಆತಂಗೆ ಸಂಶಯ ತೋರುವುದೋ ಏನೋ, ಅದರಿಂದ ನಿನ್ನ ಕಂಠದೊಳಿರುವ ಚಂದ್ರಹಾರವನಿತ್ತೆ ಯಾದೊಡೆ ಈ ಹಾರವಂ ನಿನಗೆ ಒಪ್ಪಿಸುವೆನೆಂದು ನೀನು ಕಳುಹಿದಳೆಂದು ಪೇಳುತಾತಂಗೆ ಮಾಲಿಕೆಯನಿತ್ತು ಆತನ ಗುಣಶೀಲಾದಿಗಳಂ ತಿಳಿದು ಬರುವೆನೆಂದು ನುಡಿಯಲು, ಧಾನ್ಯಮಾಲಿನಿಯು ಚಂದ್ರಹಾರವನಿತ್ತು ಕಳುಹಲಾ ಕನಕಾಂಗಿಯು ಅಲ್ಲಿಂದ ತೆರಳಿ ತನ್ನಾಲಯಕ್ಕೆ ಬಂದು ತನ್ನುತ್ತಮವಾದ ಮಾಲಿಕೆಯಂತೆಗೆನು ಬಹುದ್ರವ್ಯವಂ ತೆಗೆದುಕೊಂಡು ವೃದ್ಧಳಾಲಯಕೆ ಪೋಗಿ ಆಂವ ದ್ರವ್ಯವನೂಳಕೆಗಿತ್ತು ರಿಕ್ತ ವೇಷವಂ ಧರಿಸಿ

ಮುದುಕಿಯಿಂದೊಡಗೂಡಿ ರಾಜಕುಮಾರನಿರುವಾಲಯಕೆ ಪೋಗಿ ವೃದ್ಧಳು ಮಗಳ ವೃತ್ತಾಂತಮಂ ತಿಳಿಸಿ ಆತನಧೀನಮಂ ಮಾಡಿ ತನ್ನಾಲಯಕ್ಕೈತರಲು ಇತ್ತಲಾ ಕನಕಾಂಗಿಯು ರಾಜಕುಮಾರನ ನಾನಾಪ್ರಕಾರವಾಗಿ ಶುಶ್ರೂಷೆಯನ್ನಭಿಪ್ರಾಯಾನುಗುಣವಾಗಿ ಮಾಡುತ್ತ ಆತನಾಂತರ್ಯ ತನ್ನೊಳನುರಕ್ತವಾಗುವಂತೆ ಸೇವೆಯಂ ಮಾಡುತ್ತಿರಲು, ಆ ಸಹಸ್ರಾಯುವಾಕೆಯ ಲಾವಣ್ಯಕಾರ್ಪಣ್ಯ ಶುಶ್ರೂಷಗಳಿಂದನುರಕ್ತ ಹೃದಯನಾಗಿ ವಿಸ್ಮಯಪಡುತ್ತಿರಲು, ಕನಕಾಂಗಿಯಾತನಭಿಪ್ರಾಯಮಂ ತಿಳಿದೊಂದುದಿನ ಶಯನಗೃಹದೊಳಗೆ ಕಲ್ಪದೊಳ್ಮಲಗಿರುವರಾಜಕುಮಾರಂಗೆ ವೀಳೆಯವನಿತ್ತು ಆತನು ಪ್ರಸಾದಾಭಿಮುಖನಾಗಿರುವಭಿಪ್ರಾಯಮಂ ತಿಳಿದು ಇದೇ ಸಮಯವೆಂದು ಕೇಳ್ಳೈ ಮಹಾರಾಜನೆನ್ನ ವೃತ್ತಾಂತಮಂ ವಿಚಾರಿಸಿ ಎನ್ನಿಷ್ಟಾರ್ಥಪೂರ್ತಿಯಂ ಕರುಣದಿಂ ಮಾಡಬೇಕೆಂದು ಲಜ್ಜಾಭಯಸ್ಖಲಿತ ಚತುರೋಕ್ತಿಯಿಂ ಬೇಡಿಕೊಳ್ಳಲು ರಾಜಕುಮಾರನು ಮರುಳಾಗಿ ಕರುಣದಿಂದೀಕೆದಾರಿದ್ರ್ಯವನನುಭವಿಸಲಾರದೆನ್ನ ಸೇವೆಯಂ ಮಾಡಿ ಏನೋ ಬೇಡುವಳೆಂದು ನಿಶ್ಚೈಸಿ ಎಲೈ ಮಾನಿನಿಯೇ ನಿನ್ನ ವೃತ್ತಾಂತಮಂ ಎನ್ನಿಂದಲಾಗುವ ನಿನ್ನ ಮನೋರಥವ ಪೇಳೆನಲು ಕನಕಾಂಗಿಯು ಅಭಯಮನಿತ್ತಯಾದೊಡೆ ವಿಜ್ಞಾಪನೆಯ ಮಾಡುವೆನು ಬರಿದೆಹೇಳಿ ಫಲವೇನು ಎನಲು ನಗುತ ಸಹಸ್ರಾಯುವು ಅಭಯಮನಿತ್ತು ಪೇಳೆನಲು ಕನಕಾಂಗಿ ತಲೆವಾಗಿ ಲಜ್ಜೆಯಿಂದೆಂದಳೆಲೆಕೆ ಧೀರ ಎನ್ನ ಜನನಿಯುತ್ತಮನಾದ ದ್ವಿಜವರಗೆ ವಿವಾಹವಂ ಮಾಡಿ ಕೊಡಲಂದಿನಾರಭ್ಯ ಪತಿಶುಶ್ರೂಷೆಯಂ ಬಹುಪ್ರಕಾರವಾಗಿ ಮಾಡಲು ಆದ್ವಿಜವರನು ಯನ್ನ ಕಾರ್ಪಣ್ಯವಂ ನೋಡಿ ಮರುಗುತ್ತ ಎನ್ನೊಡನೆ ಮಾತಾಡಿದನೆಲೈ ಸತಿಯೆ ಬಹುಕಾಲದಿಂದಲೆನ್ನ ಶುಶ್ರೂಷೆಯಂ ಮಾಡಿ ಕೃಶಳಾದೆ, ಎನಗೆ ಪುಂಸ್ತ್ವವೂಯಿಲ್ಲ ಬರಿದೆ ನಿನ್ನಳವಿಸುವದು ತನಗೆ ಧರ್ಮವಲ್ಲದಗಿಂದ ತಾನು ಮಹದಡವಿಯಂ ಪೊಕ್ಕು ತಪವಮಾಡುವೆನು ಇತಃಪರ ನೀನು ಎನ್ನಾಶೆಯಂ ಬಿಟ್ಟು ಸತ್ಯಸಂಧನಾದ ಗುಣಶಾಲಿಯಾದ ಮಹಾಕುಲಪ್ರಸೂತನಾದ ನಿನಗನುರೂಪನಾದ ಪತಿಯನರಸಿ ವೈ

ಷಯಿಕ ಸುಖದಿಂದ ಬಾಳು ನಿನಗವರಿಂದ ಪಾತಿವ್ರತ್ಯಭಂಗವೆಳ್ಳನಿತು ಕೇಳೆನ್ನವರದಿನಿಲ್ಲವೆ ಪೋಗಲಿ ನಿನ್ನಸಂಗಮಾಡಿದವನಿಗೆ ಅನ್ಯಯೋಷಿದ್ಗಮನದುರಿತ ಸಂಬಂಧವು ಇಲ್ಲದೆಪೋಗೆಂದೆನಗೆ ವರವನಿತ್ತು ತಪೋವನವ ಕುರಿತು ನಡೆಯಲು, ಅನಾಥಳಾಗಿರಬಾರದೆಂದು ಜನನಿಯು ಮನೆಗೆಬಂದು ಭವಪಾಮನವಂಕೇಳಿ ಅಲ್ಲಿಂದ ನಿನ್ನೊಳನುರಾಗದಿಂ ಬಂದು ನಿನ್ನಡಿಯ ಮೊರೆಪೊಕ್ಕೆ ಕರುಣದಿಂದೆನ್ನನಂಗೀಕರಿಸಿ ಪಾಲಿಸಿದ್ದಾದೊಡೆ ತಾನು ಪುಟ್ಟಿದುದಕೆ ಸಾಫಲ್ಯಮಲ್ಲದೆ ನೀನುಪೇಕ್ಷೆಯಂಮಾಡಲೀ ದೇಹವಿದ್ದೇನುಫಲ ಸುಭಗನೆ ಕೇಳೆಂದೆನುತ ರಾಜಕುಮಾರನ ಚರಣಗಳ ಬಿಗಿದಪ್ಪಿ ಬಹುವಿಧದಿಬೇಡುತಿರಲು, ಸಹಸ್ರಾಯು ಇವಳ ಕಪಟೋಪಾಯಮನರಿಯದೆ ಮುಂದಿನಾಲೋಚನೆಯಮಾಡದೆ ಯುಕ್ತಾಯುಕ್ತ ವಿಚಾರಮಂಮನಸಿಂಗೆತಾರದೆ, ದಾಕ್ಷಿಣ್ಯಪರನಾದಕಾರಣ ಕ್ಷಣಮನದಿಚಿಂತಿಸುತ ಅಹ. ಪ್ರಮಾದ ಬಂದುದೇಗೈವೆ ತೋರದು ಧಿಕ್ಕಾರಮಾಡಿದಡೆವೃಥಾ ಸ್ತ್ರೀಹತ್ಯೆ ತನಗೆಬರುವುದು ಇಂತೀಕೆಗಾಸ್ಪದವನಾಂಕೊಡಬಾರದಾಗಿತ್ತು ಮೊದಲಲ್ಲಿ ಈಗ ನುಡಿದೇನುಫಲವೆಂದುನಾನಾವಿಧದಿಚಿಂತಿಸುತ ನಿಶ್ಚೈಸುತೊಡಂಬಟ್ಟು ಕಾಂತೆಯಂ ತೆಗದು ಬಿಗಿದಪ್ಪಿ ಮುದ್ದಿಸುತ ನಾನಾವಿಧಕ್ರೀಡೆಯಿಂದಾಕೆಯಂಬಳಲಿಸುತ ಮುಂಗುರುಳನುಗುರಿನಿಂ ತಿದ್ದುತಧರಾಮೃತವಸವಿದು ಸಮವಿಷಮರತಿಯಿಂದ ಶ್ರಾಂತನಾಗುತಲಿಂತು ಕಪಟವಾನಿನಿಯ ಬಿಬ್ಬೋಕಜಾಲದೊಳುಸಿಕ್ಕಿ ಮುಂದಿರುವನರ್ಥಮನರಿಯದೆ ಕನಕಾಂಗಿಯೊಡನಿಂತು ರವಿಸುತ್ತಸಕಲಾರ್ಥಮಂ ಮರೆದು ದಿನಗಳೆಯುತಿರ್ದ, ಕೇಳರಸ ಮಾನಿನಿಯರೊಲುಮೆನೆಂತಟೊ ಶಿವಶಿವಾ ಕನಕಾಂಗಿ ಇಂತು ಸಹಸ್ರಾಯುವುತನ್ನೊಳನುರಕ್ತನಾಗಿರುವದಂಕಂಡು ತನ್ನಭೇದೋಪಾಯ ಸಾಫಲ್ಯಮಾದುದೆಂದು ಹರ್ಷದಿಂ ಮುಂದಿನಾಲೋಚನೆಯಮಾಡಿ ನಿಶ್ಚೈಸುತೊಂದುದಿನ ರಾಜಕುಮಾರನಂ ಕುರಿತು ವಂದನೆಯಮಾಡಿ, ಆರ್ಯಪುತ್ರನೆ ಕೇಳು ಜನನಿಯಂ ನೋಡಬೇಕೆಂಬ ಇಚ್ಛೆಯುಳ್ಳವಳಾಗಿರುವೆ ನಪ್ಪಣೆಯ ಕೊಡಬೇಕೆನಲು ರಾಜಕುಮಾರನಾನುಡಿಯಂಕೇಳಿ ಅವಶ್ಯಮಾಗಿ ಪೋಗಿಬರುವುದೆನಲು ನಿಶಾ

ವಸಾನದೊಳು ವಿರಳಾಂಧಕಾರದೊಳು ತನ್ನ ಮನೆಗೈತಂದು ಆದಿನವೆಲ್ಲ ಮನೆಯೊಳಿರ್ದ ದಿನವಣಿಯುಸ್ತಮಯವಾದನಂತರ ದಶಘಟಿಕಾನಂತರ ದೊಳು ಸ್ವಾಲಯದಿಂಹೊರಟುಪುರುಷ್ಯ ರಾಜಕುಮಾರನಾಲಯಕೆಬಂದುರಾ ಜಕುಮಾರನಂಕಂಡು ವಂದಿಸಿ ಬಹುಖಿನ್ನಳೋಪಾದಿಯಲ್ಲಿದಿರ್ಗನಿಂದಿರು ವಳಂನೋಡಿ ರಾಜಕುಮಾರನು ಎಲೈ ಶುಕವಾಣಿಯೆ ನಿನ್ನ ಮೊಗದಾವ ರೆಯು ಬಾಡಿರುವುದ್ಯಾತಕೆನಲು, ಕನಕಾಂಗಿಯು ಪ್ರತ್ಯುತ್ತರವನಾಡದೆ ಕಂಬನಿಗರೆಯಲು, ಸಹಸ್ರಾಯುವೇನುಕಾರಣವೇಳೆಂದು ಲಾಲಿಸಿ ಕೇಳ ಲು ಕಪಟೋಪಾಯ ಕುಶಲಳಾದ ಕನಕಾಂಗಿಯು ತಾನುಪುಟ್ಟಿದಾಗಭ್ಯ ವಮಾನುಷಾನಂದವನರಿಯದೆ ಪರಮದುಃಖಾನುಭವವಂನೆಮಾಡಿ ಅನೇ ಕಜನ್ಮಗಳಲ್ಲಿಮಾಡಿದ ಸುಕೃತದಿಂದ ಲೋಕಾತಿಶಯವಾದ ನಿನ್ನಡಿಯ ನಾಶ್ರಯಿಸಿ ಮುಂದೆ ನಿಲವೈಷಯಿಕಾನಂದವನನುಭವಿಸುವೆನು, ಯೆನಗೆ ಸರಿಯಾರೀಜಗದೊಳೆಂದು ಮನದೊಳುಬ್ಬನಿಂದಿದ್ದೆ ಇಂತಿರುವ ತನ್ನ ಸುಖಮಂನೋಡಿ ದೈವಸೈರಿಸುವುದೇ ತನ್ನ ಗತಿಯೇನಾದಡೆಯು ಚಿಂತೆಯದೇಕೆ ಮಹಾನುಭಾವನಾದ ನೀನು ಈ ನಗರದಿಂ ಕ್ಷೇಮ ದಿಂದೆಂತುಪೋಗುವೆಯೋ ತಾನರಿಯೆನದರಿಂದದುಃಖಿಪೆನು ಎಂದುರೋ ದನಮಂ ಮಾಡಲು ಸಹಸ್ರಾಯು ವಿಸ್ಮಿತನಾಗಿ ಎಲೈಮಾನಿನಿಯದೇನು ಸ್ಫುಟವಾಗಿ ಪೇಳೆನಲು, ಕನಕಾಂಗಿಯು ಇನ್ನು ಪೇಳುವುದೇನು ರಾಜಕುಂತೀರವನೆ, ಈ ನರಪತಿ ಕುಮಾರಿಯಾದ ಧಾನ್ಯಮಾಲಿನಿ ಯು ನಿನ್ನಪಾಣಿಗ್ರಹಣವಂ ಮಾಡಬೇಕೆಂದಿರುವಳಂತೆ ಕಾಣಲ್ಪಡುವ ದಿಲ್ಲ ಮತ್ತೇನೆಂದರೆ ಪಾಣಿಗ್ರಹಣ ತತ್ಪರಳಾಗಿರುವಂತೆ ತೋರುತಿದೆ, ಸಂಶಯವಿಲ್ಲ ಮೋಹಾಕೆ ಮಾನುಷ ಸ್ತ್ರೀ ಅಲ್ಲ ರಾಯನ ಕುಮಾ ರಿಯಾಗಿರುವಳದೇನು ಕಾರಣವೋ ತಿಳಿಯದನ್ನೆರೆಯುಕೇಳಾ ರಾಕ್ಷಸಿ ಯೋ ಮಾರಿಯೋ ಶಾಕಿನಿಯೋ ಢಾಕಿನಿಯೋ ತಿಳಿಯದಿವಳ್ಯಾರೋ ಹಾ ಯಿನ್ನೆಗೈವೆನೆಂದು ಮರುಗುತಿರಲಾ ಸಹಸ್ರಾಯುವತ್ಯಂತ ದುಗುಡದಿಂದಿಂತೆನಲು ಸುಭಗ ನಿನ್ನಪ್ಪಣೆಗೊಂಡು ಜನನಿಯಾ ಲಯಕೈದಿ ಕ್ಷಣಯುಗಪ್ರಾಯದಿಂದಿದ್ದು ಇಲ್ಲಿಗಬರಲು ಕಾಲವ್ಯಂ

ನಿರೀಕ್ಷಿಸುತ ರವಿಯಸ್ತನಾಗಲು ಜನನಿಯಾಲಯದಿಂದ ತಾನಿಲ್ಲಿ ಗೈತರುವ ಮಾರ್ಗದೊಳೊಂದು ಶಕ್ತಿ ಆಲಯವಿಹುದು ಅದರ ಪಶ್ಚಾದ್ಭಾಗದೊಳು ಮಹಾ ಘೋರರೂಪಿನಿಂ ಕುಳಿತು ಭವಭಕ್ಷಣ ಮಾಡುತಬೇಕೆಂಬುವರಿಗೆ ವಿಕ್ರಯವುಮಾಡುತ ರಾಕ್ಷಸಿಯೋಪಾದಿ ಯಲ್ಲಿರುವ ವಿರೂಪಿಯಾದ ರಾಜಕುಮಾರಿಯಂಕಂಡು ಮಹದ್ಭಯದಿಂ ನಡನಡುಗಿ ಒಂದು ಮುಹೂರ್ತಮಾತ್ರ ಮರೆಯಾಗಿನಿಂದಿರಲು ಆಕೆಯು ನಿಶ್ಶೇಷವಾಗಿ ಭವಭಕ್ಷಣೆಯಂಮಾಡಿ ರಕ್ತಪಾನಾದಿಗಳಿಂದ ಮದಿಸಿದವ ಳಾಗಿ ಕಂಠದಲ್ಲಿದ್ದ ಹಾರಮನಿಟ್ಟಲ್ಲಿಮರೆದು ಅಟ್ಟಹಾಸಮಂ ಮಾಡುತ ತಿವೇಗದಿಂ ಮನೆಗೈದೆ ಮೆಲ್ಲಮೆಲ್ಲನೆ ತಾನು ಹಾರವಿದ್ದೆಡೆಗೈದಿ ನಿನಗೆ ತೋರಲು ಕೈಯೊಳಾಂತುಬಂದೆ ನಿದಕೋ ಮುಕ್ತಾಹಾರ ಮೆಂದುತೋ ರಲು ಸಹಸ್ರಾಯುವಾ ಹಾರಮಂ ನೋಡಿ ಸತ್ಯವಿದಾಮಾನಿನಿಯನುಡಿ ಯೆಂದು ನಿಶ್ಚೈಸಿ ಒಂದು ಕ್ಷಣವಾಲೋಚನೆಯಂ ಮಾಡಿ ಕನಕಾಂಗಿ ಯಂಕುರಿತು ಉಪಸ್ಥಿತ ಮೃತ್ಯುಪರಿಹಾರಕೇನುಪಾಯವಂ ಮಾಡ ಬೇಕೆಂದೆನಲು ಮಾಯಾವಿನಿಯಾದವಳ ತ್ರಿಪುತ್ರಿಯು ಎನ್ನುಪಾಯಸ ಫಲವಾಗುವಂತೆ ತೋರುತಿದೆಯೆಂದು ಮನದೊಳಗೆ ಸಂತೋಷದಿಂದ ಕುಮಾರನಂ ಕುರಿತು ಎಲೈ ಕಾಂತನೆ ಕೇಳು ತಾವೀರ್ವರೂ ಅರಿಯದೆ ಬರುವ ಮೃತ್ಯುವಿಗೆ ಪರಿಹಾರ ಪಟುವಾದೊಂದುಪಾಯ ಮೆನ್ನೊಳ ಗುಂಟು ಪ್ರಕೃತದಲ್ಲಿ ಅದನ್ನ ಫಲಂಬಿಸಿ ಮುಂದೆ ಕಾರ್ಯಾಂತರವನಾ ಲೋಚನೆ ಮಾಡಬೇಕೆಂದೆನಲುಕುಮಾರನಾಉಪಾಯಮೇನೆಂದೆನಲು ಕನ ಕಾಂಗಿನುಡಿದಳೆನ್ನ ಯುವತಿಯು ತನಗೆ ವರನಿತ್ತು ತಪೋವನಕ್ಕೈಪೋ ಗಲುದ್ಯುಕ್ತನಾಗಿ ಯಕ್ಷರಕ್ಷ ಪಿಶಾಚಾದಿಗಳಿಂದ ಅವಧ್ಯವಾದ ದಿವ್ಯ ಮಾಲಿಕೆಯನನುಗ್ರಹಮಾಡಿತ್ತು ಪೋದನಾಮಾಲಿಕೆಯು ತನ್ನ ಜನ ನಿಯಲ್ಲಿರುವುದು ಅದಂ ಧರಿಸಿ ತತ್ಕಾಲಭಯವುಂಕಳೆದು ಮುಂದಣ ಕಾರ್ಯವುಂ ಜವದಿ ಚಿಂತಿಸಬೇಕು ಯಿದಲ್ಲದೆ ರಾಜಕನ್ನಿಕೆಯು ಚಂದ್ರ ಹಾರ ತುಮೆಡೆಯೊಳಿರಬಾರದು ಆ ಪಿಶಾಚವು ಹಾರವಂ ಮರೆದತಾಣ ಕೆಬಂದುನೋಡಿ ಅದಲ್ಲಿಲ್ಲದಿರೆ ಹಾರವೆಲ್ಲಿರುವುದೋ ಆ ತಾಣವಂ ಕು

ರಿತು ಅರಸಿಬರುವುದೋ ಏನೋ ಕಾಂತಕೇಳದರಿಂದ ಮರದತಾಣದೊಳೀಹಾರಮನಿಟ್ಟು ತಾನು ಜನನಿಯಲ್ಲಿರುವಮಾಲಿಕೆಯುಂತೆರುವೆನೆಂದೊರೆದು ಆ ಯಾಮಿನಿ ಯೊಳಾತನೊಡೆ ವೆರೆದು ರವಿಸುತ್ತ ರವಿಯುದಯದೊಳಗೆದ್ದು ತನ್ನ ಮನೆಗೈತಂದು ಮಿಂದು ಭೋಜನಮಾಡಿ ತಂದೆಯಾದ ಮಂತ್ರಿಯಂ ಕರೆದು ನಗರ ಮಧ್ಯದೊಳಿರುವ ಚಂಡಿಯಾಲಯದ ಪಶ್ಚಾದ್ಭಾಗದೊಳೊಂದುಮಾನುಷಶವಮಂತರಿಸಿರಿಸಬೇಕೀದಿನವೆ ತಪ್ಪಬಾರದು ಮಾತುಸಂವಿಧಾನ ಕೆಟ್ಟು ಹೋದೀತಾದಕಾರಣ ತ್ವರೆಯಿಂದ ತರಸಿರಬೇಕಲ್ಲಿ ತಿಳಿಯದಂತನ್ಯರಿಗೆಂದು ಪೇಳಿ ಪಿಶಾಚಮರದುಪೋದ ತಾಣದೊಳು ಚಂದ್ರಹಾರಮನಿಟ್ಟು ಬರುವೆನೆಂದು ಸಹಸ್ರಾಯುವಿನೊಡನೆಪೇಳಿ ತೋರಿತಂದತನ್ನಿಂದ ನಿರ್ಮಿತಮಾದಚಂದ್ರಹಾರಮಂತನ್ನ ಕಂಠದೊಳುಹಾಕಿ ಧಾನ್ಯಮಾಲಿನಿಯ ಅರಮನೆಗೆಬಂದು ಖಿನ್ನಳಾಗಿ ದುಗುಡದಿಂ ರಾಜಕುಮಾರಿಗೆ ವಂದನೆಯಂಮಾಡಲು ಧಾನ್ಯಮಾಲಿನಿಯು ಅನುರಾಗದಿಂದ ಕಾಳಭುಜಗಿಯಂತನ್ನ ಪ್ರಿಯಸಖಿಯೆಂದುಪ್ರೇಮಾಲಿಂಗನನಮಾಡಿ ಕುಶಲಪ್ರಶ್ನೆಯಂಮಾಡಲು ಕಪಟೋಪಾಯ ವಿಶಾರದಳಾದ ಕನಕಾಂಗಿಯು ಪ್ರತ್ಯುತ್ತರವನಾಡದೆ ತಲೆವಾಗಿ ಕಂಬನಿಯ ಬಿಡಲು ರಾಜಕುಮಾರಿಯು ನೋಡಿ ಇದೇನೋ ಕಾರಣವೆಂಬುಏತಕಿಂತಳುವೆ ಪೇಳೆನಲು ಮಂತ್ರಿತನುಜಾತೆಯು ತಾಯೆ ಕೇಳೆನ್ನನುತಾಪ ಮೇನೆಂಬೆ ಕಂಡ ವೃತ್ತಾಂತಮಂ ನಿನಗೆ ಬಿನ್ನಹಮಾಡೆ ನಿಜಕಾರ್ಯಹಾನಿಯಾಗುವುದೆಂಬ ಚಿಂತೆಯೊಂದೆಡೆಯೊಳು ಹೇಳದಿರ ಸ್ವಾಮಿ ಮಿತ್ರದ್ರೋಹವೆರಡು ಸಂಭವಿಸುವದದರಿಂದಲೇನಮಾಡುವೆನೆಂದುಚಿಂತಿಸುವೆನೆನಲು ಧಾನ್ಯಮಾಲಿನಿಯು ಕೇಳಿ ಮಹತ್ಸಂಶಯಾವಿಷ್ಟಳಾಗಿ ಅದೇನನುತಾಪಪೇಳೆನಲು ಮಂತ್ರಿತನುಜೆಯೊಂದು ಕ್ಷಣವಾಲೋಚನೆಯಮಾಡಿ ಏನಾದಡಾಗಲಿ ಪೇಳುವದೇ ಯುಕ್ತವೆಂದು ಪ್ರಿಯಸಖಿಯೆ ಕೇಳು ಭವದನುಜ್ಞೆಯಿಂದ ಆ ರಾಜಕುಮಾರನರಮನೆಗೆ ಪೋಗಿ ಆತನಶೀಲಸ್ವಭಾವಮಂತಿಳಿಯಬೇಕೆಂದು ತನ್ನಿಕಟವಾಸಮಂಮಾಡಿಕೊಂಡು ಏತಾವತ್ಪರ್ಯಂತವೂ ಇದ್ದೆನು. ಯದ್ಯಪಿ ಸೌಂದರ್ಯ ಶೌರ್ಯಾದಿಗುಣಗಳಲ್ಲಿ ಅದ್ವಿತೀಯನದರಲ್ಲಿ ಸಂಶ

ಯವಿಲ್ಲ ಆದಡೇನೆಲೈ ಜನನಿ ನರನಲ್ಲ ರಾಕ್ಷಸನು ಅಥವಾ ಪಿಶಾಚನೋ ಎಂತಿ ಳಿಯಕೊಡದು ನಾಂತಸ್ತತ್ವವಿವೇಚನ ಪ್ರಣಯಿನೋ ಲೋಕಾ ಬಹಿರ್ಬು ದ್ಧಯಃ|| ಎಂಬ ನ್ಯಾಯದಿಂದ ಕೃಶಾನುವಂ ಕಂಡು ಫಲಭ್ರಾಂತಿಯಿಂದೆ ರಗಿ ಸಾವವ ಪತಂಗದಂತೆ ವಸ್ತುಸ್ವಭಾವಗಳಂ ವಿಚಾರವಮಾಡದೆ ಪ್ರವ ರ್ತಿಸಬಾರದೆಂತುವಲ್ಲದೆ ಈ ಭೂಮಿಯೊಳು ನಿನ್ನ ಪೋಲ್ವ ಮಾನಿನಿಯ ರಿಲ್ಲ ಕೇಳದರಿಂದ ಸಾವಧಾನದಿಂದಾತನ ಪರೀಕ್ಷಿಸಿನೋಡಿ ತದನಂತರ ಮನಕೆ ಬಂದಂತೆ ಮಾಡೆನಲು ಧಾನ್ಯಮಾಲಿನಿಯು ಮನದೊಳಗೆ ಜಗದಾ ಹ್ಲಾದಕರನಾದ ಚಂದಿರಗೆ ದೋಷಬಂದೊದಗಿದೊಲೆನ್ನ ಪ್ರಿಯನೊಳು ದೋಷವಂ ನುಡಿವಳಿದು ಸತ್ಯವೋ ಮಿಥ್ಯವೋ ಎಂದು ನಾನಾವಿಧದಿಂ ಚಿಂತಿಸುತ ಕನಕಾಂಗಿಯಂ ಕುರಿತು ಸ್ಫುಟವಾಗಿ ಪೇಳೆನಲು ಕನಕಾಂ ಗಿ ನಿಟ್ಟುಸಿರುಬಿಡುತ ತಾಯೆ ನಿನ್ನಪ್ಪಣೆಯೊಳ್ನಾನು ಪರೀಕ್ಷೆಮಾಡು ತಿರುತಿರಲು ಆತನು ಪ್ರತಿದಿವಸದಲ್ಲಿಯು ರಾತ್ರಿಯೊಮಾನಂತರದೊಳಾ ಲಯವಂಬಿಟ್ಟು ಹೊರಗೆಪೋಗುವನು. ನಿಶಾವಸಾನದೊಳು ದೇಹದಪ್ರ ಜ್ಞೆಯಿಲ್ಲದೆ ಬರುವನಿದುಂ ನೋಡಿ ಪ್ರತಿದಿವಸದಲ್ಲಿಯೂ ಓರ್ವರಿಗೆ ತಿಳ ಯದಂತೆ ಹೊರಕ್ಕೆ ಪೋಗಿ ನಿಶಾವಸಾನದೊಳು ವಿಕಾರವಾಗಿ ಮೈಯ್ಮರೆ ದು ಬರುವುದಕ್ಕೆ ಕಾರಣವೇನೆಂದು ತನ್ನಲ್ಲಿ ತಾನೆ ಯಾಲೋಚನೆಯಮಾ ಡಿ ಸರ್ವದಾ ಸುಮುಖನಾಗಿ ಮನೆಯೊಳ ಮಲಗುಣವುಳ್ಳವನಾಗಿರುವ ಹೊ ರಗೈದಿಬರುವಾಗ ದುರ್ಮುಖನು ಮತ್ತನಾಗಿ ಬರುವನಿದಲ್ಲದೆ ಮಹಾನಿಶಿ ಯೊಳಗೆ ಸಂಚಾರವಮದರಿಂದಲಸ್ತಿಕಶ್ಚಿದ್ವಿಶೇಷವೆಂದು ಒಂದುದಿನ ಯಾ ಮಿನಿಯೊಳಾತನಂ ಬೆಂಬತ್ತಿ ಆತನಿಗೆ ಕಾಣದಂತೆ ಮಾಲಿಕಾ ಧೈರ್ಯದಿಂದೆ ಲ್ಲೆಲ್ಲಿ ತಿರುಗುವನೋ ತಾನು ಅಲ್ಲಲ್ಲಿ ಪ್ರಛನ್ನಳಾಗಿ ನೋಡುತಲಿರಲು ಜನ ನಿ ಕೇಳೇನೆಂಬೆನದ್ಭುತವ ಬಾಗಿಲನು ದಾಟುವದು ಘೋರವಾದ ನಿಜಾ ಕಾರವಂ ಧರಿಸಿ ಬೀದಿಯೊಳ್ ತಿರುಗಿ ಪ್ರಾಣಿಮಾತ್ರಗಳ ಶರೀರವಂ ನರಸಿ ಎಲ್ಲಿದೊರತಡೆಯು ಸರ್ವಾಂಗವಂ ಭಕ್ಷಣದಿ ಭಕ್ಷಿಸುವ ನೆಲ್ಲಿಯುಂ ದೊರೆಯದಿ ರೆ ಮೌಲ್ಯವನಾದಡೆಯು ಯಿತ್ತು ಶವಭಕ್ಷಣವಮಾಡಿ ಮದವೇರಿ ತಾನ ಲ್ಲಿಂದ ಸೌಮ್ಯನಾಗುತ ಮತ್ತೆ ಮನೆಗೆ ಬರಲೊಂದುದಿನ ನೋಡಿ ಮತ್ತೆ

ರಡು ದಿನ ಪರೀಕ್ಷೆಯಂಮಾಡಿ ತಾನು ವಿಸ್ಮಿತಳಾಗಿ ನಿನಗೆ ಲೋಕೋತ್ತಮನ ಪಾಣಿಗ್ರಹಣ ಮೆನಗೆ ಪ್ರತಿಜ್ಞಾ ಸಾಫಲ್ಯ ಮಿಂತೆರಡು ಸಂಭವಿಸಿತ್ತೆಮಗಾಗುಸರಿಯೆಂದು ಮನದುಬ್ಬಿನಿಂದಿದ್ದೆ ಕಡೆಗೆ ಹತಭಾಗ್ಯರಾದೆಮ್ಮ ಮನೋರಥಮಿಂತಾದುದೆಲೆ ಜನನಿ ಲಗ್ನವು ಸಮೀಪವಾದುದು ಇನ್ನು ಸುಮ್ಮನಿರಬಾರದೆಂದು ತವಕಪೋಳು ಬಂದು ತಿಳಿಸಿರುವೆ ತವಕಗೊಳದಿದನು ನೀನೆ ಪರೀಕ್ಷಿಸಿ ನೋಡಿ ಬದುಕುವಾಲೋಚನೆಯುಮಾಡುವುದು ಇಂತಲ್ಲದಿರೆ ಮಾನುಷರಿಗೀರೂಪು ಲಾವಣ್ಯ ಮಿಾಧೈರ್ಯಮೆಲ್ಲಿಹುದು ಪುನಶ್ಚ ಈ ನಗರಕ್ಕೈದಲು ನಿಮಿತ್ತವೇನು ಯಕ್ಷರಕ್ಷಃ ಪಿಶಾಚಾದಿಗಳು ಕಾಮರೂಪಿಗಳು, ಅದೇನುಕಾರಣ ಬಂದಿರುವನೋ ಕಾಣೆ ಮುಕ್ಕಣ್ಣನೇಬಲ್ಲ ನಿಂತೆಂದು ನುಡಿಯಲು, ಧಾನ್ಯಮಾಲಿನಿಯು ಕೇಳಿ ವಿಸ್ಮಿತಳಾಗಿ ಇವಳಭೇದೋಪಾಯಬಲೆಯೊಳು ಸಿಕ್ಕಿ ವ್ಯೆಯ್ಮರೆದು ಮುಂದೋರದೆ ಕನಕಾಂಗಿಯಂಕುರಿತು ತಾನು ಪರೀಕ್ಷಿಸಿನೋಡಲೆಂತಹುದು ಯಾಮಿನಿಯೊಳಾತನನರಸಿ ತಾನೆಂತುಕಾಣುವುದು ಶವಮೆಲ್ಲಿದೊರೆಯುವದೋ ಆತನೆಲ್ಲಿಗೆ ಪ್ರೋಗುವನೋ ತಿಳಿಯಲಳವಲ್ಲ ಅಥವಾ ಆತನನೆಲೆಸಿಕ್ಕಿದಡೆಯುಂ ಅಘೋರರೂಪಮಂನೋಡೆಂತು ಸೈರಿಸುವೆ ಸೈರಿಸಿನೋಡುವಕಾಲದೊಳೆನ್ನನೇ ಭಕ್ಷಿಸಿದಡೇನುಮಾಡುವೆನೆಂದು ಕೇಳಲು ಕನಕಾಂಗಿಯು ಕೇಳಿ ಮನದೊಳಗೆ ಸಂತೋಷದಿಂದೆನ್ನುಪಾಯಾನುಗುಣವಾಗಿಬರುವುದೀಕೆಯ ಮನೋವೃತ್ತಿಯೆಂದು ಧಾನ್ಯಮಾಲಿನಿಯಂ ಕುರಿತು ತಾಯೆ ನೀನು ಪರೀಕ್ಷಿಸುವವೇ ಯಥಾರ್ಥವಾದೊಡೆ ಅದರ ಸಂದರ್ಭಮಂ ಪೇಳುವೆನು ಅದಕೆ ನೀನು ಚಿಂತಿಸಬೇಡೆಂದೆನಲು ರಾಜಕುಮಾರಿಯು ನೀನು ಪೇಳಿದಡೆ ಪರೀಕ್ಷಿಸುವೆನೆಂದು ಪೇಳಲು, ಕನಕಾಂಗಿಯು ಕೇಳವ್ವ ಈ ನಗರಮಧ್ಯದೊಳೊಂದು ಚಂಡಿಯಾಲಯವಿರುವದು ಅದರ ಪಶ್ಚಾದ್ಭಾಗದೊಳಗೊಂದು ಮಾನುಷ ಶವಬಿದ್ದಿಹುದುಬರುವಾಗಕಂಡೆತಾನೀಗಳ ಶವಸಮೀಪದೊಳ್ನಿರ್ಭೀತಳಾಗಿರೂಪಾಂತರವಧರಿಸಿರಾತ್ರಿಕುಳ್ಳಿರಲು ಶವಮುಂಮಾರುವಳೆಂದು ಬಂದು ನಿನ್ನಂಕೇಳುವನುಮೌಲ್ಯಕೆಶವಮಂಕೊಟ್ಟುಮೌಲ್ಯಮಂತೆಗವುಕೆಂಪಶವಮನಿ

ತ್ತು ಕುರುಹಂ ತಿಳಿದು ಮನೆಗೆ ಬರಬಹುದೆನಲು ರಾಜತನುಜಾತೆಯು ಶವ ಭಕ್ಷಣೆಯಮಾಡುವನಿರ್ಗೆ ತಾನೆಂತು ನಿಲ್ಲುವೆನು ಕುರುಹನೆಂತರಿಯ ಬೇಕು ಪೇಳೆಂದೆನಲು, ನಗುತ ಕೇಳವ್ವ ಎನ್ನಯ ದಿವ್ಯಮಾಲಿಕೆಯ ಕೊಡುವೆ ನೀದನು ಕಂಠದೊಳು ಧರಿಸಿದಪೆ ದಾರಿಂದ ಭಯವೇನು ನಿನ್ನಿಂದ ದತ್ತವಾದ ದಿವ್ಯಚಂದ್ರಹಾರವನಾತನನವರತ ಧರಿಸಿರುವ ಕಾರಳ ಲ್ಲಿ ರೂಪಾಂತರ ಸ್ವೀಕಾರಮಾಡಿದಾಗಲು ಆ ಚಂದ್ರಹಾರವೆಂದುಮಾ ತ್ರ ಕಂಠದೊಳಿರುವುದದೆ ಕುರುಹು ಎಂದುಪಾಯಮಂ ಪೇಳಿ ನಿಜಕಂಠಾ ವಲಂಬಿಯಾದ ದಿವ್ಯಮಾಲಿಕೆಯ ಕಂಠದೊಳುಹಾಕಿ ಮರೆಯದಿಂದಿನದಿ ನವೆ ಪರೀಕ್ಷೆಯಂ ಮಾಡಿನೋಡೆಂದು ಪೇಳುತಪ್ಪಣೆಗೊಂಡು ತನ್ನಮ ನೆಗೈತಂದು ರವಿಯಸ್ತವಾಗಲು ಧಾನ್ಯಮಾಲಿನಿಯು ರಾಜಕುಮಾರನಿಗೆ ಕೊಡುವುದಕೆ ಕೊಟ್ಟದ್ದ ಚಂದ್ರಹಾರವಂ ತನ್ನ ಕಂಠದೊಳು ಧರಿಸಿ ಸಹಸ್ರಾಯುವಿನ ಅರಮನೆಗೆ ಬಂದು ವಂದನೆಯಂ ಮಾಡಿ ತನ್ನ ಮಾಲಕೆ ಯ ಮಹಾತ್ಮೆಯಂ ವಿಸ್ತಾರವಾಗಿ ವರ್ಣಿಸಿ ಮಾಲಿಕೆಯ ರಾಜಕುಮಾ ರನ ಕಂಠದೊಳು ಸಮರ್ಪಣೆಮಾಡಿ ಶರೀರದಲ್ಲಿಯೊಂದಂಗದೋಪಾದಿ ಯಲ್ಲಿ ನಿರಂತರ ಧಾರಣೆಯಂ ಮಾಡಬೇಕೆಂದು ವಿನಯದಿಂ ವಿಜ್ಞಾಪನೆ ಯಮಾಡಲು ರಾಜಕುಮಾರನು ಹಾಗೆ ಆಗಲೆಂದೊಡಂಬಟ್ಟು ಧರಿಸುತಾ ಕೆಯೊಡಗೂಡಿ ಶಯನಗೃಹಕ್ಕೈತಂದು ತಲ್ಪದೊಳಗಿರ್ವರೂ ನೆಲಸಿರತಿಕ ಲಾ ವಿಲಾಸದಿಂದಿರುವ ರಾಜಕುಮಾರನಂ ಕುರಿತು ರಾಜಕನ್ಯಾವ್ಯಾಜ ದಿಂದಿರುವ ರಕ್ಕಸಿಯು ಚಂದ್ರಹಾರವನೆಲ್ಲಿಟ್ಟು ಮರೆದು ಪೋದಳೊ ಅದೇತಾಣದಲ್ಲಿ ತಾನಿರಿಸಬಂದಿರುವೆ ನಾಪಾಪಿ ರಕ್ಕಸಿಯು ಮಾಲಿಕಾ ನ್ವೇಷಣಾರ್ಥವಾಗಿಯು ಶವಭಕ್ಷಣಾರ್ಥವಾಗಿಯು ಶಕ್ತಿಯಾಗಾರದೆ ಡೆಗೈದುವಳು ಸಂಶಯವಿಲ್ಲ ಕಾಂತ ಕೇಳಿಂದೀ ದಿವ್ಯಮಾಲಿಕಾಧಾರಿ ಯಾದನೀನು ಕಿಂಚಿದ್ದ್ರವ್ಯಮಂ ಕರದೊಳಗೆ ತೆಗದು ಶಕ್ತಿಯಾಲಯದೆ ಡೆಗೈದಿ ಮೌಲ್ಯಕ್ಕೆ ಶವಮಂ ಕೊಡೆಂದು ಆಕೆಯು ಕೇಳೆ ಶವಮನಿತ್ತು ಪೋಗುವಳು ಆ ಸಮಯದೊಳಾಕೆಯ ಮಾಲಿಕಾಕುರುಹಂನೋಡಿಬಂ ದೆಯಾದೊಡೆ ಸರ್ವವೃತ್ತಾಂತವೂ ಭವಚ್ಚಿತ್ತಕ್ಕೆ ವಿದಿತವಾಗುವುದೆಂ

ದು ಮಧುರತರವಾಣಿಯಿಂ ಪೇಳಲದಕೇಳಿ ನರಪತಿಕುಮಾರನಂಗೀಕಾರ ಮಂಮಾಡಿದ್ದು ಕಿಂಚಿದ್ರವ್ಯಮಂ ಕರದೊಳಾಂತು ಚಂಡಿಯಾಲಯದ ಸಮೀಪದೊಳು ನೋಡುತ್ತಬರಲಿತ್ತಲಾ ಧಾನ್ಯಮಾಲಿನಿಯು ಕನಕಾಂಗಿ ಪೇಳಿದರ್ಥಮಂ ಪರೀಕ್ಷಿಸಿ ನೋಡಬೇಕೆಂದು ರೂಪಾಂತರವನಾಂತು ತದ್ವತ್ತಮಾಲಿಕೆಯಂ ಧರಿಸಿ ರಹಸ್ಯವಾಗಿ ಶಕ್ತಿಯಾಗಾರಮನ್ನೈದಿಮಂತ್ರ ಕೃತ್ರಿಮದಿಂದ ಬಿದ್ದಿರುವ ಶವಮಂನೋಡಿ ಸಖಿಯಮಾತೆಲ್ಲ ಸತ್ಯಮಾಗಿರುವಂತೆ ತೋರುತಿದೆಕಟಕಟಾ ಎನುತಲಾ ಶವಸಮೀಪದೊಳಿರುತಿರಲು ಸಹಸ್ರಾಯು ಬಂದು ಶಕ್ತ್ಯಾಗಾರಪಶ್ಚಾದ್ಭಾಗದೊಳು ಶವಸಮೀಪದೊಳಿರುವ ರಾಜಕುಮಾರಿಯಂಕಂಡು ಮನದೊಳಗೆ ನಿಶ್ಚೈಸಿ ಶವಮಂ ಮೌಲ್ಯಕ್ಕೆ ಕೊಡುವುದುಂಟೆ ಎಂದು ಕೇಳಲು ಧಾನ್ಯಮಾಲಿನಿಯು ಕನಕಾಂಗಿಯಾಡಿದಂತೆ ವಿರೂಪವಂಧರಿಸಿ ಬಂದಿರುವ ರಾಜಕುಮಾರನಂನೋಡಿ ಮಹಚ್ಚಿಂತೆಯಿಂದೊಡಗೂಡಿ ಮೌಲ್ಯಮನಿತ್ತೆಯಾದೊಡೆ ಪೆಣನು ಕೊಡುವೆನೆಂದು ಪೇಳಲು ಈರ್ವರೂ ಕ್ರಯವಿಕ್ರಯ ವ್ಯಾಜದಿಂದ ಸಮೀಪಗತರಾಗಿ ಪರಸ್ಪರವಾಗಿ ಕನಕಾಂಗಿಯಿಂದ ನಿರ್ದಿಷ್ಟಮಾದ ಕುರುಹನುನ್ಯೋನ್ಯಮಾಗಿನೋಡಿ ಮನದಿನಿಶ್ಚೈಸುತಿರಲು, ರಾಜಕನ್ನಿಕೆಯು ಮೌಲ್ಯಮಂ ತೆಗೆದುಕೊಂಡುಶವಮನಿತ್ತು ಮೌನದಿಂ ಶವಮನೇನಮಾಡುವನೋನೋಡಬೇಕೆಂದು ಅಲ್ಲಿಂದ ಹೊರಟು ಪ್ರಚ್ಛನ್ನಳಾಗಿನೋಡುತಿರಲು, ಸಹಸ್ರಾಯುವಾಕೆ ಮರೆಯಾದುದಂ ಕಂಡು ಕನಕಾಂಗಿಪೇಳಿದರ್ಥವೆ ನಿಶ್ಚಯಮೆಂದು ತಿಳಿದು, ದುಗುಡದಿಂ ತನ್ನಾಲಯಕೆ ಬಂದು ಚಿಂತಿಸುತಿರಲು, ಧಾನ್ಯಮಾಲಿನಿಯು ಶವಭಕ್ಷಕನಾದೊಡೆ ಮೌಲ್ಯಮನಿತ್ತು ಶವಸ್ಪರ್ಶಕೂಡ ಮಾಡದೆ ಪೋಗುವುದಕ್ಕೆ ಕಾರಣಮೇನೋ ಎಂದು ಸಂಶಯ ವಿಸಿಷ್ಟ ಚಿತ್ತೋವೃತ್ತಿಯುಳ್ಳವಳಾಗಿ ನಾನಾವಿಧ ಪ್ರಲಾಪದಿಂದ ರಾಜಕುಮಾರನ ರೂಪುಲಾವಣ್ಯಾಕ್ಷಿಪ್ತಳಾದಕಾರಣ ಕನಕಾಂಗಿ ಪೇಳಿದರ್ಥಮಂ ಪರೀಕ್ಷೆಮಾಡಲದು ಸಂಶಯಾಸ್ಪದಮಾಗಿರುವುದಲ್ಲದೆ ನಿಶ್ಚಯಕೋಟಿಯನ್ನೈದಲಿಲ್ಲದು ಕಾರಣ ನಾನಾಪ್ರಕಾರವಿಕಲ್ಪದಿಂ ಮರುಗುತ್ತ ತನ್ನರಮನೆಯನ್ನೈದಲು

ಸಹಸ್ರಾಯುವಾರಾಜಕನ್ನೆಯುಂ ರಾಕ್ಷಸಿಯೆಂದು ನಿಶ್ಚೈಸಿ ಮಹದ್ವಿಪತ್ತಿನಿಂ ಈ ಕನಕಾಂಗಿ ಯತಾರ್ಥಮಾಡಿದಳೆಂದು ತಿಳಿದು ಕನಕಾಂಗಿಯಂಕುರಿತು ಮುಂದೆಮಾಡುವ ಕಾರ್ಯವೇನೆಂದು ಕೇಳಲು ಮಂತ್ರಿಸುತೆಯು ಸ್ವಕೃತಭೇದೋಪಾಯ ಸಫಲವಾದುದೆಂದು ಮನದಿ ನಿಶ್ಚೈಸಿ ಎಲೈ ಸುಭಗನೆ ಕೇಳು ಇನ್ನೀನಗರದೊಳಿಹುದು ಸಮಂಜಸವಲ್ಲವದರಿಂದೀರಾತ್ರಿಯೇ ಈ ಪ್ರದೇಶಮಂದಾಂಟ ಪೋಗುವುದೇ ಯುಕ್ತವಾಗಿತೋರುವುದೆಂದು ವಿನಯದಿಂ ವಿಜ್ಞಾಪನೆಮಾಡೆ ಸಹಸ್ರಾಯು ಮನದೊಳಾಲೋಚಿಸಿ ಪೋಗುವರ್ಥಮನೇ ನಿಶ್ಚಯಮಾಡಿ ಯತ್ಕಿಂಚಿಧ್ರವ್ಯೋಪಪತ್ತಿಯಿಂ ಯುಕ್ತನಾಗಿ ರಹಸ್ಯದಿಂದಾಕೆಯೊಡಗೂಡಿ ನಿಜಾಂಸಧೃತಮಹಾಖಡ್ಗಾಯುಧಮುಳ್ಳವನಾಗಿ ಮೇಯಗಾವಲವರರಿಯದಂತೆ ಚೋರಮಾರ್ಗದಿ ಪೊರಟು ನಗರಮನುಳಿದುಯಾಮಿನಿಯೊಳ್ ಮಹದ್ಗಹನಮಂ ಪೊಕ್ಕು ಬಹುದೂರಮಾರ್ಗಮಂ ನಡೆದು ಪೋಗುತ್ತಲಾಮಹಾರಣ್ಯದೊಳ್ ಅತಿರಮಣೀಯಮಾದ ಪ್ರದೇಶಮಂಕೆಂಡು ಕನಕಾಂಗಿಯು ಮಾರ್ಗಗ್ಲಾನಿಯನಭಿನಯಿಸುತ ಈ ಮಹದರಣ್ಯದೊಳು ಬಹುದೂರಮಾರ್ಗಮಂ ನಿಶಿಯೊಳಗೆ ನಡೆದುಬಂದೆವದರಿಂದ ಈ ಪ್ರದೇಶದೊಳು ಮಾರ್ಗಶ್ರಾಂತಿಯಂನಿವಾರಣೆಮಾಡಿಕೊಂಡುರವಿಯುದಯವಾಗಲು ಮುಂದೆ ಪ್ರಯಾಣಮಂ ಮಾಡಬಹುದೆಂದು ಬಿನ್ನಹಮಾಡಲಾ ಸಹಸ್ರಾಯುವು ಸತ್ಯವೆಂದುಂಗೀಕಾರಮಾಡಿ, ದಯಾರ್ದ್ರಹೃದಯನಾಗಿ ಹಾಗೆಆಗಲೆಂದೊಡಂಬಟ್ಟು ಆ ವನದೊಳಿರುವ ಕಾಳಿಯಾಲಯ ಸಮೀಪದೊಳು ರಮಣೀಯಮಾದೊಂದು ಪುಷ್ಪಿತಾಶೋಕತರುವಂ ಕಂಡು ತನ್ಮೂಲಮನೈದಿ ನಿರ್ಮಲಮಾದ ಪ್ರದೇಶದೊಳೀರ್ವರೂ ಮಲಗಲಾಸುಕುಮಾರನು ಮಾರ್ಗಗಮನಶ್ರಾಂತಿಯಿಂದ ಮಹಾಖಡ್ಗಮಂಶಿರಃಪೀಠಮಾಗಿಟ್ಟು ಗಾಢಸುಷುಪ್ತಿಯನೈದಲು ಆ ಕನಕಾಂಗಿಯು ತ್ವಚಿತ್ಕಾಲ ನಿದ್ರಾನಿನಯಮಂಮಾಡಿ ರಾಜಕುಮಾರನತ್ಯಂತ ಗಾಢನಿದ್ರೆಯಿಂ ಮೈಯಮರೆದವಸ್ಥೆಯುಂ ಕಂಡು ಅತಿದಾರುಣ ಹೃದಯಳಾದಕಾರಣ ರಾಜಕುಮಾರನಶಿರಃಪೀಠಮಾಗಿರುವ ಮಹಾ ಖಡ್ಗಮಂ ಮೆಲ್ಲಮೆಲ್ಲನೆ ಸಡ

ಲಿಸಿ ತೆಗೆದು ಕೆರದೋಳ್ಧರಿಸುವಕಾಲದೋಳು ಸಹಸ್ರಾಯುವುನಿದ್ರೆ ತಿಳಿದೆಚ್ಚತ್ತು ಈ ಮಹಾನಿಸಿಯೊಳಗೀಮಹಾರಣ್ಯದೊಳು ಎನ್ನಶಿರಃ ಪೀಠವಾಗಿರುವೀ ಮಹಾಖಡ್ಗಮ ನೀಕೆ ಮೆಲ್ಲನೆ ಧರಿಸುವದಕ್ಕೇನುಕಾರಣವ್ರೊ ಎಂದು ಇದಂ ಪರೀಕ್ಷೆಮಾಡಬೇಕೆಂದು ಪರಕಾಯಪ್ರವೇಶಕ್ಷಮವಾದ ದಿವ್ಯಮಂತ್ರವನುಪಕ್ರಮಿಸಿ ನಿಜಶರೀರವಂಬಿಟ್ಟು ನೋಡುತಿರಲಾ ಪರಮದಾರುಣ ಹೃದಯಳಾದ ಕನಕಾಂಗಿಯು ಎಳ್ಳಿನಿತಾಲೋಚನೆಯಮಾಡದಾದಿವ್ಯ ಶರೀರವಂ ಖಡ್ಗದಿಂ ಕತ್ತರಿಸಿ ಗಾತ್ರಶಿರೋಭಾಗವಂಮಾಡಿ ಖಡ್ಗವಂ ತೆಗದುಕೊಂಡಾನಿಶಿಯೊಳತ್ತಿತ್ವರೆಯಿಂದನಡೆದು ಸ್ವನಗರಮನುದಯಾದ್ರೂರ್ವದಲ್ಲಿ ಪ್ರೇಕ್ಷ್ಯ ತನ್ನಾಲಯವನ್ನೈದಿ ತನ್ನತಂದೆಯಾದ ಮಂತ್ರಿಯೆಡೆಗೈದಿ ವಂದನೆಯಂಮಾಡಿ ಕೃತಕೃತ್ಯಳಾಗಿ ಎಲೈ ತಂಡೆಯೆ ಕೇಳು ನಿನ್ನ ಶತ್ರುನಿಶ್ಶೇಷನಾದನೀನಿನ್ನು ನಿರ್ಭೀತನಾಗಿಲ್ಲಿಂದಮುಂದಾಗುವ ಕಾರ್ಯಮನತಿ ಜಾಗರೂಕನಾಗಿನೋಡೆಂದು ಸವಿಸ್ತಾರವಾಗಿ ವೃತ್ತಾಂತಮಂಪೇಳಿ ಮತ್ತಾತಂದೆಯಿಂದ ಬಹುಮಾನಿತಳಾಗಿ ತನ್ನಂತಃಪುರಕ್ಕೆಬಂದು ಆ ಮಹಾಖಡ್ಗವಂಬಚ್ಚಿಟ್ಟು ಸುಖದಿಂದಿರುತ್ತಿರಲು ಮಂತ್ರಿಯು ಮಗಳಸಾಹಸವನಾಲೋಚನೆಮಾಡಿ ಭುವನೈಕವೀರನಾದ ಸಹಸ್ರಾಯುವನುಪಾಯದಿಂ ಸಂಹಾರಮಾಡಿದಳೆಂತು ಸಾಹಸವ್ರೊ ಮಾನಿನಿಯರದೆಂದು ಪರಮಾಶ್ಚರ್ಯಯುಕ್ತನಾಗಿ ಭಾವಿಕಾರ್ಯಸಂಗತಿಗಳ ನಾಲೋಚನೆಯಮಾಡುತಿರುತಿರ್ದ ನಿತಿ ಶ್ರೀ ಬ್ರಂಹಾಡೋಪ ಪುರಾಣೆ ಉತ್ತರಭಾಗ ಲಲಿತೋಪಾಖ್ಯಾನೆ ಪೂರ್ವ ಖಂಡೆ ಹಯಗ್ರೀವಾಗಸ್ತ್ಯ ಸಂವಾದೆ ಮಾನಿನಿಸಾಹಸೋಪವರ್ಣನಂ ನಾಮ ಷಷ್ಟೋಧ್ಯಾಯಃ.

ಷಷ್ಟೋಧ್ಯಾಯ ಸಂಪೂರ್ಣಂ.

ಶ್ರೀರಸ್ತು.

# ಸಪ್ತಮೋಧ್ಯಾಯಂ,

## ಪ್ರಾರಂಭಃ.

ಧರ್ಮಾನುರಕ್ತ ಹೃದಯೋ ಯಾದವಾನಂದವರ್ಧನಃ । ನಾವನಧೃತೋತ್ಸಾಹೋ ರಾಜತೇ ಕೃಷ್ಣಭೂಪತಿಃ ॥ ೧ ॥ ನಿಖಿಲನರಪತಿ ನಿಕರಮಕುಟ ತಟಘಟಿತ ಮಣಿರುಚಿ ಪ್ರಕಾರ ನೀರಾಜಿತಾಂಘ್ರಿಯುಗನೆ ಕೇಳು ಸಕಲಲೋಕಾನಂದಕರನಾದ ರಾಜನಸ್ತಂಗತನಾದಕಾರಣ ತಾನುತಡಮಾಡಬಾರದೆಂದು ಪದ್ಮಬಾಂಧವನುದಯವಾಗಲು ಆರಾಜಕುಮಾರನ ಪರಿಚಾರಕರೆದ್ದು ತಮ್ಮತಮ್ಮ ವ್ಯಾಪಾರದೊಳು ತತ್ಪರರಾಗಿ ರಾಜಕುಮಾರನಂ ಮನೆಯೊಳರಸಿ ಕಾಣದೆ ಭಯಕಲಿತ ಮಾನಸರಾಗಿಹೊರಗಿರುವ ಕಾವಲವರಿಂಗೊರೆಯಲು ಅವರು ಅರಸಿ ಕಾಣದೆ ಸಾಧ್ವಸದಿಂದ ಧರಣೀಶನೆಡೆಗೈದಿ ಬಿನ್ನಹಮಾಡಲು ಆ ವೀರವರ್ಮರಾಯನು ಮಹತ್ಸಂಶಯದೊಳಾಳ ಮುಳುಗಿ ನೆಲೆಯಕಾಣದೆ ಅಮಾತ್ಯರಂ ಕರೆಸಿ ಸಹಸ್ರಾಯುಮೆಲ್ಲಿಗೈದಿದನೊ ಎಲ್ಲಿರುವನೊ ಏನಾದನೋ ವಿಚಾರಿಸಿ ಪೇಳ್ ವುದೆಂದು ಕಟ್ಟಲೆಯಂ ಮಾಡಲು ಆ ಮಂತ್ರಿಜನರಾಸ್ಥಾನಮಂಪೊಕ್ಕು ಎಲ್ಲರೊಂದಾಗಿ ಮಂತ್ರಾಲೋಚನೆಯಂಮಾಡಿ ಗೂಢಚಾರರಂ ಕರೆಸಿರಾಜಕುಮಾರನೀನಗರದೊಳಗೆಲ್ಲಿರುವನೋ ನೋಡಿ ಮೇಣಾತನನೆಲೆಯಂ ತಿಳಿದುಬಂದು ತಿಳಿಸಿದಡೆ ರಾಜಪ್ರಸಾದಕ್ಕೆ ಪಾತ್ರರಾಗುವಿರೆಂದು ಕಟ್ಟಲೆಯಂಮಾಡಲು ಆಚಾರರರಹಂ ಪೂರ್ವಮಹಂ ಪೂರ್ವಮೆಂದು ಆ ಚಾರರಾನಗರದೊಳು ಮನೆಮನೆಯಲ್ಲಿ ದೇವಾಲಯದಲ್ಲಿ ಕ್ರೀಡಾವನದಲ್ಲಿ ವಾಪೀಕೂಪ ತಟಾಕ ನಿಮ್ನಗಾಪ್ರಮುಖ ಪ್ರದೇಶಗಳಲ್ಲಿ ಎಳ್ಳನಿತುಬಿಡದೆ

ನೋಡಿ ಕಾಣದೆ ಬಂದೊರೆಯಲು. ಪ್ರಧಾನರದಂ ಕೇಳಿ ನರಪತಿಗೆ ಬಿನ್ನಹಮಾಡಲು, ಮಹೀಪತಿಮಾಹಚ್ಚಿಂತೆಯಿಂಮಗಳಮನೆಗೈತಂದು ತಿಳುಹಲು, ಅತ್ಯಂತ ದುಗುಡದಿಂ ತಾನೆಯಾನಾರೂಢಳಾಗಿ ಸಹಸ್ರಾಯುವಿನ ಬಿಡದಿಗೈತಂದು ಆತನ ಶೈಯ್ಯಾಸನಾದಿಗಳಂ ನೋಡಿ ಮಹಾದುಃಖದಿಂತಪ್ತಳಾಗಿ ತತ್ಪರಿಚಾರಕನು ಕರೆದು ಕೇಳಲು. ಅವರು ರಾಜಕುಮಾರನ ಸ್ನಾನಭೋಜನಾದಿಸರ್ವವ್ಯಾಪಾರಗಳಂ ವಿಸ್ತರದಿ ಪೇಳಿ ಇಂತಿರಲು ಓರ್ವ ಮಾನಿನಿಯು ಬಂದು ಸೇವೆಯಂ ಮಾಡಿ ಆತನೊಡಗೂಡಿ ಈರೀತಿಯಿಂ ಇದ್ದು ನಿನ್ನೆಯಯಾಮಿನಿಯೊಳೋರ್ವರುಂ ಶಯನಾವಸನದೊಳಿದ್ದುದಂ ಕಂಡೆವೆಲೇ ತಾಯೆ, ಪ್ರಾತಃಕಾಲದೊಳಗೆದ್ದು ನೋಡಲು ಇರಲಿಲ್ಲವೆಂದು ಬಿನ್ನೈಸಲು. ಧಾನ್ಯಮಾಲಿನಿಯು ಅಂಗನಾಸಕ್ತನಾಗೆಲ್ಲಿಗೈದಿದನೋ ಆತನಂ ಒಲಿಸಿಕೊಂಡಾಕೆಮೋಣಾವಳೋ ಎಂದು ನಾನಾವಿಧದಿ ಚಿಂತಿಸುತ ಕನಕಾಂಗಿವಿಷಯವಾಗಿ ತೋರಿ, ಮಧುರಭಾಷಿಣಿಯಂ ಕರೆದು ಮಂತ್ರಿಯಾಲಯಕೆ ವ್ಯಾಜಾಂತರದಿಂದ ಪೋಗಿ ಕನಕಾಂಗಿಯಂ ನೋಡಿ ಬರುವುದೆಂದು ಕಳುಹಲು. ಆ ಮಧುರಭಾಷಿಣಿಯು ಪೋಗಿ ನೋಡಿ ಮನೆಯೊಳಿರುವಳೆಂದು ಬಂದು ನುಡಿಯಲು, ಧಾನ್ಯಮಾಲಿನಿಯು ಯಾವ ಮಾನಿನಿ ಎನ್ನ ಪ್ರಿಯನ ಕೊಂಡೊಯ್ದಳೊ ಕಾಣೆನಾಕೆಯ ಪುಣ್ಯಕೆಣೆಯೆಂದು ಹಂಬಲಿಸಿ, ತನ್ನಾಲಯಕೆ ಬಂದು ತನ್ನ ತಂದೆಯಡಿದಾವರೆಗೆ ವಂದಿಸಿ ಜನಕ ಎನ್ನಯ ನುಡಿಯನವಧರಿಸು, ಆ ರಾಜಕುಮಾರನ ನೆಲೆಯನರಿದಲ್ಲದೆ ತನಗೆ ಮುಂದೋರದದರಿಂದ ಆತನ ನೆಲೆಯನವಶ್ಯವಾಗಿ ತಿಳಿಯಬೇಕೆಂದು ಬಿನ್ನಹವಮಾಡಲು, ನರಪತಿಯು ಸುತೆಯ ಕಾರ್ಪಣ್ಯಮಂ ನೋಡಿ ಮನದೊಳಗೆ ಮರುಗಿ ತತ್ಕ್ಷಣದೊಳಖಿಳಮಂತ್ರಿಗಳಕರೆಸಿ ಸರ್ವೋಪಾಯದಿಂ ಸಹಸ್ರಾಯುವೆಲ್ಲಿರುವನೋ ಏನಾದನೋ ಅದರ ನೆಲೆಯನ್ನವಶ್ಯವಾಗಿ ತಿಳಿಯಬೇಕೆಂದೆನಲು, ಜೀಯ್ಯ ಕೇಳಂತೇಕೆ ಚಿಂತಿಪ್ಪುದು ಸರ್ವಸಾಹಸದಿಂ ರಾಜಕುಮಾರನೆಲ್ಲಿರುವನೋ ತಿಳದು ಬಂದೊರವೆವೆಂದಖಿಲಮಂತ್ರಿಗಳೆದ್ದು ಕೈಮುಗಿದು ಆಸ್ಥಾನಮಂಟಪಕೆ ಬಂದು, ಬುದ್ಧಿಶಾಲಿಗಳಾದ ಬಹುಮಂದಿ ಚಾರರಂ ಕರೆಸಿ ವಸ್ತ್ರಾಭರಣಗಳನಿತ್ತು ಎಲೈ ಚಾರಭಟರುಗಳಿರಾ ಕೇಳಿ, ಬಹುಕಾಲದಿಂ ಮಹೀಶನು ನಿಮ್ಮಂ ಪೋಷಿಸಿದುದ

ಳೆ ನೀವು ಋಣಮುಕ್ತರಾಗುವ ಸಮಯವಿದು, ಸಹಸ್ರಾಯುವೆಲ್ಲಿರುವ
ನೋ, ದೇಶದೇಶದೊಳು ನಗರದೊಳು ಗ್ರಾಮದೊಳು ಗಹನಗಿರಿಗು
ಹೆಗಳೊಳು ಎಳ್ಳನಿತುಬಿಡದರಸಿ ಕರತರುವುದೆಂದು ಆಜ್ಞಾಪಿಸುತ ಕಳು
ಹಲು, ಮುಖ್ಯಪ್ರಧಾನನು ಸಹಸ್ರಾಯುವಿನ ಮೃತಿಯು ತಿಳಿದಬಳಿಕಲ್ಲದೆ
ಮುಂದಿನ ಕಾರ್ಯ ನಡೆಯುವದಿಲ್ಲವೆಂದು ನಿಶ್ಚೈಸಿ, ಪರಮಾಪ್ತನಾದೋ
ರ್ವದೂತನಂ ಕರೆದು ಎಲಾ ಚಾರನೆ ಕೇಳು, ಪೂರ್ವದಿಗ್ಭಾಗದೊಳಗಿರು
ವ ಕಾಂತಾರಮಧ್ಯದಲೊಂದು ಕಾಳಿಯಾಲಯವಿಹುದು ಅದರ ಸಮೀಪ
ದೊಳ್ ಪುಷ್ಪಿತಾಶೋಕತರುವಿನೆಡೆಯಲ್ಲಿ ಮೃತನಾಗಿರುವನೆಂದು ಕುರು
ಹಂ ತಿಳಿಸಿ, ನೀನು ತವಕದಿಂದಲ್ಲಿಗೀಗಲೆ ಪೋಗಿ ಮೃತನಾಗಿ ಬಿದ್ದಿರು
ವ ರಾಜಕುಮಾರನ ಕಳೇಬರವನರಣ್ಯದೊಳಗಿರುವ ಮೃಗಪಕ್ಷಿಕೀಟಗ
ಳು ಮುಟ್ಟದಂತೆ ಮಾಡಿ ಮೃತನಾಗಿ ಬಿದ್ದಿರುವ ಸುದ್ದಿಯಂ ತಂದು ಮ
ಹೀಶಂಗೆ ಬಿನ್ನೈಸೆ ನಿನಗೆ ಬಹುಮಾನಮಂ ಮಾಡುವೆನು ಪೋಗಿಬಾರೆಂ
ದೆನಲು. ಆ ದೂತನು ಅಲ್ಲಿಗೆ ಪೋಗಿ ಸಾಕ್ಷಾತ್ ಕುಸುಮಾಸ್ತ್ರನಂತೆ
ಕಂಡಿಕುಂದದೆ ನಿದ್ರೆಯಂ ಮಾಡುವನೋಪಾದಿಯಲ್ಲಿರುವ ರಾಜಕುಮಾರ
ನ ಭಿನ್ನಕಳೇಬರವಂ ಕಂಡು ಬಹುದುಃಖಿತನಾಗಿ ಈ ಮಹಾನುಭಾವನಾ
ರುಕೊಂದರೋ ಶಿವಶಿವಾ ಎಂದು ಹಂಬಲಿಸಿ ಮಂತ್ರಿಯಾಡಿದಭಿಪ್ರಾಯ
ಮಂ ನೋಡಿದಡೆ ಮಂತ್ರಿಮಾಡಿದಂತೆ ಕಾಣುತಿದೆ ತಮಗೇನು ಏನಾದಡಾ
ಗಲೆಂದು ಆ ದಿವ್ಯಕಳೇಬರವನೊಂದು ನಿರ್ಮಲವಾದಗುಹೆಯೊಳಿರಿಸಿ ತಳ
ರಿಂದ ಮುಚ್ಚಿ ಮಹಾದ್ವಾರಮಂ ಸ್ಥೂಲಪಾಷಾಣದಿಂ ಮುಚ್ಚಿ ವೀರ
ವರ್ಮರಾಯನೆಡೆಗೈತಂದು ಜೀಯ್ಯ ತಾನಾಜ್ಞಾನುಸಾರವಾಗಿ ರಾಜಕು
ಮಾರನನ್ನರಸಲು ಪೂರ್ವದಿಗ್ಭಾಗಮಂ ಕುರಿತು ಪೋಗುತ್ತ ಮಹದಡವಿ
ಯಂ ಪೊಕ್ಕು ನೋಡುತ್ತಿರಲೊಂದು ಕಾಳಿಕಾಲಯಮಾಕಾಂತಾರದೊ
ಳು ಕಂಡು ಆ ಕಾಳಿಯಾಲಯದ ಸುತ್ತ ನೋಡುತ್ತಬರಲು, ಆ ಚಂಡಿ
ಯಾಲಯದ ದಕ್ಷಿಣಭಾಗದೊಳು ಪುಷ್ಪಿತಾಶೋಕತರುವಿನಡಿಯಲ್ಲಿ ಖ
ಡ್ಗಪ್ರಹಾರದಿಂ ಶಿರೋಗಾತ್ರವಿಭಾಗವಾಗಿ ಮೃತನಾಗಿಬಿದ್ದಿರುವ ರಾಜ
ಕುಮಾರನಂಕಂಡತ್ಯಂತದುಃಖಪೀಡಿತನಾಗಿ ವನದೊಳಿರುವ ಮೃಗಪಕ್ಷಿ
ಕೀಟಗಳು ಮುಟ್ಟದಂತೆ ಬಂದು ಗಿರಿಗುಹೆಯೊಳು ಮರೆಮಾಡಿ ಬಂದೆನಿ

ದು ವೃತ್ತಾಂತವೆಂದು ಬಿನ್ನಹವಮಾಡೆ. ಕೇಳುತಾ ವೀರವರ್ಮರಾಯನು ಅ
ತೀವದುಃಖಪೀಡಿತನಾಗಿ ಮುಕ್ತಕಂಠನಾಗಿ ರೋದನವಮಾಡಿ ಚಾರನು
ತಂದ ರಾಜಕುಮಾರನ ವಸ್ತ್ರಾಭರಣಗಳಂ ತೆಗೆದುಕೊಂಡು ಮಗಳ
ಮನೆಗೈತಂದು ವೃತ್ತಾಂತಮಂ ಪೇಳಿ ವಸ್ತ್ರಾಭರಣಗಳ ತೋರಿಸಲು,
ಆ ಧಾನ್ಯಮಾಲಿನಿಯು ಬಹುದುಃಖಿತಳಾಗಿ ತಂದೆಯಂ ಕುರಿತು ಈ ಕು
ರುಹಿನಿಂದಲೇ ನಿಶ್ಚಯಮಾಡಕೂಡದದರಿಂದ ಆ ದೂತನಂ ಕರೆಶಿ ಈಗಲೆ
ಪೋಗಿ ಆ ರಾಜಕುಮಾರನ ಶಿರವತರುವಂತೆ ಕಳುಹುವುದೆಂದು ಬಿನ್ನಹ
ಮಾಡಲು, ಆ ಮಹೀಶನು ತತ್ಕ್ಷಣದೊಳಾದೂತನಂ ಕರೆಶಿ ಇನ್ನು ಕೆಲವು
ಮಂದಿ ಚಾರರಂ ಅವನೊಡನೆ ಇತ್ತು ಚತುರಂತಯಾನಮನಿತ್ತು ಶಿರವ
ನೀಗಲೆ ಪೋಗಿ ತರಬೇಕೆಂದು ಪೇಳಲು. ಆ ಚಾರರು ದಿವಾನಿಶಿಯ ನಡೆ
ದು ಗುಹೆಯಂ ಪೊಕ್ಕು ಶೀರ್ಷಮನ್ನಂದಳದೊಳಿಟ್ಟು ಪುರವಂ ಪೊಕ್ಕು
ರಾಜಭವನದ್ವಾರದೆಡೆಗೈದಿ ರಾಯಂಗೆ ಸುದ್ದಿಯಂ ಪೇಳಲು. ವೀರವ
ರ್ಮರಾಯನು ಆ ಶಿರವಂ ನೋಡಲಾರದೆ ಅತ್ಯಂತ ವಿಷಾದದಿಂದೋರ್ವ ಸ
ಚಿವನಂ ಕರೆದು ಶೀರ್ಷಮಂ ಮಗಳಿಂಗೆ ತೋರೆನಲು, ಅಮಾತ್ಯನತ್ಯಂತ
ಖೇದದಿಂ ದೂತರಂ ಸಂಗಡ ಕರದುಕೊಂಡು ಧಾನ್ಯಮಾಲಿನಿಯ ಮನೆಗೆ
ಬಂದು ಶಿರಮಂ ತಂದು ಮುಂದಿಡಲು, ಧಾನ್ಯಮಾಲಿನಿಯು ಪತಿಯ ಶಿರ
ಮಂ ದಿವ್ಯಪೀಠದೊಳಿರಿಸಿ ನಸುನಗುವ ಭಾವದಿಂ ವಿರಳಮುಕುಳಿತನಯ
ನಕಮಲದ್ವಯದಿ ಕತ್ತುರಿಯ ತಿಲಕದಿಂದೆಸೆವಾರ್ಧಚಂದ್ರನ ಪೋಲ್ವಫಾ
ಲದಿಂ ದಿವ್ಯಮಣಿಖಚಿತಕುಂಡಲಗಳಂ ಶೋಭಿಸುವ ಕರ್ಣಯುಗದಿಂ, ಚಂ
ಪಕನಾಸ, ಮುಂಗುರುಳು ಕನ್ನಡಿಯ ಪೋಲ್ವ ಕಪೋಲಯುಗಳದಿಂ ಮದ
ನಬಾಣರಸನವಧಿಕ್ಕರಿಪ ಪುರ್ಬಿನಿಂ ಚೂತಫಲದಂದದಿಂದಿರುವ ಚುಬುಕ
ದಿಂ, ಪಲ್ಲವದೋಲಿರುವಾಧರಬಿಂಬದಿಂ ರಾಜಿಸುವ ಮುಖಕಮಲವಂ ಮಾ
ಲಿನಿಯು ನೋಡಿ ಮೂರ್ಛೆಯನ್ನೈದಿ ನಿಶ್ಯಂಕತರುನೆಲಕುರುಳಬಿಳುವಂ
ತೆ ನೆಲವನಾಶ್ರೈಸಲು, ಮಂತ್ರಿ ಕೇಡು ನಡುಗಿ ಜವದೊಳು ನೃಪತಿಯೆಡೆ
ಗೈತಂದು ಮಗಳವೃತ್ತಾಂತಮಂ ಪೇಳಲು, ನರಪತಿಯು ಕೇಳಿ ಮಗಳಿಂಗೆ
ಮೃತ್ಯುರೂಪಾಗಿವನ್ನೈದಿದನು. ಏನುಮಾಡಲಿತಾನು, ಈ ಮಹಾಪುರುಷ
ನೀನಗರಕೇಕೈದಿದನೊ ಈ ಭುವನೈಕವೀರನಂ ಯಾರು ಕೊಂದರೊ ಶಿವ

ಶಿವಾ ಎಂದು ಮರುಗುತ್ತ ಮಗಳಮನೆಗೈತಂದು ಮೂರ್ಛೆಯಿಂ ಮೈಮರೆದು ಮಲಗಿರುವ ತನುಜಾತೆಯಂ ನೋಡಿ ತಪವಮಾಡಿ ಪಡೆದೋರ್ವಮಗಳಗತಿಯೀರೀತಿಯಾದುದೇ ಹರಹರಾ ಎಂದು ಮುಂದಕೆ ಬಂದು ಆಕೆಯ ಸಮೀಪದೊಳು ನಸುನಗುತ ಮಾತಾಡುವಂತಿರುವ ರಾಜಕುಮಾರನ ಶಿರವಂ ಕಂಡು ಪಾರವಿಲ್ಲದ ದುಃಖಮನ್ನೈದಿ ಶೈತ್ಯೋಪಚಾರವಂ ಮಾಡಿ ಮಗಳನೆಬ್ಬಿಸಲು. ಧಾನ್ಯಮಾಲಿಯು ಹಾ ಕಾಂತ ಹಾ ಪ್ರಿಯ ಹಾ ಮನಶ್ಚೋರಾ ಹಾ ಎಂದು ಮೈಮರೆದು ಹಂಬಲಿಸುತ್ತಿರುವಾಕೆಯಂ ನೋಡಿ ನರಪತಿಯು ಕಿಂಚಿತ್ಕುಪಿತನಾಗಿ ಮಗಳಂಕುರಿತು ಕಾಂತನುದಾರು ನೀನಾರು ಭ್ರಮೆಪುಟ್ಟಿತೋ ಏನು ನಿನ್ನ ಮನಬಂದಂತೆ ಮಾಡುವುದು ಯುಕ್ತಮಲ್ಲದು ಎಂದು ನಾನಾಪ್ರಕಾರದಿಂ ನಯಭಯದಿಪೇಳಲು. ಆ ಧಾನ್ಯಮಾಲಿನಿಯು ತಂದೆಕೇಳೆನ್ನ ಬಿನ್ನಹವ, ಪತಿ ಇವನೆ ಇವನೊಡನೆ ಮೃತಿಯಿಲ್ಲದಿನ್ನುಂಟೆಪತ್ಯಂತರಾಪೇಕ್ಷೆ, ನೀನಳಲಬೇಡ ಕೇಳೆನ್ನವಿಧಿ ಇಂತಿರಲು, ನೀ ಮಾಡುವುದೇನು ಅಡಿಗಡಿಗೆ ನುಡಿಸದಿರು ಪೋಗು ನಿನ್ನಯರಾಜ್ಯಪಾಲನಾವ್ಯಾಸಂಗಕೆಂದು ನುಡಿದು, ಆ ಶಿರವ ತನ್ನ ಕರದೊಳಾಂತು ತಂದೆ ಮೊದಲಾದವರ ಮುಂದೆ ಮೈಮರೆದು ಶೋಕಾಗ್ನಿಶೋಭಿಸಿತು ಲಜ್ಜಾಪಮುದ್ರಮುಂ, ಅರಸಕೇಳವಧರಿಸು. ಮಾಡುವಳು ಶಿರದೊಡನೆ ಮಾತಾಡೆಂದು ನುಡಿವಳು, ಅಧರಮಂ ಚುಂಬಿಸುತ ಮೈಮರೆದು ಮೂರ್ಛೆಯನ್ನೈದುವಳು, ಎಚ್ಚತ್ತು ಹಲುಬುವಳು. ಇಂತಿರುವ ತನುಜಾತೆಯಂ ನೋಡಿ, ನರಪತಿಯು ಇತಿಕರ್ತವ್ಯತಾಬುದ್ಧಿಶೂನ್ಯನಾಗಿ ಸುಮ್ಮನೆ ಪತ್ನಿಯಾಲಯಕೆ ಬಂದು ಮಗಳ ವೃತ್ತಾಂತವಂ ತಿಳಿಸಿ, ನೀನು ಪೋಗಿ ಸರ್ವೋಪಾಯದಿಂ ಸಮಾಧಾನವುಂ ಮಾಡುವುದೆಂದು ಕಳುಹಲು. ಜನನಿ ಮಗಳ ನೋಡಲು ಬಂದು ತದವಲೋಕನಮಾತ್ರದಿಂ ತದವಸ್ಥೆಯನ್ನೈದಲು. ನರಪತಿಯು ಅಮಾತ್ಯರೆಲ್ಲರಂ ಕರೆದು ಮಗಳಂ ಸಮಾಧಾನಮಂ ಮಾಡಿ ತದನುರಾಗವಂ ಬಿಡಿಸಿ ಸರ್ವೋಪಾಯದಿಂ ತನ್ನ ಮನೋರಥಾನುಸಾರಿಯಾಗಿರುವಂತೆ ಮಾಡಬೇಕೆಂದು ಪೇಳಲು. ವೃದ್ಧರಾದ ಮಂತ್ರಿಗಳು ಜ್ಞಾನಿಗಳಾದ ವಿಪ್ರರಿಂದೊಡಗೂಡಿ ಧಾನ್ಯಮಾಲಿನಿಯ ಅಂತಃಪುರವಂ ಪೊಕ್ಕು ಪತಿತ್ವೇನ ಭಾವಿತನಾದ ರಾಜಕುಮಾರನ ಶಿರವಂ ತ

ನ್ನ ತೊಡೆಯಮೇಲಿರಿಸಿ ದುಃಖಪಾರವಶ್ಯದಿಂದ ಚೇತನಹೀನೆಯಾಗಿರುವ ಸರ್ವಾಂಗಸುಂದರಿಯಂ ಕಂಡು ಎಲ್ಲರೊಂದಾಗಿ ಕುಳಿತು, ಕಟಕಟಾ, ಇಂತ್ಯಾಕೆ ತಂದೆ ಲಕ್ಷ್ಮೀರಮಣಾ ಎಂದು ಮನದೊಳು ನೊಂದುಕೊಳುತಂದಿರತಿವೃದ್ಧರಾದವರು. ಲೋಕಾಂತರವನ್ನೈದಿದವರಲ್ಲಿ ಇಂತು ಮಮತೆಯಂ ಮಾಡುವುದಕ್ಕೆ ಕಾರಣವು ಕಾಣೆವು. ನಿರರ್ಥಕವಾದ ಪ್ರಯುಕ್ತ ಇಂತೆಲ್ಲವಿನ್ನೊಂದುಮಹದನರ್ಥವು ಪ್ರಾಪ್ತವಾಗುವುದು, ರಾಯಂಗೆ ಪರಮಪ್ರೀತಿವಿಷಯಳಾದ ಸರ್ವಗುಣಸಂಪನ್ನಳಾದ ಸುತೆಯೋರ್ವಳೆ ನೀನದುಕಾರಣ ಮಹೀಶನು ಭವದವಸ್ಥಾನುಸಾರಿಯಾದ ಅವಸ್ಥೆಯನ್ನೈದಲು, ಈ ರಾಜ್ಯಕೋಶಾದಿಗಳು ಸರ್ವವ್ಯವಹಾರಗಳು ಉತ್ಪನ್ನವಾಗುವದು ಅದರಿಂದ ರಾಜ್ಯಮರಾಜಕಮಪ್ಪುದು, ತಾವೆಲ್ಲರನಾಥರಹೆವು ಮನುಷ್ಯಸಂಚಾರಯೋಗ್ಯವಾದ ಆಸೇತುಹಿಮಾಚಲಪರ್ಯಂತದೊಳಿರುವ ರಾಜರೊಳಗಾವವನಂ ವರಿಸೆ ಮೇಣಾತನಿಗೆ ಘಟನೆ ಮಾಡುವೆವು. ಜನನಿ ಬಿಡಶೋಕಮಂ ವೃಥಾಯಾಸದಿಂದೇನುಫಲ ಬೇಡಿಕೊಳ್ಳುತ್ತಿರುವ ವೃದ್ಧರಾದೆಮ್ಮನು ನೋಡು ಮಾತಾಡು ವ್ಯಸನವಂ ದೂರದಲ್ಲೀಡಾಡು ಎಂದು ನಾನಾವಿಧದಿಪೇಳುತಿರುವ ವೃದ್ಧರಂ ನೋಡಿ ಕೈಮುಗಿದು ಮಾತಾಡದಿರಲು. ಜನನಿಯು ಅಮಾತ್ಯರುಪಾಯುವ್ರಂ ಕಾರ್ಯಕಾರಿಯಾಗದಿರಲು ಮಂತ್ರಿಸುತೆಯಾದ ಕನಕಾಂಗಿಯು ಈಕೆಗತ್ಯನುರಾಗವಿಷಯಳು ಆಕೆಯಂ ಕರಸಬೇಕೆಂದು ಮನದೊಳಾಲೋಚನೆಯು ಮಾಡಿ ಕರಸಲು. ಆ ಕನಕಾಂಗಿಯು ಮಹಾರಾಜಹನನಸಮುತ್ಪನ್ನಮಹಾದುರಿತಗ್ರಸ್ತತೇಜಸ್ಸುಳ್ಳವಳಾಗಿ ಚಂಡಾಲಸ್ತ್ರೀಯೋಪಾದಿಯಲ್ಲಿ ಬಂದು ಧಾನ್ಯಮಾಲಿನಿಯಂ ಕಂಡು ಕಪಟೋಪಾಯದೂಷಿತಳಾದ ತಾನು ತದನುರೂಪವಾಗಿ ದುಃಖಾಭಿನಯಮಂ ಮಾಡುತ್ತಲೆಂದಳೆಲೆ ಮಾತೆ, ಹತಭಾಗ್ಯರಾವಿರ್ವರದರಿಂದಲೆಮ್ಮಣಿಕೆಬಯಲಪ್ಪುದಿದಕೆ ಚಿಂತಿಸಲೇನುಫಲ, ದೈವಗನ್ಯಥಾಭಾವವೆಲ್ಲಿಯುಮಿಲ್ಲದುಕಾರಣ ವೆಂತಾದಡಂತಾಗಲೆಂದು ಅರಸಿ ಧೈರ್ಯವಮಾಡು ಬಿಡುದುಃಖಮನೆಂದು ವಿನಯಮಧುರೋಕ್ತಿಯಿಂ ನುಡಿಯುತಿರಲು, ಆ ಧಾನ್ಯಮಾಲಿನಿಯು ಸರ್ವಪ್ರೇರಕನಾದ ಪರಮಾತ್ಮನೇ ಸರ್ವಸಾಕ್ಷಿಯಾದುದರಿಂದ ಆ ರಾಜಕುಮಾರನಾರಾತ್ರಿ ಶವಮಂ ಮು

ಟ್ಟದೆ ಪೋದುದರಿಂದಲೂ, ಸಹಸ್ರಾಯುವಿನ ಶಿರವತಿಮನೋಹರವಾಗಿರುವದರಿಂದಲೂ ರಾಯನೀಕೆಯಾಗ್ರಜನಿಂಗೆ ತನ್ನಂಕೊಡುವೆನೆಂದು ಪೇಳಿಮಿದ್ದುದರಿಂದಲೂ ಕನಕಾಂಗಿಯು ಕೇವಲನಿಸ್ತೇಜಸ್ಕಳಾಗಿ ಚಂಪಾಲಸ್ತ್ರೀಯೋಪಾದಿಯಲ್ಲಿ ಕಾಣುತಿರುವದರಿಂದಲಿತನಂತನರ್ಥವೀಕೆಯಿಂದಲೇ ನಡದಿರುವುದೆಂಬರ್ಥ ಮನಕೆ ತೋರಿದುದರಿಂದ ಆ ಕನಕಾಂಗಿಮಾಡುವ ಸಮಾಧಾನೋಕ್ತಿಯು ಅಂತರ್ಗರ್ಭಿತವಾದ ಕ್ರೋಧಾಗ್ನಿಗಾಜ್ಯಧಾರೆಯಂತಾಗಲತ್ಯಂತರೋಷಪರವಶಳಾಗಿ ತದಭಿಪ್ರಾಯಪ್ರಸಂಗಿಯಾದದೃಷ್ಟಿಯಿಂದೆವೆಯಿಕ್ಕದೆ ನೋಡಿ ಮಾತಾಡದಿರಲು. ಆ ಕನಕಾಂಗಿಯಂತಸ್ಸ್ಥಿತಮಹಾದೋಷವುಳ್ಳವಳಾದಕಾರಣ ತದವಲೋಕನಮಾತ್ರಜನಿತಾತ್ಯಂತಸಾಧ್ವಸತ್ರಾಸಯುಕ್ತಳಾಗಿ ಕನಕಾಂಗಿಯು ಮೆಲ್ಲಮೆಲ್ಲನೆ ಸರಿದು ತನ್ನ ಮನೆಗೈತಂದು ಮತ್ಕೃತಕೃತಘ್ನತೆಯು ಈಕೆಗೇನಾದಡೆಯು ತಿಳಿದುದೋ ಎಂದು ನಾನಾವಿಧದಿಚಿಂತಿಸುತ್ತಿರಲು. ಇತ್ತ ರಾಜಪುತ್ರಿಯೇ ಮೊದಲಾದ ಸಕಲಪ್ರಧಾನರು ಈಕೆಯ ಸಮಾಧಾನಮಶಕ್ಯಮೆಂದು ಚಿಂತಿಸುತ ತಮ್ಮತಮ್ಮಾಲಯಕ್ಕೈದಲು. ಧಾನ್ಯಮಾಲಿನಿಯು ಅಡಿಗಡಿಗೆ ಮೃತಪ್ರಿಯಶೀರ್ಷಕರದೆತ್ತಿ ಚುಂಬಿಸುತ ಮಾತಾಡದಿರಲಶ್ರುಧಾರೆಗಳಿಂದ ಕುಚಕುಂಭಮಂ ತೊಳೆಯುತತ್ಯಂತಕ್ಲೇಶಸಾಯುಜ್ಯಮನೈದಿ ಹಂಬಲಿಸುತ್ತಿರಲು.

ಇತ್ತಲಾಸಹಸ್ರಾಯುವು ದುರಾತ್ಮಳಾದ ಕನಕಾಂಗಿಯಿಂದ ಸ್ವಕಳೇಬರಂ ಛಿನ್ನಾಭಿನ್ನವಾದುದಂ ಕಂಡು ನಿರಾಶ್ರಯನಾಗಿ ಬಹುಪ್ರಕಾರ ಆಲೋಚನೆಯಂಮಾಡಿ ತಾನುಮಾರ್ಗದಪ್ಪಿ ನಡೆದುದಕ್ಕೆ ಅನುರೂಪಫಲವಾದುದರಲ್ಲಿ ಸಂಶಯಮಿಲ್ಲ ಮುಂದೆ ತನಗಿಂದಿರಾಪತಿಯನುಜೆಯಡಿದಾವರೆಗಳೇ ಗತಿ ಎನುತ ಸರ್ವಮಂಗಳಾಚರಣಮಂ ನೆನೆಯುತ್ತ ಯಾವದಾದರೊಂದು ಮೃತಪ್ರಾಣಿಶರೀರಮಂ ಪೊಕ್ಕು ಮುಂದಣಕಾರ್ಯಮಂನೋಡಬೇಕೆಂದು ಆ ಸೂಕ್ಷ್ಮಶರೀರಮಾತ್ರಾವಶೇಷಿತನಾಗಿ ಆ ಮಹದ್ಗಹನದೊಳು ಸಂಚಾರಮಾಡುತ್ತ ಪಂಚತ್ವಮನೈದಿರುವ ಪಿಕಕಳೇಬರಮಂ ಕಂಡು ತಾನು ಆ ಶರೀರದಲ್ಲಿ ಪ್ರವೇಶಮಾಡಿ ತ್ರೋಟೀಪುಟದಿಂದಶರೀರಮಂ ಸಂತವಿಟ್ಟು ಹಾರಿಬಂದು ವೃಕ್ಷಾಗ್ರದೊಳ್ಕುಳಿತು ದಿಕ್ಕುಗಳನೋಡುತ್ತಿರಲು,

ಆವೃಕ್ಷದೊಳಗೋರ್ವವೃದ್ಧಗೃಧ್ರನು ಗಳಿತವಯಸ್ಕನಾಗಿ ಚರಮಾವಸ್ಥಾಸಮುತ್ಪನ್ನಮಾದಯಾತನೆಯಿಂದ ದುಃಖಪಡುತಿರಲು ಅವನಂನೋಡಿ ಪಿಕಕಳೇಬರಮಂ ಧರಿಸಿರುವ ರಾಜಕುಮಾರನು ಮುಂದಕ್ಕೆ ಗಮನಮಂ ಮಾಡಬೇಕೆಂದಿರಲು, ಆವೃದ್ಧಗೃಧ್ರಂಗೆ ನಾಲ್ವರುಪುತ್ರರು ಅವರಾಹಾರಾರ್ಥವಾಗಿ ದಿವದಲ್ಲಿ ಬಹುದೂರ ಸಂಚಾರಮಂ ಮಾಡುತ್ತ ಅಸ್ತಮಯಕಾಲದೊಳು ತಂದೆಯಿರುವ ವೃಕ್ಷಕ್ಕೆ ಬಂದು ವಂದನೆಯಂ ಮಾಡಿ ತಂದಿರುವ ನೂತನಫಲಾವಿಷಗಳಂ ಕೊಡಲು ತಂದೆ ಅವೆಲ್ಲವಂ ಭಕ್ಷಿಸಿ ನೂತನಫಲಾವಿಷಗಳಿಂದ ಆಶ್ವಾಸಿತಪ್ರಾಣನಾಗಿ, ಅನಾಶ್ವಾಸಿತಾಪೂರ್ವಮಾದ ಫಲರಸಾಸ್ವಾದನೆಯಿಂದಾಶ್ಚರ್ಯಯುಕ್ತನಾಗಿ, ಪುತ್ರರಂ ಕುರಿತು ತನಗೆ ಚರಮಕಾಲಉಪಸ್ಥಿತವಾಗಿರುವುದು ನೀವಾವದೇಶಕ್ಕೆ ಪೋಗಿ ಸಂಚಾರಮಾಡಿಬಂದಿರಿ, ಆ ದೇಶಗಳಲ್ಲಿ ಆಶ್ಚರ್ಯಕರಮಾದ ವ್ಯಾಪಾರಂಗಳನ್ನೇನಾದಡೆಯು ಕಂಡುಕೇಳಬಂದಿದ್ದರಾದೊಡೆ ಅದಂ ಪೇಳ್ವುದೆಂದು ಕೇಳಲು, ಆ ಜ್ಯೇಷ್ಠಪುತ್ರನು ತಂದೆಗೆ ವಂದನೆಯಂ ಮಾಡಿ ತಾನು ಕಂಡು ಬಂದ ವರ್ತಮಾನಮಂ ಪೇಳುವೆನು ಸಾವಧಾನದೊಳು ಕೇಳುವುದೆನಲು. ಪಿಕಕಳೇಬರಧಾರಿಯಾದ ರಾಜಕುಮಾರನು ವಿದ್ಯಾನಿಧಿ ಎಂಬ ದ್ವಿಜಾಸುರನಿಂದನುಗೃಹೀತನಾಗಿ ಸಕಲಜಂತುಭಾಷಾವಿಶಾರದನಾದುದರಿಂ ಪಿತಾಪುತ್ರರಾಡಿದ ನುಡಿಯಂ ವಿಸ್ಮಿತನಾಗಿ ಕೇಳುತಿರಲು, ಆ ಜ್ಯೇಷ್ಠಪುತ್ರನುಪಕ್ರಮಿಸಿದನದೆಂತೆನೆ.

ನಾನು ಈ ದ್ವೀಪದಲ್ಲಿರುವ ಫಲಾದಿಗಳರಸಾನುಭವಮಂ ಚಿರಕಾಲದಿಂದನುಭವಿಸಿ ತಜ್ಜಿಹಾಸಾಬುದ್ಧಿಯಿಂ ಅಪರಿಚಿತಪ್ರದೇಶದಲ್ಲಿರುವ ಫಲರಸಾಸ್ವಾದನೆಯಂ ಮಾಡಬೇಕೆಂದು ಉತ್ಕಂಠತೆಯಿಂ ಕಿಂಪುರುಷಖಂಡದಲ್ಲಿರುವ ಗಜನಗರಿಯನ್ನಾಳುವ ಸಿಂಹಕೇತನನ ಪುರೋದ್ಯಾನದಲ್ಲಿರುವ ದಿವ್ಯೋತ್ಕೃಷ್ಟಫಲಮಂ ಕಂಡು ಹೃಷ್ಟಮಾನಸನಾಗಿ ವನಮಂ ಪೊಕ್ಕು ನಾನಾವಿಧದಿವ್ಯಫಲಾದಿಗಳ ಭಕ್ಷಿಸಿ ತದ್ರಸಾಸ್ವಾದನಾಹ್ಲಾದಭರಿತಚಿತ್ತನಾಗಿ ವೃಕ್ಷಾಗ್ರಮನ್ನಾಶ್ರೈಸಿ ಕುಳ್ಳಿರುವ ಸಮಯದೊಳು, ಕಂಕೀರವಧ್ವಜನು ವನವಿಹಾರಾರ್ಥವಾಗಿ ಅನೇಕ ದಿವ್ಯಸುಂದರಯೋಷಿಜ್ಜನರಿಂದೊಡಗೂಡಿ ಮಹಾವೈಭವದಿಂದ ವನಮನ್ನೈದಿ ಕುಸುಮಾಪಚಯ

ವಾರಿಕ್ರೀಡಾದಿ ನಾನಾವಿಧವಿಲಾಸದಿಂದನೇಕಮಾನಿನೀಜನರೊಡನೆ ರವಿಸುತಾನುಗರಣರಂಗದೊಳ್ ಶ್ರಾಂತನಾಗಿ ಮದಧಿಷ್ಠಿತಮಹೀರುಹದಡಿಯಲ್ಲಿ ದಿವ್ಯಾನರ್ಘ್ಯವಿಶಾಲಪಟಾಲಯದೊಳು ನಿದ್ರೆಯ ಮಾಡುತ್ತಿರಲು. ಅದೇಪ್ರಕಾರದೊಳು ಸ್ವಸಮಾನಜಾತೀಯ್ಯಪತತ್ರಿಯುಗ್ಮವು ಬಂದು ಕುಳ್ಳಿರಲು. ಸಮಾನಜಾತೀಯಪತಂಗಮಾತ್ರಸಂಚಾರರಹಿತಮಾದೀಪ್ರದೇಶಕ್ಕೆ ಈಪಕ್ಷಿಗಳೈದುವದಕ್ಕೆ ಕಾರಣಮಂ ಕಾಣದೆ ಆ ಗೃದ್ಧ್ರಂಗಳಂ ಕುರಿತು ನೀವಾರಿಲ್ಲಿಗೈತಂದ ಕಾರ್ಯವೇನು ತನ್ನೊಳನುರಾಗದಿಂ ಪೇಳಬೇಕೆಂದೆನಲು. ಆಯುಗ್ಮದೊಳಗೋರ್ವನೆಲೈ ಗೃಧ್ರನೆ ಕೇಳು, ಈಗಾಯಂಗೆ ಚರಮಕಾಲವು ಉಪಸ್ಥಿತಮಾಗಿರುವುದು. ಅದರಿಂದಲಾತನಂ ಕೊಂಡೊಯ್ಯಲೋಸುಗಬಂದಿರುವ ಯಮಾನುಚರರಾವು ಇನ್ನೂ ಕಿಂಚಿತ್ಕಾಲವ್ಯವಧಾನವಿರುವದರಿಂದ ರೂಪಾಂತರಗ್ರಹಣಮಂ ಮಾಡಿ ಕಾಲನಿರೀಕ್ಷಣೆಯಂ ಮಾಡುತ್ತ ಕುಳ್ಳಿರುವೆವೆಂದೆನಲು. ತಾನು ಮಹದಾಶ್ಚರ್ಯಯುಕ್ತನಾಗಿ ಎಲೈ ಮಹಾನುಭಾವರಾದ ದೇವತೆಗಳಿರಾ ಕೇಳಿ ಈ ಮಹೀಶನು ಮಹಾಧಾರ್ಮಿಕನು ಜ್ಞಾನಿಜನಪ್ರಿಯನು ಭೂತದಯಾಪರನು ಸರ್ವಗುಣಾಲಯನು ಭಗವದ್ಭಕ್ತನು ಭೂಸುರಪ್ರಿಯನಿವಗೆ ಯುಷ್ಮಲ್ಲೋಕಪ್ರಾಪ್ತಿಯೆಂತು ಸಂಭಾವಿಸೀತು ಪೇಳಬೇಕೆಂದು ಪ್ರಾರ್ಥನೆಯಂ ಮಾಡಲು ಆಯಮಾನುಚರರೆಂದನೆಲೆ ಗೃಧ್ರನೆ ಕೇಳು. ಈ ಮಹೀಶನು ಮಾಡಿದಪಚಾರಮಂ ಪೇಳುವೆವು. ಈ ನರಪತಿಯು ನಿಖಿಲಸಾಧುಜನಶಿಖಾಮಣಿಯು ಸಂಶಯಮಿಲ್ಲ. ಆದಡೆಯು ಒಂದಾನೊಂದು ದಿನ ಅಭ್ಯಂಜನಮಂ ಮಾಡಬೇಕೆಂದು ತನ್ನುದರದೊಳು ಪುಟ್ಟದ ಸರ್ವಾಂಗಸುಂದರಿಯಾದ ದ್ವಿತೀಯ್ಯವಯಸ್ಸಾಮ್ರಾಜ್ಯಸಂಪನ್ನಳಾದ ಮಹಾಪತಿವ್ರತೆಯಾದ ಕುವರಿಯಂ ಕರೆದು ತನಗೆ ತೈಲಾಭ್ಯಂಗನಮಂ ಮಾಡಿಸುವುದೆನಲು ತಂದೆಯಾಡಿದ ನುಡಿಯ ಮಂದಗಮನೆಯು ಕೇಳಿ ಸುವರ್ಣಮಯಪಾತ್ರೆಯೊಳು ದಿವ್ಯತೈಲಾದಿಗಳನ್ನಿರಿಸಿ ತಂದೆಯಡೆಗೈತಂದು ತೈಲಮನ್ನೊತ್ತುತ್ತಿರಲು. ಸರ್ವಾಭರಣಭೂಷಿತಳಾದ ಸುಪುತ್ರಿಯ ಸೆರಗು ಸರಿಯಲು ಕರಿಕಲಭಕುಂಭದಂತಿರುವ ಕುಚಕಲಶಮಂ ಕಂಡು ತದವಲೋಕನಸಮುತ್ಪನ್ನಮಕರಕೇತನಮಹಾಯುಧಪ್ರಹಾರ ಪ್ರಮುಷಿತವಿವೇಕ

ಮುಳ್ಳವನಾಗಿ ಕಾತರನಾದ ಸಾಕ್ಷಾತ್ ಜನಕನಭಿಪ್ರಾಯಮಂ ಗಕ್ಕನೆ ತಿಳಿದು ವ್ಯತ್ಯಾಸಬರುವುದೆಂಬರ್ಥವಂ ನಿಶ್ಚೈಸಿ, ತತ್ಕ್ಷಣದೊಳೊಂದುಪಾಯಮಂ ತಿಳಿದು, ವಿದಗ್ಧೆಯಾದ ಸುಪ್ರಭೆಯು ವಿಸ್ಮೃತಮಾದತ್ಯಾವಶ್ಯಕವಾದ ಕಾರ್ಯಸ್ಮೃತಿವಿಷಯಮಾಗಿ ತದರ್ಥವಾಗಿ ಪೋಗುವಳಂತೆ ಜನನಿಯಿದ್ದೆಡೆಗೆ ಜವದೊಳೈತಂದು ತಂದೆಯ ಮನೋವಿಕಾರಮಂ ಮುಂದೆ ಮಾಡುವ ಕಾರ್ಯಮನ್ನರಿದು ತನ್ನಾಭರಣವಸ್ತ್ರಾದಿಗಳಂ ಜನನಿಗಲಂಕರಿಸಿ, ತೈಲಾಕ್ತಪಾಣಿಯುಗ್ಮಮುಳ್ಳವಳಾಗಿ ಪೋಗೆಂದು ಪೇಳಿ ಕಳುಹಲು. ರಾಜಪತ್ನಿಯು ಸುತೆಯ ಸೌಂದರ್ಯಕ್ಕೆ ಮೋಹಿತನಾಗಿ ಪರವಶನಾಗಿರುವ ಪತಿಯಂ ಕಂಡು ಪರಮಾಶ್ಚರ್ಯದಿಂ ತೈಲವನ್ನೊತ್ತುವುದಕ್ಕುಪಕ್ರಮಿಸಲು, ಪುನಃ ಪ್ರಮದಾಕರಸ್ಪರ್ಶದಿಂದುದ್ಬೋಧಿತನಾಗಿ ಕಾರ್ಯಾಕಾರ್ಯಮಂ ವಿಚಾರಮಾಡದೆ ಮೋಹದಿಂ ರತಿಗುಪಕ್ರಮಿಸೆ ಧ್ವನಿಯಂ ತೋರದೊಡಂಬಡದಂತೆ ನಟಿಸಲಾಕೇಸರಿಕೇತನನುಮದನಾಂಧಕಾರದಿಂಬಲಾತ್ಕಾರದಿಂ ರಮಿಸಿ ರತಿವಿಶ್ರಾಂತಿಯಿಂ ಮೈಮರೆಯಲು. ಆಕ್ಷಣದೊಳಾರಾಜಕುಮಾರಿಯು ಜನನಿಯಂ ಸಂಜ್ಞೆಯಿಂ ಕರೆದು ತನ್ನ ವಸ್ತ್ರಾಭರಣಗಳಂ ಯಥಾಪೂರ್ವಮಾಗಿ ತಾನೇ ಧರಿಸಿ ಜನಕನೆಡೆಗೈದಿ ತತ್ಕಾಲೋಚಿತೋಪಚಾರಂಗಳಂ ಮಾಡುತ್ತಿರಲು. ನರಪತಿಯು ಕಣ್ದೆರೆದು ಮಗಳಂ ನೋಡಿ ಅನುಚಿತಕಾರ್ಯಸಂಭಾವಿತಮಾದುದೆಂದು ಚಿಂತಾಬ್ಧಿಯೊಳ್ಮುಳುಗಿ ಲಜ್ಜಿತನಾಗಿ ನಿಷ್ಕೃತಿಯಂ ಕಾಣದತಿದುಗುಡದಿಂದ ಮಜ್ಜನಮಾಡಿ ವಿವೇಕಿಗಳೊಳಾಲೋಚನೆಯಮಾಡೆ ಲಜ್ಜಿತನಾಗಿ ತನ್ನೊಳುತಾನೆ ವಿಪಿನಮಂ ಪೊಕ್ಕು ತಪಮಂ ಮಾಡಿ ನಿಷ್ಕೃತಿಯಂ ಕಾಣಬೇಕೆಂದು ನಿಶ್ಚಯಮಾಡಿ, ಮುಖ್ಯಾಮಾತ್ಯನಂ ಕರೆಸಿ, ರಾಜ್ಯಮನ್ನಾತನಧೀನಮಮಾಡಿ ವನಮಂ ಪೊಕ್ಕು ವಿವಿಕ್ತರಮಣೀಯ್ಯಮಾದ ಪ್ರದೇಶಮನ್ನೈದಿ ಈಶ್ವರಾನುಗ್ರಹಮಪ್ಪ ತಪಸ್ಸಾಧನಮನ್ನರಿಯದೆ ಊರ್ಧ್ವಬಾಹುಮುಖವುಳ್ಳವನಾಗಿ ಸ್ಥಾಣುವಿನೋಪಾದಿಯಲ್ಲಿ ನಿಂದಿರಲು. ಒಂದಾನೊಂದು ದಿನ ವಿಶ್ವಾವಸುವೆಂಬ ಗಂಧರ್ವನು ರಮಣೀಯಮಾದ ಮನೋಜವಮೆಂಬಮಣಿಮಯವಿಮಾನಮಂನೇರಿ ಭೂಮಂಡಲಮಂ ತಿರುಗಿ ನೋಡುವೆನೆಂಬ ಕುತೂಹಲದಿಂದ ನಿರಾಲಂಬಮಾರ್ಗದೊಳು ಬರುತಿರಲು. ಆ ವಿಮಾನ

ಶಾಂತಿಯಿಂ ಅರಣ್ಯವೆಲ್ಲಪ್ರಕಾಶವಾಗುತ್ತಿರಲು ಈ ರಾಯನದಂ ಕಂಡು ಪರಮಾಶ್ಚರ್ಯಭರಿತನಾಗಿ ತೇಜೋಮಯವಾದ ವಿಮಾನಾರೂಢನಾಗಿರುವ ದಿವ್ಯಪುರುಷನೇ ಅಸ್ಮದ್ಧ್ಯಾನವಿಷಯನೆಂದರಿದು ವಿಮಾನಸಹಿತನಾದ ಆ ದಿವ್ಯಪುರುಷನನ್ನೇ ಧ್ಯಾನವಂ ಮಾಡುತ್ತಿರಲು. ಗಂಧರ್ವನು ಸ್ವಲೋಕಮನ್ನೈದಲು, ಈ ಮಹೀಪತಿಯು ಬಹುಕಾಲವದೆಪ್ರಕಾರವಾಗಿ ಧ್ಯಾನವಂ ಮಾಡುತ್ತಿರಲು. ಚಿರಕಾಲದಿಂ ತನ್ನನೆ ಧ್ಯಾನಮಾಡುವನೀಮಹೀಶನೆಂದು ಆ ವಿಶ್ವಾವಸುವೆಂಬ ಗಂಧರ್ವನು ತಿಳಿದು, ಪ್ರಸನ್ನಾಂತಃಕರಣಯುಕ್ತನಾಗಿ ತತ್ಸಮೀಪವನ್ನೈದಿ ಕೇವಲ ನಿಶ್ಚಲನಾಗಿ ಧ್ಯಾನಮಾಡುವನಂ ಕಂಡು ಕರುಣದಿಂ ನೃಪತಿಯಂ ಕುರಿತು ತನ್ನ ಧ್ಯಾನಮಂ ಏನುಕಾರಣ ಮಾಡುವೆ ಎಂದು ಕೇಳಲು. ಹರಿಕೇತನನು ಕಣ್ದೆರೆದು ಮುಂದೆ ನಿಂತಿರುವ ಗಂಧರ್ವನಂ ನೋಡಿ ವಂದನೆಯಂ ಮಾಡಿ ಸ್ತುತಿಮಾಡಲು. ವಿಶ್ವಾವಸುನಾಮಕನಾದ ಗಂಧರ್ವನು ಸುಪ್ರೀತನಾಗಿ, ನಿನಗೆ ಬೇಕಾದುದಂ ಬೇಡು ಕೊಡುವೆನೆಂದು ಅಭಯಮನ್ನೀಯಲು. ಈರಾಜನೆದುರ್ಗೆನಿಂದಿರುವ ದಿವ್ಯಮಣಿಮಯವಾದ ವಿಮಾನವಂ ನೋಡಿ ಅದೃಷ್ಟಪೂರ್ವನಾದ ಅತ್ಯದ್ಭುತವಸ್ತುವಿನಲ್ಲಿ ಸಮಾಸಕ್ತಮಾನಸನಾಗಿ ಯದುದೃಶ್ಯವಾಗಿ ತಪಃಪ್ರಾರಂಭಪ್ರೊ ತತ್ಕಾರ್ಯಮಂ ಮರೆದು ಗಂಧರ್ವನಂ ಕುರಿತು, ಬೇಡಿದುದಕೊಡುವೆನೆಂಬ ಭವದ್ವಾಕ್ಯಮೆ ಸತ್ಯಮಾದೊಡೆ, ಈ ವಿಮಾನವಂ ತನಗೆ ದಯಮಾಡಬೇಕೆಂದು ಬೇಡಲು, ಆ ಗಂಧರ್ವನು ಕೊಟ್ಟ ಭಾಷೆಗೆ ತಪ್ಪಬಾರದೆಂದು ವಿಮಾನಮನಿತ್ತು ಇಂದಿನಾರಭ್ಯ ಮಹೀಶನಾಜ್ಞೆಯೊಳಿರುವುದೆಂದು ಯಾನಮಂ ಒಡಂಬಡಿಸಿ ಸ್ವಲೋಕಮಂ ಕುರಿತು ನಡೆಯಲು ಈ ಮಹೀಪತಿಯು ತಾನು ಉದ್ದೇಶ್ಯಮಾಡಿದ ಕಾರ್ಯವೇ ಕೈಸಾರಿದುದೆಂದು ನಿಶ್ಚಯಿಸಿ ವಿಮಾನಾರೂಢನಾಗಿ ನಿಜರಾಜಧಾನಿಯನ್ನೈದಿ, ವಿಮಾನಮಿರುವದಕ್ಕೆ ಯೋಗ್ಯವಾದ ಸ್ಥಾಣಮಂ ನೇಮಕಮಾಡಿ, ಸ್ವಕೃತದುರಿತಮಂ ಮರೆದು ಪತ್ನಿಯಿಂದೊಡಗೂಡಿ ತದನುರೂಪವಾದ ಪ್ರಾಯಶ್ಚಿತ್ತಮಂ ಮಾಡಿಕೊಳ್ಳದೆ ದಿನವಕಳೆದನಾದಪ್ರಯುಕ್ತ ಈತನು ಯಮಲೋಕಮನ್ನೈದುವುದಕ್ಕೆ ಯೋಗ್ಯನಾದನೆಂದು ಪೇಳಲು. ತಾನು ಆ ನುಡಿಯಂ ಕೇಳಿ, ಪಾಪಸೂಕ್ಷ್ಮವಿಂತಿ

ರುವುದಹಹ ಎಂದು ಪುನಶ್ಚ ತಾನು ಯಮಾನುಚರನಂ ಕುರಿತು, ಅರೋಗದೃಗಾತ್ರನಾಗಿ ಅನೇಕ ಮಾನಿನಿಯರಿಂದೊಡಗೂಡಿ ರಮಿಸುತ್ತಿರುವ ಈ ನರಪತಿಗೆ ಮರಣವೆಂತಪ್ಪುದೆಂದು ಕೇಳಲು, ಆಗೃದ್ಧ್ರರೂಪಿಯಾದ ಪೂಷಣಾತ್ಮಜದೂತನು ಎಲೈ ಪತತ್ರಿಯೆ ಕೇಳು, ಈ ಮಹಾವಹೀರುಹದ ಕೋಟರದಲ್ಲಿ ಓರ್ವ ದಾರುಣಕೃಷ್ಣಸರ್ಪನಿರುವನು. ಆ ಬಿಲೇಶಯನಾಹಾರಾರ್ಥವಾಗಿ ಪೋಗಿರುವನು. ಅವನೀಗ ಬರುವನಾದಾರುಣಭುಜಂಗನಿಂದಷ್ಟನಾಗಿ ಮೃತಿಯನ್ನೈದುವನೆಂದು ಪೇಳಲು. ಕೇಳ ತಾನು ಆ ಯಮದೂತಂಗೆ ವಂದನೆಯಂ ಮಾಡಿ, ಎಲೈ ಮಹಾನುಭಾವನೆ ಕೇಳು. ಆ ವ್ಯಾಜವಾಗಿ ರಾಯನಂ ಭುಜಗವೆಂತು ಕಚ್ಚುವುದೆಂದು ಕೇಳಲು, ದ್ವಿತೀಯಗ್ಯನೆಂದನೆಲೆ ಪಕ್ಷಿಯೆ ಕೇಳು. ಪೂರ್ವಮನ್ವಂತರದೊಳುದೈತ್ಯಶಿಲ್ಪಿಯಾದಮಯನೊಡನೆ ಒಂದಾನೊಂದು ಕಾರಣದಿಂದ ಅಸುರಸಮೂಹವೆಲ್ಲವೊಂದಾಗಿ ಮಹದ್ವೈರವಂ ಬೆಳೆಸಲದಂ ಸಹನಮಾಡಲಾರದೆ ಅತ್ಯಧಿಕರೋಷಾವೇಶಪರವಶನಾಗಿ ಅರಾಕ್ಷಸಾಸ್ತ್ರಮಂ ಸೃಜಿಸಿ, ಈ ದಿವ್ಯಾಸ್ತ್ರಮಂನಿಂದ್ರಂಗೆ ಕೊಡುವೆನೆಂದು ನಿಶ್ಚಯಮಾಡಲು. ನಿಶಾಚರಸಮೂಹವಂತಿಳದು ಮಹದ್ಭಯದಿಂದಲಾತನಶರಣಾಗತರಾಗಲು. ರಾತ್ರಿಂಚರಾಧಿಪರೆಲ್ಲ ತಮ್ಮಪರಾಧವಂ ಕ್ಷಮಿಸಬೇಕೆಂದು ಬಹುಪ್ರಕಾರದಿಂ ಪ್ರಾರ್ಥನೆಯಂ ಮಾಡಲು. ದೈತ್ಯಶಿಲ್ಪಿಯಾದಮಯನು ಕರುಣದಿಂ ರೋಷಮಂನುಳದು ಆ ಮಹಾಸ್ತ್ರವಂ ನಾರಿಗೂ ತಿಳಯದಂತೆ ಈ ವೃಕ್ಷಕೋಟರದಲ್ಲಿ ತಂದಿರಿಸಿ, ತದ್ರಕ್ಷಣಾರ್ಥವಾಗಿ ಮಹಾಕಾಳಸರ್ಪವಂ ಸ್ವತಪಃಪ್ರಭಾವದಿಂ ಸೃಜಿಸಿ, ದೇವಾಸುರನರರೊಳಾವನಾದಡೆಯು ಈತರುವಿನೆಡೆಗೈದಿದಡೆ ಅವನಂ ಕಚ್ಚಿ ಸಂಹಾರಮಾಡುವುದೆಂತತಿಶಯಮಾಡಬರೀವನೀಶ್ವರನು ನಿನಗೆ ದಯಗೈವನೆಂದು ವರಮನ್ನಿತ್ತು ಸ್ವಸ್ಥಾನಕ್ಕೆ ಪೋದನು. ಅಂದಿನಾರಭ್ಯ ಆ ಅಸ್ತ್ರಸರ್ಪಗಳರುವುದೆಂದು ಪೇಳ, ಅದುಕಾರಣದಿಂದ ಈ ವೃಕ್ಷದಡಿಯಲ್ಲಿ ಮಲಗಿರುವುದೇ ಕಚ್ಚುವುದಕ್ಕೆ ಕಾರಣವೆಂದು ಪೇಳುತಿರಲು. ಅನಿತರೊಳು ಆ ಮಹಾಕಾಲಾಹಿಯಂಡಭಿತ್ತಿಯೊಡವಂತೆ ಮೊರೆಯುತ್ತ ಬಂದು ತನಿಗಾಶ್ರಯಮಾದ ತರುವಿನಡಿಯಲ್ಲಿ ಪರ್ಯಾಲಯದೊಳು ಮಲಗಿರುವ ಮಹೀಕ

ನಂ ನೋಡಿ ಕ್ರೋಧಮೂರ್ಛಿತನಾಗಿ ಕಚ್ಚೆ ಪೆಡೆಯಿಂ ಬಡಿಯಲು. ಆ ಆಶೀವಿಷನ ವಿಷಜ್ವಾಲೆಯಿಂ ಕ್ಷಣಮಾತ್ರದಲ್ಲಿ ಭಸ್ಮಾವಶೇಷಿತನಾಗಲು. ಅನೇಕ ಸಖೀಜನರಿಂದೊಡಗೂಡಿ ಕುಸುಮಾಪಚಯಾಸಕ್ತಳಾಗಿರುವ ರಾಜಪತ್ನಿಯು ಆಕಸ್ಮಿಕಮಾದ ಈ ಮೃತ್ಯುವಿನ ದೆಶೆಯಿಂದ ಮೃತನಾಗಿ ಭಸ್ಮಾವಶೇಷಿತನಾದ ಪತಿಯಂ ನೋಡಿ ಪ್ರಲಾಪಮಂಮಾಡಿದಳ ವಳೇನೆಂಬೆನಾಶ್ಚರ್ಯಮಂ. ತಂದೆ, ತತ್ಕ್ಷಣದೊಳಾಪಕ್ಷಿರೂಪಿಗಳಾದ ಯಮಾನುಚರರದೃಶ್ಯವಾದುದಂ ಕಂಡು ಪರಮಾಶ್ಚರ್ಯಭರಿತನಾಗಿ ಮುಂದೆ ಏನಹುದೊ ನೋಡುವೆನೆಂದು ಕುಳಿತಿರಲು, ರಾಜಪತ್ನಿಯ ಪ್ರಲಾಪಮಂ ನೋಡಿ ಸಹನಮಾಡಲಾರದಾಸಖಿಯರು ಪುರಕ್ಕೈತಂದು ವರ್ತಮಾನಮನ್ನೀಯಲು. ನಗರದೊಳಿರುವ ರಾಜಕನ್ನೆಯು ಮೊದಲಾದ ಸಕಲಾಮಾತ್ಯಪುರಜನರು ಅತ್ಯಂತ ದುಃಖದಿಂ ವನಮಂ ಪೊಕ್ಕು ರಾಯನವಸ್ಥೆಯಂ ತದರ್ಧಾಂಗಿಯ ಪ್ರಲಾಪಮಂ ನೋಡಿ ಸರ್ವರೂ ಶೋಕಾಬ್ಧಿಯೊಳ್ಮುಳುಗಿ ಪರಸ್ಪರಾಲಿಂಗನ ಸಮಾಧಾನವಾಕ್ಯಗಳಿಂದ ಕಿಂಚಿದಾಶ್ವಸ್ತಮಾನಸರಾಗಿ ಮಂತ್ರಿಮೊದಲಾದವರು ಎಲ್ಲರಾಲೋಚನೆಯಮಾಡಿ ವೃಥಾಕಾಲಹರಣದಿಂದೇನುಫಲವೆಂದು ರಾಜಾಪತ್ಯಪತ್ನಿಯರನೊಡಂಬಡಿಸಿ ರಾಯನ ಶಿಖೀಸರಮುದ್ರಿಕೆಯಂ ಸರ್ವಸಮ್ಮತದಿಂದ ರಾಜಪುತ್ರಿಗೆ ಇತ್ತು. ರಾಜಕನ್ನೆಯು ವರಿಸಿದ ಪತಿಯೆ ರಾಜ್ಯಕಧಿಪತಿಯೆಂದು ಸಮುಚ್ಚಬಂಧಮಂ ಮಾಡಿಸಿಂಹಧ್ವಜಂಗೆ ಪ್ರೇತಕರ್ಮಮಂಮಾಡಿಸಲು ದುರ್ಮರಣಭಯದಿಂದ ಸಂಶಯಸ್ಥಿತರಾಗಿ ಚಿಂತಿಸುತ್ತಿರಲು ಸುಪ್ರಭೆಯುದಂ ತಿಳಿದು ಆಬಾಲ್ಯವಾಗಿ ತಾನು ಪೂಜಿಸುವ ಗೌರಿದೇವಿಯರ ಪಾದಕಮಲಂಗಳಂ ನೆನದು ಸರ್ವಪ್ರಜಾಪ್ರಕೃತಿಸಮಕ್ಷಮವಾಗಿ ತಾನು ಉತ್ತಮಳಾಗಿ ಪತಿವ್ರತೆಯಾದೊಡೆ ತಂದೆಗುತ್ತಮಗತಿಯಾಗಲೆಂದು ಕರಮನೆತ್ತಿ ಕೂಗಲು ಆಕ್ಷಣದೊಳಾಗಸದಿಂದ ದಿವ್ಯವಿಮಾನಸಹಿತಗಾಗಿ ದೇವದೂತರಿಳಿತಂದು ರಾಯನಂ ವಿಮಾನದೊಳಿರಿಸಿ ಸರ್ವರುಂ ಕಾಣುವಂತೆ ಗಗನವನ್ನೇರಲು ಸರ್ವಜನರು ಅದಂ ಕಂಡು ವಿಸ್ಮಿತರಾಗಿ ಸುಪ್ರಭೆಯಂ ಕೊಂಡಾಡುತ್ತ ಅಮಾತ್ಯರತ್ಯಂತಭಯದಿಂದ ವಂಚಿಸಿ ತತ್ಕಾಲೋಚಿತ ದಾನಧರ್ಮಗಳ ಪರಿಪೂರ್ತವಾಗಿ ಮಾಡಿ ಪುರಪ್ರವೇಶಮಂ ಮಾಡಲು ಆಕಾಲದೊಳಾ ಸುಪ್ರಭಾ

ದೇವಿಯ ಸೌಂದರ್ಯಮಹಾತ್ಮೆಗಳಂ ನೋಡಿ ಆ ವನದಲ್ಲಿರುವ ವನದೇವತೆಗಳೇ ಮೊದಲಾದ ಚರಾಚರ ಪ್ರಾಣಿಗಳು ಮೋಹಿಸುತ್ತಿರಲು ಭ್ರಮರ ಶುಕ ಪಿಕ ಚಮರೀ ಗಜ ಕೂರ್ಮವೇ ಮೊದಲಾದ ಪ್ರಾಣಿಗಳು ಶಿರೀಷ ಕದಳಂ ಚಂಪಕವೇ ಮೊದಲಾದ ತರುಗಳು ಕಮಲಿನೀ ದ್ರಾಕ್ಷೀ ಮೊದಲಾದ ಲತೆಗಳು ತಮ್ಮ ತಮ್ಮಲ್ಲಿರುವ ಮುಖ್ಯಗುಣಂಗಳು ರಾಜಕನ್ಯಾಂಗಜಗುಣಂಗಳಿಗೆ ಸರಿಯಾಗಲರಿಯದೆಂದು ಲಜ್ಜೆಯಿಂದಿರುತಿರಲು ತಾನು ಈ ನಿಖಿಲ ಆಶ್ಚರ್ಯಮಂ ನೋಡಿ ವಿಸ್ಮಿತನಾಗಿ ಸ್ವಶಕ್ತ್ಯನುರೂಪವಾಗಿ ಫಲಸಂಗ್ರಹವಂ ಮಾಡಿಕೊಂಡು ನಿನ್ನಡಿಯ ಸಮೀಪವಂ ಕುರಿತು ಬಂದೆನೆಂದು ವಿಜ್ಞಾಪನೆಯಂ ಮಾಡಲು ಆ ವೃದ್ಧಗೃಧ್ರನು ಜೇಷ್ಟಪುತ್ರನುಡಿದ ವೃತ್ತಾಂತವಂ ಕೇಳಿ ಸಂತೋಷಚಿತ್ತನಾಗಿ ದ್ವಿತೀಯಪುತ್ರನಂ ಕಂಡು ಎಲೈ ಕುಮಾರನೆ ನೀನಾರದೇಶವಂ ತಿರುಗಿ ನೋಡಿದೆ ಏನಾದಡಾಶ್ಚರ್ಯಮಂ ಕೇಳಿದೆಯಾದೊಡೆಯುಂ ನೋಡಿದ್ದೆಯಾದೊಡೆಯುಂ ಅದಂ ವಿಸ್ತಾರವಾಗಿ ಪೇಳುವುದೆಂದು ಕೇಳಲು ತಂದೆಗಾತನು ವಂದನೆಯಂಮಾಡಿ ಹಿಮಾಚಲಕ್ಕೆ ಉತ್ತರಭಾಗದಲ್ಲಿರುವ ಶತಶೃಂಗಪರ್ವತಪ್ರದೇಶವಂ ತಾನುಪೊಕ್ಕು ಅಲ್ಲಿರುವರಣ್ಯಮಂಕಂಡು ದಿವ್ಯಫಲಗಳಂ ಶೋಭಿಸುವ ವೃಕ್ಷಗಳಿಂದದಿವ್ಯಕುಸುಮಸ್ತಬಕದಿಂ ನಮ್ರವಾದ ಲತಾಸಮೂಹಗಳಿಂದದಿವ್ಯೋದಕವಿಶಿಷ್ಟವಾದ ರತ್ನಶಿಲಾರಚಿತಸೋಪಾನಗಳಿಂದ ಶೋಭಿತವಾದ ಕಾಸಾರಗಳಿಂದ ಭೂಷಿಸುತ್ತಿರುವ ವನವಂಕಂಡು ಹೃಷ್ಟಮಾನಸನಾಗಿವಳಪೊಕ್ಕು ಸಜಾತೀಯ ವಿಜಾತೀಯಪತಂಗ ವರ್ಜಿತವಾಗಿರುವುದರಿಂದಸಕಲ ತರುಲತಾದಿಗಳು ಫಲಕುಸುಮಕಿಸಲಯಗಳಂ ಭರಿತವಾಗಿರುವುದಂಕಂಡು ಫಲಭಕ್ಷಣೆಯಲ್ಲಿ ಕಿಂಚಿದಾಲೋಚನೆಯಂ ಮಾಡಿ ಬಹುದೂರದೇಶವಂನೈದಿದಾಯಾಸದಿಂದಲತಿಕ್ಷುದಾರ್ಥನಾಗಿ ಫಲಾಸ್ವಾದನೆಯಂ ಮಾಡಿ ಸಾಕ್ಷಾದಮೃತಪಾಶನದಿಂದಲಪ್ಪಸಾಹಿತ್ಯವಂನೈದಿಕೇವಲಚರಮಾಸ್ಥೆಯಿಂದಿರುವ ಭವದಾಲೋಕನವಂಮರೆದು ವಿಪಿನವಂನಗಲಲಾರದೆ ಅಲ್ಲಲ್ಲಿ ಸಂಚಾರಮಂ ಮಾಡುತ್ತ ಅಸ್ತಮಯವಾಗಲು ನಿನ್ನ ನೆನೆದು ಚರಮಾವಸ್ಥೆಯಿಂದಿರುವ ತಂದೆಯಂ ಫಲಾಸ್ವಾದನಸುಹಿತಚಿತ್ತನಾಗಿ ಮರದೆನೆಂದತ್ಯಂತದುಃಖದಿಂದುನ್ನತವಾದ ವೃಕ್ಷಾಗ್ರದೊಳ್ಕುಳ್ಳಿರಲು ಆ ಮಹಾನಿಶಿಯೊಳು ನಾ

ರ್ತಾಂಡನುದಯುವಮಾದಂತೆ ಮಹತ್ತಾದ ತೇಜಸ್ಸಮೂಹವಮಾವರಿಸಿ ತಮಃಪ್ರಕರವೆಲ್ಲ ನಿರ್ಮೂಲವಾಗಲು ಆಕಸ್ಮಿಕವಾಗಿ ತೇಜಸ್ಸಮೂಹವಮಾವರಿಸುವುದಕ್ಕೇನುಕಾರಣವೊಂದು ತಾನು ಭಯದಿಂದ ಸರ್ವದಿಕ್ಕುಗಳ ನೋಡುತ್ತ ತೇಜೋನಿದಾನವಂ ಕಾಣದೆ ವೃಕ್ಷಾಗ್ರಮಂ ಬಿಟ್ಟು ತನ್ಮಧ್ಯದೊಳು ಪತ್ರಸಮೂಹದಿಂದಾಛ್ಛಾದಿತನಾಗಿ ಕುಳ್ಳಿರಲು ನಿಶಾವಸಾನದೊಳು ತಾನಿರುವ ವೃಕ್ಷಮೂಲಕ್ಕೊರ್ವ ವಟುರೂಪಿಯಾದ ಪುರುಷನು ಮಹೇಶ್ವರಶಿರೋನಿಲಯಳಾದ ತಟನಿಯಲ್ಲಿ ಸ್ನಾನವಂಮಾಡಿ ತಪಶ್ಚರಣಾರ್ಥವಾಗಿ ಸ್ಥಲಶೋಧನೆಯಂ ಮಾಡಲೋಸುಗನಿಜಕಮಂಡಲಸ್ಥಿತಮಾದ ದಿವ್ಯೋದಕಮಂ ತೆಗೆದು ಪ್ರೋಕ್ಷಣೆಮಾಡಲು ಆ ಪ್ರದೇಶದೊಳ್ಳೋರ್ವ ದಿವ್ಯಪುರುಷನು ತೇಜೋಮಯಕಳೆಬರದಿಂದ ಯುಕ್ತನಾಗಿ ಎದುರ್ಗೆ ನಿಂದಿರಲವನಂ ಕಂಡು ವಿಸ್ಮಿತನಾಗಿ ವಟುರೂಪಿಯಾದ ಪುರುಷನು ನೀನುದಾರೆಂದು ಕೇಳಲು. ಆ ದಿವ್ಯಪುರುಷನು ವಿನಯದಿಂ ಬಹುವಿಧವಾಗಿ ನುತಿಯಂಮಾಡಿ ಎಲೈ ಮಹಾನುಭಾವನೆ ಕೇಳು, ಸುದಾಮನೆಂಬ ಕಾಂಚೀದೇಶಾಧಿಪತಿಯು ಬಹುಕಾಲ ರಾಜ್ಯಾನುಭವವಂಮಾಡಿ ವಿರಕ್ತಿಯನ್ನೈದಿ ಪರಲೋಕಸಂಪಾದನವಂಮಾಡಬೇಕೆಂದು ವಿಪಿನವಂನ್ನೈದಿ ತಪಮಾಡುತ್ತಿರಲು, ವಿದ್ಯಾಧರಾಂಗನೆಯರೀರ್ವರೀವಿಷ್ಣುಪದೀಸ್ನಾನಾರ್ಥವಾಗಿ ಇಲ್ಲಿಗೈತಂದು ಸ್ನಾನವಂ ಮಾಡೀಪ್ರದೇಶದೊಳವರೀರ್ವರು ಪರಸ್ಪರಾಲಾಪನೆಯಂಮಾಡುತ್ತ ಕುಳಿತಿರಲು. ಅವರಂ ಕಂಡು ತದವಲೋಕನಜನಿತಮದನಕಿಂಾತಶರಾಹತಿಯಿಂ ಛಿನ್ನಾಭಿನ್ನವಾದ ಚಿತ್ತಮಂ ಶಾಸ್ತ್ರಾವಲೋಕನದಿಂದ ನಾನಾವಿಧವಿಷಯ ಶಿಕ್ಷೆಯನ್ನನುಭವಿಸಿದುದರಿಂದಲುತ್ಪನ್ನವಾದ ವಿವೇಕಭೇಷಜದಿಂದ ಅವ್ರಣವಾಗಿ ಮಾಡಲಸಮರ್ಥನಾಗಿ ತದಂಗಸೌಭಾಗ್ಯವಾವಲೋಕನಜನಿತಶಾತರದಿಂದ ಚಿಂತಿಸುತ್ತಿರಲು. ಅವರು ಪುರುಷಮಾತ್ರ ಸಂಚಾರವರ್ಜಿತವಾದ ಪ್ರದೇಶವೆಂದು ನಿರ್ಲಜ್ಜೆಯಿಂಚಾಟುವಾಕ್ಯಗಳನಾಡುತ್ತಿರಲು. ತಾನವರ ನುಡಿಯಂ ಕೇಳಿ ಸ್ಫುಟವಾಗಿ ನಗಲು. ನಕ್ಕ ಧ್ವನಿಯಂ ಕೇಳಿ ಆ ಮಾನಿನಿಯರೆನ್ನಂನೋಡಿ ನೀನ್ಯಾರೆಂದು ಕೇಳಲು ತನ್ನ ವೃತ್ತಾಂತಮಂ ಪೇಳಿ ಯುಷ್ಮದಾಲೋಕನದಿಂದ ಭ್ರಂಸಿತಚಿತ್ತನಾಗಿ ಭವದಂಗಸಂಗಾಪೇಕ್ಷೆಯುಳ್ಳವನಾಗಿರುವೆನೆಂದು

ನುಡಿಯಲು ಕೇಳಿ ರೋಷಾವೇಶದಿಂ ಎಲೆ ರಾಜಾಪಶವನೆ ಕೇಳು, ತಾವು ವಿದ್ಯಾಧರವಾಸಿನಿಯರು ನೀನು ಮನುಷ್ಯಾಧಮನು ಪೂರ್ವಪರಿಚಿತಿಯಿಲ್ಲ ಏಕಾಧಿಕರಣಸ್ಥಿತಿಯಿಲ್ಲ ಸಜಾತೀಯರಾವಲ್ಲ ಊರ್ಧ್ವಲೋಕವಾಸಿಗಳಾದಸ್ತ್ರೀರತ್ನಗಳಲ್ಲಿ ಮಾನುಷನಾದ ನೀನು ಸ್ವಪತ್ನಿಯಂತೆ ಎಮ್ಮೊಳನುರಾಗಮಂ ಮಾಡಿದುದಲ್ಲದೆ, ಯಮ್ಮ ಸಂಗಾಪೇಕ್ಷೆಯುಳ್ಳವನಾಗಿರುವೆನೆಂದು ಮರ್ಯಾದೆಯಂ ಮೀರಿ ನುಡಿದೆಯಾದುದರಿಂದ ನೀಚವಾದ ಪಿಶಾಚತ್ವಮನೈದುವದೆಂದು ಶಾಪಮಂನೀಯಲು. ತಾನು ಕೇಳಿ ಸಾಧ್ವಸದಿಂದ ಸಾಷ್ಟಾಂಗದಿಂ ನಮಿಸಿ ಬಹುವಿಧಪ್ರಾರ್ಥನೆಯಂ ಮಾಡಲು ಆ ದಿವ್ಯಾಂಗನೆಯರೆನ್ನ ಕಾರ್ಪಣ್ಯಮಂನೋಡಿ ದಯಾರ್ದ್ರಹೃದಯರಾಗಿ ಕ್ಷಣಮಾಲೋಚನೆಯಂ ಮಾಡಿ ಹಾಗಾದಡೆ ಕಾಲಾಂತರದಲ್ಲಿ ನೀನಿರುವ ಪ್ರದೇಶಕ್ಕೆ ಮಹಾತೇಜಸ್ವಿಯಾದೊರ್ವ ಬ್ರಹ್ಮಚಾರಿಯೆಯ್ದುವ ನಾತನ ದಿವ್ಯಕಮಂಡಲೋದರಸ್ಥಿತವಾದ ಖೇಟತಟಿನೀ ಪವಿತ್ರೋದಬಿಂದು ಸಂಸ್ಪರ್ಶಮಾತ್ರದಿಂದ ಸ್ವಶಾಪವಿಮೋಚನಮಪ್ಪುದೆಂದನುಗ್ರಹಗೈದರು. ಅಂದಿನಾರಭ್ಯ ವಿಶಾತರುಮೂಲದೊಳ್ವೇತಾಳಗಣಪ್ರವೇಶಯೋಗ್ಯವಾದಪಿಶಾಚಶರೀರಮಂನೈದಿ ಬಹುಕಾಲದಿಂದ ತರುಮೂಲದೊಳು ವಾಸಮಂಮಾಡಿಕೊಂಡಿದ್ದೆನು. ಈಗ ಮಹಾನುಭಾವನಾದ ನಿನ್ನಿಂದ ಉದ್ಧೃತನಾದೆನಿದುವೆನ್ನ ವೃತ್ತಾಂತ ಭವದ್ವೃತ್ತಾಂತಮಂ ಪೇಳಬೇಕೆಂದು ನುಡಿದಾತನಂನೋಡಿ ಎಲೈ ಮಹೀಶನೆ ಕೇಳು ರಸಾತಲದಲ್ಲಿ ಸಕಲ ಭುವನಭಾರಮಂನಾಯಾಸದಿಂದ ದಹಿಸಿರುವ ಸಾಕ್ಷಾನ್ಮಹಾಶೇಷಂಗೆ ಮುಖ್ಯಾಮಾತ್ಯ ಶಂಖಪಾಲನೆಂಬ ನಾಗೋತ್ತಮನ ಔರಸಪುತ್ರನಾದ ವಿಶಂಖನೆಂಬ ಬಿಲೇಶಯನು ತಾನು ತ್ರಿದಶತಟಿನೀಸ್ನಾನಕ್ಕೋಸುಗ ಬಂದೆನೆನಲು. ರಾಜರ್ಷಿಯು ಕೇಳಿದನೆಲೈ ಬಿಲೇಶಯೋತ್ತಮನೆ ನೆನ್ನೆಯು ನಿಶಿಮಧ್ಯದೊಳು ಈ ಮಹಾರಣ್ಯದೊಳು ಗಗನಮಣಿಬಿಂಬವೀಧರೆಗಿಳಿದಂತೆ ಪ್ರೌಢಪ್ರಕಾಶಮೀ ಅರಣ್ಯಮೆಲ್ಲಮಂ ಪ್ರಕಾಶಮಾಡಿದುದು. ಬಹುಪ್ರಕಾರನೋಡಿದಡೆಯುಂ ತೇಜೋವಿಧಾನಮಂ ಕಾಣಲಿಲ್ಲವದೇನೆಂದು ಕೇಳಲು ಆ ವಟುರೂಪಿಯಾದ ಗೂಢಪಾದನು ನಗುತ ಕೇಳೈ ಮಹೀಪಾಲ ಶತಶೃಂಗಪರ್ವತದೊಳೊರ್ವ ದುರ್ಮುಖನೆಂಬ ರಾಕ್ಷಸೋತ್ತಮನು ಮಹಾಸತ್ವಮುಳ್ಳ

ವನು ಸರಸ್ವತೀರಮಣನಂ ತಪದಿಂ ವರಿಸಿಕೊಂಡು ವರಗಳಂ ಪಡೆದು ಮ
ಹದ್ಗರ್ವದಿಂದಖಿಲದಿಗ್ವಿಜಯಮುಮಂಮಾಡಿ ಈ ಪ್ರದೇಶದೊಳು ದಿವ್ಯಾನ
ರ್ಘ್ಯರತ್ನಮಯನಗರಮಂ ರಚಿಸಿ ಕಳತ್ರ ಪುತ್ರ ಮಿತ್ರ ಪರಿವಾರಸೇನಾ
ವಿಭವಸಹಿತನಾಗಿರುವನು. ಆವನು ರಸಾತಲದಲ್ಲಿರುವ ಮಹಾಶೇಷದೇವ
ರ ಮುಖ್ಯಾಮಾತ್ಯನಾದ ದುಷ್ಟಬುದ್ಧಿಯೆಂಬ ಕಾಕೋದರಾಧಿಪನ ಪ್ರಿ
ಯಸುತೆಯಾದ ಮದಾಲಸಾ ಎಂಬ ಕನ್ನಿಕೆಯ ಜಗನ್ಮೋಹನಕರವಾದ
ದಿವ್ಯಶಿರೋರತ್ನಮಂನಪಹರಿಸಬೇಕೆಂದು ರಾಕ್ಷಸಾವಶದನಾಲೋಕಮನ್ನೆ
ದಿ ಯುದ್ಧರಂಗದೊಳು ಸರ್ವಾಧಿಪತಿಗಳಂ ಭಾರತೀಕಾಂತವರದರ್ಪದಿಂ
ಜಯಿಸಿ ಮದಾಲಸಾ ಎಂಬ ನಾಗಕನ್ನಿಕೆಯ ಶಿರೋರತ್ನಮಂ ಬಲಾತ್ಕಾರ
ದಿಂದಪಹರಿಸಿ ಸ್ವಸ್ಥಾನಮಂ ಕುರಿತು ರಾತ್ರಿಂಚರಾಧಿಪನು ರಾತ್ರಿಬರಲಾ
ದಿವ್ಯರತ್ನಕಿರಣಪ್ರಭಾಜಾಲದಿಂ ವಿಪಿನಂ ಪ್ರಕಾಶಮಾದುದೆಂಬೆನಲು ರಾ
ಜರ್ಷಿಯು ಕೇಳದನೆಲೈ ನೃಪೋತ್ತಮನೆ ಆಶ್ಚರ್ಯಮೇನಿದು ರಸಾತಲ
ಮಂ ಪೊಗಲು ಇಂದ್ರಾದಿದೇವರ್ಕಳಂಜುವರು ಈ ರಾತ್ರಿಂಚರಾಧಮನು
ಜಯಿಸಿದನದೆಂತೆನಲು ಆವಿಶಂಖನು ಎಲೈರಾಜರ್ಷಿಯೆ ಕೇಳು ಈ ದೈತ್ಯ
ನು ದುಸ್ಸಹಮಾದ ತಪವನ್ನನೇಕಕಾಲಪರ್ಯಂತ ಮಾಡಿ ಪುತ್ರ ಮಿತ್ರ ಕಳ
ತ್ರಪರಿವಾರಸೇನಾಸಹಿತವಾಗಿ ಒಂದೇಬಾಣದಿಂ ತನ್ನ ಸಂಹಾರಮಂ ಮಾ
ಡುವವನಿಂದಲ್ಲದನ್ಯರಿಂದವಧ್ಯತಾರೂಪವರಮಂ ದ್ವಿಯುಗಮುಖನಿಂ ಪಡದಿ
ರುವನದುಕಾರಣ ದೇವತೆಗಳಂಜುವರು ಮನುಜರ ಪಾಡೇನು ಶೇಷಾಧಿ ಸ
ರ್ವಾಧಿಪತಿಗಳವನಂ ಜಯಿಸಲಾರರದರಿಂದ ತನ್ನಂಕರೆಸುತೆ ಮಂತ್ರಿಗಳಿಂದ
ಸಹಿತನಾಗಿ ಮಹಾಶೇಷನೆಲೈ ವಿಶಂಖನೆ ಕೇಳು ನೀನು ಸಮಸ್ತಭೂಲೋ
ಕಮಂ ಸಂಚಾರಮಂ ಮಾಡಿ ಈಕ್ಷಪಾಚರಾಧಮನ ಸಸಾಹಿತ್ಯವಾಗಿ ಒಂ
ದೇಬಾಣದಿಂ ಕೊಲ್ವಸಾಹಸಿಗಳಾರಾದರಿಹರೇನೋ ನೋಡಿ ದೊರಕಿದೊ
ಡೆ ಅವನಿಂದಲೀಕಾರ್ಯಮಾಗುವದಂ ಚೆನ್ನಾಗಿ ನಿಶ್ಚೈಸಿನೋಡಿ ಮನಕೆ
ದೃಢಮಾದೊಡೆ ಆ ಪುರುಷಗೀವೃತ್ತಾಂತಮಂನುಸುರಿ ಆ ರತ್ನಮಂ ತಂದಿ
ತ್ತಡಾತಂಗೆ ಮದಾಲಸೆಯಂ ಕೊಡುವೆನೆಂದು ದಂದಶೂಕಾಧಿಪರು ಪ್ರತಿ
ಜ್ಞೆಯಂಮಾಡಿರುವರೆಂದು ಆತಗಭಯಮಂನಿತ್ತು ಕರತರುವುದೆಂದು ಕಳು
ಹಲು ತಾನು ಅವರಾಜ್ಞೆಯಿಂದ ಸಕಲ ಧರಣಿಯಿಂ ತಿರುಗಿನೋಡಿ ಕಾಣದೆ

ಅವುಳನಿವ್ನಿಗಾಜಲದೊಳಗೆವಿಂದು ನಿಜಲೋಕವಂ ಸೈದಬೇಕೆಂದು ಬರುತಿರ್ದೆನಿದು ವೃತ್ತಾಂತವೆಂದು ಪೇಳೆ ನಿಜಲೋಕವುಂಸೈದಲು ತಾನು ತನ ಸವಿಸಾಪವಂ ಕುರಿತು ಬಂದೆನಿದು ವೃತ್ತಾಂತವೆಂದು ನುಡಿಯಲು ಕೇಳಿ ಸಂತೋಷಭರಿತನಾಗಿ ಅವಶೇಷಿತರೇನು ಪೇಳುವರೊ ಕೇಳಬೇಕೆಂಬ ಕುತೂಹಲದಿಂದ ವೃದ್ಧಗೃದ್ಧ್ರನು ತೃತೀಯನಂ ಕರದುಕೇಳಲು ಅವಂ ವಂದನೆಯಮಾಡಿ ತಾನು ಉತ್ತರಾಭಿಮುಖನಾಗಿ ಬಹುದೂರವಂ ಕಳದು ಕಾಮ್ಯಕವನವಂಪೊಕ್ಕು ದಿವ್ಯಫಲಗಳಂ ಭಕ್ಷಿಸಿ ಸಂತೋಷಚಿತ್ತನಾಗಿ ಕ್ಷುಚಿತ್ಕಾಲವಕ್ಕಿರ್ದ್ದು ಯಥಾಶಕ್ತಿಫಲಗಳಂ ಸಂಗ್ರಹಿಸುತಲ್ಲಿಂದ ಜವದೊಳು ಬರುತ ಕಂಪಿನಾನೇತ್ರಾವತೀನದಿಯ ತೀರದೊಳಿರುವ ದಿವ್ಯಾರಣ್ಯವಂಕಂಡು ನಿಬಿಡತರತರುಷಲತಮಂಡಿತ ಮನೋಹರಛಾಯಾಯುವಾಗಿರಲದಂಪೊಕ್ಕು ಗಮನಶ್ರಮವನೀಗಿ ಮುಂದಕೆ ಪೋಪೆನೆಂದು ಫಲಕುಸುಮಗುಚ್ಛದಿಂಮೆರೆವ ಚೂತಾಗಮತಿ ರಮಣೀಯ್ಯವಾಗಿರಲು ತಾನಾವೃಕ್ಷದಗ್ರದೊಳ್ಕುಳಿತು ಮಂದಾನಿಲಸ್ಪಂದ ಮೃದುಚಲಿತ ಶಾಖಾಗ್ರದೋಳಾವಿಹಾರಗತವಾರ್ಗಶ್ರಾಂತಿಯುಕ್ತವನಾಗಿ ಆತರುವಿನ ಮೂಲದೊಳು ಹಂಸದ್ವಯಮಂಕಂಡು ಕೃಷ್ಣವರ್ಣದೊಳಿರಲು ಇದೇನಾಶ್ಚರ್ಯವೆಂದು ಚಿಂತಿಸುತ್ತಿರಲು ತತ್ಕಾಲದೊಳು ಬಂದುದಾನಿಗುವತರುವಿನೆಡೆಗೆ ಹಂಸಯುಗ್ಮವು ಮಾರ್ಗಶ್ರಾಂತಿಯಿಂ, ತನ್ನಂತೆ ನೀಗಲತಿರಮಣೀಯ್ಯ ಸೌಂದರ್ಯಕಾಂತಿ ಸೌಷ್ಠವದಿಂದ ಮೆರೆಯುತಿರಲ್ತಾನು ನೋಡುತಿರಲು. ಹಂಸದ್ವಯವು ಅನ್ಯೋನ್ಯವಾಗಿ ಪಶ್ಚಾತ್ತಾಪತೆ ಮರುಗುತ್ತಲಿರಲದಂ ಕೇಳಿ ವೃಕ್ಷಮೂಲದೊಳಿರುವ ಪಕ್ಷಿಯುಗವ್ರುಕೇಳದವ್ರು ನೀವು ಯಾರಿಲ್ಲಿಗೆಂತೈದಿದಿರಿ ಯಾಕೆ ಮರುಗುವಿರಿ ಪೇಳೆನಲು ಉತ್ತರದಿಗ್ಭಾಗದಲ್ಲಿರುವ ಗಂಧಮಾದನವೆಂಬ ನಗಾಗ್ರದೊಳು ಹಂಸಮಿಥುನಂ ಚಿರಕಾಲತಪಮಾಡಿ ತವಿಸ್ಮರ್ವರಂ ಪಡದು ದೀರ್ಘಾಯು ಚಿರಾಯುಗಳೆಂದು ಪೆಸರಿಟ್ಟು ಕಳೆದು ಪಾಲಿಸುತೊಂದುದಿನ ಆಹಾರವಂ ತರುವೆಂಬೊರೆದು ನಮಗೀರ್ವರ್ಗೆದಿದರಂದಿನಾರಭ್ಯ ತಾವರಸಿ ಭೂಮಂಡಲವಂ ತಿರುಗಿ ಕಾಣೆವೆಂದಳುವೆವೆಂದು ನುಡಿದು ಮಾರ್ಗವಶದಿಂದಲೀವಿಪಿನಕ್ಕೈದಿದೆವಿದು ನಮ್ಮ ವೃತ್ತಾಂತ. ನೀವು ದಾರಿಲ್ಲಿ ಏನುಕಾರಣ ಇರುವಿರಿ ವರ್ಣವಿಪರೀತವೇನಿದು ತಥ್ಯವಾಗಿ ಯಮಗೆ ಪೇಳಬೇಕೆಂದೆನಲು ಹಂಸವಿ

ಘುನಂಗಳಾನುಡಿಯಂ ಕೇಳುತ ತನಯರಿಂತು ಅನಾಥರಾದರೆಂದು ರೋದನವಂ ಮಾಡಲವರು ಕೇಳಿದರು ನೀವು ಯಾತಕೆ ಮರುಗುವಿರಿ ತಮ್ಮನುಡಿಯಂ ಕೇಳಿಯೆಂದು ಕೇಳಲು. ಅವರು ಮಾರುತ್ತರವನಾಡದಳುತಿರಲು ಇವರೆ ತಮ್ಮ ಜನನಿಜನಕರೋ ಏನೋ ಎಂದು ಸಂಶಯಸ್ಥಿತರಾಗಿ ಇಳಿದುತ್ತರು ಮೂಲಕ್ಕೆ ಶೋಕಮಾಡುವಿದೇಕೆ ತಥ್ಯವಾಗಿಯೇ ಪೇಳುವುದು ಅಲ್ಲದಿರೆ ಬಿಡೆವೆಂದು ನುಡಿಯಲಾ ಮಕ್ಕಳಂ ನೋಡಿ ಹೋ ಎಂದು ಮುಕ್ತಕಂಠರಾಗಿ ರೋದನವಮಾಡಿ ಯಲೈ ಪುತ್ರರಾ ಕೇಳಿ ಪರಮಪಾಪಿಗಳಾದ ತಮ್ಮುದರದೊಳು ಪುಟ್ಟಿ ತಾವು ಜೀವಂತರಾಗಿದ್ದು ನೀವು ಬಾಲ್ಯದೊಳು ಮಾತಾಪಿತೃ ಸುಖಂಗಳನ್ನರಿಯದಿಂತಾದಿರಿ, ಇದಲ್ಲದೆ ದೇಶದೇಶಂಗಳಂ ತಿರುಗಿ ಬಳಲಿದಿರಿ ಹೇಳಸಲವೇನಿನ್ನು, ನಾವು ಇದ್ದಗಿರಿಯಲ್ಲಿ ನಿಜಸ್ಥಾನನಿರುಪದ್ರವನಾಗಿರುವುದೆ, ತತ್ಪೂರ್ವಭಾಗದೊಳು ಅಸ್ಮಜ್ಜೀವಾತುವಾಗಿರುವ ರಸಾಲ ದ್ರಾಕ್ಷ, ದಾಡಿಮ, ಖರ್ಜೂರಾರ್ಜುನ, ಪನಸಪ್ರಿಯಾಳು, ಕಪಿತ್ಥಾಶ್ವತ್ಥ, ಕ್ರಮುಕ ಪ್ರಮುಖ, ದಿವ್ಯತರು ಷಂಡಮಂಡಿತ ಮನೋಹರಾರಾಮ ರಮಣೀಯವಾಗಿರುವುದೆ ಮತ್ತಾ ವನಪ್ರದೇಶದೊಳು ಪವಿತ್ರತರ ಪರ್ಣಶಾಲಾನಿಕರದೊಳು ನಿರತಾಗ್ನಿಹೋತ್ರಯಮನಿಯಮ ಧ್ಯಾನಧಾರಣ ಸಮಾಧಿ ಮೊದಲಾದ ಯೋಗದಂಡದ್ಯಮಾನ ದೃಢತರಾನಾದ್ಯವಿದ್ಯಾಗ್ರಂಥಯುಳ್ಳ ಮಹರ್ಷಿಸಂಘಮುಖೋದ್ಗತ ಚಿರಂತನೋಕ್ತ್ಯಂತಘೋಷದಿಂ ತಪೋವನವು ರಮಣೀಯವಾಗಿರುವುದೋ ಏನು ಮತ್ತಮಸ್ಮದ್ವಿಹಾರೈಕ ನಿಲಯನಾಗಿರುವ ಹೇಮಕಮಲಿನೀಲತಾವಿತಾನ ಕಿಂಜಲ್ಕರಂಜತ ನಿರ್ಮಲಾಮೃತಪೂರಪೂರಿತ ದಿವ್ಯಕಾಸಾರನಿಕರಂಗಳು ಯಥಾಪೂರ್ವವಾಗಿರುವುದೇ ಎಂದು ನಾನಾಪ್ರಕಾರ ಪ್ರಶ್ನೆಯಂ ಮಾಡಲು, ಆಮಲ್ಲಿಕಾಕ್ಷಪಕ್ಷಿದ್ವಯಂ ಕೇಳಿ ಮಹತ್ಸಂಶಯಾವಿಷ್ಟರಾಗಿ ನುಡಿದರೆಲೈ ವೃದ್ಧರಾ ಕೇಳಿ. ಯುಷ್ಮತ್ಪ್ರಶ್ನವಿಷಯರಾದ ವನರ್ಷಿಕಾಸಾರಮೊದಲಾದ ಸಕಲ ಮನಾಮಯವು. ಅದಂತಿರಲಿ, ನಿಮಗ್ಯಾಕೆ ಈವೇಶೆಯು ಬಂದುದು ಪೇಳುವುದೆಂದು ಕೇಳಲು, ಹಂಸಮಿಥುನಂಗಳು ಪುತ್ರರಂಕುರಿತು ತಾವಂದು ನಿಜಸ್ಥಾನದಿಂ ತೆರಳಿ ಚಿರಪರಿಚಿತಪ್ರದೇಶವೆಲ್ಲವಂ ದಾಂಟಿ ಸಂಚಾರಮಾಡುತೀ ನೇತ್ರಾವತೀನದೀತೀರದಲ್ಲಿರುವ ಈವನಮಂ ಕಂಡು ಕ್ಷುಧಾತುರರಾಗಿಲ್ಲಿದ್ದ ಫ

ಲಗಳಂ ಭಕ್ಷಿಸಿ ಸಂಚಾರವಮಾಡುತ್ತಿರಲು. ಈವನದಲ್ಲಿ ಮುಂಡನೆಂಬ ಮಹರ್ಷಿಯು ದೈವೇಚ್ಛೆಯಿಂ ಪ್ರಾಪ್ತಳಾದ ತಿಲೋತ್ತಮೆಯಿಂದೊಡಗೂಡಿ ಆಶ್ರಮದೊಳು ವೈಷಯಿಕಾನಂದಮಂ ನಿಯಮವನಾದಕಾರಣ ಅಕ್ರಮವಾಗಿ ಕ್ರೀಡಿಸುವುದಂ ಕಂಡು ತಾವು ಪರಿಹಾಸಮಂ ಮಾಡಲು, ಮಹರ್ಷಿಯು ನೋಡಿ ತಿರ್ಯಗ್ಜಂತುಗಳು ತಮ್ಮಂ ಹೇಳನೆಯಂ ಮಾಡುತಿವೆ ಎಂದು ರೋಷಾಮರ್ಷಪರವಶನಾಗಿ ಅಚೇತನಪ್ರಾಯರಾಗಿ ವ್ಯತ್ಯಸ್ತವಾದ ಕಾಂತಿಯುಳ್ಳವರಾಗಿ ಪೋಗುವುದೆಂದು ಶಾಪವನಿತ್ತನದುಕಾರಣ ಈದೆಶೆಯು ತಮಗೆ ಬಂದೊದಗಿತೆನಲು, ಆಶಾಬಕಗಳು ಭಯದಿಂದ ಹಾಗಾದಡೆ ಮುಂದೇನುಗತಿ ಎಂದೆನಲು, ಹಂಸಮಿಥುನಂಗಳು ಪುತ್ರರಿಕರಿತು ಇಂತಿರುತಿರಲು. ಮುಂಡರ್ಷಿಯು ತಿಲೋತ್ತಮೆಯಲ್ಲಿ ದಿವ್ಯಪುತ್ರಿಯಂ ಪಡೆದು ವಿರಕ್ತನಾಗಿ ಸುತೆಗೆ ನಗರವಿಮಾನತಿರಸ್ಕರಣಿ ಮೊದಲಾದ ವಸ್ತುಗಳನಿರ್ಮಿಸಿ ಇತ್ತು ಆ ತಿಲೋತ್ತಮೆಗೆ ಶಾಪಾಂತಕಾಲಂಬರಲು ಊರ್ಧ್ವರುಂ ಪೋಗಲುದ್ಯುಕ್ತರಾಗಲು ಅವರಂ ಕಂಡು ತಾವೀರ್ವರೂಪೋಗಿ ಆತಪೋನಿಧಿಗೆ ವಂದನೆಯಂ ಮಾಡಲು ಬಹುಕಾಲದಿಂದು ದುಃಖಾನುಭವಮಂ ಮಾಡುವೆವು ತಮ್ಮ ಅಪರಾಧಮಂ ಕ್ಷಮಿಸಿ ಈ ದುಃಖದಿಂ ಮುಕ್ತರಂ ಮಾಡಬೇಕೆಂದೆನಲು ಕರುಣಾಶಾಲಿಯಾದ ಆತಪೋನಿಧಿಯು ತಪಸ್ಸ್ಮರ್ಧ್ಯಾನಂ ನೋಡಿ ದಯೆಯಿಂ ಸಮೀಪಕ್ಕೆ ಕರೆದು ಸ್ವಲ್ಪಕಾಲದಲ್ಲಿ ಗೌರೀಕಟಾಕ್ಷಪರಿಪೂರ್ಣನಾಗಿರುವ ಸೋರ್ವ ರಾಜಕುಮಾರನು ಸಮಸ್ತವೈಭವದಿಂದಿಲ್ಲಿಗೆ ಬರುವನಾತನದರ್ಶನಮಾತ್ರದಿಂದೀದೆಶೆಯು ನಿವರ್ತಿಯಾಗಿ ಸಂಚಾರವಮಾಡುವದಕ್ಕೆ ಸಮರ್ಥರಾಗುವಿರಿ, ಆತನ ಕರಸ್ಪರ್ಶದಿಂದೀಕೃಷ್ಣವರ್ಣವು ಪೋಗಿ ಸತ್ಯಲೋಕಮಂ ಸಂಚಾರಮಾಡುವ ಸಾಮರ್ಥ್ಯಬರುವುದೆಂದನುಗ್ರಹಮಾಡಲು ಆತನಕರುಹತಾವೆಂತು ತಿಳಿಯಬೇಕು, ಆಮಹಾಪುರುಷನ ಕರಸ್ಪರ್ಶ ತಮಗೆ ಹ್ಯಾಗೆ ಆಗುವನು ದಯದಿಂ ಪೇಳಬೇಕೆಂದೆನಲು ಆ ಮಹಾನುಭಾವನಿಲ್ಲಿಗೆ ಬಂದು ಈ ನಗರಕ್ಕೆ ನಾಲ್ಕುದಿಕ್ಕುಗಳಲ್ಲಿಯೂ ಸಮೀಪದೊಳು ಶಿವಾಲಯ ಶಿವಲಿಂಗಪ್ರತಿಷ್ಠೆಗಳಮಾಡಿ ಈ ಪುರಕ್ಕೆ ದಿವದಲ್ಲಿರುವ ಅದೃಶ್ಯಾವಸ್ಥೆಯಂ ಬಿಡಿಸಿ ಸಿರಿಯಲ್ಲಿರುವಂತೆ ಮಾಡುವನು, ಆತನೆ ಈ ನಗರವನ್ನಾಳುವನು, ಮತ್ಪುತ್ರಿಗಾತನೆ ಪತಿಯಾಗುವನು ಇದೇ ಕುರುಹೆಂದು ಪೇಳಿ ತಮ್ಮನ್ನು ಸಮೀಪಕ್ಕೆ ಕರದು ಬಂದುಗಾ

ಯುಮಂ ಕಿವಿಯೊಳಗೆ ಹೇಳಿ ತಪೋವನಕ್ಕೆ ನಡೆದನದುಕಾರಣಂ ರಾಜಪು
ತ್ರನಾಗಮನಮಂ ನಿರೀಕ್ಷಿಸುತ್ತ ಬಹುಕಾಲದಿಂದಿಲ್ಲಿರುವೆವೆಂದೆನಲು, ಹಂಸ
ಶಾಬಕಗಳಾಕುಮಾರನಿಲ್ಲಿಗೆಂದಿಗೆ ಬರುವನೋ ತಿಳಿಯದು ತಾವು ತಾವತ್ಪ
ರ್ಯಂತವೂ ಇಲ್ಲಿದ್ದಡೆ ಸ್ವಸ್ಥಾನಪರಾಕ್ರಾಂತವಾಗುವದು, ಪೋಗಲು ನಿಮ್ಮ
ನಗಲಾರೆವಿದಕ್ಕೇನುಪಾಯವೆಂದು ಕೇಳಲು, ವೃದ್ಧಹಂಸನು ಈ ಅರ
ಣ್ಯವು ಹಂಸಾವಾಸಯೋಗ್ಯವಾದುದಲ್ಲ ಅದರಿಂದೀದಿನವಿಲ್ಲಿದ್ದು ಮನುಷ್ಯ
ಕೃತ ನಗರಾದಿ ಸಕಲವ್ಯಾಪಾರವಮಂ ನೋಡಿ ಸೂರ್ಯೋದಯಾನಂತರದಲ್ಲಿ
ನಿಜಸ್ಥಾನವಮಂ ಕುರಿತು ಪೋಗಿ ತಾವು ಬರುವೆವೆಂದೊಡಂಬಡಿಸಲು ಆಮ
ರಾಳಬಾಲಕರು ಆಸ್ಥಾನದಲ್ಲಿ ಮಹಾಕಂಟಕಪ್ರದವಾಗಿರುವುದು ಇಂದಿ
ನವರೆಗೂ ಈಶ್ವರಾನುಗ್ರಹದಿಂದ ಉಳಿದಿಹೆವು ಮುಂದೆ ಯಾವಾಗ ಏನ
ಹುದೋ ತಿಳಿಯದೆಂದೆನಲು. ವೃದ್ಧನದೇನೆಂದು ಕೇಳಲು ಬಾಲಕನು ಮಹಾ
ಕಾಯನಾದೋರ್ವ ಕೃಷ್ಣಸರ್ಪನು ಮಾಸಮಾಸಕ್ಕೆ ನಾವಿರುವಪ್ರದೇ
ಶಕ್ಕೆ ಬಂದು ಘೋರೆಂದು ಕೂಗುತ್ತಾ ಅಲ್ಲಿರುವ ಮೃಗಪಕ್ಷಿ ಮೊದಲಾದ
ಜಂತುಗಳ ಭಕ್ಷಿಸುವನು, ಆತನಟ್ಟುಳಿಗೆ ನಾವು ಸಿಕ್ಕಲಿಲ್ಲದುವರೆಗೆ ಮುಂ
ದೆ ಯಾವಾಗಬರುವನೋ ಏನುಮಾಡುವನೋ ಕಾಣಬಾರದು ಎಂದು ನುಡಿ
ಗಲು ವೃದ್ಧಹಂಸನು ಎಲೈ ಪುತ್ರರಾ ಕೇಳಿ ಆ ಕೃಷ್ಣಸರ್ಪಬಾಧಾ
ನಿವೃತ್ತಿಗೊಂದುಪಾಯವುಂಟದಂ ಪೇಳುವೆನು ಕೇಳೆಂದು ನುಡಿದನೆಲೈ
ವತ್ಸ, ಪೂರ್ವದಲ್ಲಿ ಸುತೀಕ್ಷ್ಣನೆಂಬರಾಜರ್ಷಿಯು ಸ್ವಾಶ್ರಮದಲ್ಲಿ ಒಂದು
ಶುಕವಮಂ ಪರಮಪ್ರೀತಿಯಿಂ ಪಾಲಿಸುತ್ತಿರುವಲ್ಲೊಂದಾನೊಂದುದಿನ ಶುಕ
ಪಂಜರವಮಂ ವೃಕ್ಷಮೂಲದೊಳಿಟ್ಟು ಸ್ನಾನಾರ್ಥವಾಗಿ ಪೋಗಲು, ಆ ಕಾ
ಲದೊಳೀ ಸಹಸ್ರಗಜಬಲಶಾಲಿಯಾದ ಕೃಷ್ಣಸರ್ಪನು ಆ ಶುಕಭಕ್ಷಣೆ
ಯಂ ಮಾಡಿಪೋಗಲು, ಆ ಸುತೀಕ್ಷ್ಣನೆಂಬ ರಾಜರ್ಷಿಯು ಸ್ನಾನಾನಂತ
ರದಲ್ಲಿ ಬಂದು ಶುಕರಿಕ್ತಪಂಜರವಮಂ ನೋಡಿ ಅತ್ಯಂತ ದುಃಖಪೀಡಿತನಾಗಿ
ನಿಜಜ್ಞಾನದೃಷ್ಟಿಯಿಂ ಸರ್ಪನವ್ಯಾಪಾರವೆಂದರಿದು ಕ್ರೋಧಮೂರ್ಛಿತ
ನಾಗಿ ಇಂದಿನಾರಭ್ಯವೀದುಷ್ಟನಾದ ಕೃಷ್ಣಸರ್ಪನು ಶುಕಮಾಂಸಭಕ್ಷ
ಣೆಯುಂ ಮಾಡಿದಡೆಯುಂ ಅಥವಾ ಶುಕನಿರುವ ವನಪ್ರವೇಶವಮಂ ಮಾಡಿದಡೆ
ಯುಂ ಭಸ್ಮೀಭೂತನಾಗಲೆಂದು ಶಾಪವನ್ನಿತ್ತಿರುವನದುಕಾರಣಂ ಭಯಪಡ

ಖ್ಯಾತ ಪೋಗುತ್ತಲೊಂದು ಶುಕದಂಪತಿಗಳಂ ಸಂಗ್ರಹಿಸಿಕೊಂಡು ಸ್ವಸ್ಥಾನದಲ್ಲಿರಿಸಿ ಪೋಷಿಸಿದೆಯಾದೊಡೆ ಆ ಸರ್ಪನು ಯೋಜನಮಾತ್ರಪ್ರದೇಶದೊಳು ಸಂಚಾರಮಾಡುವದಿಲ್ಲವದರಿಂದ ಸುಖದಿಂದಿರುವುದೆಂದು ಒಡಂಬಡಿಸುತ್ತಿರಲಸ್ಸಮಯಮಾಗಲು ವೃದ್ಧನು ಬಾಲಕರಂ ಕುರಿತು ಇಲ್ಲಿಗೆ ಪ್ರಾಗ್ಭಾಗದಲ್ಲಿ ನಾತಿದೂರದೊಳು ಅತ್ಯದ್ಭುತ ಪಟ್ಟಣಾದಿಗಳು ನಿರ್ಮಾಣಮಾಗಿರುವುದದಂ ನೋಡಿಬನ್ನಿ ಪೋಗೆಂದೆನಲು ಆ ಮರಾಳಪೋತಗಳೆರಡು ಪ್ರಯಾಣಮಾಗಲು ತಾನುಮವರೊಡನೆ ಪೋಗಿ ನಗರಮಂ ಅಪ್ಸರಸ್ತ್ರೀಯರಂ ವಿಮಾನಂಗಳಂ ದೇವಕನ್ನೆಯರಂ ನೋಡಿ ಮರುಳಾಗಿ ರಾತ್ರಿಯಲ್ಲಿರ್ದ ಪ್ರಾತಃಕಾಲದೊಳು ಕಿಂಚಿದಾಹಾರಾರ್ಥವಾಗಿ ಫಲಾದಿಸಂಗ್ರಹಮಂ ಮಾಡಿಕೊಂಡ್ಬಂದೆನು ನಿನ್ನೆಡೆಗಿದುವೆ ಎನ್ನವೃತ್ತಾಂತವೆಂದೆನಲು. ಪಿಕಶರೀರಮಂ ಧರಿಸಿರುವ ರಾಜಕುಮಾರನು ವೃದ್ಧಹಂಸನ ಕರ್ಣದೊಳು ಮುಂಡಮಹರ್ಷಿಯು ಪೇಳಿದರ್ಥಮಾತ್ರ ತಿಳಿಯಲಿಲ್ಲ ಆವದೇನಾಯ್ತು ಸರ್ವಮಂಗಳಾಚರಣಕಮಲಾನುಗ್ರಹದಿಂದ ತನಗೆತಾನೇ ತಿಳಿಯುವುದೆನುತ್ತಲಿರುತ್ತಿರಲು-ಇತ್ತಲಾ ಆ ವೃದ್ಧಗೃಧ್ರನು ಚತುರ್ಥತನಯನಂ ಕುರಿತು ಪ್ರಶ್ನೆಯಂ ಮಾಡಲು, ಆಕನೀಯಸನು ವಂದನೆಯಂ ಮಾಡಿ ತಾನು ಬಹುದೂರದೇಶವಂ ಪೋಗಿ ಒಂದು ಮಹದರಣ್ಯಮಂ ಕಂಡು ಒಂದುನ್ನತವಾದ ಮಹೀರುಹದಗ್ರದೊಳ್ಕುಳಿತು ಮಧುರತರ ಪಕ್ವಫಲಮನರಸಿ ಭಕ್ಷಿಸುತ್ತಿರಲು, ಆಸಮಯದೊಳರಣ್ಯದೊಳಿರುವ ಕರಿಹರಿಗಳು, ಶಾರ್ದೂಲಸೂಕರಗಳು, ಹರಿಣಭಲ್ಲೂಕಮೊದಲಾದ ನಿಖಿಲ ಮಹಾಘೋರಜಂತುಗಳು ಗುಂಪುಗುಂಪಾಗಿ ಪರಸ್ಪರ ವೈರಾನುಬಂಧಮನರಿಯದೆ ವಿಳಿತವಾಗಿ ತಂಡತಂಡವಲ್ಲಿ ಫಲಾಯನಮಾಡುತ್ತಿರಲು, ತಾನದಂ ಕಂಡು ವಿಸ್ಮಿತನಾಗಿ ಮೆಲ್ಲಮೆಲ್ಲನೆ ಓಡುತಿರುವ ವೃದ್ಧವ್ಯಾಘ್ರನಂ ಕಂಡು ಇದೇನೆಂದು ತಾನು ಕೇಳಲು, ಆ ಹರಿಣಾದನು ತನ್ನಂ ಕುರಿತು ಎಲೈ ಗೃಧ್ರನೇ ಕೇಳು ಕ್ಷತ್ರಿಯನೋರ್ವ ಮೃಗಯಾರ್ಥವಾಗಿ ಅರಣ್ಯಮಂ ಪೊಕ್ಕಡೆ ಸಮಸ್ತಪ್ರಾಣಿಗಳ ಸಂಹಾರಮಂ ಮಾಳ್ಪನು ಈಗಲೀ ದಂಡಕಾರಣ್ಯದೊಳು ಅನೇಕ ರಾಜಸಮೂಹಮೊಂದಾಗಿ ಶಸ್ತ್ರಪಾಣಿಗಳಾಗಿ ಕೂಡಿರುವದೇನು ಕಾರಣವೋ ತಿಳಿಯಲಿಲ್ಲವದಂ ಕಂಡು ಮರಣಭಯದಿಂದ ಸಮಸ್ತ ಜಂತುಗಳು ಈ ದಂಡಕಾರಣ್ಯಮಂ ಬಿಟ್ಟು ವನಾಂತರಕ್ಕೆ ಪೋ

ಗುವೆವೆಂದು ಫಲಾನುಭವಮಂ ಮಾಡುತ್ತಿಹರೆಂದೊರೆದು ಪೋಗಲು. ತಾನದಂ ಕೇಳಿ ಇದೇನಾಶ್ಚರ್ಯವೊ ನೋಡಬೇಕೆಂಬಿಚ್ಛೆಯುಳ್ಳವನಾಗಿ ಮೆಲ್ಲನೆ ದಂಡಕಾರಣ್ಯಮಂಪ್ರೊಕ್ಕು ಬರುತ್ತಿರಲು, ಆದುರಂತಗಹನದೊಳೊಂದು ಮಹದ್ವಟವೃಕ್ಷದಡಿಯಲ್ಲಿ ಅನೇಕ ರಾಜಕುಮಾರರೊಂದಾಗಿ ನಿಂದಿರಲು, ಅವರ ಮಧ್ಯದೊಳು ಸಾಕ್ಷಾತ್ ಶಸ್ತ್ರವಿದ್ಯವೆ ಮೂರ್ತೀಭವಿಸಿದಂತೆ ಮಹಾತೇಜಸ್ವಿಯಾದ ಪುರುಷನೋರ್ವ ಕುಳ್ಳಿರಲವರಂಕಂಡು ಮೆಲ್ಲಮೆಲ್ಲನೆ ಪರ್ಣವಲ್ಲಾಡದಂತೆ ಪೋಗಿ ಆ ವೃಕ್ಷದೊಳು ಕುಳಿತುನೋಡುತ್ತಿರಲು, ಆ ವೃಕ್ಷದಲ್ಲಿ ಬಹುಕಾಲದಿಂದ ಆಶ್ರಯಮಂ ಮಾಡಿಕೊಂಡಿರುವನೋರ್ವ ವೃದ್ಧವಾನರನು ಆಹಾರವಿಲ್ಲದೆ ಮರಣಾತುರನೋಪಾದಿಯಲ್ಲಿ ಮಾತಾಡಲು ಸಾಮರ್ಥ್ಯವಿಲ್ಲದೆ ಅಚೇತನಪ್ರಾಯನಾಗಿರಲವನಂಕಂಡು ತಾನು ಸಮೀಪದಲ್ಲಿರುವ ವೃಕ್ಷಫಲಗಳನ್ನೊಂದೊಂದಾಗಿ ಕೊಕ್ಕೇಪುಟದಿಂದ ಮೆಲ್ಲಮೆಲ್ಲನೆ ತೆಗದೀಯಲು, ಆ ವೃದ್ಧವಾನರನು ಮೆಲ್ಲಮೆಲ್ಲನೆ ಫಲರಸಾಸ್ವಾದನೆಯಂಮಾಡಿ ಕಿಂಚಿದಾಶ್ವಾಸಿತಪ್ರಾಣನಾಗಿ ತನ್ನಂನೋಡಿ ಅನಿಮಿತ್ತೋಪಕಾರಿ ಎಂದು ಪರಮಪ್ರೀತಿಯಿಂ ನೀನಪಾರಿಲ್ಲಿಗೈದಿದಕಾರ್ಯವೇನೆಂದು ಕೇಳಲು, ತಾನು ತನ್ನ ವೃತ್ತಾಂತವಂ ತಿಳಿಸಿ ನಿನ್ನವೃತ್ತಾಂತವೇನೆಂದು ಕೇಳಲು, ಆ ವೃದ್ಧವಾನರನು ತನ್ನಂಕುರಿತು ಕೇಳಯ್ಯಾ ಪತತ್ರಿಯೆ ತಾನು ಪೂರ್ವದಲ್ಲಿ ನಂದಿನೀ ಎಂಬ ನದೀತೀರದಲ್ಲಿರುವ ಬ್ರಹ್ಮಪುರವೆಂಬ ಅಗ್ರಹಾರದಲ್ಲಿರುವ ಅಗ್ನಿಶರ್ಮನೆಂಬ ಬ್ರಾಹ್ಮಣೋತ್ತಮನ ಪುತ್ರನು ಒಂದುದಿನ ಮಿತ್ರರಿಂದೊಡಗೂಡಿ ನದೀತೀರದೊಳು ಕ್ರೀಡಿಸುತ್ತಿರಲು, ಓರ್ವ ವೃದ್ಧಸನ್ಯಾಸಿಯು ಭಿಕ್ಷಾಟನನಂಮಾಡಿ ಭಿಕ್ಷಾನ್ನವಂನದೀಕೂಲದೊಳಿಟ್ಟು ಅನುಷ್ಠಾನವಂ ಮಾಡುತ್ತಿರಲು, ಅದಂಕಂಡು ತಾನು ಬಾಲ್ಯಬುದ್ಧಿಯಿಂದನ್ನವಂಭಕ್ಷಿಸಿ ಸನ್ಯಾಸಿಯಂ ಹೇಳನವಮಾಡಿ ಪಲಾಯನವಂ ಮಾಡಲು. ಅದಂಕಂಡು ಸನ್ಯಾಸಿಯು ಅತ್ಯಂತಕ್ರೋಧಮೂರ್ಛಿತನಾಗಿ ತನ್ನಂಕುರಿತು ಈಕ್ಷಣದಲ್ಲಿ ವೃದ್ಧವಾನರನಾಗಿ ಮಹಾರಣ್ಯಮಂಪ್ರೊಕ್ಕು ಸ್ವತಂತ್ರದಿಂದ ಆಹಾರಮಂ ಸಂಪಾದಿಸುವುದಕ್ಕೂ ಸಂಚಾರಮಾಡುವದಕ್ಕೂ ಕೂಡಾ ಅಸಮರ್ಥನಾಗಿರುವುದೆಂದು ಶಾಪವನಿತ್ತನಾದಕಾರಣ ತತ್ಕ್ಷಣದಲ್ಲಿ ವೃದ್ಧವಾನರತ್ವಮಂಪೈದಿ ಮಹಾರಣ್ಯಮಂಪ್ರೊಕ್ಕು ಅನಾಥನಾಗಿ ರೋದನವಂ ಮಾಡುತ್ತಿರಲು,

ಊವಟಭೂಮಿಯೊಳು ಧನುರ್ವಿದ್ಯಾವಿಶಾರದರಾಗಿ ಶರಚಾಪಗಳಂಧರಿಸಿ ದಿಕ್ಪ ತಿಗಳಂತೆ ಭಯಂಕರರಾಗಿರುವ ರಾಜಕುಮಾರರ ಮಧ್ಯದಲ್ಲಿರುವ ಅಪರೀಕ ಸ್ಸ್ರುಚಾರ್ಯನಂತೆ ದಿವ್ಯತೇಜಸ್ವಿಯಾದ ಸತ್ಯವ್ರತನೆಂಬವ್ಯಾಧನು ಅನ್ನ ಪನಿತ್ತುಸಂರಕ್ಷಣೆಯಂ ಮಾಡಿದವನಾದಕಾರಣ ಅಂದುಮೊದಲಾಗಿ ಆತನನ್ನಾ ಶ್ರಯಿಸಿಕೊಂಡಿರುವೆ, ಈಗ ದಿನತ್ರಯದಿಂ ಶಿಷ್ಯಸಹಿತನಾಗಿ ಕಾರ್ಯಗೌರವ ದಿಂದಾಹಾರವಂ ಬಿಟ್ಟಿರುವನಾದಕಾರಣ ತನಗಾಹಾರವಿಲ್ಲದೆ ಶಾಂತಿಯನೈದಿ ದೆನೆಂದು ಪೇಳಲು. ತಾನದಂಕೇಳಿ ವಾನರನಂ ಕುರಿತು ಹಾಗಾದಡೀಸತ್ಯವ್ರ ತನೆಂಬ ವ್ಯಾಧನು ನೈಮಿಶಾರಣ್ಯಮಂ ಬಿಟ್ಟು ದಂಡಕಾರಣ್ಯಮಂ ನೈದುವದ ಕ್ಕೆ ಕಾರಣವೇನು, ಬಹುಮಂದಿ ರಾಜಕುಮಾರರೀವ್ಯಾಧನಂ ಭಜಿಸುವದ ಕ್ಕೆ ನಿಮಿತ್ತವೇನು, ಇವರಿಂದೊಡಗೂಡಿ ದಿನತ್ರಯದಿಂ ನಿರಾಹಾರನಾಗಿ ರುವ ಕಾರ್ಯಗೌರವವೇನು, ಅದಂ ವಿವೇಚನಮಾಡಿ ಪೇಳಬೇಕೆಂದು ಕೇಳ ಲು. ಶಾಖಾಮೃಗನು ತನ್ನಂ ಕುರಿತು ಈ ಸತ್ಯವ್ರತನೆಂಬ ವ್ಯಾಧನು ಧನು ರ್ವಿದ್ಯಾವಿಶಾರದನಾಗಿ ಭಾರತೀಪತಿಯಂ ಕುರಿತು ತಪಗೈದು ಶೈವವೈಷ್ಣ ವವೇ ಮೊದಲಾದ ಅಶೀತಿಮಹಾಸ್ತ್ರಂಗಳಂ ಪಡದು ಮಹಾಗರ್ವಿತನಾಗಿ ಯುದ್ಧಮಂ ಮಾಡಬೇಕೆಂಬ ಕುತೂಹಲದಿಂದ ಇಂದ್ರಾದಿದಿಕ್ಪತಿಗಳನ್ನು ಯುದ್ಧಾರ್ಥವಾಗಿ ಪ್ರಾರ್ಥನೆಯಂ ಮಾಡಲು. ಅವರಿವನಲ್ಲಿರುವ ಸಾಮ ಗ್ರಿಯಂ ತಿಳಿದವರಾದಕಾರಣ ತಾವುಸಮರ್ಥರು ನಿನ್ನೊಡನೆ ಕಾದಲೆಂದು ಸಾಂತ್ವನವಚನಗಳಿಂದೊಡಂಬಡಿಸಲು. ಅಲ್ಲಿಂದ ರಾಕ್ಷಸಕೂಟದೊಳಗಾರಾದ ರೆನ್ನೊಡನೆ ಯುದ್ಧಮಂ ಮಾಡುವರೇನೋ ನೋಳ್ಪೆನೆಂದು ಪಾತಾಳಪ್ರವೇಶ ಮಂಮಾಡಲು. ಆ ದೈತ್ಯರೀವಾರ್ತೆಯಂಕೇಳಿ ಪಲಾಯನಮಂ ಮಾಡಲು. ಅದಂಕಂಡು ವೃಥಾ ಓತುವರನಟ್ಟಿ ಫಲವೇನೆಂದು ಅಲ್ಲಿಂದ ಪೊರಮಟ್ಟು ಮೂರುಲೋಕದೊಳು ಪ್ರತಿವೀರರಂ ಕಾಣದೆ ವೃಥಾ ಧನುರ್ವಿದ್ಯಾಭ್ಯಾಸ ಮಂಮಾಡಿದೆನೆಂದು ನಿರ್ವೇದಮನೈದಿ ನಿರ್ಭಯದಿಂ ಶಸ್ತ್ರಸನ್ಯಾಸವ ಮಾಡಿ ಸ್ವಸ್ಥಾನಮಂ ಕುರಿತುಬಂದು ಪತ್ನಿಪುತ್ರರಿಂದೊಡಗೂಡಿ ಪರಲೋಕವ್ಯಾ ಸಂಗಮಂ ಮಾಡುತ ಸುಖಿಸುತಿರಲು. ಆ ನೈಮಿಶಾರಣ್ಯದೊಳೋರ್ವ ಮ ಹೋದರಿ ಎಂಬ ರಾಕ್ಷಸಿಯು ಕಾಮರೂಪಿಯಾದಕಾರಣ ವೃತ್ತ್ಯಪೇಕ್ಷೆ ಯಿಂದ ಪತಿ ಇಲ್ಲದಿರಲು ಆಲೋಚನೆಯಂಮಾಡಿ ಕೇಶಾದನೆಂಬ ಋಷಿಯ ಆಶ್ರ

ಮವಂ ಕುರಿತು ಬಂದು ಆತನ ಸ್ನಾನಕಾಲವಂ ನಿರೀಕ್ಷಿಸಿ ಆರುಷಿಪತ್ನಿಯಂ ನೆತ್ತಿಕೊಂಡು ನಾತಿದೂರದೊಳಿರುವ ವೃಷಗಿರಿ ಎಂಬ ಪರ್ವತದ ಗುಹೆಯು ಳ್ಳಿರಿಸಿ ಆಕೆಗಾಹಾರವನಿಟ್ಟು ಗುಹಾದ್ವಾರಕೆ ಸ್ಥೂಲಪಾಷಾಣವಂ ಮುಚ್ಚಿ ತಾನು ತದನಂತರಂ ಪವಳೀರೂಪವಂ ಧರಿಸಿ ಅವಳೇ ತಾನಾಗಿ ಸತ್ವರದಿ ಪರ್ಣಶಾಲೆಗೆ ಬಂದು ಪಾಕಾದಿಗಳಂ ಮಾಡಿ ಎಂದಿನಂತೆ ಕಾದಿರಲು. ಋಷಿಯು ನಿತ್ಯಕರ್ಮವಂ ತೀರಿಸಿ ಪರ್ಣಶಾಲೆಗೆ ಬಂದು ನಿತ್ಯಬಲ್ಯಾದಿಗಳ ಯಥಾವಿಧಿಯಾಗಿ ಮಾಡಿ ತಾನು ಭೋಜನವ ಮಾಡಲು ರಾಕ್ಷಸಿಯು ರಿಕ್ತಶೇಷವಾಕಶೇಷಂಗಳೆಲ್ಲವ ಯಥೇಚ್ಛವಾಗಿ ಭಕ್ಷಿಸಿ ಪತ್ನಿಗಿಂತಧಿಕವಾಗಿ ಶುಶ್ರೂಷೆಯಂ ಮಾಡಲು. ಕಣಾದನಾಕೆ ಮಾಡುವ ಸೇವೆಗೆ ಅತ್ಯಂತಪ್ರಸನ್ನಾಂತರಂಗಕರಣನಾಗಿ ಪುತ್ರಾರ್ಥವಾಗಿ ವಿಶೇಷವಾಗಿ ಸೇವಿಪಳೆಂದರಿದು ಪುತ್ರಪ್ರದಾನವಂ ಮಾಡಬೇಕೆಂದು ನಿಶ್ಚಯಿಸಿ ಕಾಲವಂ ನಿರೀಕ್ಷಿಸಿ ಸಂಪರ್ಕವಂ ಮಾಡಲು, ಆಕ್ಷಣದಲ್ಲಿ ಗರ್ಭವಂ ಧರಿಸಿ ದ್ವಿತೀಯಕ್ಷಣದಲ್ಲಿ ಗರ್ಭಸಂಪೂರ್ಣವಾಗಿ ತೃತೀಯಕ್ಷಣದಲ್ಲಿ ಗರ್ಭಯಾತನೆ ತೋರಲು, ವ್ಯಾಜಾಂತರದಿಂದ ಪರ್ಣಶಾಲೆಯಂ ಬಿಟ್ಟು ಬಹಿರ್ಭಾಗಕ್ಕೆ ಬಂದೊಂದು ವೃಕ್ಷದಡಿಯಲ್ಲಿ ರಾಕ್ಷಸಯೋನಿಗನುರೂಪವಾದ ಘೋರಶಿಶುವಂ ಪ್ರಸವಿಸಲು, ಭೂಸ್ಪರ್ಶಮಾತ್ರದಿಂದಾಶಿಶುವು ಷೋಡಶವರ್ಷವಯನಾಗಲು ಅದಂ ಕಂಡು ಪರಮಸಂತೋಷಯುಕ್ತಳಾಗಿ ನೈಮಿಶಾರಣ್ಯದೊಳು ಇರು ಹೋಗೆಂದು ಪುತ್ರನಂ ಕಳುಹಿ ಯಥಾಪೂರ್ವವಾಗಿ ಪರ್ಣಶಾಲೆಗೆ ಬಂದು ದ್ವಿತೀಯಸುರತಾಪೇಕ್ಷೆಯುಳ್ಳವಳಾಗಿ ಋಷಿಯಂ ಸಂಜ್ಞೆ ಮಾಡಲು. ಕಣಾದನೆಂಬ ತಾಪಸನು ಆಕೆಯ ಮಾಯೋಪಾಯಮನರಿಯದೆ ಕಾಮಾರ್ಥವಾಗಿ ಅಪೇಕ್ಷೆ ಮಾಡುವಳೆಂದು ತಿಳಿದು ಸಂಪರ್ಕವಂ ಮಾಡೆ, ಆಕ್ಷಣದಲ್ಲಿ ಗರ್ಭವಂ ಧರಿಸಿ ಮೊದಲಿನಂತೆ ದ್ವಿತೀಯಪುತ್ರನಂ ಪಡೆದು ನೈಮಿಶಾರಣ್ಯಕ್ಕೆ ಕಳುಹಿ, ಪುನಶ್ಚ ತೃತೀಯಸುರತಾಪೇಕ್ಷೆಯಂ ಮಾಡಲು. ಆ ತಾಪಸನು ಪತ್ನಿಮೇಲಣ ದಯೆಯಿಂದೊಡಂಬಟ್ಟು ರಮಿಸಲಿಂತೊಂದು ರಾತ್ರಿಯೊಳು ರಕ್ಕಸಿಯು ಕಣಾದನಂ ಮೋಹಿಸಿ ಷಡಾವರ್ತಿ ಸಂಪರ್ಕವಂ ಮಾಡಿ ಮೂರೆರಡು ಕುಮಾರರಂ ಪಡೆದು ನೈಮಿಶಾರಣ್ಯಕೆ ಕಳುಹಿ ತಾನು ಅರುಣೋದಯವಂ ನಿರೀಕ್ಷಿಸಿ ಸ್ನಾನಾರ್ಥವಾ ಕಣಾದನದಿಗೆ ಪೋಗಲು ಆ ರಕ್ಕಸಿಯು ತನಕಸಿಂಗುಹಾಂತರದೊಳಿರುವ ಪ್ರೊಕ್ಕು

ವಿಮಳಪತ್ನಿಯುಂ ಪೂರ್ಣಕಾಲಂಗೆ ತಂದು ಬಿಟ್ಟು ನೀನು ಪೋಗಿ ಬಂದ ವರ್ತ
ಮಾನವಂ ಪತಿಗೆ ತಿಳುಹುವದೆ ಸ್ತ್ರೀಗೆ ವ್ಯಭಿಚಾರವಂ ಶಂಕಿಸಿ ಪರಿತ್ಯಾಗ
ವಂ ಮಾಡುವನು ಅದುಕಾರಣ ಸುಮ್ಮನಿರೆಂದುಪಾಯವಂ ಪೇಳಿ ತಾನು
ನೈಮಿಷಾರಣ್ಯಕ್ಕೆ ಪೋಗಿ ಪುತ್ರರಂ ಕಂಡು ಪರಮ ಸಂತೋಷಯುಕ್ತ
ಳಾಗಿ ಒಂದು ವಿಶಾಲವಾದ ಗುಹೆಯುಂ ನೋಡಿ ಅದನಾವಾಸಸ್ಥಾನವಂ
ಮಾಡಿಪುತ್ರರಿಂಗೆ ರುರು ಚಂಡ ಕ್ರೋಧ ಭೀಷಣ ವಿಶುಕ್ರ ಶುಕ್ರಧರನೆಂಬ
ಹೆಸರಂ ಕ್ರಮವಾಗಿರಿಸಿ ಕರದು, ಪುತ್ರರಿಂಗೆ ಧನುರ್ವಿದ್ಯಾಭ್ಯಾಸವಂ ಮಾ
ಡಿಸಬೇಕೆಂದು ಆಲೋಚನೆ ಮಾಡಿ ಧನುರ್ವಿದ್ಯಾಪಾರಂಗತನಾದ ಸತ್ಯವ್ರ
ತನಂ ಸ್ಮರಿಸಿ ಪುತ್ರರಿಂಗೆ ಉಪಾಯವೆಲ್ಲವಂ ತಿಳಿಸಿ ಸರೂಪಾಖ್ಯಾನವಂ
ಮಾಡಿ ಕಾರ್ಯವಂ ಮಾಡಬೇಕೆಂದು ಪೇಳಿ ಪುತ್ರರೂ ತಾನೂ ಸಹಿತ
ಮಾನುಷಾಕಾರವಂ ತಾಳಿ ಸತ್ಯವ್ರತನಿರುವ ತಾಣಕ್ಕೆ ಬಂದು ವ್ಯಾಧಂಗೆ
ಸಾಷ್ಟಾಂಗದಿಂ ನಮಿಸಿ ಪತಿಹೀನಳೋಪಾದಿಯಲ್ಲಿ ದೀನಭಾವದಿಂದೆದು
ರ್ಗೆ ನಿಂದಿರಲು, ಸತ್ಯವ್ರತನು ಆಕೆಯಂ ಕುರಿತು ನೀನ್ಯಾರೆಂದು ಕೇಳಲು,
ಆ ರಕ್ಕಸಿಯಾತನಂ ಕುರಿತು ತನ್ನ ಪತಿಯು ಸೌವೀರದೇಶಾಧಿಪತಿಯು
ಮೂರೆರಡು ಸುತರಂ ಪಡದು ಸುಖದಿಂ ರಾಜ್ಯವಂ ಮಾಡುತ್ತಿರಲು, ಸೌ
ರಾಷ್ಟ್ರದೇಶಾಧಿಪತಿಯು ಜನ್ಮದ್ವೇಷಿಯಾದಕಾರಣ ಯುದ್ಧಾರ್ಥವಾಗಿ
ಸರ್ವಸೇನಾಸಮೇತನಾಗಿ ಬರಲು ತನ್ನ ಪತಿಯು ಕ್ರೋಧಮೂರ್ಛಿತನಾ
ಗಿಸೇನಾಸಮೇತನಾಗಿಬಹುಕಾಲ ಯುದ್ಧವಂ ಮಾಡಲು, ವಿಷ್ಣುವರ್ಧನರಾ
ಯನು ಚತುರ್ಥೋಪಾಯದಿಂದೆನ್ನಪತಿಯಂ ಜಯಿಸಕೂಡದೆಂದು ನಿಶ್ಚಯ
ಮಾಡಿ ದ್ವಿತೀಯೋಪಾಯದಿಂದಮಾತ್ಯರೆ ಮೊದಲಾದ ಸಮಸ್ತ ಸೇನಾಪತಿ
ಗಳಂ ಹೊಡದು ಯುದ್ಧರಂಗದೊಳು ಧನುರ್ಬಾಣಾದಿಗಳು ಸಹಿತವಾಗಿ
ಸಮಯಕ್ಕೊದಗದಂತೆ ಮಾಡಿ ಪತಿಯುಂ ಶರೆವಿಡಿದನೆಂಬ ವಾರ್ತೆಯಂ
ಕೇಳಿ ಪತಿಯಾದವನು ಶತ್ರುವಿನಧೀನವಾದಕಾಲದೊಳು ಸತಿಗೆ ಪ್ರ
ಮಾದಬಾರದೆ ಇರದೆಂಬರ್ಥವಂ ನಿಶ್ಚೈಸಿ ಯತ್ಕಿಂಚಿದ್ದ್ರವ್ಯೋಪಪತ್ತಿ
ಯುಂ ಮಾಡಿಕೊಂಡು ಈ ಪುತ್ರರಿಂದೊಡಗೂಡಿ ನೈಮಿಷಾರಣ್ಯಪ್ರವೇ
ಶವಂ ಮಾಡಿ ದೇಶಕೋಶ ಮೊದಲಾದ ಸಂಪದವು ವಿದ್ವೇಷಿಯಧೀನವಾ

ಮುದೆಂಬ ವಾರ್ತೆಯಂ ಕೇಳಿ ನಿನ್ನಡಿಯು ಶರಣಾಗತಳಾಗಿ ಬಂದಿರುವೆನೆಂದು ಬಹುವಿಧ ವಿಜ್ಞಾಪನಂ ಮಾಡಿ ಬೇಡಿಕೊಳ್ಳಲು, ಈ ವ್ಯಾಧನಾಕೆಯನುಡಿಯು ಸತ್ಯವೆಂದೇ ತಿಳಿದು ದೈವಕೃತ್ಯಕ್ಕೆ ವೃಥಾ ಹಂಬಲಿಸಿ ಫಲವೇನು ತನ್ನಿಂದಾಗುವ ಕಾರ್ಯವಂ ಪೇಳಿದಡೆ ಸ್ವಶಕ್ತ್ಯನುಗುಣವಾಗಿ ಮಾಡುವೆನೆಂದೊಡಂಬಡಲು, ಆ ರಾಕ್ಷಸಿಯು ಮಹಾನುಭಾವನೇ ಕೇಳು ಶತ್ರುವಂ ನಿರ್ಮೂಲ ಮಾಡಿ ಪತಿಯಂ ಸೆರೆಯಿಂದ ಬಿಡಿಸಿ ರಾಜ್ಯವಂ ಪುತ್ರರಧೀನವಂ ಮಾಡಿಕೊಡಬೇಕು, ಅಥವಾ ಪುತ್ರರೇ ಶತ್ರುನಿಗ್ರಹವಂ ಮಾಡಿ ರಾಜ್ಯಸಂಪಾದನೆಯಂ ಮಾಡುವಂತೆ ಕರುಣದಿಂ ನಿರ್ವ್ಯಂಜನೆಯಿಂ ಧನುರ್ವೇದವಂ ನುಪದೇಶಮಾಡಿ ಉದ್ಧಾರವಂ ಮಾಡಬೇಕೆಂದು ಅಡಿಗಡಿಗೆ ವಂದಿಸಲು ಸತ್ಯವ್ರತನೆಂದ ನೆಲೈಮಾನಿನಿಯೆ ಶಸ್ತ್ರಸನ್ಯಾಸವಂ ಮಾಡಿರುವೆನಾದಕಾರಣ ನಿನ್ನಿಂದ ಪ್ರಥಮೋಪನ್ಯಸ್ತವಾದ ಕಾರ್ಯಮೆನ್ನಿಂದಲಾಗಲರಿಯದದರಿಂದ ನಿನ್ನ ಪುತ್ರರಿಂಗೆ ಧನುರ್ವಿದ್ಯವಂ ಪೇಳುವೆನೆಂದಭಯವಂ ನೀಯ್ವಲು, ಆ ಮಹೋದರಿಯು ಕಣಾದನಂ ವಂಚಿಸಿ ಪುತ್ರರಂ ಪಡೆದಂತೆ ಈ ವ್ಯಾಧನಂ ವಂಚಿಸಿ ಪುತ್ರರಂ ಧನುರ್ವಿದ್ಯಾಪಾರಂಗತರಂ ಮಾಡಿದೆನೆಂದು ಸಂತೋಷಯುಕ್ತಳಾಗಿ ದೂರದಲ್ಲಿ ತಾನಿರಲು ವಿದ್ಯಾಭ್ಯಾಸವಂ ಮಾಡುವ ಪುತ್ರರಿಂಗನ್ನಾಹಾರಗಳೊದಗಲರಿಯದದರಿಂದ ಭವತ್ಪರ್ಣಶಾಲೆಗೆ ನಾತಿದೂರದೊಳು ಪರ್ಣಾಲಯವಂ ಕಟ್ಟಿಕೊಂಡು ಪುತ್ರರು ಪ್ರಾತರಾರಭ್ಯಯಾಮತ್ರಯ ಪರ್ಯಂತ ಭವತ್ಸನ್ನಿಧಿಯಲ್ಲಿ ವಿದ್ಯಾಭ್ಯಾಸಮಂ ಮಾಡಿ ತದನಂತರದಲ್ಲಿ ತನ್ನೆಡೆಗೆ ಬಂದು ಅನ್ನಾಹಾರಾದಿಗಳ ಮಾಡಿ ಪುನಶ್ಚ ಅರುಣೋದಯಕಾಲಕ್ಕೆ ಭವತ್ಸನ್ನಿಧಾನಕ್ಕೆ ಬರುವರಿದೆರೀತಿಯಿಂದ ನಡೆಯುವಂತೆ ಅನುಗ್ರಹಮಾಡಬೇಕೆಂದು ಪ್ರಾರ್ಥನೆಯಂ ಮಾಡಲು. ಸತ್ಯವ್ರತನು ಹಾಗೆಯೇ ಆಗಲೆಂದೊಡಂಬಡಲು, ಪುತ್ರರಿಂಸಹಿತಳಾಗಿ ವಂದನೆಯಂ ಮಾಡಿ ನಿಜಸ್ಥಾನಕ್ಕೆ ಬಂದು ರಾತ್ರಿ ಇದ್ದು ಅರುಣೋದಯಕ್ಕೆ ಗುರುಸನ್ನಿಧಿಗೆ ಬಂದು ಯಾಮತ್ರಯಾವಧಿ ವಿದ್ಯಾಭ್ಯಾಸವಂ ಮಾಡಿ ತದನಂತರದೊಳು ನಿಜಾಲಯಕ್ಕೆ ಬಂದು ನಿಜರೂಪಮಂಧರಿಸಿ ದೇಶದೇಶಗಳ ರಾತ್ರಿ ಸಂಚಾರಮಾಡುತ್ತ ಪ್ರಾಣಿಹಿಂಸಾತತ್ಪರರಾಗಿ ಉದರಪೋ

ಷಣೆಯಂ ಮಾಡಿ ಸ್ವಶಕ್ತ್ಯನುರೂಪವಾಗಿ ಪೊನಂತಂದು ಜನನಿಗಿತ್ತು ಪ್ರಸ ರುವಯಕಾಲಕ್ಕೆ ಗುರುಸನ್ನಿಧಿಗೆ ಬರುವದಿಂತು ದ್ವಾದಶಾಬ್ದ ಪರ್ಯಂತವೂ ತಮ್ಮ ಸ್ವರೂಪಾಚ್ಛಾದನವಂಮಾಡಿ ವಿದ್ಯಾಭ್ಯಾಸವ ಮಾಡುತ್ತೊಂದು ದಿನ ಸಹೋದರಾರ್ವರೂ ಕೂಡಿ ವಿದ್ಯಾಭ್ಯಾಸ ಮೆಡರಿಲ್ಲದೆ ಕೊನೆವುಟ್ಟಿದು ದು ಇತಃಪರ ತಾವಿಂತಿರಬಾರದು ಈ ನೈಮಿಶಾರಣ್ಯದೊಳು ದಿವ್ಯವಾದ ನಗರಮಂ ರಚಿಸಿ ಸಮಸ್ತ ಭೂಮಂಡಲಮಂ ಜಯಿಸಿ ಮಹತ್ಕೀರ್ತಿಯಂ ಪಡೆಯಬೇಕು ಇದಕ್ಕೆ ಪ್ರತಿಬಂಧಕನೀ ಸತ್ಯವ್ರತ ಇವನೆಮಗೆ ಸ್ವರೂ ಪ ಪ್ರಕಾಶನಂ ಮಾಡಕೂಡದದರಿಂದ ಭೇದೋಪಾಯದಿಂದಿವನಂ ಹೊ ರಡಿಸಬೇಕೆಂಬ ಯೋಚನೆಯನ್ನು ನಿಶ್ಚೈಸಿ ಮರುದಿನ ವಿಳಂಬ ಮಾಡಿ ಕೊಂಡು ಗುರುವಿನೆಡೆಗೆ ಬರಲು, ಸತ್ಯವ್ರತನು ವಂದಿಸಿದಅಂತೇವಾಸಿಗಳಂ ನೋಡಿ ಕಾಲಾತಿಕ್ರಮಣಮೇನುಕಾರಣಮೆಂದು ಕೇಳಲು, ಆ ಕುಹನಾಂ ತೇವಾಸಿಗಳು ಮಹಾನುಭಾವನೆ ಕೇಳು ನಿನ್ನೆಯ ನಿಶಿಯೊಳೋರ್ವ ಭಯಂಕರರೂಪಿಯಾದ ರಾಕ್ಷಸನು ಎಮ್ಮ ಕುಟೀರ ಸಮೀಪದೊಳೊಂ ದು ಯೋಜನ ಮಾತ್ರ ಪ್ರದೇಶದೊಳಿರುವ ಸಿಂಹ ವ್ಯಾಘ್ರಗಳೇ ಮೊದಲಾದ ಸಮಸ್ತ ಪ್ರಾಣಿಗಳಂ ಕೊಂದು ತಿಂದು ಮಹಾ ಘೋರಾಟ್ಟ ಹಾಸವಂ ಮಾಡಿ ತಾವಿರುವುದಂ ಕಾಣದೇ ಪೋದನು, ಮುಂದೆ ನಾವೆಂತು ಜೀವಿಸಬೇಕೆನಲು, ನಗುತ್ತಲವರ ಕಪಟವಂನರಿಯದೆ ಧನುರ್ವಿದ್ಯಾಪಾರಂಗ ತರಾದ ನಿಮಗೆ ಈ ಲೋಕದೊಳೆದಿರಾರಿಹರು, ಅದುಕಾರಣವಿನ್ನೊಂ ದು ಭಾರಿ ದೈತ್ಯಯು ನೈದಿದಡೆ ಬಾಣದಿಂ ಸಂಹಾರ ಮಾಡುವುದೆಂದೊರೆದು ಧೈರ್ಯಮಂ ಪೇಳಿ ಎಂದಿನಂತೆ ವಿದ್ಯಾಭ್ಯಾಸಮಂ ಪೇಳುತಪ್ಪಣೆಗೊಡಲು, ಆ ದುರಾತ್ಮರಾದ ಆರುಮಂದಿ ರಾಕ್ಷಸರು ತಾವೆಂದ ಮಾತು ಸತ್ಯಮೆಂದೇ ತಿಳಿದಿರುವನೀವ್ಯಾಧನವರಿಂದತಿ ಮಾತ್ರಾಲೋಚನೆಯಂ ತ್ವರೆಮಾಡಬೇಕೆಂ ದು ನಿಶ್ಚೈಸಿ ಸ್ವಾಲಯಮಂ ನೈದಿ ಜನನಿಗಭಿವಂದನೆಯಂ ಮಾಡಿ ಧನು ರ್ವಿದ್ಯಾಪಾರಂಗತರಾದೆಮಗೆ ತಾಯೆ ಕುಲವಿದ್ಯೆಯನ್ನುಪದೇಶಮಾಡಬೇ ಕೆಂದೆನಲು, ಮಹೋದರಿಯಾಗ ಕಾಮರೂಪವಶ್ಯಾದೃಶ್ಯವೇ ಮೊದಲಾದ ಸಮಸ್ತ ಮಾಯಾವಿದ್ಯೆಗಳನುಪದೇಶಮಾಡಲು, ಆ ಪುತ್ರರು ಧನುರ್ವಿದ್ಯೆ

ದಿಂದಲೂ ಮಾಯಾವಿದ್ಯೆಯಿಂದಲೂ ಯೌವನಮದದಿಂದಲೂ ತಾಮಸಯೋನಿಸ್ವಭಾವದಿಂದಲೂ ಅತ್ಯಂತ ಗರ್ವಿತನಾಗಿ ಕಾರ್ಯಾಕಾರ್ಯಮಂ ವಿಚಾರ ಮಾಡದೆ ಪ್ರಾತಃಕಾಲದೊಳೊರ್ವ ರಾಕ್ಷಸನು ಪಕ್ಷಿರೂಪಮಂ ಧರಿಸಿ ವ್ಯಾಧನ ಪರ್ಣಶಾಲಾ ಸಮೀಪದಲ್ಲಿರುವ ವೃಕ್ಷಮಂ ಸೇರಿ ಕಾಲನಿರೀಕ್ಷಣೆಯಂ ಮಾಡಿಕೊಂಡಿದ್ದು ವ್ಯಾಧನು ಕಂದಮೂಲಾಹರಣಾರ್ಥವಾಗಿ ದೂರದೇಶಕ್ಕೆ ಪೋಗಲು, ಪುತ್ರನು ಕ್ರೀಡಾರ್ಥವಾಗಿ ಪೋಗಲು, ಈ ರಾಕ್ಷಸನು ಭಯಂಕರರೂಪದಿಂದ ಪ್ರತ್ಯಕ್ಷನಾಗಿ ಗುರುಪತ್ನಿಯಂ ನೆತ್ತಿಕೊಂಡು ಸ್ವಸ್ಥಾನಕ್ಕೆ ಪೋಗಿ ಸಂಹಾರಮಂ ಮಾಡುತ್ತೇಳುಮಂದಿಯು ಭಕ್ಷಿಸಿ ಆಕೆಯ ಅಸ್ಥಿ ಚರ್ಮಾದಿಗಳನೊಂದು ವೃಕ್ಷಮೂಲದೊಳು ಬಿಸುಟು ಯಥಾಪೂರ್ವವಾಗಿ ಮನುಷ್ಯವೇಷಮಂ ಧರಿಸಿ ಎಂದಿನಂತೆ ವ್ಯಾಧನಾಶ್ರಮಕ್ಕೆ ಬರುವನಿತರೊಳು ವ್ಯಾಧ ಪುತ್ರನು ಪರ್ಣಶಾಲೆಗೆ ಬಂದು ಜನನಿಯಂ ಕಾಣದೆ ಪ್ರಲಾಪಿಸುತ್ತಿರಲು, ಆ ಸಮಯದೊಳು ಕಂದ ಮೂಲಮಂ ಸಂಗ್ರಹಿಸಿಕೊಂಡು ಬರುತ ಸುತನು ಅಳುವ ಧ್ವನಿಯಂ ಕೇಳಿ ವಿಹ್ವಲನಾಗಿದೇನೆಂದು ಕೇಳಲು ಸುತನು ಜನನಿಯಂ ಕಾಣೆನೆಂದು ಪೇಳಲು ಸತ್ಯವ್ರತನು ತಂದ ಕಂದಮೂಲಗಳನ್ನು ಪರ್ಣಶಾಲೆಯಲ್ಲಿರಿಸಿ ನಿಜದಯಿತಾವಿಯೋಗ ದುಃಖದಿಂ ಪುತ್ರನಿಂದೊಡಗೂಡಿ ಕಾಂತಾರದೊಳು ಪತ್ನಿಯಂ ನರಸಿ ಕಾಣದೆ ಉದ್ವಿಗ್ನನಾಗಲು ಪರ್ಣಶಾಲೆಗೆ ಬಂದು ಕಿಂಚಿದಾಹಾರಮಂ ಮಾಡಿ ಪುತ್ರನಂ ಕರೆದು ನಾತಿ ದೂರದೊಳಿರುವ ಶಿಷ್ಯರೆಡೆಗೈದಿ ಅವರಿಂದೊಡಗೂಡಿ ನಿಮ್ಮ ಜನನಿಯಂ ನರಸಿ ಕರೆತರುವುದೆಂದು ಕಳುಹಿ ತಾನು ಬಹು ಶ್ರಾಂತನಾಗಿ ಪರ್ಣಶಾಲೆಯೊಳಿರಲು, ಆ ವ್ಯಾಧ ಪುತ್ರನು ಪಿತೃಶಿಷ್ಯರಾಲಯವನರಸುತ್ತ ಬಹು ದೂರ ದೇಶ ಸಂಚಾರ ಮಾಡುತ್ತಾ ಬಂದು ಗಿರಿಗುಹಾ ಸಮೀಪದೊಳು ವೃಕ್ಷದಡಿಯಲ್ಲಿ ಬಿದ್ದಿರುವ ಮಾತೃವಿನ ಕಪಾಲಾಸ್ಥಿ ಪಾದಾದಿಗಳು ಆರ್ದ್ರವಾಗಿ ಬಿದ್ದಿರಲದಂ ಕಂಡು ಬಹುವಿಧ ಕ್ಲೇಶಮಂ ಮಾಡಿ ಈ ನೃಶಂಸ ಕರ್ಮವಂ ನಾರು ಮಾಡಿದರೋ ಪರೀಕ್ಷಿಸಿ ನೋಡಬೇಕೆಂದು ಆವೃಕ್ಷಮಂ ನೇರಿ ಪರ್ಣಾಚ್ಛಾದಿತನಾಗಿ ಕುಳ್ಳಿರಲು, ಇತ್ತಲೀರಾಕ್ಷಸರು ವ್ಯಾಧನೆಡೆಗೆ ಬಂದು ವಂದನೆಯಂ ಮಾಡಿ ಭಯ

ವಿನಯದಿಂ ಖಿನ್ನನಾಗಿರುವುದಕ್ಕೆ ಕಾರಣವೇನೆಂದು ಕೇಳಲು ಸತಿಯು ವೃತ್ತಾಂತವಂ ತಿಳಿಸಿ ಅಳಿಯು ನರಸಿಲೋಕಸುಗ ನಿರ್ಮಾಲ್ಯವುಮಂ ನರಸಿಕೊಂಡು ಪೋಗಿರುವನದು ಕಾರಣ ಸ್ವರದೊಳಲ್ಲಿ ತಿರುಗುವನೋ ನೋಡಿ ಅವನಿಂದೊಡಗೂಡಿ ಸತಿಯುಂ ನರಸಿ ಕರತರುವುದೆಂದಾಜ್ಞಾಪಿಸಲು, ಆ ದುರಾತ್ಮರಾದ ರಾಕ್ಷಸರು ನಿಜಸ್ಥಾನಕ್ಕೆ ಬಂದು ನಿಜರೂಪವಂ ಧರಿಸಿ ಯಥೇಚ್ಛ ಸುರಾರಕ್ತಪಾನವಂ ಮಾಡಿ ಮಾಂಸದ ರಾಶಿಗಳ ತಿಂದು ಪರಸ್ಪರ ಬಾಹುಯುದ್ಧಗಳ ಮಾಡುತ್ತಾ ಗುರುಪುತ್ರನು ಸಿಕ್ಕಿದನಾದೊಡೆ ಸಂಹಾರವಂ ಮಾಡಿ ಭಕ್ಷಿಸಿಬಿಡಲು ವ್ಯಾಧನು ಪತ್ನೀಪುತ್ರವಿರಹದಿಂದ ಈ ಪ್ರದೇಶವಂ ಬಿಟ್ಟು ಪೋಗುವನೆಂದು ಅರಣ್ಯವೆಲ್ಲ ಅರಸಿ ನೋಡಿದಡೆಯುಂ ಸಿಕ್ಕಲಿಲ್ಲ ವೇನುಮಾಡುವೆವೆಂದು ಅನ್ಯೋನ್ಯ ಮಾತಾಡಿಕೊಳ್ಳಲು ಗುರುಪುತ್ರನದಂ ಕೇಳಿ ಅಹಹ ಈ ದುರಾತ್ಮರಿಂದಲೇ ಜನನಿ ಮೃತಳಾದಳು ತಾನು ಸಿಕ್ಕಿದಡೆ ಸಂಹಾರಮಾಡುವರು ಈ ಪಾಪಿಗಳು ಸ್ವರೂಪಾಚ್ಛಾದನವಂ ಮಾಡಿ ವಿದ್ಯಾಭ್ಯಾಸ ಮಾಡಿಸಿದರೂ ಇವರ ಮಾಯೆಯನ್ನರಿಯದೆ ತಂದೆ ವಿದ್ಯವುಂ ಪೇಳಿದನು ಹಾವಿಗೆ ಹಾಲೆರೆದಂತೆ ಮುಂದೆ ಇನ್ನೇನು ಮಾಡುವರೋ ನೋಡಬೇಕೆಂದು ರಾತ್ರಿ ವೃಕ್ಷದಲ್ಲಿ ಇರಲು, ನಿಶಿಯಲ್ಲಿ ಸಂಚಾರ ಪೋಗಿ ಅರುಣೋದಯಕಾಲಕ್ಕೆ ಪೆಣಗಳಂ ಪೊತ್ತು ಜನನಿಯಿದ್ದೆಡೆಗೆ ಬಂದು ಇತ್ತ ಗುರುಪುತ್ರನು ದೊರೆಯಲಿಲ್ಲ ಗುರುವೇನಾದನೋ ನೋಡಬೇಕೆಂದು ಮಾನುಷರಾಗಿ ವ್ಯಾಧನ ಸಮೀಪಕ್ಕೆ ಬರಲು, ವ್ಯಾಧಪುತ್ರನು ವಿಸ್ಮಿತನಾಗಿ ಮೆಲ್ಲನೆ ಮರದಿಂದಿಳಿದು ರಾಕ್ಷಸರರಿಯದಂತೆ ಬೆಂಬತ್ತಿ ಬರುತ್ತಿರಲು, ಈ ಸತ್ಯವ್ರತನು ದಯಿತಾಸುತ ವಿಯೋಗದುಃಖಿತನಾಗಿ ಚಿಂತಿಸುತ್ತಿರಲು. ಈ ರಾತ್ರಿಂಚರರು ಬಂದು ವಂದನೆಯುಂ ಮಾಡಿ ಪತ್ನೀಪುತ್ರರನ್ನು ಅರಣ್ಯವೆಲ್ಲ ತಿರುಗಿ ನೋಡಿದೆವು ಕಾಣಲಿಲ್ಲ ಇದರಿಂದ ಆ ದುರಾತ್ಮ ರಾಕ್ಷಸನು ಭಕ್ಷಿಸಿದನೋ ಏನೋ ಎಂದು ದುಃಖಾಭಿನಯವುಂ ಮಾಡುತ್ತಿರಲು, ವ್ಯಾಧಪುತ್ರನು ಮಾತೃವಿನ ಕಪಾಲಸಿಗಳ ತೆಗೆದುಕೊಂಡು ಬಂದು ವಂದನೆಯುಂ ಮಾಡಿ ತೋರಿಸಲು ವ್ಯಾಧನು ನೋಡಿ ಬಹು ದುಃಖಿತನಾಗಿ ಬಹು ವಿಧ ಪ್ರಲಾಪವಂ ಮಾಡಿ ಸುತನಂ ಕುರಿತು

ಇದೇನೆಂದು ಕೇಳಲು ಪುತ್ರನೂ ತನ್ನ ಧನುರ್ವಿದ್ಯಾಪ್ರಭಾವವೆಂದು ಶೋಧನವಂ ಮಾಡಲು ರಾಕ್ಷಸರು ವಿವರ್ಣಮುಖವುಳ್ಳವರಾಗಿ ಅಹಾ ತಿಳಿದುದೆನ್ನ ವೃತ್ತಾಂತವೆಂದು ಭಯಚಲಿತಮಾನಸರಾಗಿ ಯೋಚಿಸುತ್ತಿರಲು ಸತ್ಯವ್ರತನು ಅದೇನದಂ ಸ್ಫುಟವಾಗಿ ಪೇಳೆನಲು ರಾಕ್ಷಸರೆಮಗೆ ಸಕಲ ವೃತ್ತಾಂತವಂ ಪೇಳಲು ಸತ್ಯವ್ರತನು ಕೇಳಿ ವಿಸ್ಮಿತನಾಗಿ ಶೋಕಸಾಗರದಲ್ಲಿ ಮುಳುಗಿ ಕ್ರೋಧಮೂರ್ಛಿತನಾಗಿ ಎಲಾ ದುರಾತ್ಮರಾದ ರಾಕ್ಷಸರಾ ಕೇಳಿ ಶಸ್ತ್ರಸನ್ಯಾಸವಂ ಮಾಡಿರುವದರಿಂದ ಕಾರ್ಯ ಕೆಟ್ಟುದುದು ನೀವು ವೇಷವಂ ಧರಿಸಿ ವಿದ್ಯಾಭ್ಯಾಸವಂ ಮಾಡಿ ಗುರುದಕ್ಷಿಣಾರೂಪವಾಗಿ ತನ್ನ ಪತ್ನಿಯಂ ಭಕ್ಷಿಸಿದಿರಾದ ಕಾರಣ ನಿಮಗೆ ಪೇಳಿದುದು ಸಫಲವಾದುದು ಆದರೇನಾಯ್ತು ನಿಮ್ಮನ್ನ ಈ ಜಂಬೂದ್ವೀಪವಂ ಬಿಟ್ಟು ಪೊರಡಿಸುವೆ ನಿಲ್ಲದಿರೆ ತಾನು ಪೋಗುವೆನು ಮರೆಯದಿರಿ ಉಚಿತಮಾನ ಶಿಕ್ಷೆಯಂ ಮಾಡಿಸುವೆನೆಂದು ರೋಷತಾಮ್ರಾಕ್ಷನಾಗಿ ತನ್ನಿಂದ ಪ್ರಾಪ್ತವಾದ ಧನುರ್ವಿದ್ಯವೂ ನಿಮಗೆ ಸಮಯಕ್ಕೊದಗದೆ ನಿರರ್ಥಕವಾಗಿ ಪೋಗಲೆಂದು ಶಾಪವಂ ನೀಯ್ಯಲು, ರಾಕ್ಷಸರು ಗಡಗಡನೆ ನಡುಗಿ ಮೆಲ್ಲನಲ್ಲಿಂದಲೆದ್ದು ನಿಜಸ್ಥಾನಕ್ಕೆ ಬಂದು ಜನನಿಗೀವಾರ್ತೆಯಂ ತಿಳಿಸಿ ಚಿಂತಿಸುತ್ತಿರಲು, ಈ ಸತ್ಯವ್ರತನು ಬಹು ದುಃಖಿತನಾಗಿ ಪುತ್ರಂಸಹಿತನಾಗಿ ನೈಮಿಶಾರಣ್ಯವಂ ಬಿಟ್ಟು ದಂಡಕಾರಣ್ಯಕ್ಕೆ ಬಂದು ಪರ್ಣಾಲಯವಂ ರಚಿಸಿ ಸುಖದಿಂದಿರಲು. ಅನೇಕ ರಾಜಕುಮಾರರೀತನ ಕೀರ್ತಿಯಂ ಕೇಳಿ ವಿದ್ಯಾಭ್ಯಾಸವಂ ಮಾಡಬೇಕೆಂದು ಬಂದು ವಂದಿಸಲು, ಚಿರಕಾಲ ವಿದ್ಯೆಯಂ ಸಾಂಗೋಪಾಂಗವಾಗಿ ಹೇಳಿ ಪರೀಕ್ಷೆಯಂ ಮಾಡಲೋಸುಗ ಈತರುಮೂಲಕ್ಕೆ ಬಂದು ಪರೀಕ್ಷೆಯಂ ಮಾಡಿ ವಿದ್ಯಾಪಾರಂಗತರಾದರೆಂದು ತಿಳಿದು ಈ ರಾಜಕುಮಾರರಂ ಕುರಿತು ನಿಮ್ಮ ನಿಮ್ಮ ರಾಜ್ಯಕ್ಕೆ ಪೋಗಿ ಸುಖದಿಂದಿರುವುದೆಂದು ಅಪ್ಪಣೆಗೊಡಲು ಈ ರಾಜಕುಮಾರರೀತಂಗೆ ವಂದನೆಯ ಮಾಡಿ ಗುರುದಕ್ಷಿಣೆಯ ಕೊಡಬೇಕೆಂಬ ಇಚ್ಛೆಯುಳ್ಳವರಾಗಿ ಇರುವೆವದರಿಂದ ಭವದಪೇಕ್ಷಿತಾರ್ಥವಂ ಅಪ್ಪಣೆ ಕೊಡಬೇಕೆನಲು ಅಪೇಕ್ಷಿತಾರ್ಥವಂ ಸಾಧಿಸಿ ಕೊಡುವುದಾದಡೆ ಪುತ್ರ

ದಿವಸದಲ್ಲಿಯೂ ಬಂದು ಬಾಧಿಸುತ್ತಿರುವರು ದುರುಳ ಮೊದಲಾದ ರಾಕ್ಷಸರಂ ಯುದ್ಧದಲ್ಲಿ ಪರಾಜಿತರಂ ಮಾಡಿ ಈ ದ್ವೀಪವಂ ಬಿಟ್ಟು ಹೊರಡಿಸಿ ದ್ವೀಪಾಂತರವಂ ಸೇರಿಸುವದೊಂದು ಮನಸಾಭಿಷ್ಟ ಅಥವಾ ಅದಾಗದಿರೆ ತಮ್ಮುತ್ತರಕುರುವಿಂಗೆ ಸೇರಿಸುವದೆಂಬ ಮನೋರಥವೊಂದು ಈ ಎರಡು ಕಾರ್ಯಗಳಲ್ಲಿ ನಿಮಗೆ ದಾವದು ಸಾಧ್ಯವೊ ಅದಂ ಸಾಧಿಸಿ ಕೊಡುವದು ನಿಮಗೆ ಅಸಾಧ್ಯವಾದೊಡೆ ವ್ಯಸನಪಡದೆ ನಿಮ್ಮ ನಿಮ್ಮ ರಾಜ್ಯಕ್ಕೆ ಪೋಗಿ ಸುಖದಿಂದಿರುವದೆಂದು ಪೇಳಲು ರಾಜಕುಮಾರರೆಲ್ಲರೊಂದಾಗಿ ಮಂತ್ರಾಲೋಚನೆಯಂ ಮಾಡಿ ರಾಕ್ಷಸರೊಡನೆ ಯುದ್ಧವಂ ಮಾಡಿ ಪರಾಜಿತರಂ ಮಾಡುವದಸಾಧ್ಯಕಾರ್ಯ ಉತ್ತರಕುರುವೆಂಬುವದು ಸ್ಮರಣೀಯವೇ ಅಲ್ಲ ವೃಥಾ ಗುರುದಕ್ಷಿಣೆಯಂ ಕೊಡುವೆವೆಂದಾಡಿದುದು ಅನರ್ಥಕ್ಕೆ ಸಾಧನವಾದುದೆಂದಾಲೋಚನೆಯಂ ಮಾಡುತ್ತ ನಿಂದಿರುವರಿದುವೇ ವೃತ್ತಾಂತವೆಂದು ನುಡಿಯಲು ತಾನು ವೃದ್ಧಶಾಖಾಮೃಗನಂ ಕುರಿತು ಋಷಿಪತ್ನಿಯುಂ ಗುಹೆಯಿಂ ಪರ್ಣಾಲಯಕ್ಕೆ ಮಹೋದರಿ ತಂದು ಬಿಟ್ಟು ಪೋದ ತರುವಾಯ ಏನಾದುದೆಂದು ಕೇಳಲು ಆ ತರುಚರನುತನ್ನಂ ಕುರಿತು ಆ ಕಣಾದಪತ್ನಿಯು ಈ ರಾಕ್ಷಸಿಯ ಕೃತ್ಯಕ್ಕೆ ವಿಸ್ಮಿತಳಾಗಿ ಇರುತಿರಲು ಒಂದು ದಿನ ಕಣಾದನು ಪತ್ನಿಯಲ್ಲಿ ಗರ್ಭಚಿಹ್ನೆಗಳಂ ನರಸಿ ಕಾಣದೆ ಆಶ್ಚರ್ಯಯುಕ್ತನಾಗಿ ಪತ್ನಿಯಂ ಕರದು ಕೇಳಲು ಆಕೆ ಲಜ್ಜೆಯಿಂ ತಲೆವಾಗಿ ತಪಸ್ಸಾಮರ್ಥ್ಯದಿಂದಲೇ ಆಗಬೇಕೇ ಹೊರತು ಇನ್ನೇನು ಸಾಧನಾಂತರವಂ ಕಾಣೆನೆಂದೊರೆಯಲು ಕಣಾದ ಕೇಳಿ ವಿಸ್ಮಿತನಾಗಿ ಆ ದಿಸದ ಕುರುಹಂ ಪೇಳಲು ಪತ್ನಿಯುದಂ ಕೇಳಿ ಮಹೋದರೀ ವೃತ್ತಾಂತವಂ ವಿವರಿಸಿ ಪೇಳಲು ಕಣಾದನು ಕೇಳಿ ಕ್ರೋಧಮೂರ್ಛಿತನಾಗಿ ವಿಜ್ಞಾನದೃಷ್ಟಿಯಿಂ ದೈತ್ಯಮಾನಿನಿಯ ಕೃತ್ಯವಂ ತಿಳಿದು ತನ್ನಬೀಜದಿಂದುತ್ಪನ್ನರಾದರಾಕ್ಷಸರ ವಂಶವೃದ್ಧಿಯು ಸೊಂದಬಾರದೆಂದು ರಾಜಕುಮಾರನಿಂದ ಏಕಕಾಲದಲ್ಲಿ ಆರುಮಂದಿಯು ಮೃತಿಯು ನೊಂದಲೆಂದು ಶಾಪವನಿತ್ತು ಇತರ ಪರಪತ್ನಿಯಲ್ಲಿ ರಾಕ್ಷಸ ಮಾಯನಡೆಯಬಾರದೆ. ದು ರಕ್ಷೋಹನಸಯೆಂಬ ಮಹಾಮಂತ್ರ

ಮಂ ಪತ್ನಿಗುಪದೇಶವಂ ಮಾಡಿ ಸುಖದಿಂದಿದ್ದನೆಂದು ನುಡಿದ ವಾನರನ ಕುರಿತು ಇಂತೀರಹಸ್ಯವೆಲ್ಲ ತಿರ್ಯಗ್ಜಂತುವಾದ ನಿನಗೆಂತು ತಿಳಿದುದೆಂದು ಪ್ರಶ್ನೆಯಂ ಮಾಡಲು, ಎಲೈ ಗೃಧ್ರನೇ ಕೇಳು ತಾನು ಋಷಿ ಶಾಪ ದೂಷಿತನಾಗಿ ದಂಡಕಾರಣ್ಯವಂ ಪೊಕ್ಕು ಸಂಚಾರಮಾಡುತ್ತಲೊರ್ವ ಮಹಾ ತಪಸ್ವಿಯಂ ಕಂಡು ಆತ್ಮಾಪರಾಧ ಕಥಿತ ಋಷಿಶಾಪಾಸಾದಿತ ಕಳೇಬರದ ಭಯದಿಂದ ವಂದನೆಯಂ ಮಾಡಿ ತನ್ನ ವೃತ್ತಾಂತವಂ ವಿಜ್ಞಾಪನೆ ಮಾಡಿ ಮುಂದೆ ತನಗೇನು ಗತಿಯೆಂದು ಕೇಳಲು ಆ ಮಹರ್ಷಿಯು ಪರಮದಯಾರ್ದ್ರಹೃದಯನಾದಕಾರಣ ಒಂದುಕ್ಷಣವಾಲೋಚನೆಯಂ ಮಾಡಿ ನಿನಗೆ ತಾನು ಪೇಳಿದ ಕಥೆಯಲ್ಲ ವಿಸ್ತಾರವಾಗಿ ಪೇಳಿ ಮುಂದೆ ಭವಾನೀ ಚರಣಕಮಲಾನುಗ್ರಹವು ಪರಿಪೂರ್ಣನಾಗಿರುವ ರಾಜಕುಮಾರನು ನೀನಿರುವಲ್ಲಿ ಬರುವನೊಂದಾನೊಂದುಕಾರ್ಯದಿಂದ ಆತನ ಕರಸ್ಪರ್ಶದಿಂ ಕುತ್ಸಿತವಾದ ಶರೀರವು ಪೋಗಿ ದಿವ್ಯಶರೀರವನ್ನೈದಿ ಸ್ವರ್ಗಮಂ ಪೈದುವೆ ಎಂದು ಪೇಳಲು ತಾನು ಅಂತಪ್ಪ ಮಹಾನುಭಾವನ ಕರಸ್ಪರ್ಶ ತನಗೆಂತಾಧೀನವೆಂದು ಕೇಳಲು ಆ ದಯಾನಿಧಿಯಾದ ಋಷಿಯು ರಾಜಕುಮಾರಂಗೆ ಉಪಯುಕ್ತಮಾಗುವುದೊಂದುಪಾಯವು ಎನ್ನೊಳಿರುವುದದಂ ನಿನಗೆ ಕೊಡುವೆನು ಈ ವಸ್ತುವನಾತಂಗಿತ್ತು ಇದರಿಂದಾಗುವ ಕಾರ್ಯವಂ ಪೇಳಿದೆಯಾದೊಡೆ ನಿನ್ನಲ್ಲಿ ಪ್ರಸಾದಾಭಿಮುಖನಾಗಿ ಕರಸ್ಪರ್ಶವಂ ಮಾಡುವನು ಅದರಿಂದಕೃತನಾಗುವೆ ಪೋಗೆಂದುಅನುಗ್ರಹವಂ ಮಾಡಿರುವನು, ಅಂದಿನಾರಭ್ಯ ರಾಜಕುಮಾರನ ಸಂದರ್ಶನವಂ ನಿರೀಕ್ಷಿಸಿಕೊಂಡಿರುವೆನು. ಆ ಮಹರ್ಷಿ ವಾಕ್ಯದಿಂದೀ ವೃತ್ತಾಂತವೆಲ್ಲ ತನಗೆ ತಿಳಿದುದೆಂದು ಪೇಳುತಿರಲು, ಅನಿತರೊಳು ಮಹಾ ಬಲಪರಾಕ್ರಮವುಳ್ಳ ರಾಕ್ಷಸನೋರ್ವ ನಟ್ಟಹಾಸಧ್ವನಿಯಂ ಮಾಡುತ್ತ ಆ ವೃಕ್ಷಮೂಲವಂ ಕುರಿತು ಬರಲು ಆ ರಾಜಕುಮಾರನ್ನೆರೂ ಪರೀಕ್ಷಾರ್ಥವಾಗಿ ಮೃತ್ಯುವೀಗಲೆ ಬಂದೊದಗಿತೆಂದು ಎಲ್ಲರೂ ಗುಂಪಾಗಿ ಅಭಿಮುಖನಾಗಲಾದಾನವನು ಇವನೆ ರುರು ಎಂಬ ದೈತ್ಯನೆಂದೆನಗೆ ತೋರಿ ಸ್ವಗುರುಶಿಷ್ಯವಧಾರ್ಥವಾಗಿ ಬಂದಿರುವನು ಇಂದು ಮಹಾ

ವೃದ್ಧನಾಗುವುದು ಸಂಶಯವಿಲ್ಲ ನೀನು ಇನ್ನು ಇಲ್ಲಿರಬ್ಯಾಡ ವೃಥಾ ಬಾಣವೃಷ್ಟಿಯೊಳ್ ಮರಣವಾದೀತೆಂದು ಪೇಳಲು ತಾನು ಮೆಲ್ಲಮೆಲ್ಲನೆ ಆ ಪ್ರದೇಶವಂ ಬಿಟ್ಟು ಬಹುದೂರ ಮಾರ್ಗಮಂ ಕಳದು ಯಥೋಚಿತಫಲಸಂಗ್ರಹಮಂ ಮಾಡಿಕೊಂಡ್ಯೈದಿದೆನೆಂದು ಪೇಳಲು, ಆ ವೃದ್ಧಗೃಧ್ರನು ಆ ಕನೀಯಸ್ಯ ಸಪುತ್ರನಂ ತನ್ನ ಪಕ್ಷದಿಂದಾಚ್ಛಾದನವಂ ಮಾಡಿಕೊಂಡು ಪುತ್ರರೆಲ್ಲರಂ ಕರದು ದಿವ್ಯವಾದ ಫಲಾವಿಷ್ಟ ಭಕ್ಷಣೆಯಿಂದ ಕ್ಷುನ್ನಿವೃತ್ತಿಯಾಗಿ ಆಪ್ಯಾಯನಮಾದುದಂತರಂಗಕ್ಕೆ ವಿಚಿತ್ರತರವಾದ ದಿವ್ಯ ಕಥಾಶ್ರವಣದಿಂದ ದುರಿತನಿವೃತ್ತಿಯಾದುದು ನಿಮ್ಮನ್ನ ನೋಡಿದೋಣದರಿಂದ ಸಮಸ್ತ ದುಃಖಗಳು ದೂರವಾದವು ವೃದ್ಧಾಪ್ಯದಿಂದ ದೇಹ ಜೀರ್ಣವಾದುದು ಎಲಾ ಪುತ್ರರಾ ಕೇಳಿ ತನಗೆ ಚರಮಕಾಲವು ಉಪಸ್ಥಿತವಾಗಿರುವುದು ನೀವು ತನ್ನಂ ನಾತಿದೂರದೊಳಿರುವ ನಿಮ್ನಗಾಪ್ರವಾಹದೊಳು ಅರ್ಧೋದಕದಲ್ಲಿರಿಸಿದಿರಾದೊಡೆ ಉತ್ತಮವಾದ ಗತಿಯಂ ಪಡೆವೆನೆಂದು ಪೇಳಿದ ತಂದೆಯಂ ನೋಡಿ ನಾಲ್ವರೊಂದಾಗಿ ಪಿತನಂ ಪೊತ್ತುಕೊಂಡು ತರಂಗಿಣೀ ಪ್ರವಾಹದೊಳು ಅರ್ಧೋದಕದೊಳಿರಿಸಿಬಿಡಲು ಪಿಕಶರೀರಿಯಾದ ರಾಜಕುಮಾರನು ಈ ಗೃಧ್ರನು ಯಾರೊ ಉತ್ತಮಪುರುಷನು ಪ್ರಾರಬ್ಧವಶಾದೀನೀಚಶರೀರಮಂ ಧರಿಸಿದ್ದನೀಶ್ವರಾನುಗ್ರಹಕಾಲಬಂದೊದಗಿತದರಿಂದ ಈತನ ನಿರ್ಯಾಣಮಂನೋಡಿ ಮುಂದಿನ ಕಾರ್ಯವ ಯೋಚಿಸುವೆನೆಂದು ನಿಶ್ಚಯಮಾಡಿ ತತ್ಸಮೀಪದೊಳಿರುವ ರಸಾಲದ್ರುಮ ಮಂದಮಾರುತಮಂದಾಂದೋಳಿತ ಶಾಖಾಗ್ರದೋಲಾ ವಿಹಾರದಿಂದುತ್ಪನ್ನವಾದ ತಚ್ಛರೀರಾನುಗುಣ ಪರಮಾಂಪನಲುಳ್ಳವನಾಗಿ ನೋಡುತಿರಲು, ಆ ವೃದ್ಧನಪೇಕ್ಷಿತೋದಕಪಾನವಂ ಮಾಡಿ ಪುತ್ರರಂ ಕರದು ಇಲ್ಲಿಂದ ಮುಂದೆ ಒರ್ವರಾಗಿ ಸಂಚರಿಸಬ್ಯಾಡಿ ಸ್ವಸ್ಥಾನವಂ ಬಿಟ್ಟು ಸ್ಥಾನಾಂತರಮನಪೇಕ್ಷಿಸಬ್ಯಾಡಿ ಸ್ವಜಾತೀಯವರಿಂಗೆ ಸ್ಥಳವಂ ಕೊಡಬ್ಯಾಡಿ ನಿಮಗಿಂತಧಿಕರೊಡನೆ ದ್ವೇಷಮಂ ಮಾಡಬ್ಯಾಡಿ ಬುದ್ಧಿವಂತರ ವಾಕ್ಯವನುಲ್ಲಂಘಿಸಬ್ಯಾಡಿ ಅನುಚಿತಕಾರ್ಯಾರಂಭವಂಮಾಡಬ್ಯಾಡಿ ವಿಶೇಷ ಹೇಳುವುದೇನು ಸ್ವಧರ್ಮದಲ್ಲಿ ನ್ಯೂನಾತಿರೇಕವಿಲ್ಲದಂತೆ ಯಿರಿ ಎಂದು ಪೇಳ

ಪುತ್ರನಂ ಸಮೀಪಕ್ಕೆ ಕರದು ಬಹುವಿಧ ವಿವೇಕವಂ ಪೇಳಿ ಎನುಗೊಂದು ಕುಲವಿದ್ಯೆವು ಉಂಟವಂ ಪೇಳುವೆ ಕೇಳಿರೆಂದು ಸ್ವಸ್ಥಾನದಲ್ಲಿರುವ ಸಂಧಾನಕರಣಿ ಎಂಬ ಮೂಲಿಕೆಯನ್ನುಪದೇಶವುಂ ಮಾಡಿ ಯಾರಿಗೂ ಹೇಳದಿರಿ ಹೋಗೆಂದು ಹರಸಿ ದೇಹವುಂಬಿಡಲು, ಪುತ್ರರು ಶೋಕಾವಿಷ್ಟರಾಗಿ ಪಿತನಿಂಗೆ ಸ್ವಜಾತ್ಯನುಗುಣವಾಗಿ ದೇಹಸಂಸ್ಕಾರವಂ ಮಾಡಿ ಸ್ವಗೃಹಕ್ಕೆ ಪೋಗಿ ಸುಖದಿಂ ಇರುತ್ತಿರಲು. ಪಿಕ ಶರೀರನಂಧರಿಸಿರುವ ರಾಜಕುಮಾರನು ಗೃದ್ಧ್ರಚತುಷ್ಟಯವೂ ಪೇಳುವ ಕಥೆಯುಂ ಕೇಳಿ ಸಂಧಾನಕರಣಿಯುಂ ತಿಳಿದು ಈ ಪಿಕ ಕಳೇಬರಸ್ವೀಕಾರಮಾಡಿದುದು ಮಹತ್ಕಾರ್ಯಸಾಧನವಾದುದೆಂದು ತನ್ನೊಳು ತಾನೆ ಸಂತೋಷಭರಿತನಾಗಿ ಇರುತ್ತಿರಲು. ಉಪರಿಸುರತದಿಂ ಕೆದರಿದ ಮುಂಗುರುಳ ತಿದ್ದುವ ದಿಗಂಗನೆಯ ಮುಖಾರವಿಂದವಂತೆ ಸೂರ್‍ಯೋದಯವಾಗುತ್ತಿರಲು, ಸ್ವಶರೀರವೇನಾದುದೊ ನೋಡಬೇಕೆಂದು, ಕಾಯವಿದ್ದೆಡೆಗೆ ಬಂದು ನೋಡಿ ಕಾಣದೆ ಮಹಾ ಚಿಂತಾಯುಕ್ತನಾಗಿ ಒಂದೂ ತೋರದೆ ಏನಾದರಾಗಲೀ ಧಾನ್ಯಮಾಲಿನೀ ಏನಾಗಿರುವಳೋ ನೋಡಬೇಕೆಂದು ಮಿಥಿಲಾಪುರಿಯಂ ಪೊಕ್ಕು ಧಾನ್ಯಮಾಲಿನಿಯ ಅಂತಃಪುರ ಪ್ರವೇಶವಂ ಮಾಡಿ ನಿದ್ರಾಹಾರವಿಲ್ಲದೆ ಅತಿ ಕೃಶಳಾಗಿ ದೈನ್ಯದಿಂ ರೋದನಮಾಡುತ್ತಾ ಕುಳ್ಳಿರುವ ಧಾನ್ಯಮಾಲಿನಿಯ ತೊಡೆಯಮೇಲಿರುವ ತನ್ನ ಶರೀರವುಂ ಕಂಡು ಹರುಷಿತನಾಗಿ ಶರೀರವೇನಾದುದೋ ಎಂದು ಯೋಚಿಸುತ್ತ ಆಕೆಯ ಕ್ಲೇಶವಂ ನೋಡಿ ಪರಮದಯಾರ್ದ್ರ ಹೃದಯನಾಗಿ ಉಪರಿಭಾಗದಲ್ಲಿ ಅವಳೆದುರ್ಗೆ ಬಂದು ಕುಳಿತು ದೀನಸ್ವರದಿಂದ ತಾನು ಧ್ವನಿಮಾಡುತಿರಲು, ಅದಂ ಕಂಡು ಧಾನ್ಯಮಾಲಿನಿಯು ನಿಜದುಃಖವುಂ ಮರೆದು ಅರಣ್ಯದಲ್ಲಿರುವ ಕೋಗಿಲೆಯು ಗ್ರಾಮಕ್ಕೆ ಬರುವುದೇ ದುರ್ಲಭವು ಅಥವಾ ಪ್ರವೇಶಮಾಡಿದಡೆಯುಂ ಮನುಷ್ಯರಿದ್ದೆಡೆಗೆ ಬರುವುದು ದುರ್ಲಭವು ಅಥವಾ ಬಂದಡೆಯು ದೈನ್ಯಸ್ವರದಿಂದ ಕೂಗುವುದು ದುರ್ಲಭವು ಅಥವಾ ಕೂಗಿದಡೆಯು ಚಿರಕಾಲವಿರುವುದು ದುರ್ಲಭವು ಅಥವಾ ಇದ್ದಡೆಯುಂ ನಿರ್ಭಯದಿಂದಿರುವುದು ದುರ್ಲಭವು ಇದೇನೆಂದು ಕಾರಣವೇನೆಂದುಭಯವುಂ ತೋರಿಸಿ ನಿರ್ಭಯದಿಂದಿರಲು,

ಅವಂ ಕಂಡು ಪರೀಕ್ಷೆಯಂ ಮಾಡಬೇಕೆಂದು ತೊಡೆಯಮೇಲಿದ್ದ ಶಿರವಂ ಪೀಠವಮೇಲಿರಿಸಿ ತಾನು ಮರೆಯಾಗಲು ಪಿಕನೋಡಿಬಂದು ಆ ಶಿರಸ್ಸಿನಮೇಲೆ ಬಿದ್ದು ದೈನ್ಯಸ್ವರದಿಂದ ಹೊರಳುತ್ತಿರಲು. ಆ ಧಾನ್ಯಮಾಲಿನಿಯು ಪಿಕನಂ ಹಿಡಿದು ಕಾರಣಮಂ ಕೇಳುವೆನೆಂದು ಅತಿತ್ವರೆಯಿಂ ಬರಲದಂ ಕಂಡು ಪಿಕನೋಡಿಹೋಗಿ ಯಥಾಸ್ಥಾನದಲ್ಲಿ ಕುಳಿತು ವೃಥಾ ಕಾಲಹರಣ ಮಾಡಿದಡೆ ಫಲವಿಲ್ಲ ಈ ಧಾನ್ಯಮಾಲಿನಿಯು ಸಾವಕಾಶವಾದೊಡೆ ಪ್ರಾಣವನ್ನಿರಿಸುವದಾಗಿ ಕಾಣುವುದಿಲ್ಲ ಈ ತಿರ್ಯಕ್ಶರೀರದಲ್ಲಿದ್ದಡೆ ಮುಂದಣ ಕಾರ್ಯಸಾಧನವಾಗುವದಿಲ್ಲವೆಂದು ನಿಶ್ಚಯಮಾಡಿ ಅಲ್ಲಿಂದ ಹೊರಟು ದೇಹಾಂತರವಂ ನರಸುತ್ತ ನಗರಾದ್ಬಹಿರ್ಭಾಗದಲ್ಲಿ ಸಂಚಾರಮಾಡುತ್ತಿರಲು. ಗ್ರಾಮಾಂತರದಿಂದ ಬಂದಿರುವ ನೋರ್ವ ರಜಕನು ಅನಾಥನಾಗಿ ರೋಗೋಪದ್ರವದಿಂದ ಪೀಡಿತನಾಗಿ ಪ್ರಾಣೋತ್ಕ್ರಮಣಯಾತನಾನುಭವವಂ ಮಾಡುತ್ತಿರಲು, ಅವನಂ ಕಂಡು ಕಾಲನಿರೀಕ್ಷಣವಂ ಮಾಡುತ್ತ ಕುಳ್ಳಿರಲು, ಕಾಲಪ್ರಾಪ್ತವಾಗಲಾರಜಕನಂ ಯಮಾನುಚರರು ಕೊಂಡೊಯ್ಯಲು, ರಾಜಕುಮಾರನಾ ಪಿಕಶರೀರವಂ ಬಿಟ್ಟು ಆ ರಜಕನ ಶರೀರವಂ ಪ್ರವೇಶಮಾಡಿ ತತ್ಕ್ಷಣವೊಳಲ್ಲಿಂದ ಹೊರಟು ತಾನು ಪೂರ್ವದಲ್ಲಿದ್ದ ವೃದ್ಧಬ್ರಾಹ್ಮಣೀನಿಲಯಕ್ಕೈತಂದು ಆ ಮುದಕಿಯಂ ಕೂಗಿ ಕರೆದು ನಿಮ್ಮ ಮನೆಯೊಳಗಿದ್ದ ರಾಜಕುಮಾರನೆಲ್ಲೆಂದು ಕೇಳಲು ಆ ಅಜ್ಜಿಯು ನೀನ್ಯಾರೆಂದು ಕೇಳಲು, ಆ ರಜಕನು ತಾನು ರಾಜಕುಮಾರನ ದೂತ ಕಾರ್ಯಗೌರವದಿಂದ ಕಳುಹಿದ್ದನಾ ಕಾರ್ಯಮಂ ಸಾಧಿಸಿಕೊಂಡು ಬಂದಿರುವೆನು ಅತನೆಲ್ಲಿರುವನೊ ತೋರಿಸೆಂದು ಘರ್ಜಿಸಲು, ಅಜ್ಜಿಯು ತಾನು ಕಾಣೆನೆಂದು ವಾದಿಸುತ್ತಿರಲು. ಇತ್ತಲಾ ಧಾನ್ಯಮಾಲಿನಿಯು ಪಿಕನು ಪ್ರಳಾಪಮಾಡಿದುದಂ ಮುಖಮಂ ಚುಂಬನಗೈದು ನೆಲನಮೇಲೆ ಬಿದ್ದು ಹೊರಳಿದುದಂ ಕಂಡು ವಿಸ್ಮಿತಳಾಗಿ ಕಾರಣಮಂ ಚಿಂತಿಸಿ ಸ್ವಮನೀಷಾವಿಶೇಷದಿಂ ನಿಶ್ಚಯಮಾಡಿ ದೂತಿಯರಂ ಕರೆದು ಸಹಸ್ರಾಯುವಿಳಿದಿದ್ದ ವೃದ್ಧಬ್ರಾಹ್ಮಣೀ ಮನೆಗೆ ಹೋಗಿ ಆ ಮುದುಕಿಯಂ ಸತ್ವರದಿ ಕರೆತರುವುದೆನಲು. ಆ ದೂತಿ ಹೋಗಿ ಕರೆತರಲು, ರಾಜಕುಮಾರಿಯಾ ಮುದುಕಿಯಂ ಕರೆದು ನಿನಗೆ ಯಥಾ

ಭಿಲಷಿತದ್ರವ್ಯವಂ ನೀವೆ ತೆಗದುಕೊಂಡು ಯಥಾರ್ಥವಂ ಪೇಳುವಿರಾ ಮೃಷಾವಾದವಮಂ ಮಾಡಿ ಮರಣಮಂ ಸೈದುವಿರಾ ಎಂದು ಕೇಳಲು, ಆ ಮುದುಕಿಯು ಗಡಗಡನೆ ನಡುಗಿ ಕನಕಾಂಗಿಯ ಮಧ್ಯಸ್ತ್ಯದಿಂದ ತನಗೆ ಇನ್ನೂ ಏನೇನಾಗುವದೋ ಕಾಣೆನೆಂದು ಮನದೊಳಾಳೋಚನೆಯುಮಾಡಿ ರಾಜಕುಮಾರಿಯಂ ಕುರಿತು ಯಥಾರ್ಥವಾಗಿ ತಾಯೆ ಪೇಳುವೆನೆಂದು ವಂದನೆಯಂ ಮಾಡಲು. ಧಾನ್ಯಮಾಲಿನಿಯು ಸಹಸ್ರಾಯುವೆಲ್ಲಿ ಪೋದನೆಂದು ಕೇಳಲು. ಆಮುದುಕಿಯು ತನ್ನಾಲಯಮಂಬಿಟ್ಟು ಪೋದನಂತರದಲ್ಲಿ ಆತನ ವೃತ್ತಾಂತಮಂ ತಾನರಿಯೆನೆಂದು ಪೇಳಲು, ಧಾನ್ಯಮಾಲಿನಿಯುದಂಕೇಳಿ ಮುದಕಿಯಂ ಕುರಿತು ಆದರೇನಾಯ್ತು ಸಹಸ್ರಾಯು ನಿನ್ನಾಲಿಯದೊಳಿರುವಲ್ಲಿ ಬಂದು ಪಿಕಮಂ ಪೋಷಿಸುತ್ತಿದ್ದನದೇನಾದುದೆಂದು ಕೇಳಲು ಆ ಮುದುಕಿ ಪಿಕನಂ ತಾನರಿಯೆ ಆತನ ದೂತನೆಂದೋರ್ವನಿಂದು ಬಂದೆನ್ನಾಲಯದೊಳಿರುವನೆಂದು ಪೇಳಲು. ರಾಜಕನ್ನೆಯದಂ ಕೇಳಿ ಸತ್ವರದೊಳೋರ್ವ ದೂತಿಯಂ ಕರೆದು ದೂತಿಯಂ ಮುದುಕಿಯೊಡನಿತ್ತು ತ್ವರೆಯಿಂದಾದೂತನಂ ನೀಕೆಯೊಡನಿತ್ತು ಕಳುಹೆಂದಪ್ಪಣೆಗೊಡಲು, ಆ ಮುದುಕಿಯು ಜವದಿಂ ತನ್ನಾಲಯದೊಳಿರುವ ದೂತನನ್ನಾಕೆಗೆ ತೋರಲು. ಆ ದೂತನಂ ಕರದುಕೊಂಡು ರಾಜಕುಮಾರಿ ಎಡೆಗೆ ಬಳಲು ಧಾನ್ಯಮಾಲಿನಿಯು ದೂತನಂ ಕುರಿತು ನೀನ್ಯಾರೆಂದು ಕೇಳಲು. ಆ ದೂತನು ತಾನು ರಾಜಕುಮಾರನ ಪ್ರೇಷ್ಯನೆಂದು ಪೇಳಲು. ಧಾನ್ಯಮಾಲಿನಿಯು ಆತನಿಗೆ ಶಿರಮಂ ತೋರಿ ಹಾಗಾದಡೀತನ್ಯಾರೆಂದು ಕೇಳಲು ಆ ಶಿರಮಂ ಕಂಡು ಯತ್ಕಿಂಚಿತ್ಸಂಶಯಾಭಿನಯಮಂ ಮಾಡಿ ಧಾನ್ಯಮಾಲಿನಿಯಂ ಕುರಿತು ಈತನ್ಯಾರೊ ಕಾಣೆ ನೋಡಿದಡೆ ಸಾಮ್ಯದಿಂ ಸಹಸ್ರಾಯುವಿಗೆ ಸರಿಎಂದು ತೋರುತ್ತಲಿಧೆ ಕಾಯಮಿದ್ದಡೆ ಕುರುಹು ಉಂಟೆಂದು ಪೇಳುವ ದೂತನ ಮಾತಂ ಕೇಳಿ ಧಾನ್ಯಮಾಲಿನಿಯು ದೂತನ್ನನಲ್ಲಿರಿಸಿನಂತೆ ಪೇಳಿ ದೂತಿಯೋರ್ವಳಂ ಕರೆದು ಪಿತನೆಡೆಗೆ ಪೋಗಿ ಸಹಸ್ರಾಯುವಿನ ಕಾಯಮಂ ತರಿಸಿದೊಡೆ ಮರಣಮಂ ನಿಶ್ಚೈಸುತಾತನಾಶೆಯುಂ ಬಿಟ್ಟು ಮುಂದಣಕಾರ್ಯಮಂ ಚಿಂತಿಸಬಹುದೆಂದರಸೆಯಂ ಮಾಡಿ ಬಾರೆಂದು ಕಳು

ಹಲು ಮಧುರಭಾಷಿಣಿಯು ರಾಯನೆಡೆಗೈತಂದು ಪ್ರೌಢಮಟ್ಟ ವಿಜ್ಞಾಪ ನೆಯಂ ಮಾಡಲು, ನರಪತಿಯುಮಂ ಕೇಳಿ ಇನಿತು ನುಡಿದುದೇ ಪರಮ ಲಾಭವೆಂದು ತಿಳಿದು ಶಿರಮಂ ತಂದ ದೂತನಂ ಕರೆಸಿ ನೀನು ಗುಹೆಯಲ್ಲಿ ಮರೆಮಾಡಿರುವ ರಾಜಕುಮಾರನ ಕಳೇಬರವ ನತ್ಯಂತ ಜವದಿಂದ ತರ ಬೇಕೆಂದು ಹೇಳಿ, ಮತ್ತೆ ಕೆಲವು ಮಂದಿ ಭಟರನಿತ್ತು ಚತುರಂತಯಾನ ಮನೀಯ್ಯಲು, ಅವರೈತಂದು ಗುಹೆಯೊಳಿಟ್ಟಿರುವ ಕಾಯಮಂ ನೋಡಿ ಜೀವಂತನ ಶರೀರದೋಪಾದಿಯಲ್ಲಿ ಕಂದಿ ಕುಂದಿ ದುರ್ಗಂಧಾದಿಗಳ್ ಈಷ ತ್ತೂ ಇಲ್ಲದೆ ಎಂದಿನಂತೆ ಇರುವ ಮುಂಡಮಂಡಮಂ ಕಂಡು ವಿಸ್ಮಿತರಾಗಿ ಚತುರಂತಯಾನದೊಳಿಟ್ಟು ತ್ವರೆಯಿಂ ನಡೆದು ನಗರಮನೈದಿ ರಾಯನ ದುರ್ಗೆ ತಂದಿರಿಸಿ ವಂದನೆಯಂ ಮಾಡಿ ಅಪ್ಪಣೆಗೊಂಡು ಆಚಾರನು ಮು ಖ್ಯಾಮಾತ್ಯನಲ್ಲಿ ಪೋಗಿ ವೃತಾಂತಮಂ ತಿಳಿಸಲು. ಅದಂ ಕೇಳಿ ಸಂ ತೋಷಚಿತ್ತನಾಗಿ ಕನಕಾಂಗಿ ಇದ್ದೆಡೆಗೆ ಪೋಗಿ ಮಗಳನೆತ್ತಿ ಮು ದ್ದಾಡಿ ನೀನು ಮಾಡಿದ ಸಾಹಸದಿಂದ ಸ್ವಕಾರ್ಯಫಲವಾಗುವಂತೆ ಕಾಣುತಲಿ ಥೆ ಎಂದು ಪೇಳಲು. ಕನಕಾಂಗಿಯದೇನೆಂದು ಕೇಳಲು, ಮಂತ್ರಿಯು ರಾಜಕುಮಾರಿಯು ಸಹಸ್ರಾಯು ಶರೀರವಂ ತರಿಸಿದಡೆ ಅವನ ಮರಣ ವ ನಿಶ್ಚೈಸಿ ಮುಂದಿನ ಕಾರ್ಯವಂ ಯೋಚಿಸುವೆನೆಂದು ಹೇಳಿ ಕಳುಹ ಲು. ನಾನು ಚಾರನಂ ಕರೆಸಿ ಕಾಯಮಂ ತರಹೇಳಲು ಅವನು ತಂದಿತ್ತೆ ನ್ನೊಡನೆ ಪೇಳಿ ಈಗ ತನ್ನಾಲಯಕೆ ಪೋದನೆಂದು ನುಡಿಯಲು ಕನಕಾಂ ಗಿಯು ತಂದೆಯಂ ಕುರಿತು ಧಾನ್ಯಮಾಲಿನಿಯು ಮರಣಮಂ ನಿಶ್ಚಯ ಮಾಡಿ ಮಹೀಶನ ಮನೋನುಸಾರಿಯಾಗುವಳು ಇನ್ನೇನು ಮಾಡ್ವಾ ಳೆಂದು ಪೇಳಿ ಈರ್ವರೂ ಪರಮಸಂತೋಷಪಡುತ್ತಾ ಮುಂದೆ ಬರುವ ಬಂಧನವನರಿಯದೆ ಇರುತಿರಲು. ವೀರವರ್ಮನಾ ಕಾಯಮಂ ನೋಡಿ ವಿ ಸ್ಮಿತನಾಗಿ ತದಂಗಸೌಷ್ಟವಮಂ ಮಾಹಾತ್ಮೆಯಂ ನೋಡಿ ಪಪೇ ಪದೇ ಮರುಗಿ ಬಹುವಿಧ ಕ್ಲೇಶಪಟ್ಟು ಸುತೆಯಡೆಗೆ ಕಳುಹಲು, ಆ ಧಾನ್ಯಮಾ ಲಿನಿಯು ಮಣಿಮಯಮಾದ ದಿವ್ಯಪರ್ಯಂಕದೊಳು ಹಂಸತೂಲಿಕಾತಲ್ಪವ ಹಾಸಿ ಅದರಮೇಲೆ ಆ ದಿವ್ಯದೇಹಮಂ ಮಲಗಿಸಿ ಶೀರ್ಷವಂ ಕಂಠಕ

ಳನಡಿಸಿ ದಿವ್ಯ ಸುಗಂಧಲೇಪನವಂ ಮಾಡಿ ಪತಿಯೆಂದುಪೇರನಾನುರಾಗವಂ ಮಾಡುತ್ತ ದೂತನಂ ಕರದು ಕಾಯುಮಂ ತೋರಿಸಲು. ಅವಂನೋಡಿ ಕುರುಹಂ ನೋಡುವನಂತೆ ಕ್ಷಣ ನಿದಾನಿಸಿನೋಡಿ ಧಾನ್ಯಮಾಲಿನಿಯುಂ ಪರೀಕ್ಷಿಸಬೇಕೆಂದು ಮನದೊಳಾಳೋಚನೆಯುಂ ಮಾಡಿ ಸಹಸ್ರಾಯು ವೀತನೇಸರಿ ಸಂಶಯುಮಿಲ್ಲವೆಂದು ಪೇಳಿ ಸ್ವಾಮಿ ಮರಣಮಂನೋಡಿ ಸಹಿಸಲಾರನವನಂತೆ ರೋದನವಂ ಮಾಡಲು ಅದಂ ಕಂಡು ಧಾನ್ಯಮಾಲಿ ಯು ಶೋಕಮೂರ್ಛಿತಳಾಗಿ ತನ್ನೊಳು ತಾನೆಚ್ಚತ್ತು ವೃಥಾ ಕಾಲಹರ ಣಮಂ ಮಾಡಿ ಫಲವೇನಿನ್ನು ಈ ಕಾಯದೊಡನೆ ಸಹಗಮನವಂ ಮಾಡು ವೆನೆಂದು ನಿಶ್ಚಯಮಾಡಿ ಕಾಯುಮಂನೆತ್ತಿಸಿಕೊಂಡು ಉದ್ಯಾನವನಕ್ಕೆ ಪೋಗಿ ಚಂದನೇಂಧನದಿಂದ ಚಿತಿಯುಂ ರಚಿಸಿ ಶವಸಹಿತನಾಗಿ ಚಿತ್ಯಾ ರೋಹಣಮಂ ಮಾಡಲು ಸಖೀಜನರು ಘೋರೆಂದು ಮೊರೆಯಿಡುತ್ತ ಬಹುಪ್ರಕಾರಮಾದ ಸಾಂತ್ವನನಂ ಪೇಳೆ ಕೇಳದಿರಲು, ದೂತನಾಗಿ ರುವ ರಾಜಕುಮಾರನು ಚಿತಿಯುದ್ದೆಡೆಗೆ ಪೋಗಿ ಧಾನ್ಯಮಾಲಿನಿಯಂ ಕು ರಿತು ಶಬ್ದಮಾತ್ರಕ್ಕೆ ವೃಥಾ ಪ್ರಾಣಮಂ ಕಳೆಯುವರೆ ರೂಪು ಯೌವನ ಐಶ್ವರ್ಯಂಗಳಿರುವಲ್ಲಿ ಅಸ್ಪೃಷ್ಟನಾದ ಪುರುಷಂಗೆ ಪ್ರಾಣಮಂನಿತ್ತಪರುಂ ಟೆ ಲೋಕದೊಳದರಿಂದ ವೃಥಾ ಮಾನುಷೀಜನ್ಮವಂವ್ಯರ್ಥಮಾಡಲಿಬ್ಯಾಡ ಸಹಸ್ರಾಯುವಿಂಗತಿಶಯುವಾದ ರೂಪು ಯೌವನ ಪರಾಕ್ರಮವುಳ್ಳ ರಾಜ ಕುಮಾರರನೇಕಮಂದಿಯಿಹರು ಈ ಮಹಿಯೊಳವರಲ್ಲಿ ಬೇಕಾದವರನಂ ಕರದುಕೊಂಡು ಬರುವೆನೆಂದು ಬಹುವಿಧವಾಗಿ ಸಾಂತ್ವವಚನಗಳಿಂದಲು ಬಹುವಿಧವಾದ ದೃಷ್ಟಾಂತಗಳಿಂದಲೂ ಸಮಾಧಾನವಂ ಮಾಡಲು ಅದಂ ಕೇಳಿಯುಳ್ಳನಿತಾದಡೆಯುಂ ಆದರಿಸದೆ ಅಗ್ನಿಪ್ರತಿಷ್ಟೆಯುಂಮಾಡೆ ತ್ವರೆ ಮಾಡಲು ಅದಂಕಂಡು ರಜಕತನುಧಾರಿಯಾದ ರಾಜಕುಮಾರನು ಇನ್ನು ಸಾವಕಾಶಮಾಡಿದಡೆ ಮೋಸಬಾರದಯಿರದೆಂದು ನಿಶ್ಚಯುಮಾಡಿ ಚಿತಿಯುಸ ಮೀಪಕ್ಕೆಪೋಗಿ ಧಾನ್ಯಮಾಲಿನಿಯು ಕುರಿತು ಎಲೈ ರಾಜಕುಮಾರಿಯೇ ಕೇಳು, ಅಗ್ನಿಪ್ರತಿಷ್ಟೆಯುಂ ಮಾಡದಿರು ನಿನ್ನಯಪತಿ ಬದುಕುವುದಕ್ಕೊಂ ದ್ಬುಪಾಯಮುಂಟು ಅದಂಪೇಳುವೆನೆಂದು ಕಿವಿಯೊಳುಸುಡಿಯಲು ರಾಜ

ಕುಮಾರಿಯು ಅಮೃತಪ್ರಾಶನಮಂ ಮಾಡಿದವಳಂತೆ ಸಂತೋಷಚಿತ್ತೆ
ಳಾಗಿ ಅಲ್ಲಿಂ ಸಖೀಜನರಂ ದೂರಕ್ಕೆಳುಹಿ ದೂತನಂ ಕುರಿತು ಉಪಾಯ
ಮೇನೆಂದು ಕೇಳಲು. ಆ ದೂತ ರೂಪಿಯಾದ ರಾಜಕುಮಾರನು ಚಿತೆಯಿಂ
ದಿಳಿದು ಬಂದರೆ ಪೇಳುವೆನೆನಲು ಧಾನ್ಯಮಾಲಿಯು ಪತಿಯು ಜೀವಿಸಿದಲ್ಲದೆ
ಚಿತೆಯಿಂದಿಳಿಯೆನೆಂದು ವಾದಿಸುತ್ತಿರಲು, ಅನಿತರೊಳಾ ಬಾಲ್ಯವಾಗಿ ರಾಜ
ಕುಮಾರಿ ಸಲಹುತ್ತಿದ್ದ ಶುಕವು ಪಂಜರದಿಂದ ಪೊರಟು ಧಾನ್ಯಮಾಲಿನಿಯಿ
ದ್ದೆಡೆಗೆ ಬಂದು ಚಿತಾರೋಹಣಮಂ ಮಾಡಿರುವವಳಂ ನೋಡಿ ಬಹುಕ್ಲೇ
ಶದಿಂ ನಾನಾ ಪ್ರಕಾರವಾಗಿ ಮಧುರೋಕ್ತಿಗಳಿಂದ ಸಮಾಧಾನಮಾಡಲ
ದಂ ಕೇಳದಿರಲಾ ಶುಕನು ಪತಿಶೋಕದಿಂದೀ ರಾಜಕುಮಾರಿಯು ಶರೀರಮಂ
ಬಿಡುವಳೆಂಬರ್ಥಮಂ ನಿಶ್ಚೈಸಿ ಈಕೆಯು ಪ್ರಾಣಮಂ ಕಳೆಯುವದಕ್ಕೆ ಮು
ನ್ನಲೆ ತಾನು ಪ್ರಾಣಮಂ ಬಿಡುವೆನೆಂದು ದೊಡ್ಡದಾದೊಂದು ವೃಕ್ಷವನ್ನೇ
ರಿ ಅಲ್ಲಿಂದ ಬಿದ್ದು ಪ್ರಾಣಮಂ ಬಿಡಲು, ತತ್ಕಾಲದಲ್ಲಿ ರಜಕಶರೀರಮಂ ಧರಿಸಿ
ರುವ ರಾಜಕುಮಾರನು ಧಾನ್ಯಮಾಲಿನಿಯ ಧೈರ್ಯಸ್ಥೈರ್ಯಪಾತಿವ್ರತ್ಯ
ಪತಿಭಕ್ತಿಯಂ ನೋಡಿ ಮೆಚ್ಚಿ ಇಂತಪ್ಪ ಸತಿಯಂ ಪರಿಗ್ರಹಿಸದೆ ಬಿಡಕೂಡ
ದೆಂದು ದಯೆಯುಳ್ಳವನಾಗಿ ಧಾನ್ಯಮಾಲಿನಿಯಂ ಕುರಿತು ಎಲೈ ಮಾನಿನಿ
ಯೆ ಕಾತರಪಡಬ್ಯಾಡ, ನಿನ್ನಯ ಪತಿ ಎದ್ದು ಬರುವಂತೆ ಮಾಡುವೆನೆಂದು
ನುಡಿದು ಮನದಲ್ಲಿ ಉತ್ತಮವಾದ ಮಹಾಮಂತ್ರಮಂ ನಿಜಶರೀರದಿಂದು
ಪದೇಶಮಾಡಕೂಡದೆಂದು ನಿಶ್ಚಯಮಾಡಿ ಆ ರಜಕಶರೀರಮಂ ಬಿಟ್ಟು
ಪೂರ್ವಕ್ಷಣದಲ್ಲಿ ಮೃತವಾದ ಶುಕಶರೀರವು ವೃಕ್ಷಮೂಲದಲ್ಲಿ ಬಿದ್ದಿ
ರಲು ಅದರಲ್ಲಿ ಪ್ರವೇಶಮಾಡಿ ಸುಪ್ತೋತ್ಥಿತನಂತೆ ಎದ್ದು ಧಾನ್ಯಮಾಲಿನಿ
ಯಂ ಕುರಿತು ನಿನ್ನಯ ಪತಿ ಜೀವಿಸುವದಕ್ಕೌಷಧಮಂ ತರುವೆ ಸಾವ
ಧಾನಮಂ ಮಾಡೆಂದು ಪೇಳಿ ಗೃಧ್ರವಾಕ್ಯಮಂ ಸ್ಮರಿಸಿ ಸಂಧಾನಕರಣಿ
ಯಂ ತರತ್ತೋಸುಗ ಪೋಗಲು. ಧಾನ್ಯಮಾಲಿನಿಯು ದೂತನುಪಕ್ರಮಿ
ಸಿ ಮೃತವಾದನುಡಿಯಂ ಮೃತನಾದಶುಕನೆದ್ದು ಪೋರ್ತಿಯಂ ಮಾಡಿ
ಪೋದುದಂ ಕೇಳಿ ನೋಡಿ ಪರಮಾಶ್ಚರ್ಯಭರಿತಳಾಗಿ ಮುಂದೇನಹುದೋ
ನೋಡಬೇಕೆಂದು ನಿರೀಕ್ಷಿಸುತ್ತಿರಲು, ಮಧುರಭಾಷಿಣಿಯೆಂಬ ಧಾನ್ಯಮಾ

ಶಿನಿಯು ದೂತಿಯು ಜವದೊಳು ತಾಯನೆಡೆಗೈತಂದು ಅದುವರಿಗೆ ನಡೆದ ವೃತ್ತಾಂತವೆಂತಿಳಿಸಲು ಕೇಳಿವಿಸ್ಮಿತನಾಗಿ ರಹಸ್ಯದಿಂದ ಪತ್ನಿಯಿಂದಲೂ ಇನ್ನೂಕೆಲವುಮಂದಿ ವೃದ್ಧಾಮಾತ್ಯರಿಂದಲೂ, ದ್ವಿಜೋತ್ತಮರಿಂದಲೂ ಯುಕ್ತನಾಗಿಬಂದು ಎಲ್ಲರೂ ಪ್ರಚ್ಛನ್ನರಾಗಿ ನೋಡುತ್ತಿರಲು. ಶುಕನ ತಿತ್ವರೆಯಿಂ ಸಂಧಾನಕರಣಿಸಿದ್ದೆಡೆಗಪ್ಪೋಗಿ ತುಂಡದಿಂ ಕಿಂಚಿತ್ಸಂಗ್ರಹಿಸಿಕೊಂಡು ಜವದಿಂದಬಂದು ಧಾನ್ಯಮಾಲಿನಿಯಂ ಕುರಿತು ಇದಕೊಸಂಧಾನಕರಣಿ ಎಂದಾಕೆಯ ಕರದೊಳಿತ್ತು ಪತಿಯಕಂಠಸ್ಪರ್ಶವಂಮಾಡಿಸೆಂದು ಪೇಳಲು ಧಾನ್ಯಮಾಲಿನಿಯು ಪೂರ್ವಾನುಭವಮಂಸ್ಮರಿಸಿಕೊಂಡು ಪರೀಕ್ಷೆಯಂಮಾಡಬೇಕೆಂದು ಸಹಸ್ರಾಯುವಿನ ಶಿರೋಮುಂಡಮಂ ಯಥಾಪೂರ್ವವಾಗಿ ವ್ಯತ್ಯಾಸಬಾರದಂತೆ ಸಂಧಾನಮಂಮಾಡಿ ಶುಕನು ತುಂಡದಿಂತಂದಿತ್ತ ಗುಳಿಕೆಯಂ ಪತಿಯಕಂಠಸ್ಪರ್ಶಮಂ ಮಾಡಿಸಲುತ್ತರಕ್ಷಣದೊಳಿಂದಿನಂತಾಗಲದಂಕಂಡು ಶುಕವಾಣಿ ಪರಮಸಂತೋಷದಿಂ ಪತಿಯು ಎದ್ದು ಬರುವನೆಂದು ನಿಶ್ಚೈಸಿ ಶುಕನಂ ನೋಡಲು ಶುಕರೂಪಿಯಾದ ರಾಜಕುಮಾರನು ಧಾನ್ಯಮಾಲಿನಿಯಂ ಕುರಿತು ಪತಿಯಪ್ರಾಣಬರಬೇಕೆಂಬಪೇಕ್ಷೆಯುಳ್ಳಡೆ ಸತ್ವರದಿ ಮಂಗಳ ಸ್ನಾನಮಂಮಾಡಿ ಮಡಿಯುಟ್ಟು ಬಾರೆಂದು ನುಡಿಯಲು ಧಾನ್ಯಮಾಲಿನಿಯು ಪೂರ್ವಾನುಭವಮಂನೆನಸಿಕೊಂಡುಚಿತಿಯಿಂದಿಳಿದು ನಿರ್ಮಲೋಕದಲ್ಲಿ ಸ್ನಾನಮಂಮಾಡಿ ಮಡಿಯುಟ್ಟು ಶುಕನಿದ್ದೆಡೆಗೆ ಪೋಗಲು, ಆ ಶುಕರೂಪಿಯಾದ ಸಹಸ್ರಾಯು ಪರಮದಯೆಯಿಂದಾಕೆಯ ದಕ್ಷಿಣಕರ್ಣದೊಳಾಕ್ಷಣದಿ ಮೃತಸಂಜೀವಿನೀಮಂತ್ರಮಂ ಉಪದೇಶಮಾಡಲು, ರಾಜಪುತ್ರಿಯದಂದೃಢಮಾಡಿಕೊಂಡು ಆ ದಿವ್ಯಮಹಾಮಂತ್ರದಿಂ ಪವಿತ್ರೋದಕಮನ್ನಭಿಮಂತ್ರಿಸಿ ಸಹಸ್ರಾಯುವಿನ ಶರೀರದ ಮೇಲೆ ಪ್ರೋಕ್ಷಣೆಯಂಮಾಡಲು ರಾಜಕುಮಾರನಾ ತಕ್ಷಣದಲ್ಲಿ ಶುಕಶರೀರಮಂ ಬಿಟ್ಟು ಸ್ವಶರೀರಮಂ ಪ್ರವೇಶಮಾಡಿ ಸುಪ್ತೋತ್ಥಿತನಂತೆದ್ದು ಚಿತಿಯಿಂಧುಮುಕಿ ಧಾನ್ಯಮಾಲಿನಿಯಂಗಮಂ ನಾಲಿಂಗಿಸಿ ಮೆಚ್ಚಿದೆನು ನಿನ್ನಡುಭಕ್ತಿಗೆಂದು ಬಹುಪ್ರಕಾರವಾಗಿ ಶ್ಲಾಘನೆಯಂ ಮಾಡಲು. ಧಾನ್ಯಮಾಲಿನಿಯು ಲಜ್ಜಿತಳಾಗಿ ತಲೆವಾಗಿ ಮೌನದಿಂ ನಿಂದಿ

ರಲು. ಆಕೆಯ ಗಾಂಭೀರ್ಯಮಂ ನೋಡಿ ಗಲ್ಲಮಂಪಿಡಿದು ಮುದ್ದಾಡಿ ಲಜ್ಜೆಯಂಬಿಡೆಂದು ಪ್ರಾರ್ಥನೆಯಂಮಾಡಿ ತನ್ನೊಡನೆ ಮಾತಾಡೆಂದು ಬಹು ವಿಧದ ಬೇಡಿ, ಆಕೆಯಿಂದೊಡಗೂಡಿ ಅಂತಃಪುರಕ್ಕೆ ಪೋದನು.

ಸಪರಿವಾರನಾದ ಮಹೀಪತಿಯು ಈ ಅತ್ಯದ್ಭುತ ವ್ಯಾಪಾರಮಂ ನೋಡಿ ವಿಸ್ಮಿತನಾಗಿ ಇದೇನೋ ಮಹದಾಶ್ಚರ್ಯಮೆಂದು ನೋಡುತ್ತಿರಲು. ಸಹಸ್ರಾಯುವು ಪುನಃ ಧಾನ್ಯಮಾಲಿನಿಯಿಂದ ಪ್ರಾರ್ಥಿತನಾಗಿ ವಿದ್ಯಾಪ್ರಭಾವದಿಂ ಮೃತನಾದ ಶುಕನನ್ನುಜ್ಜೀವನ ಮಾಡಲು, ಶುಕನೆದ್ದು ರಾಜಕುಮಾರನಂ ಬಹುವಿಧ ಸ್ತೋತ್ರಮಂ ಮಾಡಿ, ನರಪತಿಯೋ ಪೊದ ಲಾದವರು ಈತ ಮಾನುಷನಲ್ಲ ಸಾಕ್ಷಾದಿಂದ್ರನೋ, ಸ್ಕಂದನೋ, ಚಂದ್ರನೋ ಕಾಣಕೂಡದೆಂದು ಪೊಗಳುತ್ತಾ ತನ್ನಾಲಯಕ್ಕೆ ಪೋದನು. ಸಹಸ್ರಾಯುವು ಧಾನ್ಯಮಾಲಿನಿ ಸಹಿತ ದಿವ್ಯೋದಕದಲ್ಲಿ ಮಂಗಳಸ್ನಾನಮಂ ಮಾಡಿ ಪೀತಾಂಬರಗಳನ್ನುಟ್ಟು ಶಬ್ದದೋಷನಿವೃತ್ಯರ್ಥವಾಗಿಪುರೋಹಿತ ಪ್ರಮುಖರಾದ ದ್ವಿಜೋತ್ತಮರುಕರಸಿ ಬಹುವಿಧ ದಾನಧರ್ಮಗಳಂ ಮಾಡಿದನು. ಸಹಸ್ರಾಯು ಪುನರುಜ್ಜೀವಿತನಾದನೆಂಬ ವಾರ್ತೆ ನಗರಮಂ ತುಂಬಿ ಮಹಾ ಮಹೋತ್ಸವಯುಕ್ತರಾಗಿರುತಿರಲು. ಮುಖ್ಯ ಪ್ರಧಾನನು ತತ್ತನುಜಾತೆಯಾದ ಕನಕಾಂಗಿಯು ಮಹದ್ವ್ಯಸನಯುಕ್ತರಾಗಿ ಮುಂದೇನುಗತಿ ಎಂದಚೇತನವಾಯ್ಯರಾಗಿ, ಇತಿಕರ್ತವ್ಯತಾಬುದ್ಧಿಶೂನ್ಯರಾಗಿ ಯೋಚಿಸುತ್ತಿದ್ದರು.

ಅನಂತರದಲ್ಲಿ ಸಹಸ್ರಾಯುವು ಧಾನ್ಯಮಾಲಿನಿಯಿಂದ ಯುಕ್ತನಾಗಿ ದಿವ್ಯಷಡ್ರಸೋಪೇತವಾದ ಭೋಜನಮಂ ಮಾಡಿ ಶಯ್ಯಾಗೃಹಕ್ಕೆ ಪೋಗಿ ದಿವ್ಯಪರ್ಯಂಕದೊಳ್ಕುಳಿತು ತಾಂಬೂಲಚರ್ವಣಮಂ ಮಾಡಿ ಪರಸ್ಪರಾನುರಾಗದಿಂ ಕುಶಲಪ್ರಶ್ನೆಯಂ ಮಾಡೆ ಧಾನ್ಯಮಾಲಿನಿಯು ಮಂತ್ರಿಸುತೆಯಾದ ಕನಕಾಂಗಿಯಿಂನಡೆದ ಸಕಲಾನರ್ಥಮಂ ವಿಸ್ತಾರವಾಗಿ ಪತಿಗೆ ವಿಜ್ಞಾಪನೆಯಂ ಮಾಡಲು, ಸಹಸ್ರಾಯು ತಲೆದೂಗಿ ತಾನು ಸಕಲವೃತ್ತಾಂತಮಂ ಧಾನ್ಯಮಾಲಿನಿಗೆ ತಿಳಿಸಿ, ಕನಕಾಂಗಿ ಮಾಡಿದ ಮಹದ್ವಿಪತ್ತಿನೊಳ್ಮುಳುಗಿ ಪೂರ್ವಾರ್ಜಿತ ಕರ್ಮಾನುಗ್ರಹದಿಂದುದ್ಧೃತರಾದೆವೆಂದು ತಾನುಅಜ್ಞೀ

ಮನೆಗೆ ಬಂದುದುಪಕ್ರಮಿಸಿ ತತ್ಕಾಲಾವಧಿ ನಡದ ಸ್ವಾನುಭೂತವಾದ ಸಕಲವೃತ್ತಾಂತಮಂ ಎಳ್ಳನಿತುಬಿಡದೆ ಪೇಳಿ ಕನಕಾಂಗಿ ಯಾರೆಂದು ಕೇಳಲು, ಧಾನ್ಯಮಾಲಿನಿಯು ಕನಕಾಂಗಿಯ ವೃತ್ತಾಂತಮಂ ಸವಿಸ್ತಾರವಾಗಿ ತಿಳಿಸಿ ಅನ್ಯೋನ್ಯರಾಗಿ ವಿಸ್ಮಿತರಾಗಿ ಧಾನ್ಯಮಾಲಿನಿಯು ಪತಿಯಿಂದೊಡಗೂಡಿ ಸರ್ವಾಭರಣ ಭೂಷಿತಳಾಗಿ ಜನಕನಿದ್ದೆಡೆಗೆ ಬಂದು ಉರ್ವರಾಧಿಪನ ಸಮಕಾಲದಲ್ಲಿ ವಂದನೆಯಂಮಾಡಲು, ಆ ವೀರವರ್ಮರಾಯನಿವರಂ ನೋಡಿ ಪರಮಾನಂದ ವಾರಿಧಿಯಲ್ಲಿ ಮುಳುಗಿ ಉರ್ವರಂನೆತ್ತಿ ತೊಡೆಯಮೆಲಿರಿಸಿ ಮುದ್ದಾಡಿ ಸಹಸ್ರಾಯುವಿನ ವೃತ್ತಾಂತಮಂತಥ್ಯವಾಗಿಪೇಳೆಂದು ಸುತೆಯಂ ಕೇಳಲು, ಆ ಧಾನ್ಯಮಾಲಿನಿಯು ಜನಕನಂ ಕುರಿತು ಮಂತ್ರಿತನುಜಾತೆಯಾದ ಕನಕಾಂಗಿಯು ಸಹೋದರಾರ್ಥವಾಗಿ ಮಾಡಿದನರ್ಥಮಂ ವಿಸ್ತಾರವಾಗಿ ರಾಯನಡಿಗೆ ವಿಜ್ಞಾಪನೆಯಂ ಮಾಡಲು, ಆ ವೀರವರ್ಮರಾಯನು ಕುಮಾರಿನುಡಿದ ವೃತ್ತಾಂತಮಂ ಕೇಳಿ ಕ್ರೋಧಮೂರ್ಛಿತನಾಗಿ ಸಕಲಸಾಮಾಜಿಕರಂ ಪ್ರಧಾನರಂ ಭೂಸುರೋತ್ತಮರಂ ಕರೆಸಿ ವೃತ್ತಾಂತಮೆಲ್ಲಮಂನವರ್ಗೆ ರಾಯನು ವಿಸ್ತಾರವಾಗಿ ವರ್ಣಿಸಲು ಸಕಲರೂ ಕೇಳಿ ಪರಮ ವಿಸ್ಮಿತರಾಗಿ ಕರ್ಣಗಳೆರಡುಕೈಯಿಂಮುಚ್ಚಿ ಶಿವಶಿವಾ ಇಂತಪ್ಪದುರಾತ್ಮರಿಗೆ ಉಚಿತಶಿಕ್ಷೆಗಳೀಗಲೇ ಮಾಡಬೇಕೆಂದು ವಿಜ್ಞಾಪನೆಯಂ ಮಾಡಲು. ರಾಯನು ಪುತ್ರಮಿತ್ರ ಕಳತ್ರಪರಿವಾರ ಬಂಧು ಸೇನಾಜನರಿಂದ ಸಹಿತನಾದ ಮಂತ್ರಿಯಂ ತತ್ಸುತೆಯಂ ಸಭಾಮಂಟಪಕ್ಕೆ ಕರೆಸಿ ವೃದ್ಧಬ್ರಾಹ್ಮಣಿಯಂ ಸಹಸ್ರಾಯುವಿನ ಮೃತಿಯಂ ಬಂದೊರದ ದೂತನಂ ಕರಶಿ ವಿಚಾರಮಾಡಲು. ಅವರವರು ಮಾಡಿದ ಕೃತ್ಯಗಳನವರವರು ತಾವೆ ಪೇಳಲು, ಸಕಲಪುರಜನರು ಸಾಮಾಜಿಕರು ಮಂತ್ರಿಗಳು ಭೂಸುರೋತ್ತಮರುಗಳು ಕೇಳಿ ಸಕಲಜನರುಕಿವಿಗಳಮುಚ್ಚಿ ಅಕಟಕಟಾ ಯೇನುಸಾಹಸವೊ ಮಾನಿನಿಯರದೆಂದುವಿಸ್ಮಯಪಡಲು. ಮಹೀಪತಿಯು ಕ್ರೋಧಮೂರ್ಛಿತನಾಗೆಲ್ಲರಂ ಶೂಲಾರೋಹಣವ ಮಾಡಿಸುವಂತೆ ಆಜ್ಞಾಪಿಸಲು, ಸಹಸ್ರಾಯುವೆದ್ದು ಕೈಮುಗಿದು ಉಚಿತವಲ್ಲದು ಇವರ ಪ್ರಾಣಘಾತಮಾಡುವುದು ಯುಕ್ತವಲ್ಲವಾದ್ದರಿಂದ ಸರ್ವಸಮಂ

ನರಮನೆಗೆ ತೆಗೆದುಕೊಂಡು ಕಾರಾಗೃಹದೊಳಿರಿಸಬೇಕೆನಲು. ಆ ನರಪತಿಯುಂ ಕೇಳಿ ಆ ರಾಜಕುಮಾರನ ದಯಾಪರತ್ವಮಂ ಮನದೊಳಗೆ ಕೊಂಡಾಡುತ್ತಿರಲು. ಸಹಸ್ರಾಯುವು ಈ ಮಂತ್ರಿಯಾಲಯದೊಳಿರುವ ಖಡ್ಗಾಯುಧಮಂ ತರಿಸಬೇಕೆಂದು ವಿನಯದಿಂ ವಿಜ್ಞಾಪನೆಮಾಡಲು, ವೀರವರ್ಮರಾಯನು ಬೊಕ್ಕಸದಧಿಕಾರಿಯಂ ಕರದು ಸೇನಾಧಿಪತಿಯಂಕರೆಸಿ ಈ ಅಮಾತ್ಯಪಶಧನನಿಲಯಮಂ ಪೊಕ್ಕು ಸರ್ವಸ್ವಮಂ ಬೊಕ್ಕಸಮಂ ಸೇರಿಸುವದು, ಆ ದಿವ್ಯಮಹಾಖಡ್ಗಾಯುಧಮಂ ಗಜಸ್ಕಂಧದೊಳಿಟ್ಟು ಸಮಸ್ತ ವೈಭವದಿಂದ ನಗರದೊಳು ಬೀದಿಬೀದಿಗಳಲ್ಲಿ ಉತ್ಸವದಿಂದ ಮೆರಸಿ ತರುವುದೆಂದು ಪೇಳಲು, ಆ ಕೋಶಸೇನಾಧಿಕಾರಿಗಳು ಮಂತ್ರಿಯಾಲಯಕ್ಕೆ ಬಂದು ಕುಬೇರನಾಲಯದಂತಿರುವ ಸಂಪದನಂ ನೋಡಿ ಸಮಸ್ತವಸ್ತುಸಮಾಜವಂ ಕೋಶವಂ ಸೇರಿಸಿ ಕನಕಾಂಗಿಯಾಲಯದೊಳಿದ್ದ ಮಹಾನಿಸ್ತ್ರಿಂಶಮಂ ಮಹದುತ್ಸವದಿಂದ ಆಸ್ಥಾನಕ್ಕೆ ತರಲು, ಸಮಸ್ತ ಪುರಜನರು ನೋಡಿ ಆಶ್ಚರ್ಯಪಡುತ್ತಿರಲು, ಸಕಲ ಸಾಮಂತರಿಂದ ಸಹಿತನಾದ ನರಪತಿಯೇ ಮೊದಲಾದ ಸಮಸ್ತಜನರೆದ್ದು ನಿಸ್ತ್ರಿಂಶಕ್ಕೆ ವಂದನೆಯಂ ಮಾಡಲು,ನರಪತಿಯುಂ ಖಡ್ಗಮಂ ತನ್ನ ಹಸ್ತಗಳಿಂದೆತ್ತಿ ಈ ಮಹಾನಿಸ್ತ್ರಿಂಶದಿಂ ಸಕಲದಿಗ್ವಿಜಯಮಂ ಮಾಡೆಂದು ಹರಸಿ ಸಹಸ್ರಾಯುವಿಗೆ ಕೊಟ್ಟನು, ಆ ಸಹಸ್ರಾಯುವೆದ್ದು ವಂದನೆಯಂಮಾಡಿ ವಿನಯದಿಂ ಎರಡುಹಸ್ತದೊಳು ಖಡ್ಗಮನಾಂತು ಸಿಂಹಾಸನದೊಳ್ಕುಳಿತಿರಲು. ವೀರವರ್ಮರಾಯನು ರೋಷಯುಕ್ತನಾಗಿ ಸಹಸ್ರಾಯುವಿನ ನಿರ್ಬಂಧಮಂ ಮೀರಲಾರದೆ ಮಂತ್ರಿಯತತ್ಸುತನಂ ಕನಕಾಂಗಿ ಮಿಗಿಲಾದ ತತ್ಸಂಬಂಧಿಗಳಂ ಕಾರಾಗೃಹದೊಳಿರಿಸಿ ಬಹುನಿರ್ಬಂಧಮಂಮಾಡಿ ಅನಂತರದೊಳಖಿಳ ಅಮಾತ್ಯರಂ ಸಾಮಾಜಿಕರಂ ಕರದು ಪಟ್ಟಣಾಲಂಕಾರವೇ ಮೊದಲಾದ ಸಕಲ ವಿವಾಹಸನ್ನಾಹವು ದಿನತ್ರಯದೊಳಾಗಬೇಕೆಂದು ಕಟ್ಟಳೆಯಂಮಾಡಿ ಪತ್ನೀಸಹಿತನಾದ ಜಾಮಾತನಂ ಕರದುಕೊಂಡು ತನ್ನಸತಿಯ ಅಂತಃಪುರಕ್ಕೆ ಪೋಗಿ ವೃತ್ತಾಂತಮೆಲ್ಲಮಂ ಸವಿಸ್ತಾರವಾಗಿಪೇಳಲು, ಆ ರಾಜಪತ್ನಿಯುಂ ಕೇಳಿ ಆಶ್ಚರ್ಯಯುಕ್ತಳಾಗಿ ವಂದನೆಯಂಮಾಡಿದ ಸಹಸ್ರಾಯುವಂ ಸುತೆಯಂ ತಗ

ದಪ್ಪಿ ಮುದ್ದಾಡಿ ತನ್ನ ಪುಣ್ಯಕ್ಕೆಣೆಯಿಲ್ಲವೆಂದು ಸಂತೋಷಕಡಲೊಳಾಳಿ ಮುಳುಗಿಚಿತ್ರಾರ್ಪಿತಪ್ರತಿಮೆಯಂತೆ ನಿಶ್ಚಲಳಾಗಿರಲು. ನೃಪತಿಯುಪುತ್ರಿಯಂಕುರಿತು ಸತಿಯೆ ಕೇಳೀವರ್ನರಿಗೂ ಮಂಗಳಮಜ್ಜನವಂ ಮಾಡಿಸಿ ದಿವ್ಯದುಕೂಲಾಭರಣಗಳಿಂದಲಂಕಾರವಂ ಮಾಡೆಂದು ಪೇಳಿ ಪುರೋಹಿತ ಪ್ರಮುಖರಾದ ಭೂಸುರೋತ್ತಮರ ಕರಸಿ ತ್ವರೆಯಿಂದ ವಿವಾಹಲಗ್ನವಂ ನಿಶ್ಚಯಮಾಡಿ ದೇಹಾತ್ಮಬಂಧುಗಳಂ ಕರಸಿ ಸಮಸ್ತಮಹಿಪತಿಗಳ್ಗೆ ಲಗ್ನ ಪತ್ರಿಕೆಯಂ ಬರಸಿ ಕರಕೊಂಡು ಬರಲು ಬುದ್ಧಿಶಾಲಿಗಳಾದ ರಾಜಪುರುಷರಂ ಕರದು ಅವರಿಗುಡುಗರೆಯನಿತ್ತು ದೇಶದೇಶಕ್ಕೆ ಕಳುಹಿದನು. ಸಮಸ್ತದೇಶಾಧಿಪತಿಗಳು ಪರಮ ಸಂತೋಷದಿಂ ಬರಲು, ವೀರವರ್ಮರಾಯನು ಸಮಸ್ತವೈಭವದಿಂದ ವರಪೂಜಾ ನಾಂದೀಮೊದಲಾದ ಶುಭಕರ್ಮಂಗಳಂ ಯಥಾವಿಧಿಯಿಂದಾಚರಿಸಿ ಲಗ್ನವಂನಿರೀಕ್ಷಿಸಿ ಸಪ್ತಪ್ರಕೃತಿಗಳಿಂದ ಪರಿಪೂರ್ಣವಾದ ರಾಜಲಕ್ಷ್ಮಿಯಿಂಸಹಿತವಾಗಿ ಔರಸಪುತ್ರಿಯಾದ ಧಾನ್ಯಮಾಲಿನಿಯಂ ಕೋಸಲದೇಶಾಧಿಪತಿಯಾದ ಸುಶರ್ಮಮಹಾರಾಯನ ಜ್ಯೇಷ್ಠಪುತ್ರನಾದ ಸಹಸ್ರಾಯುವಿಂಗೆ ಧಾರೆಯನೆರದಿತ್ತು ಕ್ಷತ್ರಿಯವರ್ಣೋಕ್ತವಿಧಾನದಿಂ ವಿವಾಹಮಂಮಾಡಿ ವೃಷವಾಹನನ ದಯೆಯಿಂ ಕೃತಕೃತ್ಯನಾಗಿಷಡಾನನಂಗೆ ಪಟ್ಟಾಭಿಷೇಕವಂಮಾಡಿ ನಿರಾತಂಕನಾಗಿ ದೇವಸೇನಾಮಧ್ಯದಲ್ಲಿ ಪ್ರಕಾಶಮಾನನಾಗಿರುವ ಸುರಪತಿಯಂತೆ, ಸಕಲ ಭೂಭಾರವಂ ಗೌರೀವರಪುತ್ರನಾದ ಸಹಸ್ರಾಯುವಿನ ಅಧೀನಮಾಡಿ ಸಭಾಮಧ್ಯದಲ್ಲಿ ಪ್ರಕಾಶಿಸುತ್ತಿರುವ ವೀರವರ್ಮರಾಯನು ವಂದಿಮಾಗಧರು ಕೈವಾರಿಸುತ್ತಿರಲು. ತತ್ಕಾಲದೊಳು ಋಷಿಗಳಿಮೊದಲಾದ ಭೂಸುರೋತ್ತಮರು ಬಂದು ರಾಯನಂ ಬಹುಶ್ಲಾಘನೆಯಂಮಾಡಿ ಸಹಸ್ರಾಯುವಿಂಗೆ ವಿಸ್ತಾರವಾಗಿ ಆಶೀರ್ವಾದಗಳ ಮಾಡಲು, ಆ ರಾಯನು ಬಂದ ಋಷಿಗಳಂ ಭೂಸುರೋತ್ತಮರನ್ನು ಸತ್ಕರಿಸಿ ಷಡ್ರಸೋಪೇತವಾದ ಭೋಜನವಂ ಮಾಡಿಸಿ ಯಥಾಭಿಲಷಿತ ಧನ ಕನಕ ವಸ್ತ್ರ ಭೂಷಣಾದಿಗಳಂನಿತ್ತು ಅಪ್ಪಣೆಯಂನಿತ್ತು, ವಿವಾಹಾರ್ಥವಾಗಿ ಬಂದ ಸ್ವಜನರಿಂಗೆ ಪರಜನರಿಂಗೆ ಯಥೋಚಿತಸನ್ಮಾನಮಂ ಮಾಡಿ ಅಪ್ಪಣೆಯಿತ್ತು, ಅಮಾತ್ಯರೆ ಮೊದ

ಲಾದ ಸಕಲ ಸಾಮಾಜಿಕರಿಗೆ ಉಚಿತಬಹುಮಾನವಂ ಮಾಡಿ, ಸಕಲನರಪತಿಗಳಿಂಗೆ ಧನಕನಕವಸ್ತುವಾಹನಾದಿಗಳನಪರಿಮಿತವಾಗಿತ್ತು ಸತ್ಕರಿಸಿ, ಅವರು ಮುಂತಾಗಿ ಸಹಸ್ರಾಯುವಿಂಗೆ ಪಟ್ಟಾಭಿಷೇಕವಂ ಮಾಡಿ ಪೃಥ್ವೀಪತಿಗಳಂ ಸ್ವಸ್ಥಾನಕ್ಕೆ ಕಳುಹಿ ತಾನು ನಿರಾತಂಕನಾಗಿ ಸುಖದಿಂದಿರಲು.

ಸಹಸ್ರಾಯುವು ಪತ್ನಿಯಾದ ಧಾನ್ಯಮಾಲಿನಿಯಿಂದೊಡಗೂಡಿ ಸಮಸ್ತವೈಷಯಿಕಾನಂದವಂ ಸನುಭವಿಸುತ್ತ ಆಹಾರನಿದ್ರಾಕ್ರೀಡಾದಿಗಳ ತತ್ಕಾಲದಲ್ಲಿ ಮಾಡುತ್ತಲಾ ಮಿಥಿಲಾನಗರದಲ್ಲಿ ಸರ್ವಮಂಗಳಾಚರಣಕಮಲಾನುಗ್ರಹದಿಂದ ಸುಖದಿಂದಿದ್ದನೆಂಬಲ್ಲಿಗೆ॥ ಇಂತೀ ಕರ್ಣಾಟಕಭಾಷಾವಿರಚಿತವಾದ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯ ಸಂವಾದದಲ್ಲಿ ಸಪ್ತಾಷ್ಟಮಾಧ್ಯಾಯಗಳು ಸಮಾಪ್ತಗಳಾದವು.

## ಒಂಭತ್ತನೇ ಅಧ್ಯಾಯಂ.

ಶ್ಲೋಕ॥ಕಲ್ಬಿಕೀಲ್ಬೀಕಲಾಲೀಢಬಾಹುಚಾಮರಭೂರುಹೇ।ಸಮಸ್ತ
ಭುವನಾರಾಮೇನಿರಾಶ್ರಯತಯಾದೃಶಃ॥ಪ್ರಜಾಲತಾಸುತಪ್ತಾಸುಕೃಷ್ಣರಾಜ
ಮಹಾಘನಃ।ಮುಂಚತ್ಕೃಪಾಮೃತಾಸಾರಂ ಭಾತಿವಿಷ್ಣುಪದಾಶ್ರಯಃ॥

ಆವರ್ತಜನಮನಶ್ಚಕೋರಚಂದ್ರನೆ ಕೇಳು ಧಾನ್ಯಮಾಲಿನೀಪತಿಯಾದ ಸಹಸ್ರಾಯುವು ಒಂದು ದಿನ ದಾಕ್ಷಾಯಣೀಕಟಾಕ್ಷದಿಂದ ಸಮಸ್ತವಿಪತ್ಪರಂಪರೆಗಳಿಂದಲುದ್ಧೃತನಾಗಿ ಮಹದಭ್ಯುದಯಮಂ ಪಡೆದಿಹನಿಲ್ಲಿಂದ ಮುಂದೆ ವೃಥಾಕಾಲಹರಣಮಂ ಮಾಡಬಾರದು ಜನನಿಯೇನಾಗಿರುವಳೊ ಮಾತಂಗಿಯೇನಾಗಿರುವಳೊ ತಿಳಿಯದೆಂದು ಬಹುಖೇದಯುಕ್ತನಾಗಿ ಕ್ಷತ್ರಿಯನಾದಬಳಿಕ ಧನುರ್ವಿದ್ಯೆಗಳ ಕಲಿಯದಿರಬಾರದೆಂದು ನಿಶ್ಚಯಮಾಡಿ ಗೃಧ್ರದಿಂದುದಿತನಾದ ವ್ಯಾಘ್ರನಂ ಸ್ಮರಿಸಿ, ಪತ್ನಿಯಂ ಬಿಟ್ಟು ಪೋಗಲೆಂತಹುದೊ ಕಾಣೆನಾದರೇನಾಯ್ತು ಬಹುಪ್ರಕಾರದಿಂದೊಡಂಬಡಿಸಿ ಪೋಗಬೇಕೆಂದು ನಿಶ್ಚೈಸಿ, ಕೆಲವುಕಾಲ ಪತ್ನಿಯ ಮನೋರಂಜನಮಂ ಮಾಡಿ ಒಂ

ದಾನೊಂದು ದಿನ ಶಯನಗೃಹದೊಳ್ ಸತಿಯಂ ಕುರಿತು ಸಂತೋಷಸಮಯಮಂ ನಿರೀಕ್ಷಿಸಿ ಇಂದುಮುಖಿ ಎನ್ನದೊಂದು ಕಾರ್ಯಮಿರುವದು ನೀನವೊಂದನ ಕೊಡಬೇಕೆಂದು ಗಲ್ಲಮಂ ಪಿಡಿದು ಕೇಳಲು, ಧಾನ್ಯಮಾಲಿನಿಯು ಪತಿಗೆ ವಂದನೆಯಂ ಮಾಡಿ ಇಂತು ಕಠೋರವಾದ ವಾಗ್ಬಾಣಪ್ರಯೋಗವೇನು ಕಾರಣವೊ ತಿಳಿಯದೆಂದು ವಿಯೋಗಾಶಂಕೆಯಿಂದ ಮೂರ್ಛಿತಳಾದಂಗನೆಯಂ ನೆತ್ತಿ ಸಂತೈಸಲು, ವಿಯೋಗವೊಂದುಳಿದು ಏನು ಅಪ್ಪಣೆಯಿತ್ತಡೆಯುಂ ಆಜ್ಞಾನುಸಾರವಾಗಿ ನಡೆಯುವನೆಂದು ನುಡಿದ ಸತಿಯ ಕುಶಲೋಕ್ತಿಗೆ ಮೆಚ್ಚಿ ಆನಂದಸಮುದ್ರದೊಳ್ಮುಳುಗಿ ಆಕೆಯಂ ತೊಡೆಯಮೇಲಿತ್ತಿ ಮುದ್ದಾಡಿ ಲಲಿತಾಂಗಿ ನಿನ್ನಪೋಲುವ ಮಾನಿನಿಯರೀ ಭುವನದೊಳಗುಂಟೆ ಸೌಂದರ್ಯಾದಿ ಮಹಾಗುಣಗಳಿಂದ ಎಂದು ಬಹುಶ್ಲಾಘನೆಯಂ ಮಾಡಿ, ಎಲೈ ಮನೋರಥಕಲ್ಪಲತೆ ಆತ್ಮಹಿತಕಾರ್ಯವೊಂದುಂಟದಂ ಪೇಳುವೆನು ಕೇಳು, ಕ್ಷತ್ರಿಯರಿಗೆ ಧನುರ್ವೇದವೆ ಕುಶಲವಿದ್ಯೆ ಆ ವಿದ್ಯವಂ ಕಲಿಯದಿರಲು ಕ್ಷತ್ರಿಯರಿಗೆ ಪ್ರಾಶಸ್ತ್ಯ ಬಾರದು ಅದುಕಾರಣದಿಂದ ದಂಡಕಾರಣ್ಯದೊಳು ಈ ವಿದ್ಯಾಪಾರಂಗತನಾದ ಮಹಾನುಭಾವನೋರ್ವನಿಹನಂತೆ ತಾನು ಆತನಲ್ಲಿಗೆ ಪೋಗಿ ಮಾಸತ್ರಯದೊಳಗೆ ಬರುವೆನು. ಭಯಪಡಬೇಡವೆನಲು, ಪತಿಯ ವಾಗಶನಿಯಿಂ ತಾಡಿತಳಾಗಿ ಸತಿಯು ಮೂರ್ಛೆಯಿಂ ಮಲಗಲು, ಸಹಸ್ರಾಯುವ ಚೇತನಶೂನ್ಯಳಾಗಿರುವ ಸತಿಯಂ ಕಂಡು ಬಾಹುದ್ವಯದಿಂದೆತ್ತಿ ಎದೆಯಮೇಲೊರಗಿಸಿ ಶೈತ್ಯೋಪಚಾರಗಳಿಂದ ಆಶ್ವಾಸನೆಯಂ ಮಾಡಲು, ಆ ಮಹಾಪತಿವ್ರತೆಯಾದ ಧಾನ್ಯಮಾಲಿನಿಯು ಕಂಣ್ದೆರೆದು ಪತಿಯಂ ಕಂಡು ದಂಡಕಾರಣ್ಯಮಂ ಕುರಿತು ಪೋಗುವದೇ ಯಥಾರ್ಥಮಾದೊಡೆ ತಾನು ಸಂಗಡ ಬರುವೆನೆಂದು ಪ್ರಾರ್ಥನೆಯಂ ಮಾಡಲು, ಆ ರಾಜಕುಮಾರನು ಸತಿಯಂ ಕುರಿತು ವಿದ್ಯಾರ್ಥವಾಗಿ ಗುರುಸನ್ನಿಧಿಗೆ ಪೋಗುವರು ಪತ್ನಿಸಹಿತನಾಗಿ ಪೋಗಬಾರದದರಿಂದ ಅಪ್ಪಣೆಯಂ ಕೊಡುವುದೆಂದು ಬಹುಪ್ರಕಾರವಾಗಿ ಬಡಂಬಡಿಸಲು, ಧಾನ್ಯಮಾಲಿನಿಯು ಪ್ರಿಯತಮನಂ ಕುರಿತು ನೀನಿಲ್ಲದಿರೆ ತಾನೆಂತು ಕಾಲಮಂ ಕಳೆಯುವೆನೆಂದು ಕಂಬನಿದುಂಬಲು, ಸಹಸ್ರಾಯುವು ಅಶ್ರುವಂ ತನ್ನ ಶೆರಗಿನಿಂ ದೊರಸಿ ಧೈ

ರ್ಯಪುಟ್ಟುವಂತೆ ನಾನಾವಿಧ ಇತಿಹಾಸಂಗಳಂ ಪೇಳಿ ಸತ್ವರದಿ ಬರುವೆನೆಂದು ಪೇಳಿ ಗೌರೀಪ್ರಸಾದಮಹಾತ್ಮ್ಯೆಯುಂನೊರದು ನಿರಂತರದಲ್ಲಿಯು ಕಂತುಹರನಂಗನೆಯ ಚರಣಾರವಿಂದಗಳ ಭಜನೆಯಿಂ ಕಾಲವಂ ಕಳೆಯುವದೆಂದುಪದೇಶವಮಾಡಲು. ಧಾನ್ಯಮಾಲಿನಿಯು ಪತಿಯ ನಿರ್ಬಂಧನುಂ ಮೀರಲಾರದೆ ಸುಮ್ಮನಿರಲು, ಬಹುಪ್ರಯಾಸದಿಂದಾಕೆಯನೊಡಂಬಡಿಸಿಪ್ರಾತಃಕಾಲವಾಗಲು ರಾಯನೆಡೆಗೆ ಬಂದು ದಂಪತಿಗಳಿಗೆ ವಂದನೆಯುಂಮಾಡಿ ಸಂಕಲ್ಪಿತಕಾರ್ಯವುಂ ವಿಜ್ಞಾಪನೆಯಂ ಮಾಡಿ ಪತ್ನಿಯನುಕೂಲಳಾಗಿರುವದಂ ತಿಳಿಸಲು, ರಾಯನಾನುಡಿಯಂಕೇಳಿ ಚಿಂತಾಯುಕ್ತನಾಗಿ ಸುಭಗ ರಾಜ್ಯ ಕೋಶ ಸೇನಾದುರ್ಗ ಮೊದಲಾದ ಸಪ್ತಪ್ರಕೃತಿಪೂರ್ಣಳಾದ ರಾಜಲಕ್ಷ್ಮಿಯಂ ಮಗಳೊಡನೆ ಅಂದೆ ತಾನು ನಿನಗೊಪ್ಪಿಸಿದೆನೆಂದು ನೀನು ವಿದ್ಯಾಭ್ಯಾಸವಂ ಮಾಡಲೈದಲು ಈ ರಾಜ್ಯಭರಣವುಂ ನಿರ್ವಹಿಸುವರ್ಯಾರೆಂದು ಕೇಳಲು. ಸಹಸ್ರಾಯುವು ರಾಯನಂಕುರಿತು ಎನ್ನಮೇಲಣದಯೆಯಿಂದ ಕಿಂಚಿತ್ಕಾಲವೀಭಾರವಂ ತಾವೆ ವಹಿಸಿದಡೆ ತಾನು ಕ್ಷಿಪ್ರದಿಂ ಬರುವೆನೆಂದು ವಿನಯಮಧುರೋಕ್ತಿಯಿಂದ ವಿಜ್ಞಾಪನವಂಮಾಡಲಾಮಂಡಲಾಧಿಪತಿಯು ಕ್ಷತ್ರಿಯರಿಂಗೆ ಧನುರ್ವಿದ್ಯವೇಕುಶಲವಿದ್ಯವದರಿಂದವಶ್ಯವಾಗಿಚಾಪವಿದ್ಯಾಭ್ಯಾಸವಂಮಾಡಲು ಪೋಗುವೆನೆಂದುಪೇಳಲು ಎಡರನಾಚರಿಸಬಾರದೆಂದು ಮನದಿ ಯೋಚನೆಮಾಡಿ ಜಾಮಾತನಂ ಕುರಿತು ಕ್ಷಿಪ್ರದಿಂಬರಬೇಕೆಂದು ಪೇಳಿ ದಿವ್ಯವಸ್ತ್ರಾಭರಣಗಳಿಂದಲಂಕರಿಶಿ ಅಪ್ಪಣೆಯಂ ಕೊಡಲು, ಅಲ್ಲಿಂದಪೊರಟು ಪತ್ನಿಯಾಲಯಕೆ ಬಂದು ನಡದ ವರ್ತಮಾನವಂ ತಿಳಿಸಿ ನಿಜಸ್ತ್ರಾಂಶಪೂರ್ಣಭುಜವುಳ್ಳವನಾಗಿ ಪತ್ನಿಯಿತ್ತ ಪಾಥೇಯವುಂ ಸಂಗ್ರಹವಮಾಡಿಕೊಂಡು ಸುಮುಹೂರ್ತದಲ್ಲಿ ಪೂರ್ವಾಭಿಮುಖನಾಗಿ ಶಕುನಮನೋಜಯಾಜಿಗಳನೋಡುತ ನಡೆಯಲು, ಧಾನ್ಯಮಾಲಿನಿಯು ತಚ್ಚರಣನಳಿನವಿಯೋಗಜನಿತಾತ್ಯಂತ ಸಂತಾಪವಂ ಸಹನಮಾಡಲಶಕ್ಯವಾದೊಡೆಯುಂ ಪತಿಶ್ರೇಯಸ್ಕಾಮಳಾಗಿ ಸಾರ್ವಕಾಲದೊಳು ವ್ರತಸ್ಥಳಾಗಿ ಶಿತಿಕಂಠನರ್ಧಾಂಗಿಯ ಚರಣಾರಾಧನವ ಮಾಡುತ್ತಲಿರಲು. ಸಹಸ್ರಾಯುವಲ್ಲಿಂದಪೊರಟು ದಂಡಕಾರಣ್ಯವುಂ ಪೊಕ್ಕು ಬರುತ್ತೊಂದು

ಪ್ರದೇಶದೊಳು ರುರುವೆಂಬ ಮಹಾಬಲಶಾಲಿಯಾದ ರಕ್ಕಸನೊಡನೆ ಬಹುಮಂದಿ ರಾಜಕುಮಾರರೊಂದಾಗಿ ಚಿರಕಾಲ ಯುದ್ಧಮಂಮಾಡಿ ತದೀಯ ಚಾಪನಿರ್ಗತಾಶುಗಪರಂಪರಾಪ್ರಹಾರದಿಂ ಕೆಲವುಮಂದಿ ರಾಜಕುಮಾರರು ಮೂರ್ಛಿತರಾಗಿ ರಣರಂಗದೊಳು ನಕ್ಷತ್ರಗಣದಂತೆ ಬಿದ್ದಿಹರು. ಕೆಲಬರಾ ರಾಕ್ಷಸನಭಯದಿಂದ ಮೂರ್ಛಿತಾವಸ್ಥೆಯನೈದಿದವರಂತೆ ನೇತ್ರೋತ್ಪಲಗಳಂ ಮುಚ್ಚಿ ಬಿದ್ದಿಹರು, ಅವಶೇಷಿತರೈದುಮಂದಿ ರಾಜಕುಮಾರರ್ ಯುದ್ಧಮಂಮಾಡುತ್ತಾ ದೈತ್ಯನತೇಜಸ್ಸಿನಿಂದ ಗ್ರಸಮಾದ ಪರಾಕ್ರಮವುಳ್ಳವರಾಗಿರಲು, ಆ ರುರುವು ಇವರನ್ನು ಕೆಡಹಿ ತರುವಾಯ ಎಲ್ಲರಂ ಏಕಕಾಲದಲ್ಲಿ ಭಕ್ಷಿಸುವೆನೆಂದು ಯೋಚಿಸಿ ಪ್ರಹರಿಸುತ್ತಿರುವ ಸಮಯದೊಳು ಸಹಸ್ರಾಯುಧಮಾದ್ಯೈಕ್ಷ್ವಾಕನಂಕಂಡು ಜನತತಿಯಾಡಿದ ನುಡಿಯು ಸ್ಮೃತಿವಿಷಯಮಾಗಲು, ತ್ವರೆಯಿಂದ ಯುದ್ಧರಂಗಕ್ಕೆ ಬಂದು ಅಹಹ ದುರಾತ್ಮನಾದ ದೈತ್ಯೇಯನಿಂದನೇಕರಾಜಕುಮಾರರಸಂಗತರಾಗುತಿಹ ರಕಟಕಟ, ಈ ದುರಾತ್ಮನಂ ನಿಗ್ರಹಿಸಿ ಇವರಂ ರಕ್ಷಿಸಬೇಕೆಂದು ನಿಶ್ಚಯಮಾಡಿ, ದುರಾತ್ಮನಂಕುರಿತು ಎಲಾ ರಾತ್ರಿಂಚರಾಧಮನೇ ಯುದ್ಧಾಂಗಣದಲ್ಲಿ ನಿನ್ನೊಡಲಂಬಗೆದು ಭೂತಬಲಿಯಂ ಮಾಡಲೋಸುಗ ಬಂದಿರುವೆನ್ನ ಕಾಣದೆ ಶವಭಕ್ಷಣೆಯಂಮಾಡಲುಪಕ್ರಮಿಸಿದೆಯಾದೊಡೆ ಬಿಡುವೆನೇ ನೋಡೆಂದು ನಿಸ್ತ್ರಿಂಶಮಂಝಳಪಿಸಿ ಸಿಂಹನಾದಮಂಮಾಡಲು, ಗಗನಧರಾದಿಕ್ಕುಗಳು ನಾದಮಯಮಾದುದೇನೆಂಬಿನಚ್ಚರಿಯು, ದೈತ್ಯನದೆ ಬಿಡೆದದಾಸಾದಮಂಕೇಳಿ ನೋಡಿದನು ಸಾಕ್ಷಾನ್ಮೃತ್ಯುವೇ ಮಾನುಷಾಕಾರಮಂತಾಳಿ ಬಂದಿರುವಂತೆ ನಿಂದಿರುವ ರಾಜಕುಮಾರನಿವನುದಾರೋಕಾಣೆ, ನೋಡಲತ್ಯಂತಸತ್ವವುಳ್ಳವನಾಗಿತೋರುತಿದೆ, ಇದರೇನಾದುದೀಪಸುಳಿಯಂನೊರಶಿ ತರುವಾಯದೋಳಿವರೆಲ್ಲರಂ ಯುಗಪದಲ್ಲಾಹಾರಮಂ ಮಾಡುವೆನೆಂದು ಸಹಸ್ರಾಯುಧಂಗೆ ದುರ್ಲಾಗಿ ಮಹದಟ್ಟಹಾಸಧ್ವನಿಯಂಮಾಡಲು, ಎಲೈ ರಾಕ್ಷಸಾಧಮನೇ ಕೇಳು ಇದುವರಿವಿಗೂ ನಿನ್ನಿಂದ ಪರಾಜಿತರಾದ ರಾಜಕುಮಾರರೊಳೋರ್ವನಿವನೆಂದು ಝರ್ಜಿಸಲಿಬ್ಯಾಡ ನಿನ್ನಧಟುತನವಂ ತೋರು ನೋಡುವೆನೆಂದೆನುಡಿಯಲು, ರುರುವು ಕೇಳಿ ಕ್ರೋಧಮೂರ್ಛಿತನಾಗಿ ಎಲಾ ಕ್ಷತ್ರಿಯಡಿಂ

ಭನೇ ಕೇಳು ದೇವತೆಗಳೆನ್ನಂ ಕಂಡಂಜುವರು ನಿನ್ನ ಪಾಡೇನಿನ್ನು ನೋಡೆನ್ನ ಸಾಹಸವನೆಂದು ಬಾಣವೃಷ್ಟಿಯಂ ಕರೆಯಲು, ಧರಣೀಮಂಡಲವೆಲ್ಲಿ ಗಗನತಲವೆಲ್ಲಿಹುದು ಸಹಸ್ರಾಯುಧವೇನಾದನೋ ಎಂಬಂತೆ ಮುತ್ತಿದವು ಬಾಣಗಳು, ಸುತ್ತಿದವು ದಿಕ್ಕುಗಳ, ಸಹಸ್ರಾಯುಧವು ಆ ಬಾಣವೃಷ್ಟಿಯಿಂ ವಿಮಲ ತರವಾರಿಯಿಂ ಕ್ಷಣಾರ್ಧದಿ ಖಂಡಿಸಿ ಮುಂದಕ್ಕಡಿಯಿಟ್ಟು ಬರುತಿರಲು, ರುರುವು ನೋಡಿ ಈ ರಾಜಕುಮಾರನಂ ಬಾಲಾಧಿಕನೆಂದು ತಿಳಿದು ಅನೇಕ ದಿವ್ಯಾಯುಧಂಗಳಂ ಅವಿಚ್ಛಿನ್ನವಾಗಿ ಸುರಿಯುತ್ತ ಬರಲು, ಆಧಾನ್ಯಮಾಲಿನೀಪತ್ರಿಯುದಂ ಗಣನೆಮಾಡದೆ ಎದುರಿಗೆ ಬರುವ ದಿವ್ಯಾಯುಧಗಳಂ ಮಹಾಖಡ್ಗದಿಂ ಛಿನ್ನಾಭಿನ್ನವಾಗಿ ಕತ್ತರಿಸಿ ಜವದಿಂದೊತ್ತಿ ಸಮೀಪಕ್ಕೆ ಲಂಘಿಸಿ ಮಹಾನಿಸ್ತ್ರಿಂಶದಿಂ ದಿವ್ಯಾಯುಧೋಪೇತವಾದ ದಕ್ಷಿಣಬಾಹುವಂ ಕತ್ತರಿಸಿ ದಕ್ಷಿಣಪಾದದಿಂ ರುರುವಿನೆದೆಯಂ ನೊದೆಯಲು ರಾಕ್ಷಸನು ಅಶನಿಪ್ರಹಾರದಿಂ ಬೀಳುವ ಹೆಮ್ಮರದಂತೆ ರಣರಂಗದೊಳು ನೆಲಕ್ಕೆ ಬೀಳಲಾಕ್ಷಣದಲ್ಲಿ ಲಾಘವದಿಂ ಸಹಸ್ರಾಯುಧವು ಲಂಘಿಸಿ ರುರುವಿನೆದೆಯ ಮೇಲೊಂದು ಪಾದವನಿಟ್ಟು ಕೊರಳ ಕತ್ತರಿಸುವೆನೆಂದು ಖಡ್ಗಮಂ ನೆತ್ತುವ ಸಮಯದೊಳ್ ಗೃಧ್ರವಾಕ್ಯಮಂ ಸ್ಮರಿಸಿ ಸಹೋದರರಾರ್ವರಿಗೂ ಸಮಸಮಯ ಮೃತ್ಯುವಾಗಲೆಂದಿತ್ತ ಋಷಿಶಾಪಮಂ ನೆನೆದು ದುರ್ಭಗನೇ ಕೇಳು ಈ ಜಂಬೂದ್ವೀಪವಂ ಬಿಟ್ಟು ಪೋಗುವೆವೆಂದು ಪ್ರಮಾಣಮಂ ಮಾಡಿದಡೆ ಬಿಡುವೆನಿಲ್ಲದರೆ ನಿನ್ನ ತಲೆಯಂ ತರಿವೆನೆಂದು ಘರ್ಜಿಸಲು, ರುರುವು ಪ್ರಳಯಭೈರವನಂತಿರುವ ರಾಜಕುಮಾರನಂ ನೋಡಿ ಮರಣಭಯದಿಂ ಕೈಮುಗಿದು ಎಲೈ ಮಹಾನುಭಾವನೇ ಕೇಳು ಈ ದ್ವೀಪವಂ ಬಿಟ್ಟು ಪೋಗುವೆನು ಕ್ಷಣಮಾತ್ರವಿಲ್ಲಿರುವುದಿಲ್ಲ ನಿನ್ನಡಿಯ ಮೇಲಣ ಆಣೆ ತನಗೆಂದು ಶಪಥವಂ ಮಾಡಲು, ಸಹಸ್ರಾಯುಧ ಯೆಯೆಂದ ಪೋಗೆಂದು ಬಿಡಲು, ಆ ದುರಾತ್ಮನಾದ ರಕ್ಕಸನು ವಂದನೆಯಂ ಮಾಡಿ ಹಿಂತಿರುಗಿ ನೋಡುತ್ತ ಪಲಾಯನಂ ಮಾಡಲು, ದೈತ್ಯೇಯ ಭಯಾಂಧಕಾರದಿಂ ಮುಕುಳಿತಗಳಾದ ರಾಜಪುತ್ರನೇತ್ರಕಮಲಗಳು ಸಹಸ್ರಾಯುಧವೆಂಬ ಸಹಸ್ರಕಿರಣನ ಪರಾಕ್ರಮಾತಪದಿಂ ದವಿಕಸಿತಗಳಾಗಲು, ಸಾಕ್ಷಾತ್ಪ್ರತಾಪವೇ ಮೂರ್ತೀಭವಿಸಿದಂತಿರುವ ಪರಮಸುಂದರನಾದ ರಾಜಕು

ಮಾರನಂ ನೋಡಿ ಈತನ್ಯಾರೋ ರಾಜಕುಲೋದ್ಧಾರಕನಾಗಿ ಬಂದಿರುವ ನೀತನಸುರಾಂತಕನೋ, ಅಥವಾ ಶಚೀಪತಿಯೋ, ಷಡಾನನೋ ಎಂದು ನಾನಾವಿಕಲ್ಪವಿಚಾರ ಕಲಿತಾಂತಃಕರಣ ವುಳ್ಳವರಾಗಿ ನಿರ್ಣಯಿಸಂದೆದ್ದು ಎಲ್ಲರೊಂದಾಗಿ ಸಹಸ್ರಾಯುವಿದ್ದೆಡೆಗೆ ಬಂದು ಯುಗಪತ್ಸಕಲ ರಾಜಕುಮಾರರೆಲ್ಲರು ವಂದನೆಗಳಂಮಾಡಿ ದಿಕ್ಪತಿಗಳುಪೇಂದ್ರನಂ ಸ್ತುತಿಮಾಡಿದಂತೆ ಬಹುಪ್ರಕಾರ ಸ್ತುತಿಮಾಡಿ ನಿರ್ವ್ಯಾಜದಿಂದ ಮೃತ್ಯುಗ್ರಸ್ತರಾದೆಮಗೆ ಪ್ರಾಣದಾನವಂಮಾಡಿದ ಮಹಾನುಭಾವನಾದ ನೀನ್ಯಾರು! ತಮಗದಂಪೇಳಬೇಕೆಂದು ವಿಜ್ಞಾಪನೆ ಮಾಡಿಕೊಳಲು, ಸಹಸ್ರಾಯುವು ರಾಜಕುಮಾರರಂ ಕುರಿತು ತನ್ನವೃತಾಂತವೆಲ್ಲವಂ ಯಥೋಚಿತವಾಗಿತಿಳಿಸಿ ಧನುರ್ವಿದ್ಯೆಯಂ ಕಲಿಯಬೇಕೆಂದು ಬಂದಿರುವನೆಂದೊರೆದು ನೀವ್ಯಾರೇನುಕಾರಣ ಈ ಅರಣ್ಯಪ್ರವೇಶವಂ ಮಾಡಿದಿರಿ! ಇನಿಬರೊಂದಾಗಿ ಮೇಳಸವಾಗಲು ನಿಮಿತ್ತವೇನುಕಾರಣ ದೈತ್ಯನೊಡನೆ ಯುದ್ಧವಂ ಮಾಡಿದಿರಿ ಪೇಳುವುದೆಂದು ಕೇಳಲು, ರಾಜಕುಮಾರರಾಸುಶರ್ಮ ತನಯನಂ ಕುರಿತು ಅಂಜಲಿಬದ್ಧರಾಗಿ ನಾವುದೇಶಾದಿಗಳಂ ಬೇರೆ ಬೇರೆಪೇಳೆ ಎಲೈ ರಾಜಕಂಠೀರವನೆ ಕೇಳು! ಚಾಪವಿದ್ಯಾಭ್ಯಾಸವಂ ಮಾಡಬೇಕೆಂದು ಈ ದಂಡಕಾರಣ್ಯದೊಳಿರುವ ಸತ್ಯವ್ರತನ ಸನ್ನಿಧಾನವಂ ಕುರಿತು ಬಂದು ಆ ಮಹಾನುಭಾವನಿಂದಪೇಕ್ಷಿತವಿದ್ಯಾಪ್ರಾಪ್ತಿಯಾದನಂತರದಲ್ಲಿ ಗುರುದಕ್ಷಿಣಾರ್ಥವಾಗಿತಮ್ಮಿಂದಪ್ರಾರ್ಥಿನಾಗಿ ಆಚಾರ್ಯನೊಡಂಬಡದೆ ತಮ್ಮ ನಿರ್ಬಂಧವಂ ಮೀರಲಾರದೆ ಎರಡು ದಕ್ಷಿಣೆಯಂ ಬೇಡಲು ಅದರೊಳೊಂದನ್ನುಮಾಡಿ ನಿರ್ವಾಹಮಾಡಲಾರದೆ ಚಿಂತಿಸುತ್ತಿರುವ ಸಮಯದೊಳು, ಆಕಸ್ಮಿಕವಾಗಿ ಮಹದಟ್ಟಹಾಸವಂ ಮಾಡುತ್ತ ಈ ರುರುಎಂಬ ರಾಕ್ಷಸನು ಕೋಪಾಟೋಪದಿಂ ಯುದ್ಧಾರ್ಥವಾಗಿ ಬಂದನಾದಕಾರಣ ಈ ದುರಾತ್ಮನೊಡನೆ ಮಾಸತ್ರಯದಿಂದ ಯುದ್ಧವಂಮಾಡಿ ಬಳಲಿ ಕಂಗೆಟ್ಟುಪೋಗುವರೇ ಗತಿಯಿಲ್ಲ, ನಿಂತುಯುದ್ಧವಮಾಡುವರೇ ಸಾಮರ್ಥ್ಯವೊದಲೇಯಿಲ್ಲ, ಇಂತುದುರ್ಗತಿಯಂಪೊಂದಿ ಮೂರ್ಛೆಯಂನೈದಿದೈತ್ಯನಟ್ಟುಳಿಯಂ ನಿರ್ವಾಹವಮಾಡಲಾರದೆ, ಪದೇಪದೆ ಪಲಾಯನ ಪರಾಯಣರಾದ ದೇವಸೇನಾಪತಿಗಳಿಗೆ ಸಹಾಯ

ಕನಾಗಿ ಬಂದನ್ನಾತನಾತುರನಂತೆ ಆಕಸ್ಮಿಕವಾಗಿನೀನುದಯವಾತಿ ತ್ರಮ್ಮೆ ಲ್ಲರನ್ನುದ್ಧಾರಮಾಡಿದೆಯಾದಕಾರಣ ಸರ್ವರಾಜಕುಲಕಲ್ಪರುಹನೆ ಕೇಳು ವಿಶೇಷ ಹೇಳುವುದೇನು ಆಚಾರ್ಯನ ಮನೋರಥಪೂರ್ತಿ ನಿನ್ನಿಂದಲೇ ನಿರ್ವಾಹವಾಗಬೇಕಲ್ಲದೆ ಇನ್ನು ಮಾರ್ಗಾಂತರವಿಲ್ಲವದರಿಂದ ಗುರುಕಾರ್ಯಮಂ ಸಾಧಿಸಿಕೊಳ್ಳುವೆನೆಂದೆನಗೆ ಅಭಯಮಂ ನೀಯಬೇಕೆಂದು ಬೇಡಲು, ಸಹಸ್ರಾಯುವಾ ಸಮಸ್ತರಾಜಕುಮಾರರಿಗೆ ಬಹುಮತಿಯಿಂದ ಅಭಯವನ್ನಿತ್ತು, ಆ ರಾಜಕುಮಾರಸಮೂಹದೊಡಗೂಡಿ ವಟವೃಕ್ಷಾಭಿಮುಖನಾಗಿ ಸತ್ಯವ್ರತನಿರುವೆಡೆಗೆ ಬರುತಿರಲು,

ಆ ವ್ಯಾಧನು ದೂರದಲ್ಲಿ ಈಸಕಲವ್ಯಾಪಾರವಂನೋಡುತ್ತಲಿದ್ದು ಈತನ್ಯಾರೋಕಾಣೆ ಈಗ ನಡದಕಾರ್ಯವು ಮಾನುಷರಿಂದ ನಿರ್ವಾಹವಾಡುವದಲ್ಲವದರಿಂ ಮಾನುಷನಾಗಿ ತೋರುವದಿಲ್ಲ, ದೇವಸೇನನಾದೊಡೆ ಷಡಾನನವಿಲ್ಲ, ವಜ್ರಧರನಾದೊಡೆ ಸಹಸ್ರನಯುಗಳಿಲ್ಲ, ಶಿವನಾದೊಡೆ ಶೂಲವಿಲ್ಲ, ಚಕ್ರಿಯಾದೊಡೆ ಚತುರ್ಭುಜವಿಲ್ಲ, ಪರುಶುರಾಮನಾದೊಡೆ ಬಾಹುಜರಿಂಗೆ ಸಹಾಯಮಾತುವನಲ್ಲ, ದಿಗೀಶರೊಳುತಾನು ಕಾಣದವನೋರ್ವನೂಯಿಲ್ಲಾ ಈತನ ನೇ ಸರಿಯೆಂದು ನಿಶ್ಚಯಮಾಡುವರೇ ಆಕೃತಿ ಪರಾಕ್ರಮ ಗಾಂಭೀರ್ಯಾದಿ ಗುಣಗಳ್ಳುಮಾನುಷಯೋಗ್ಯವಾಗಿ ತೋರುತಿದೆಯಾದ್ದರಿಂದ ಯಾರೋತಿಳಿಯಬಾರದೆಂದು ಯೋಚಿಸುತಿರಲು,

ಇತ್ತಲಾ ಸಹಸ್ರಾಯುವು ಆನೇಕರು ವೃಕ್ಷಸಮೂಹದಿಂದೊಡಗೂಡಿ ಬರುವ ಶಾಖಿಶನಂತೆ ಸಕಲರಾಜಕುಮಾರಸಮಾಜದಿಂವೆರಿಶಿ ಬರುವ ಸುಕುಮಾರನಂ ಕುರಿತು ಹರ್ಷಪರವಶನಾಗಿ ನೋಡುತ್ತಿರಲು, ಸಹಸ್ರಾಯುವು ಬಂದು ವಂದನೆಯಂಮಾಡಿ ಅಂಜಲಿಬದ್ಧನಾಗಿ ಎದುರ್ಗೆನಿಂದಿರಲು, ಸತ್ಯವ್ರತನು ಎಲೈವತ್ಸ; ನೀನುಯಾರು ಎಲ್ಲಿಂದಬಂದೆ ಈ ಘೋರಾರಣ್ಯಸಂಚಾರವೇನುಕಾರಣವೆಂದು ಪ್ರಶ್ನೆಯಂಮಾಡಲು ಸಹಸ್ರಾಯು ವಿನಯದಿಂ ತನ್ನವೃತ್ತಾಂತವೆಲ್ಲಮಂ ಸಂಕುಚಿ ಬುದ್ಧಿಯಿಂದ ಸಲಾರ್ಥಗಳ್ ತೋರುವಂತೆ ವಿಜ್ಞಾಪನೆಯಂಮಾಡಿ ಚಾಪವಿದ್ಯಮಂ ಕಲಿಯಲೋಸುಗ ಭವತ್ಸನ್ನಿಧಿಗೆ ಬಂದನೆಂದು ವಂದನೆಯಂಮಾಡಲು, ಸತ್ಯವ್ರತನಾ ಕುಮಾರ

ನಂ ತೆಗೆದು ತಕ್ಕೈಶಿಮುಪ್ಪಾಡಿ ವತ್ಸ;ಸರ್ವಾರ್ಥಸಾಧಕವಾದ ಧನುರ್ವಿದ್ಯೆಯಂನಿರ್ವಂಚನೆಯಿಂದ ಸಾಂಗೋಪಾಂಗವಾಗಿ ಪೇಳುವೆನೆಂದು ಅಭಯವನ್ನಿತ್ತು,ಉತ್ತಮನಾದ ಶಿಷ್ಯನಾಗವುನಸುಮುಹೂರ್ತ ವೆಂದುಪಕ್ರಮಿಸಿ, ಧರ್ಮಾಧರ್ಮ, ಲಕ್ಷ್ಯಾಲಕ್ಷ್ಯ, ಹಸ್ತಪಾತ, ದೂರಪಾತ, ಪೃಷ್ಟಗತಿ, ಪಾರ್ಶ್ವಗತಿರಥಾಶ್ವಧ್ವಜ ಸಾರಥಿ ಸ್ವಾತ್ಮರಕ್ಷಣವೆ ಮೊದಲಾದ ಷಡಶೀತ್ಯಂಗವುಳ್ಳಧನುರ್ವೇದವಂನಿರ್ವಂಚನೆಯಿಂದುಪದೇಶಮಾಡಿ, ಪಾಶುಪತವೈಷ್ಣವಬ್ರಂಹ್ಮಾಸ್ತ್ರವೇ ಮೊದಲಾದ ಅಶೀತಿಮಂತ್ರಾಸ್ತ್ರಗ್ರಾಮವಂ ಸಹಸ್ರಾಯುವಿಂಗಿತ್ತು ನಿನ್ನಯಧೈರ್ಯಸ್ಥೈರ್ಯಗಾಂಭೀರ್ಯಪರಾಕ್ರಮ ಸತ್ವಸಾಹಸ ಸಹನ ಭೀತ್ಯುಪಶಾಂತಿಮೊದಲಾದ ಮಹಾಗುಣಂಗಳಿಗೆ ಮೆಚ್ಚಿದೆನೆಂದು ಬಹುಪ್ರಕಾರಮಾಗಿಹರಸಿ ನಿನ್ನಾಲಯಕ್ಕೆ ಪೋಗಿ ಸುಖದಿಂರಾಜ್ಯಪಾಲನಮಾಡುವುದೆಂದು ಅಪ್ಪಣೆಗೊಡಲು, ಸಹಸ್ರಾಯುವಾತನಕೃಪೆಯಂ ನೋಡಿ ತಾನುಕೃತಾರ್ಥನಾಗುವರೇ,ಗುರುದಕ್ಷಿಣೆಗೆ ಅಪ್ಪಣೆಯನೀಯಬೇಕೆನಲು, ವತ್ಸಸರ್ವಪ್ರಕಾರದಿಂದಲೂಯದ್ಯಪಿ ನೀನು ಶಕ್ತನೇಸರಿ ತಥಾಪಿತನ್ನ ಅಭೀಷ್ಟಘಟನಾಯಂಬುವದು ಮಾನುಷರಿಗಸಾಧ್ಯ ವೃಥಾಹೇಳೆ ಫಲವೇನು ಬರಿದೆ ಆಯಾಸಪಡಬೇಡ ನಿನ್ನಯಭಕ್ತಿಗೆ ತಾನು ಮೆಚ್ಚಿದೆನು ಸುಖದಿಂದ ನಿನ್ನರಾಜ್ಯಕ್ಕೆ ಪೋಗೆನಲು, ಸಹಸ್ರಾಯುವಾನುಡಿಯಂಕೇಳಿ ಆರ್ಯಮಾರುತ್ತರವನಾಡಲು ಶಕ್ತನಲ್ಲಿಂನ್ನೆನಾದಡೆಯು ಬಿನ್ನಹಮಾಡುವೆನು ಇಂದ್ರಾದಿದಿಕ್ಪಾಲಕರೊಂದಾಗಿ ಭವತ್ಕಾರ್ಯಕ್ಕೆ ಎಡರನಾಚರಿಸಿದಡೆಯುಂ ಬಿಡುವವನಲ್ಲ ಇಂತಲ್ಲದೆ ಗುರುದಕ್ಷಿಣೆಯಂಕೊಡದೆ ಅಡಿಯಿಡೆನೆಂದು ಪ್ರತಿಜ್ಞೆಯಂಮಾಡಲು, ಸತ್ಯವ್ರತನಾನಂದಭರಿತನಾಗಿ ತನ್ನಮನಸಾಭೀಷ್ಟಮನೊರೆಯಲು, ರಾಜಕುಮಾರನದಂಕೇಳಿ ಈಎರಡುಕಾರ್ಯಮಂಸಾಧಿಸದಿರ್ದೊಡೆ ಕ್ಷತ್ರಿಯಕುಲೋತ್ಪನ್ನತಾನಲ್ಲವೆಂದು ಶಪಥಮಂಮಾಡಿ ವಂದನೆಮಾಡಿ ಅಪ್ಪಣೆಗೊಂಡುತ್ತರಾಭಿಮುಖನಾಗಿ ನೈಮಿಶಾರಣ್ಯಮಂ ಕುರಿತು ನಡೆಯಲು. ಅನಿತರೊಳು ವೃದ್ಧವಾನರನು ಸಹಸ್ರಾಯುವಂ ಕಂಡುಋಷಿವಾಕ್ಯಮಂಸ್ಮರಿಸಿ ಈತನೆಮಾಯನುಗ್ರಹದಿಂದ ಪೂರ್ಣನಾಗಿರುವನೆಂದು ತಿಳಿದು ಮೆಲ್ಲಮೆಲ್ಲನೆ ವೃಕ್ಷದಿಂದಿಳಿದು ಸಹಸ್ರಾ

ಯುವಿದ್ದೆಡೆಗೆ ಬಂದುವಂದನೆಯಂಮಾಡಿ ಮುಂಗಡೆನಿಂದಿರಲು, ರಾಜಕು
ಮಾರನದಂಕಂಡು ವಿಸ್ಮಿತನಾಗಿ ಅಜ್ಞಾನಿಯಾದ ಶಾಖಾಮೃಗನು ಬಂದು
ವಂದನೆಯಂಮಾಡಲೇನುಕಾರಣವೋಯೆಂದು ಯೋಚಿಸಿ ಎಲೈ ವಾನರನೇ
ನೀನ್ಯಾರು ಎಲ್ಲಿಂದಬಂದೆ ವಂದನೆಯಂ ತನಗೇನುಕಾರಣಮಾಡುವೆಯೆಂದು
ಕೇಳಲು, ಪೂರ್ವದಲ್ಲಿ ವತ್ಸನೆಂಬ ಮಹರ್ಷಿಯು ಮಾನುಷನಾದೆನಗೆ
ಋಷಿಶಾಪದಿಂ ಪ್ರಾಪ್ತವಾದ ರೂಪಾದಿಗಳಂ ನೋಡಿ ದಯಾರ್ದ್ರಹೃದಯ
ನಾಗಲು ತಾನು ವಂದನೆಯಂಮಾಡಿ ಬಹುಪ್ರಕಾರ ಪ್ರಾರ್ಥನೆಯಂಮಾಡ
ಲು, ಎಲೈ ವಾನರನೆ ಚರಾಚರಾತ್ಮಕವಾದ ವಸ್ತುಗಳಲ್ಲಿ ಸಂಶಯಬಂದು
ನಿದರ್ಶನವಾಗುವಪೇ ತತ್ವದರ್ಶಿಯೆಂಬ ಸುಲೋಚನಮಿತ್ತು ಈ ದಿವ್ಯ
ಸುಲೋಚನವಂ ನಿನ್ನಲ್ಲಿ ರಹಸ್ಯವಾಗಿಟ್ಟು ಕಾಲನಿರೀಕ್ಷಣವಂಮಾಡು
ತ್ತಿರು, ಮುಂದೆ ಕಂದರ್ಪಹರನಂಗನೆಯ ಪರಿಪೂರ್ಣಾನುಗ್ರಹಕ್ಕೆ ಪಾತ್ರ
ನಾದೋರ್ವ ರಾಜಕುಮಾರನು ನೀನಿದ್ದಲ್ಲಿಗೊಂದುಕಾರಣದಿಂದ ಬರುವ
ನಾತನಿಂಗೀಸುಲೋಚನಮನಿತ್ತು ಇದರಮಹಾತ್ಮ್ಯಯಂ ಪೇಳಿ ವಂದನೆ
ಯಂಮಾಡೆಂದಪ್ಪಣೆಯಿತ್ತನಾದಕಾರಣ ಬಂದೆನಿದಕೊಸುಲೋಚನವೆಂದು
ಕರದಲ್ಲಿತ್ತು ವಂದನೆಯಂಮಾಡಲು, ಸಹಸ್ರಾಯುವತ್ಯಂತಕರುಣದಿಂವಾ
ನರನಂಕರದಿಂದೆತ್ತಿ ಮೈದಡವಿ ಲಾಲನೆಯಂಮಾಡಲಾಕ್ಷಣದೊಳಾವಾನರಂ
ಗೆ ಕುತ್ಸಿತವಾದ ವಾನರಕಳೇಬರವುಪೋಗಿ ದಿವ್ಯಶರೀರಬರಲು. ಸಖಚರೀ
ರಾವಳಿನ್ನನಾದ ಜೀವಿಯು ನಿರಾಲಂಬದೊಳು ತನಗೋಸುಗ ಬಂದುನಿಂದಿ
ರುವ ವಿಮಾನಮಂಕಂಡು ರಾಜಕುಮಾರನಂಬಹುವಿಧಸ್ತೋತ್ರಮಂಮಾಡಿ
ಅಪ್ಪಣೆಗೊಂಡು ವಿಮಾನಾರೂಢನಾಗಿ ಭವತ್ಕರಸ್ಪರ್ಶದಿಂದಾದ್ಯದೆಂದು
ಪರಮಸಂತೋಷದಿಂನಾಕಾರೋಹಣವಂ ಮಾಡಲು. ಸತ್ಯವ್ರತಪ್ರಮುಖ
ರಾದ ಸಮಸ್ತರೀವಿಚಿತ್ರಮಹಿಮೆಯಂನೋಡಿ ವಿಸ್ಮಿತರಾಗಿ ಈತನಮಾ
ನುಷನೆಂದು ನಿಶ್ಚೈಸಿ ಸಂತೋಷಯುಕ್ತರಾಗಲು, ಸಹಸ್ರಾಯುವು ವಾ
ನರನನಿರ್ಯಾಣಮಂನೋಡಿ ಪತತ್ರಿಯವಾಕ್ಯಮಂಸ್ಮರಿಸಿ ಕಾರ್ಯಗೌರವ
ದಿಂದ ಮುಂದಕ್ಕೆನಡೆಯಲು, ರಾಜಕುಮಾರರು ಬೆಂಬಿಡದೆ ಸುತ್ತಮುತ್ತಲು
ಬರುತಿರುವ ರಾಜಕುಮಾರರಂನೋಡಿ ತಾನಲ್ಲಿನಿಂದು ರಾಜಸಮೂಹಂ

ಕಂದು ವೃಥಾ ನೀವೇನುಕಾರಣ ತನ್ನೊಡನೆಬರುವಿರಿ ಕಾರ್ಯವಿಲ್ಲದಾಯಾಸಪಡುವುದುಚಿತವಲ್ಲ. ಸ್ವಸ್ಥದಿಂ ನೀವಿಲ್ಲೇ ಒಂದು ಸ್ಥಾನವಂ ಮಾಡಿಕೊಂಡಿದ್ದಡೆ ಕಾರ್ಯವಂಸಾಧಿಸಿಕೊಂಡು ತಾನಿಲ್ಲಿಗೆ ಬರುವೆ ಜವದಿಂ ಬಂದಬಳಿಕೆಲ್ಲರೊಂದಾಗಿ ಗುರುವಿದ್ದೆಡೆಗೆಪೋಗಬಹುದೆಂದೊಡಂಬಡಿಸಿ,ಸುವರ್ಣನಂತೆ ತ್ವರೆಯಿಂದೊರ್ವನೇ ನಡೆಯಲು, ಆ ಸಹಸ್ರಾಯುವಿನಿಂದ ಪ್ರತಿಷ್ಠಿತರಾದ ರಾಜಕುಮಾರರು ಮುಂದೆ ಪೋಗುವರೆ ವಿಘ್ನವಾದುದು, ಗುರುವಿದ್ದೆಡೆಗೆಪೋಗುವರೆ ಮುಖವಿಲ್ಲ, ಆದರಿಂದ ತದಾಗಮನಪರ್ಯಂತವಿಲ್ಲೇನಿಲ್ಲಬೇಕೆಂದು ನಿಶ್ಚೈಸಿ, ಸಣ್ಣದಾದೊಂದಾವರಣಮಂ ರಚನೆಮಾಡಿ ಸುಖದಿಂದಿರಲು. ಸಹಸ್ರಾಯು ಬರುತ್ತ ಮಾರ್ಗದೊಳು ಮರುಭೂಮಿಯಂಪೊಕ್ಕು ತೃಷ್ಣಾತುರನಾಗಿ ಜಲಮನ್ನರಸಿ ಕಾಣದೆ ಆಯಾಸದಿಂ ಮೆಲ್ಲಮೆಲ್ಲನೆ ಅಡಿಯಿಡುತಬರುತೊಂದುಕುಟೀರಮಂಕಂಡು ಯಾರೋ ಮನುಷ್ಯರಿಹರಿಲ್ಲೆಂದು ಕುಟೀರಮನ್ನೈದಿ ಜಲಾರ್ಥವಾಗಿಬಂದರಸುತಲ್ಲಿ ಮತ್ತಾರನ್ನೂ ಕಾಣದೆ ಆಕುಟೀರದ್ವಾರದೊಳು ರಾಜಕುಮಾರನಾಯಾಸದಿಂ ಮಲಗಿ ಗಾಢಸುಷುಪ್ತಿಯನೈದಲು. ಆ ಕುಟೀರದೊಳು ಮಲಗಿದ್ದ ಚೋರಪತ್ನಿಯು ಎಚ್ಚತ್ತು ಸ್ನಾನವಂಮಾಡಿ ಜಲವಂತರುವೆನೆಂದು ಪೋದಪತಿಸುತರು ಬಾರಲಿಲ್ಲೇನುಕಾರಣವೋ ಚಿರಕಾಲವಾದುದೆಂದು ಚಿಂತಿಸುತ ನೋಡುವೆನೆಂದುಕುಟೀರದ್ವಾರಕ್ಕೆ ಬರಲು, ಸಾಕ್ಷಾದಿಂದುಬಿಂಬದಂತೆ ಪೊಳೆಯುತ ಗಾಢನಿದ್ರಾಮುದ್ರಿತವಿಲೋಚನನಾದ ರಾಜಕುಮಾರನಂಕಂಡು ಕುಸುಮಾಸ್ತ್ರನನ್ನೀಳಿಪಚೆಲ್ವನಂನೋಡಿ ದ್ರವ್ಯಲೋಭದಿಂಮನೋನಿಗ್ರಹವಮಾಡಿ ಆತನಕಳೇಬರದೊಳೊಪ್ಪಳಿವ ಮಹಾನರ್ಘ್ಯರತ್ನಾಭರಣಂಗಳನಪಹರಿಸಬೇಕೆಂದು ಚೋರಪತ್ನಿ ಚಿಂತಿಸುತ್ತಿರಲು. ರಾಜಕುಮಾರನಂತಸ್ತಾಪದಿಂ ನಿದ್ರೆತಿಳಿದೆದ್ದು ನೇತ್ರಮಂತೆಗದು ಮಾನುಷಸ್ತ್ರೀಯುನ್ನನೋಡಿ ವಿಪತ್ಕಾಲದೊಳ್ಮೈತ್ರ್ಯಾವೆ ಇಲ್ಲವೆಂದು ಆ ಚೋರಪತ್ನಿಯಂಕುರಿತು ಜಲಾನಯನಮಂಸಂಜ್ಞೆ ಮಾಡಲು, ಆದಸ್ಯುಪತ್ನಿಯು ಎಚ್ಚತ್ತ ಬಳಿಕ ಸ್ವಚಿಂತಿತಾಭಿಲಾಷೆ ಎಂತಹುದೆಂದು ಚಿಂತಿಸುತ್ತಿದ್ದು ಸಂಜ್ಞಾಭಿಪ್ರಾಯಮಂತಿಳಿದುಪಾಯದೊರಕಿದುದೆಂದು ತ್ವರೆಯಿಂಕುಟೀರಮಂಪೊಕ್ಕು ಪತಿ

ಯಿತ್ತುವಿಷಕಲಶವಂತಂದೀಯಲು, ಕಾಂತಿಮಾಲಿನೀತನಯನತ್ಯಂತದಾಹ ದಿಂಪರೀಕ್ಷೆಮಾಡಲಾರದಾಕ್ಷಣದಿ ಬಿಂದುಮಾತ್ರವೂಬಿಡದೆ ಪಾನಮಂಮಾ ಡಿ ರಿಕ್ತಕಲಶಮಂನಾಕೆಯಕರದೊಳಿತ್ತು ಕಂಠದೊಳಿದ್ದ ದಿವ್ಯಮುಕ್ತಾಹಾ ರಮಂ ಎತ್ತಿ ಆಕೆಗುಚಿತಮಂ ಮಾಡಿ ಆಪತ್ಕಾಲದೊಳುಪಕೃತಿಮಾಡಿದೆ ಯೆಂದು ಬಹುಶ್ಲಾಘನೆಯಂಮಾಡಿ, ಯಾಮತ್ರಯಮಾದುದಂ ಕಂಡು ಅಸ್ತಮಯಾತ್ಪೂರ್ವದಲ್ಲಿ ಈ ಮರುಭೂಮಿಯಂದಾಂಟಬೇಕೆಂದು ಉ ದಕಪ್ರದಾನಮಂ ಮಾಡಿದ, ದಸ್ಯುಪತ್ನಿಯಂ ಕುರಿತು ಕಾರ್ಯಗೌರವದಿಂದ ಮುಂದೆ ಪೋಗುವೆನಿಲ್ಲಕೂಡದೆಂದು ಪೇಳಿ ಜವದಿಂ ಪೊರಟು ಖಡ್ಗಾ ಯುಧಮಂ ಕರದಲ್ಲಿ ಪಿಡಿದು ಚಾಪನಿಷಂಗಮಂ ಭುಜದಮೇಲಿಟ್ಟು ಕಾಲ ಭೈರವನಂತೆ ನಡೆಯುತ್ತಿರಲು. ಆ ಚೋರಪತ್ನಿಯು ಮಹತ್ಕಾರ್ಯಮಂ ನುದ್ದೇಶಮಾಡಿ ಸ್ತೋಕಮಾತ್ರ ಫಲಮಾದುದೆಂದು ದುಗುಡದಿಂ ಕುಟೀರ ಮಂಪೊಕ್ಕು ವಿಷಪಾನಮಂಮಾಡಿ ಬದುಕಿವನದೆಂತೊ ರಾಜಕುಮಾರನು ತಿಳಿಯಬಾರದು ದೈವಗತಿಯೆಂದೆನುತ ಹಾರಮಂ ಬಚ್ಚಿಟ್ಟು ಪರ್ಯುಷ ಮಾದ ಭುಕ್ತಶೇಷಾನ್ನಮನುಂಡು ಪತಿಯಾಗಮನಮಂನೋಡುತಿರಲು, ಆ ಸುಶರ್ಮತನಯನಂಧಕಾರಭಯದಿಂತ್ವರೆಯಿಂದ ಬರುತ ಸ್ವಶರೀರ ಪಿರಿದಾಗಿ ಸತ್ವವತಿವರ್ಧಿಷ್ಣುವಾಗಿ ಆಪಾದಮಸ್ತಕವು ಪುಳಕಿತಮಾಗಿ ಪಥದೊಳು ಪಾದಘಾತದಿಂವೃಕ್ಷಪಾಷಾಣಂಗಳು ಚೂರ್ಣಮಾಗುತ್ತಿರೆ ಚರಾಚರಪ್ರಾಣಿಗಳಿಂದನಿಬಿಡಮಾದ ಸಮಸ್ತಪ್ರಪಂಚವೂ ಈಷತ್ಕರಮಾ ಗಿ ಮನಕೆತೋರುವದರಿಂದ ರಾಜಕುಮಾರನನುಭಾವನೆಯಂಮಾಡಿ ಆಶ್ಚ ರ್ಯದಿಂದಿದಕೆಕಾರಣಮನಾಲೋಚಿಸಿ ಕಾಣದೆ ಆ ಜಗನ್ಮಾತೆಯಕರುಣ ದಿಂಪಾಗುವ ಕಾರ್ಯಮಂನಾನರಿಯಬಹುದೆ ಎಂದುಮನದಿ ನಿಶ್ಚೈಸಿಬರುತಲ ಸ್ತಮಯಮಾಗಲು, ವಿವಿಕ್ತರಮಣೀಯ್ಯಮಾದನೆಲೆಯಂ ಸೇರಬೇಕೆಂದು ಜವದಿಂ ಬರುತಿರಲು. ಮಾರ್ಗದೊಳೊಂದುವಿಶಾಲಮಾದ ಆಲಯಮಂಕಾ ಡು ಸಂತೋಷಚಿತ್ತನಾಗಿ ಆಲಯದೆಡೆಗೆಬಂದು ವಿವಿಕ್ತರಮಣೀಯ್ಯ ಪ್ರ ದೇಶಮಂನೋಡಿ ಸ್ವಶರಚಾಪ ಖಡ್ಗಮಂನಿರಿಸಿ ಬಹುದೂರ ಪಥಮಂನ ಡದು ಬಂದಿರುವೆನಾದೊಡೆಯುಂಕಿಂಚಿದಾಯಾಸವಿಲ್ಲ, ದಿನತ್ರಯದಿಂದಾಹಾ

ರವಿಲ್ಲದೆ ಬಿದ್ದೆಡೆಯುಂ ಕ್ಷುತ್ಪಿಪಾಸೆಗಳಿಲ್ಲವದರಿಂದ ಕಾರಣವೇನೋ ಯಿರುವದೆಂದು ನಿಶ್ಚೈಸಿ. ಕ್ಷಣಕ್ಕಲಸಿದಾಂಗನಾಲಿಂಗನಮಂ ಮಾಡಿ ಸ್ವಪ್ನಸುಷುಪ್ತಿಯಂನ್ನೆಯ್ದಿ ಯಾವತ್ರಯಾನಂತರದಿ ಸಿದ್ರೆ ತಿಳಿದೆಚ್ಚತ್ತು ದೇವಿಯಚರಣಾರವಿಂದಧ್ಯಾನಮಂ ಮಾಡುತ್ತ, ಉದಯದಿಗನುರಕ್ತನಾಗಿರೆ ದುಕುಳ್ಳಿರಲು. ಆಲಯಪುರೋಭಾಗದೊಳು ಮಹದುನ್ನತಮಾದ ಶವಿಾವೃಕ್ಷಮಂ ಸ್ಥಾನಮಾಡಿರುವನಿತ್ಯಪಿಶಾಚಂಗಳು ತಂಡತಂಡಗಳಾಗಿ ವೃಕ್ಷಮೂಲಮಂ ಪ್ರದಕ್ಷಿಣೆಮಾಡಿ ವೃಕ್ಷಾಗ್ರದಲ್ಲಿ ಮರೆಯಾಗುತಿರಲು. ಅದಂ ಕಂಡರುಣೋದಯವಾಗುವನಿತರೊಳನೇಕಸಹಸ್ರಪಿಶಾಚಹಿಂಡುಗಳು ಬಂದು ಯಥಾಕ್ರಮದಿಂದ ಪ್ರದಕ್ಷಿಣೆಯಂ ಮಾಡಿ ಮರೆಯಾದುದಂ ನೋಡಿ ರಾಜಕುಮಾರನೀವೃಕ್ಷಮೂಲದೊಳು ಏನೋವಿಶೇಷವಿರುವುದೆಂದು ನಿಶ್ಚಯಮಾಡಿ ದಿನಕರನುದಯಾಚಲಮನಲಂಕಾರಮಂಮಾಡಲು ಮುಂದೆ ಪೋಗುವೆನೆಂದು ಅಲ್ಲಿಂದ ಪೊರಟು ಬರುತೊಂದು ಮಹಾಪಥಮಂ ಕಂಡು ತದನುಸಾರಿಯಾಗಿನಡೆಯುತ್ತಿರಲು. ಅರಸ ಸ್ಥಾನದೊಳವಧರಿಸು, ರುರುವೆಂಬ ರಾಕ್ಷಸನು ಮಹಾಪರಾಕ್ರಮಿಯಾದ ರಾಜಕುಮಾರನ ಮಹಾಯುಧಪ್ರಹಾರದಿಂದ ನಿಕೃಂತದಕ್ಷಬಾಹುವಾದಕಾರಣವಾಮಹಸ್ತದಿಂ ಶಿರದಡಹುತ್ತ ಬದುಕಿದೆನು ಮುಂದೆ ಭಯಮಿಲ್ಲನಗೆ, ಪರಂತು ಜಂಬೂದ್ವೀಪದೊಳು ಬಂದುಕ್ಷಣವಿರಬಾರದೆಂದು ಯೋಚಿಸುತ ನಿಜಸ್ಥಾನಮಂಕುರಿತು ಬಂದು ಸಹೋದರರ ಕಾಣದೆ ಸಹೋದರಿಗೆ ವಂದನೆಯಂ ಮಾಡಿ ಆತ್ಮಾವಮಾನಮಂ ವಿಸ್ತಾರವಾಗಿ ತಿಳಿಸಿ ಕ್ಷಣಾರ್ಧಮಿಲ್ಲಿರಕೂಡದೆಂದು ನುಡಿಯಲದಂಕೇಳಿ ಸಹೋದರಿಯು ಸಹೋದರರೈವರು ಬರಲಿ ಸಾವಧಾನಮಂ ಮಾಡೆಂದು ತತ್ಕಾಲೋಚಿತಶೈತ್ಯೋಪಚಾರವಂ ಮಾಡುತ್ತಿರಲು. ಸಹೋದರರೈವರೂ ಬಂದು ಜ್ಯೇಷ್ಠನವಸ್ಥೆಯಂ ನೋಡಿ ವಿಷಾದಮಂನ್ನೈದಿ ವಿಷಾದನಂಗನೆಯುದಯವುಳ್ಳ ಮಾನುಷನಿಂದಾದ ವೃತ್ತಾಂತಮಂಕೇಳಿ ಕೋಪಾಟೋಪದಿಂ ಸಹಸ್ರಾಯುವಂ ಸಂಹರಿಸುವೆನೆಂದು ಪ್ರತಿಜ್ಞೆಯಮಾಡಲು. ರುರುವದಂಕೇಳಿ ಸಹೋದರರು ಮೃತ್ಯುಗ್ರಸ್ತರಾಗಿ ಪೋಗುವರೆಂಬ ಚಿಂತೆಯಿಂ, ಆ ರಾಜಕುಮಾರನ ಸಂಗಡ ಶೆಣಸಬ್ಯಾ

ಡರಿಂದು ಬಹುಪ್ರಕಾರವಾಗಿ ಒಡಂಬಡಿಸಲು, ಅವನಂ ಗಣನೆಮಾಡದೆ ದಿವಾಭೀತನಿವನೆಂದು ನಿಶ್ಚಯಮಾಡಿ, ತಾಯಿಗೆ ವಂದನೆಯಂ ಮಾಡಿ, ಚಂಡಕ್ರೋಧರೆಂಬವರೀರ್ವರು ರಕ್ಕಸರು ಜನನಿಯಂ ಕುರಿತು ಇಂದಿನುಪಹಾರಕ್ಕೆ ಸಹಸ್ರಾಯುವಿನ ಶೀರ್ಷಮಂತರುವೆವೆಂದು ನಿಜಾಯುಧಮಂ ಝಡಿದು ಪ್ರತಿಜ್ಞೆಯಂ ಮಾಡಿ ಗುಹೆಯಿಂ ಪೊರಟು ರಾಜಕುಮಾರನನ್ನರಸುತ್ತ ಬರುವ ಮಾರ್ಗದೊಳು ಕ್ರೋಧನು ಚಂಡನಂ ಕುರಿತು ಅಂಣ ಕೇಳು! ದಂಡಕಾರಣ್ಯದೊಳು ನಮ್ಮಣ್ಣನನೇಕಮಂದಿ ರಾಜಕುಮಾರರೊಡನೆ ಚಿರಕಾಲ ಯುದ್ಧಮಂ ಮಾಡಿ ಮಹಾ ಶೂರನಾದ ಸಾಕ್ಷಾತ್ಸತ್ಯವ್ರತನ ಶಿಷ್ಯರಂ ಮೂರ್ಛೆಯಂನೊಂದುವಂತೆ ಪ್ರಹಾರವಂಮಾಡಿ ಏಕಕಾಲದೊಳೆಲ್ಲರಂ ಭಕ್ಷಿಸುವೆನೆಂಬನಿತರೊಳು ಈ ಪಸುಳೆಬಂದ ಕ್ಷಣಾರ್ಧವಲ್ಲಿ ಮಹಾಪರಾಕ್ರಮಿಯಾದ ತಮ್ಮಣ್ಣನ ಬಾಹುವಂಕತ್ತರಿಸಿ ಶರಣಾಗತನಾದ ಕಾರಣ ಶಿರವಂತರಿಯದೆ ಬಿಟ್ಟನದರಿಂದ ಆ ಸಹಸ್ರಾಯುವು ಸಾಧಾರಣನಾಗಿ ಕಾಣುವದಿಲ್ಲ, ಬರಿದೆ ಅಪಾಯಮನರಸದೆ ಪೋದೆವಾದೊಡೆ ಅಪಾಯವಾಗದಿರದವರಿಂದ ಅವನೆದುರ್ಗೆ ಪೋಗೆ ಸುಮ್ಮನಿರನೆಂದು ನುಡಿಯಲು. ಅನುಜನ ಮಾತಂ ಕೇಳಿ ಚಂಡನು ಸತ್ಯವೆಂದು ತಿಳಿದು ಇದಕೊಂದುಪಾಯಮಂ ಚಿಂತಿಸಬೇಕೆಂದು ಮನದೊಳಾಲೋಚನೆಮಾಡುತೀರ್ವರೊಂದಾಗಿ ಮುಂದೆ ನಡೆಯುತೊಂದು ವನಮಂ ಕಂಡು ಮಾನುಷಸಂಚಾರಯೋಗ್ಯಪ್ರದೇಶವೋ ಯೇನೋ ಎಂದು ಮಾನುಷಾಕಾರವಂ ತಾಳಿ ವನಮಂ ಪೊಕ್ಕು ನೋಡುತ್ತ ಬರುತ್ತಿರಲು. ಒಂದು ತಳಿರರಸಾಲತರುಮೂಲದೊಳು ಸ್ವಕೀಯಮಾದ ದಿವ್ಯಾಯುಧಂಗಳಿಂದಲಂಕೃತನಾಗಿ ಸಾಕ್ಷಾತ್ಸ್ಮರಜನ್ಮನಂತೆ ಬಂದಿರುವ ರಾಜಕುಮಾರನಂ ಕಂಡು ಕುರುಹಂನರಿಯದೆ ಯಾರೋ ಬಂದಿರುವನಿವನಂಉಪಾಯದಿಂ ಭಕ್ಷಿಸಬೇಕೆಂದು ಯೋಚಿಸಿ ಸತ್ವಮಂ ನರಿಯದೆ ಯತ್ನವಂ ಮಾಡಬಾರದೆಂದು ಮೆಲ್ಲಮೆಲ್ಲನೆ ಬಂದು ನಾತಿದೂರದಿ ನಿಂದು ಮೃತ್ಯುವಿನ ಜಿಹ್ವೆಯಂತಿರುವ ನಿಸ್ತ್ರಿಂಶವಂ ಪಿಡಿದು ನಿರ್ಭಯದಿಂದ ಸಕಲ ಭುವನಂಗಳೀಷತ್ಕರಂ ತನಗೆಂಬಂತೆ ಘಂಟಾಪತನ ನಿರೀಕ್ಷಿಸುತ ಪ್ರತಾಪವೇ ಮೂರ್ತಿಭವಿಸಿದಂತೆ ಅತಿ ತೇಜಸ್ವಿಯಾಗಿ ಮಲಗಿರುವ

ರಾಜಕುಮಾರನಂ ಕಂಡು ತದವಲೋಕನಮಾತ್ರದಿಂದಲೇ ತ್ರಸ್ತಹೃದಯರಾಗಿ ಪರಸ್ಪರ ಮುಖಮಂ ನೋಡಿ ಭ್ರೂಸಂಜ್ಞೆಯಿಂದ ಹಿಂಮೆಟ್ಟಿ ಮರೆಯಾದಬಳಿಕೀರ್ವರೊಂದಾಗಿ ಈತನಿವನೆಂದು ನಿಶ್ಚಯಮಂ ತಿಳಿಯದೆ ದೃಷ್ಟಿಪಥಮಂ ನೈದಲಾಗದೆಂದು ಪ್ರಚ್ಛನ್ನರಾಗಿ ಇರುತಿರಲು. ಬಂದು ಕಂಠೀರವನು ಗಜಶಾಬನುಂ ನಟ್ಟಿಬರಲು ಆ ಕರಿ ಕಪೋತನು ಮರಣಭಯದಿಂದ ದಿಕ್ಕುದಿಕ್ಕುಗಳೆಲ್ಲವಂ ಪೋಡ್ಯಾಡಿ ಸತ್ವಕುಂಠಿತವಾಗಿ ತ್ರಾತರಂ ಕಾಣದೆ ಮೃತನಾದೆನೆಂದು ನಿಶ್ಚೈಸಿ ಕಾಯಮಂ ನೀಡಾಡುವಸಿತರೊಳು, ಕಾಂತಿಮಾಲಿನೀತನಯನಂ ಕಂಡು ತ್ವರೆಯಿಂದ ಬಂದು ಮರೆಪೋಗಲು, ರಾಜಕುಮಾರನಾಕರಿಕಲಹನಂಕುರಿತು ಭಯಪಡಬ್ಯಾಡರಕ್ಷಿಸುವೆನಡುಗದಿರೆಂದು ಅಭಯಮಂ ನಿತ್ತು ನಿಂದಿರಲು, ಪಂಚಾಸ್ಯನಾಕ್ಷತ್ರಿಯಪೋತನಂ ಕಂಡು ಮಹದಾರ್ಭಟೆಯಂ ಮಾಡಿ ತನ್ನಾಹಾರಮಂತಡೆಯೆ ನೀನಿಂದ್ರನೋ, ಚಂದ್ರಶೇಖರನೋ ಕೇಳು ಅವರಡ್ಡಹಾಯ್ದಡೆಯುಂ ಎನ್ನಕಬಳವಂ ಬಿಡುವನಲ್ಲ, ಮಾನುಷನ ಪಾಡೆನಗೀಡೆ ನೋಡೆನುತಾರ್ಭಟಸಲು. ಆ ಸಹಸ್ರಾಯುವು ಬ್ರಹ್ಮರಾಕ್ಷಸನ ಕೃಪೆಯಿಂದ ನಿಖಿಲತಿರ್ಯಗ್ಜಂತುಭಾಷೆಗಳಂ ತಿಳಿದಿರುವನದರಿಂದಲಿಲವೋ ಪಂಚಾಸ್ಯ; ನಾವು ಕ್ಷತ್ರಿಯರು ಮರೆಬಿದ್ದವನನೊಪ್ಪಿಸಲಾಗದದರಿಂದ ಗಳಹದಿರು ಸೈರಿಸಿದೆನೀಗ ನೀನಾಡಿರುವ ದುರ್ವಾಕ್ಯವನ್ನು, ಆದರೇನಾಯ್ತು ನೀನು ಬಂದಂತೆ ಪೋಗೆನಲು. ಕನಲಿಕಡುಸತ್ವದಿಂ ಲಂಘಿಸಲು, ಖಡ್ಗಮಂ ನೆತ್ತಿ ಮೃದುಪ್ರಹಾರಮಂ ಮಾಡೆ ಹರ್ಯಕ್ಷನಂಗಮ ಕತ್ತರಿಸಿ ತುಂಡುತುಂಡಾಗಿ ನೆಲಕ್ಕೆ ಬಿದ್ದುದಿನ್ನೆಂತುಟೋ ಶಿವಶಿವಾ! ಸಹಸ್ರಾಯುವಿನ ಸತ್ವವಿಂತುಹರ್ಯಕ್ಷಯಮಕ್ಷಯಮಕ್ಷಯವನೈದಲು, ಗಜಶಾಬರನಂ ಕರದು ನ್ನೈದಡವಿ ಪೋಗೆಂದು ನುಡಿಯಲು, ಆ ಕರಿ ಕಪೋತನು ಸೊಂಡಿಲನೆತ್ತಿ ನಮಿಸುತಪ್ಪಣೆಗೊಂಡು ನಡೆಯಲು, ಸುಶರ್ಮತನಯನು ಅಲ್ಲಿಂದ ಮುಂದಕುತ್ತರಾಭಿಮುಖನಾಗಿ ನಡೆಯಲು. ದೈತೇಯರೀರ್ವರೀವೃತ್ತಾಂತಮಂ ಕಂಡು ಈತನೆ ಸಹಸ್ರಾಯುವೆಂದು ನಿಶ್ಚೈಸಿ ಈತನೊಳು ಯುದ್ಧಮಂ ಮಾಡಿ ಕೊಲುವುದಸಾಧ್ಯವದರಿಂದೀತನಲ್ಲಿರುವ ಕೃಪಾಗುಣವನವಲಂಬಿಸಿ ಕೃತ್ರಿಮೋಪಾಯದಿಂ ಕೊಲ್ಲಬೇ

ಕಲ್ಲದಿಂನುಪಾಯಾಂತರವಿಲ್ಲ ವಿದು ನಿಶ್ಚಯವೆಂದು ತಿಳಿದು, ಕಿಂಚಿದ್ದೂರವಾತನೊಡನೈತಂದು ಮಾನುಷಪ್ರದೇಶವಮಂ ಕಂಡು ರಾಜಕುಮಾರನು ಬರುವ ಮಾರ್ಗದೊಳು ಮುಂದೆಮುಂದೆ ಪೋಗಿ, ಕ್ರೋಧನಂ ಕುಮಾರನವಮಾಡಿ ವೃಕ್ಷಮೂಲದೋಳ್ಬಿಗಿದು ಕಟ್ಟಿ ಚಂಡಸದೃಶ್ಯನಾಗಲು, ಕ್ರೋಧನು ಬಾಲಕನಂತೆ ಮಾತಾಪಿತೃಗಳ ಪೆಸರಿಡಿದು ಕೂಗುತ್ತ ಸ್ವಜನಪರಿವಾರಮಂ ನಡಿಗಡಿಗೆ ನೆನೆಯುತ್ತ ದೈವಮಂ ಬೈಯ್ಯುತ್ತ ಯಾರಾದೊಡೆನ್ನ ಬಿಡಿಸುವರುಂಟೆ ಎಂದು ಮೊರೆಯಿಡಲು, ಬಾಲಕನ ಧ್ವನಿಯಂ ಕೇಳಿ ಸಹಸ್ರಾಯುವು ಶಬ್ದಮನಾಲೈಸಿ ಪೋಗಿ ನೋಡಬೇಕೆಂದು ಶಬ್ದಪಥಮಂ ಪಿಡಿದು ಶಿಶುವಿದ್ದೆಡೆಗೆಬಂದು ಬಾಲಕನಂಕಂಡು ನೀನ್ಯಾರೆಂದು ಕೇಳಲು, ಆ ಕಪಟಬಾಲಕನು ಘೋರೆಂದು ಮೊರೆಯಿಡುತ್ತ ಬದ್ಧನಾದೆನ್ನ ಬಿಡಿಸಿದೆಯಾದೊಡೆ ವೃತ್ತಾಂತಮಂ ಪೇಳುವೆನೆನಲು, ಆ ನಯಶಾಲಿಯಾದ ರಾಜಕುಮಾರನು ರಜ್ಜುವಂ ಕತ್ತರಿಸಲೋಸುಗ ಕೋಶದಿಂ ಖಡ್ಗವಂತೆಗೆಯಲು, ಆ ಕ್ರೋಧನದ ನೋಡಿಜ್ಯೇಷ್ಠನಾದ ದುರುವಿನ ಬಾಹುವಂ ಕತ್ತರಿಸಿದಂತೆನ್ನ ಬಾಹುಗಳ ಕತ್ತರಿಸುವನೋಏನೋ ಎಂದು ಹೃದಯದೊಳು ಭಯದಿಂ ನೋಡುತಿರಲು. ಸಹಸ್ರಾಯುವು ರಜ್ಜುವಂಕತ್ತರಿಸಿ ಬಂಧನದಿಂದ ಬಿದಿಸಲು, ಖಳನು ಕಂಬನಿದುಂಬಿ ತಾನು ಬ್ರಾಹ್ಮಣಪುತ್ರಸಮಿದಾಹರಣಾರ್ಥವಿಪಿನಕ್ಕೆಬಂದು ಸಮಿಧೆಯಂ ಕೊಯ್ಯುತ್ತಲಿರಲು. ಘೋರರೂಪಿಯಾದ ರಕ್ಕಸನೋರ್ವನೆನ್ನನು ಭಕ್ಷಿಸುವೆನೆಂದೆತ್ತಿಕೊಂಡು ಬಂದು ತರುಮೂಲಕ್ಕೆ ಬಿಗಿದು ಸಂಹರಿಸುವರೇ ಖಡ್ಗಮಂ ತರುವೆನೆಂದು ಪೋಗಿರುವನಿದು ವೃತ್ತಾಂತಮೆಂದು ನುಡಿಯಲು. ರಾಜಶಾರ್ದೂಲನದಂ ಕೇಳಿ ಆ ಬಾಲಕನಂ ಕುರಿತು ನಿನ್ನಂ ರಕ್ಷಿಸುವೆನಂಜದಿರು, ಆ ದಿತಿಜಾಪಶದನು ಬರಲಿ ಶಿರನಂ ಚಂಡಾಡುವೆನು, ನಿನ್ನ ಜನನಿ ಜನಕರು ಬಂಧು ಬಳಗಮೊದಲಾದವರೆಲ್ಲಿಹರು ಪೇಳು ನಿನ್ನನಲ್ಲಿಗೆ ಕರದುಕೊಂಡು ಪೋಗುವೆನೆನಲು, ರಾಕ್ಷಸನು ಬಂದ ಮಾರ್ಗವು ತನಗೆ ತಿಳಿಯದೆನಲು, ಸಹಸ್ರಾಯುವಾನುಡಿಯಂಕೇಳಿ ಸುಮ್ಮನಿರಲು, ರಾಕ್ಷಸನು ಕೈಮುಗಿದು ಈಮಹದ್ಭಯದಿಂ ದುದ್ಧಾರಮಾಡಿದನಿನ್ನೊಡನೆ ಬರುವೆನೆಂದೆನಲು, ಸಹಸ್ರಾಯುವದಂಕೇಳಿ

ಹಾಗೆಆಗಲೆಂದೊಡಂಬಟ್ಟು ಮುಂದೆನಡೆಯಲು, ಚಂಡನು ಶ್ರೋತ್ರೀಯ ವೇಷಮಂಧರಿಸಿ ವೃದ್ಧಾಪ್ಯದಿಂ ನಡುಗುತ ಪುತ್ರನಂ ಕಾಣದರಸುವನಂತೆ ಕೂಗುತ್ತಲೋಡಿಬಂದು ಸಹಸ್ರಾಯುವಿನಸಂಗಡ ಪೋಗುತ್ತಿರುವ ಪುತ್ರನಂ ಕಂಡು ಎಲೋ ಮಗನೆ ವೃದ್ಧಾಪ್ಯಕಾಲದೊಳೆನ್ನ ಬಿಟ್ಟು ಯಾರೊಡನೆ ಪೋಗುವೆ ನಿಲ್ಲುನಿಲ್ಲೆಂದುಕೂಗುತ್ತಬಂದು ಹಸ್ತವಂಪಿಡಿದು ಬಾರೆಂದು ಕರೆಯಲು, ಆ ಶಿಶುವೇಷವಂ ಧರಿಸಿರುವ ಖಳನು ರಾಜಕುಮಾರನಂ ಕುರಿತು ಏನೈಯ್ಯಾ, ನೀನಭಯಮನಿತ್ತುದೇನಾಯಿತು ಯಾರೊ ಮಾರ್ಗಸ್ಥರು ತನ್ನ ತನಯನೆಂದೆನ್ನ ಕರಮಂ ಸೆಳದು ನೂಕುವನು ನೋಡೆಂದು ಕೂಗಲು, ಆ ಕೋಸಲಪತಿಹಿಂತಿರುಗಿನೋಡಿ ವೃದ್ಧನಂಕುರಿತು ಏನುಕಾರಣ ಪುತ್ರನಂಪಿಡಿದೆಳೆಯುವೆ ಎಂದು ಕೇಳಲು, ಆ ವೃದ್ಧನು ಕೇಳ್ಳೈ ರಾಜಕುಮಾರನೆ; ವೃದ್ಧಾಪ್ಯಕಾಲದಲ್ಲಿ ಓರ್ವನಾಗಿರುವ ಸುತನು ಸಹಾಯಕ್ಕೊದಗದೆ ಉಪೇಕ್ಷೆಯಂ ಮಾಡಿ ಮನಸ್ಸುಬಂದಂತೆ ಪೋಗುವೆನೆಂದೊಡೆ ಬಿಡುವುದುಚಿತವೇ ಕೇಳೆಂದು ನುಡಿಯಲು, ಮಹಸ್ಮತೀಶನಾವಟುವಂಕುರಿತು ಜನಕನತಿಜರಾತುರನಾಗಿ ಏಕಪುತ್ರನಾಗಿರುವಲ್ಲಿ ಆತನಂಬಿಟ್ಟು ಬರುವುದು ಯುಕ್ತವಲ್ಲ ವೃಥಾಮಾರ್ಗವಂತಪ್ಪಿ ನಡೆಯಲಿಬೇಡ ಪಿತನೊಡನೆ ಪೋಗೆಂದೆನಲು, ಕಪಟವಟುವು ಸಹಸ್ರಾಯುವಂ ಕುರಿತು ನೀನಿತ್ತಭಯಮಂ ನಿರ್ವಾಹಮಾಡುವುದು ನಿನಗೆಸಾಧ್ಯವಾದೊಡೆ ನಿನ್ನ ನಿಜಖಡ್ಗದಿಂ ಸಂಹರಿಸುವದಲ್ಲದೆ ಎನ್ನಂ ಪರಾಧೀನವಂ ಮಾಡದಿರೆಂದು ವಂದನೆಯಂಮಾಡಿ ಬೇಡುತಿರುವ ವಟುವಂಕುರಿತು ಹಾಗಾದಡೀತನ್ಯಾರೆಂದು ಕೇಳಲು, ಯಾರೊ ತಾನರಿಯೆ! ಅರಿಯದವನ ನೆಲೆಯಂಕೇಳಿದಡೆ ತಾನೆಂತುಪೇಳುವೆನೆಂದು ನುಡಿಯಲು, ಸಹಸ್ರಾಯುವು ವೃದ್ಧಾಭಿಮುಖನಾಗಿದೇನಾಶ್ಚರ್ಯವೆಂದು ಕೇಳಲು, ಆ ವೃದ್ಧನು ಕಾಲವಿಪರ್ಯಾಸಮಲ್ಲದಿನ್ನೊಂದಲ್ಲವೆನಲು, ಕೋಸಲಾಧಿಪನದಂ ಕೇಳಿ ಹಾಗಾದಡೀಅರಣ್ಯದೊಳೋರ್ವ ಬಾಲಕನಂ ತರುವಿಂಗೆ ಕಟ್ಟಿದೆ ಯಾಕೆಂದು ಕೇಳಲು, ವೇಷಧಾರಿಯಾದ ರಾಕ್ಷಸನು ವಿದ್ಯಾಭ್ಯಾಸವಂ ಮಾಡದಹರ್ನಿಶವೂ ಕ್ರೀಡಾಸಕ್ತನಾಗಿರುವನೆಂದು ಪೇಳಲು ಕೇಳನವರಿಂದ ವೃಕ್ಷಮೂಲಕ್ಕೆ ಕಟ್ಟಿದೆನು, ಮನೆಯೊ

ಳಗೆ ಶಿಕ್ಷಿಸಿಲು ಸತಿಯು ದುಃಖಿಸುವಳು, ಮರ್ಮಯಿಂದವರಿಂದ ಕಟ್ಟಿದೆ ಸರಣ್ಯದೊಳೆಂದು ನುಡಿಯಲು, ದ್ವಿಜವಿಸ್ಮಿತನಾಗಿ ವಟುವಂ ಕುರಿತು ಇದೇ ನಿಶ್ಚರಿಯೆಸಲು, ವಟುರೂಪಿಯಾಗಿರುವರಕ್ಕಸನು ಈತನೆನಗೆ ಪಿತನಲ್ಲ ಇವನ ಮಾತಿಗೆ ವೃಥಾ ಮೋಹಿಸಬ್ಯಾಡ ಕೊಟ್ಟ ಭಾಷೆಗೆ ತಪ್ಪದಿರೆನಲು, ವೃದ್ಧನಂ ಕುರಿತು ಏನೈಯ ಬಾಲಕನು ಇಂತೆನಲು ತಾನೆಂತು ನಿಮ್ಮೊಡನೆ ಕಳುಹಲೆಂದೆನಲು, ಆ ಕುಹಸಾದ್ವಿಜನು ರಾಜಕುಮಾರನೆ ನೋಡು ರೂಪುಧ್ವನಿ ಮೊದಲಾದ ಕುರುಹಂ ಸುತನಹುದೋ ಮೇಣಲ್ಲವೊ ಯಿಂತಲ್ಲದೆ ನಗೆ ಏಕ ಪುತ್ರನು ಮೂರ್ಖನಿವ ಕರಕೊಂಡು ಪೋಗಿ ಬಾಧಿಪನೆಂದು ಬಾಲ್ಯಬುದ್ಧಿಯಿಂದ ಈರೀತಿಯಾಡುವನು. ವೃದ್ಧಾಪ್ಯಕಾಲದೊಳು ಪುತ್ರನೋರ್ವನಸಗಲಿತಾನಿರುವೆನೆಂತಕಟಎಂದುಮರುಗಲು, ವಟುರೂಪಿಎಂದನತಿಭಯದಿಂದ ರಾಜಹಂಸನೆ ಕೇಳು, ತಂದೆಯಾದೊಡಿವನೊಡನೆ ತಾನುಪ್ರೋಗದಿರುವೆನೆ, ಮಹದ್ಭಯವೆವಗೆ ತೋರುತಿದೆ, ಒಪ್ಪಿಸದಿರೀತಂಗೆನುತ ವಂವನೆಯಂ ಮಾಡೆ, ಸಹಸ್ರಾಯುವು ಇವರೀರ್ವರ ನುಡಿಯಂ ಕೇಳಿ ಆಕಾರ ಮಾತು ಗಮನಾದಿಗಳು ಸಮನಾಗಿ ತೋರುವುದು ,ಯದ್ಯಪಿ ರಕ್ಕಸರು ಕಾಮರೂಪಿಗಳು, ಕಳುಹಿದಡೆ ಬಾಲಕನನೇನಮಾಡುವನೊ, ಕಳುಹದಿರೇ ವೃದ್ಧಬ್ರಾಹ್ಮಣನು ಬ್ರಹ್ಮಹತ್ಯವನೊಪ್ಪಿಸುವನೋ ಏನೋ ಕಾಣೆ, ಬಾಲಕಗೆ ತಾಸಿತ್ತಭಾಷೆಗೆ ತಪ್ಪಬಾರದೆಂದು. ಎಂತು ಮಾಡುವೆಯೆಂದು ಚಿಂತಿಸುತ್ತಿರಲು, ದಿನಮಣಿಯು ಅಸ್ತಗಿರಿಯನವಲಂಬಿಸಲು, ಕಮಲಿನಿಯಂ ನೋಡಿ ನಗುವಂತರಳೆಕುಮುದಿನಿಯು ಮೆಲ್ಲಮೆಲ್ಲನೆ ತಪೋನಿಕರದಿಕ್ಕುಗಳನಾವರಿಸಿ ತುಂಬಿದುದು, ನಭದೊಳಗೆ ತಾರೆಗಳ್ಮೂಡಿದವು, ರಾಜಕುಮಾರನು ನೋಡಿ ಇವರೀರ್ವರ ವಿವಾದದಿಂ ವೃಥಾಕಾಲಾತಿಕ್ರಮಣವಾದುದು ಮುಂದೆ ಪೋಗುವರೇ ಗಾಢಾಂಧಕಾರವಾವರಿಸಿಕಾಣದು ಮಾರ್ಗವಿಲ್ಲಿರಲು ಎಡೆಯಿಲ್ಲ, ಏನೈವೆನಾದಡಾಗಲಿ ಜಗನ್ಮಾತೆಯೇ ತನಗೆ ಗತಿ, ಇಂದಿನರಾತ್ರಿ ಈ ಅರಣ್ಯದೊಳು ಕಾಲಹರಣವಮಾಡಿ ಪ್ರಾತಃಕಾಲದೊಳಿವರೀರ್ವರೊಡಂಬಡಿಸಿ ಮುಂದೆ ಪ್ರಯಾಣಮಂ ಮಾಡಬೇಕೆಂದು ನಿಶ್ಚಯಮಾಡಿ, ಪಿತಾಪುತ್ರರೀರ್ವರಂ ಕರದು ಈಗ ನಿಮ್ಮಯ ತೊಡಕಬಿಡಿಸಲೆ

ನಗಳೆವಲ್ಲ ಈರಾತ್ರೆ ಈವನವೃಕ್ಷದಡಿಯಲ್ಲಿ ಮುಪ್ಪರು ಮಲಗಿದ್ದರ ವಿಯುದಯದೊಳಗೆದ್ದು ವಿಲಾಶವಾದ ನಗರವಂ ಪೊಕ್ಕು ಅಲ್ಲಿ ನಾಲ್ವ ರೇನಪೇಳುವರೋ ಅಂತುಕೇಳ್ವರೀವ್ಯಥಾಕಲಹವಂ ಮಾಡದಿರಿ ಎಂದೊ ಡಂಬಡಿಸಲು, ಆ ಕಪಟವಿಪ್ರರು ಮನದೊಳು ರಾತ್ರಿನೀನುಳಿದಡೆಕಣಾ ರ ವಿಯುದಯಕೇಳುವುದು; ಮೂಢ! ನೋಡೆಂದುಹರುಷದಿಂ ಸಹಸ್ರಾಯು ವಂ ಕುರಿತು ಹಾಗೆ ಆಗಲೆಂದೊಡಂಬಟ್ಟು ಮೌನದಿಂವನದ್ರುಮಮೂಲವ ನಾಶ್ರೈಸಿ ಮಲಗಲು. ಸಹಸ್ರಾಯುವಂಧಕಾರದೊಳು ಜಲಾಶಯವನೆಲ್ಲಿ ಯುಂ ಕಾಣದೆ ಮಾನಸಿಕನಿತ್ಯನಿಯಮಾದಿಗಳಂ ಮಾಡಿಗೋತ್ರಜಾಚರಣ ಸರಸೀರುಹವಮನದಲ್ಲಿನೆನದು ನಿರ್ಭಯದಿಂದ ಕಾಂತಾರವಂತಃಪುರದಂ ತೆ ತೋರಲು ನಿಜಾಯುಧಂಗಳಂ ಶಿರಕೆಂಬುಮಾಡಿಮಾರ್ಗಧಾವನೆಯಿಂದ ಕಿಂಚಿದಾಯಾಸ ಮುಳ್ಳವನಾಗಿ ಶಯನಮಂಮಾಡಲು, ದುರ್ಭಗರಾದ ರಾಕ್ಷ ಸರು ತಾವುನಿದ್ರಾಭಿನಯಮಂಮಾಡುತ ತತ್ಸುಷುಪ್ತಿಕಾಲವಂ ನಿರೀಕ್ಷಿ ಸಿ ಈತನಂಮುಟ್ಟಿದಡೆ ತಮಗೆ ಮೃತಿಯಾಗದಿರದು, ಅಧಟನಿವ ಪಟು ಭಟನು ಮಲಗಿರುವ ಹರಿಯಕೆಣಕಲುಬಾರದುಉಪಾಯಾಂತರದಿಂದಸಂಹ ರಿಸಬೇಕೆಂದೀರ್ವರಾಲೋಚಿಸಿ, ಪರ್ವತವಂ ತಂದು ಮಲಗಿರುವನಮೇಲೆ ಅಪ್ಪಳಿಸಿದಡೆ ಜವದೊಳಗೆ ಮರಣಮಂನೈದುವನು, ತರುವಾಯ ಮೃತ ನಕಳೇಬರವಂತಿಂದು ಪೋಗುವೆವೆಂದುನಿಶ್ಚೈಸಿ,ನಿಜರೂಪಮಂಧರಿಸಿ ಈ ರ್ವರೊಂದಾಗಿ ಮಹಾಗಿರಿಯಂ ಕರದಿಂದೆತ್ತಿ ತಂದು ನಿದ್ರಾಧೀನನಾಗಿರುವ ಕಾಂತಿಮಾಲಿನೀತನಯನಮೇಲೆ ಹಾಕಿ ನೀನು ಮೃತನಾಗಪೋದೆಯಾ ಎಂದು ಮಹದಟ್ಟಹಾಸವಂ ಮಾಡಿ ಶತ್ರುಮೃತನಾದನೆಂದರಿದು ಮರಣ ಮಂ ಪರೀಕ್ಷಿಸಿ ಭಕ್ಷಿಸಬೇಕಲ್ಲದೆ ತವಕಪಡಬಾರದೆಂದು ಪ್ರಾತರಾಗಮ ನವಂ ನೋಡುತಿರೆ. ಪಾರ್ವತೀಕರುಣದಿಂದಮೃತಪಾನದಿಂದ ಸಹಸ್ರಾ ಯುವಿನ ಶರೀರದಮೇಲೆ ಬಿದ್ದ ಮಹಾಗಿರಿಯು ಮಶಕಪ್ರಾಯವಾಗಿ ನಿದ್ರಾ ವಿಘ್ನಮಂ ಮಾಡಲರಿಯದೆ ನೋಡಿದವರ್ಗೆ ಸಂಹರಿಸಿದಂತೆ ಬಿದ್ದಿರಲು. ಸ್ವಭಾವವಾಗಿ ಅರುಣೋದಯದಲ್ಲಿ ಸಹಸ್ರಾಯುವಿಂಗೆ ನಿದ್ರೆತಿಳಿದು ವಿಶಾ ಲವಾದನಯನಾರವಿಂದಗಳತೆಗೆದು ಅನೇಕತರುಲತಾಗುಲ್ಮ ಮೃಗ ಪಕ್ಷಿಸ

ರ್ಪ ಹರಿ ಕರಡಿ ಶಾರ್ದೂಲವೇ ಮೊದಲಾದ ಚರಾಚರಪ್ರಾಣಿಗಳಿಂದೆ ಸಿಬಿಡಿತವಾಗಿರುವ ಗಿರಿಯಂ ಕಂಡು ರಾಜಕುಮಾರನಿದೇನಚ್ಚರಿಯೆಂದು ಕ್ಷಣಮಾಲೋಚನೆಮಾಡಿ ಸಮೀಪದೊಳಗಿದ್ದ ಕಪಟವಿಪ್ರರಂ ನರಸಿ ಕಾಣದೆ ಏನೋ ಪ್ರಮಾದಬಂದಿರುವುದೆಂದು ತಿಳಿದು, ಇತಃಪರ ತಡಮಾಡಬಾರದೆಂದು ಏಳುವದಕ್ಕೆ ಯತ್ನವಂ ಮಾಡಲು, ಆ ಮಹಾಪರ್ವತವು ತೂಲಪ್ರಾಯವಾಗಿ ತೋರಲದಂ ಬಾಹುಗಳಿಂದೆತ್ತಿ ಕಡೆಗೆ ಬಿಸುಡಲು, ಆ ಪರ್ವತವು ಒಂದು ಕ್ರೋಶಮಾತ್ರ ಪೋಗಿ ಬೀಳಲು, ರಾಜಕುಮಾರನು ಸತ್ವರವೊಳೆದ್ದು ಪರಿತಃನೋಡಲು ತನ್ನಭಕ್ಷಿಸಲು ಘೋರಾಕಾರದಿನಿಂದಿರುವ ಮಹೋದರೀಪುತ್ರರಂಕಂಡು ಈ ಮಹತ್ಕಾರ್ಯವು ಈ ದುರಾತ್ಮರಿಂದಲೇ ನಡದಿರುವಲ್ಲಿ ಸಂಶಯವಿಲ್ಲ ಸಂಹರಿಸುವೆನಿವರನೆಂದು ಕೋಪಾಟೋಪದಿಂ ಧನುರ್ಬಾಣವಂಪಿಡಿದು ಏಳಲು, ಆ ದುರಾಶಯರಾದರಾತ್ರಿಂಚರರತಿಭಯಂಕರ ಕಾಲಭೈರವನಂತೆ ಸಮ್ಮುಖದೊಳು ಶರಸಂಧಾನವಂ ಮಾಡುವ ರಾಜಕುಮಾರನಂ ನೋಡಿ ತಾವು ಮಾಡಿದ ಕಪಟೋಪಾಯ ನಿರರ್ಥಕಮಾದುದಕಟಕಟ, ಇತಃಪರ ಯುದ್ಧವೇಮಾಡಬೇಕಲ್ಲದಿನ್ನಿಲ್ಲ ಮಾರ್ಗಾಂತರವೆಂದು ಚಾಪವಂ ಪಿಡಿದು ಅಸಂಖ್ಯಾತಬಾಣನಿಕರಗಳಂ ಪ್ರಯೋಗಮಾಡಲು, ಸಹಸ್ರಾಯುವೀರವರನು ವರ್ಷಿಸುತ್ತಿರುವ ಶಿಲೀಮುಖನಿಕರಗಳನ್ನು ನಿಜಭುಜಾದಂಡಸ್ತನಿತ ಮೌರ್ವೀನಿನಾದವಿತ್ರಾಸಿತ ತ್ರಿಭುವನವೀರನಾದ ರಾಜಕುಮಾರನು ಸ್ವಚಾಪಾಚ್ಯುತಾಶುಗಪರಂಪರೆಗಳಿಂದ ಕತ್ತರಿಸಿ, ದಿವ್ಯಾಸ್ತ್ರಗಳಿಂ ಪೂರಾಯುಧಾಯುವಂ ಮಾಡಿ ಸರ್ವಾಸ್ತ್ರನಿಂ ಬಿಗಿದು ಸಮೀಪಕ್ಕೆ ಪೋಗಿ ಶಿರವಂ ತರಿವೆನೆಂದು ಶಿಖಿಯಂ ಪಿಡಿದು ಕೆಡಹಿ ಪಾದಗಳಿಂದೊದೆಯಲು, ಆ ದುರಾತ್ಮರಾದ ರಕ್ಕಸರು ಸಂಹರಿಸುವನೆಂದು ನಿಶ್ಚಯಮಾಡಿ, ಅಂಣನನುಡಿಯಂ ಕೇಳದೆ ಕೆಟ್ಟೆವೆಂದು ಮರುಗುತ್ತ ರಾಜಕುಮಾರಂಗೆ ಕೈಮುಗಿದು ಶರಣಾಗತರಾದೆಮ್ಮಪರಾಧವಂ ಕ್ಷಮಿಸಿಪ್ರಾಣದಾನವಂ ಮಾಡಬೇಕೆಂದು ಬಹುಪ್ರಕಾರದಿಂ ಮೊರೆಯಿಡಲು, ದಯಾನಿಧಿಯಾದ ಸುಶರ್ಮಾತ್ಮಜನು ದುರಾತ್ಮರಂ ಕುರಿತು ನೀವು ಯಾರು ಎಲ್ಲಿಂದ ಬಂದಿರಿ ವಿಪ್ರವೇಷವಂ ಧರಿಸುವರೇ ಪ್ರಯೋಜನವೇನು ಪರ್ವತವಂ

ತನ್ನಮೇಲೆ ಹಾಕಿದಿರದ್ಯಾತಕೆ ತಥ್ಯವಾಗಿ ಪೇಳ್ವಡೆ ಬಿಡುವೆ ನಿಲ್ಲದಿರೆ ದಿಗ್ಬಲಿಯಹಾಕುವೆನು ಎಂದು ನಿಸ್ತ್ರಿಂಶಮಂ ಝಡಿಯೆ, ಚಂಡಕ್ರೋಧರೀರ್ವರೂ ಮಾಚನೆನಡೆಯದಿವಸಲ್ಲೆಂದು ವೃತ್ತಾಂತವೆಲ್ಲಮಂ ವಿಜ್ಞಾಪನೆ ಮಾಡಲು, ಅದಂ ಕೇಳಿ ಸಹಸ್ರಾಯುವಿಸ್ಮಿತನಾಗಿ ಎಲಾ ದುರಾತ್ಮರಾ ಕೇಳಿ! ಈ ದ್ವೀಪಮಂಬಿಟ್ಟು ದ್ವೀಪಾಂತರಕ್ಕೆ ಪೋಗುವೆವೆಂದು ಪ್ರಮಾಣಮಂ ಮಾಡಿದಡೆ ಬಿಡುವೆನಿಲ್ಲದಿರೆ ಉಚಿತಶಿಕ್ಷೆಯಂ ಮಾಡುವೆನೆನಲು, ಭಯದಿಂದ ಕಂಪಿಸುತ ಪ್ರಣಾಮಮಂ ಮಾಡಿ ವಂದನೆಯಂ ಮಾಡಲು, ಧಾನ್ಯಮಾಲಿನೀಪತಿಯು ಋಷಿಶಾಪಮಂ ನೆನದು ಶಿರೋಮುಂಡನಮಂ ಮಾಡಿ ದಯೆಯಿಂದ ಬಿಡುವವನಂತೆ ದಂಡಶೂಕಾಸ್ತ್ರಮಂ ನುಪಸಂಹಾರಮಾಡಿ ಪಿಂತಿರುಗಿನೋಡದೆ ಪೋಗಿ ಎಂದು ಅಪ್ಪಣೆಗೊಡಲು, ಆ ರಕ್ಕಸರು ಇಂದೆ ತಾಯಿಯ ಬಸುರಲ್ಲಿ ಬಂದ್ದೆವೆಂದು ತಮ್ಮೊಳು ತಾವೆ ನುಡಿಯುತ್ತ ದ್ವೀಪಮಂ ಬಿಟ್ಟು ಪೋಗಲು, ಅಗ್ರಜನು ಸಾವಕಾಶಮಾಡದೊಡೆ ತಾವಾವರೂ ಮುನ್ನಲೆ ಪೊರಟುಪೋಗಬೇಕೆಂದು ಯೋಚಿಸಿ, ಸಾವಕಾಶಮಾಡಿದಡೆ ಸಂಹರಿಸದೆ ಬಿಡನೆಂದು ನಿಶ್ಚಯಬುದ್ಧಿಯುಳ್ಳವರಾಗಿ ನೈಮಿಶಾರಣ್ಯಮಂ ಕುರಿತು ನಡೆಯಲು.

ಇತ್ತಲಾಸುಶರ್ಮತನಯನು ಮಾರ್ಗದೊಳು ಬಿದ್ದಿರುವ ಪರ್ವತಮಂ ಖಡ್ಗದಿಂ ಛಿನ್ನಾಭಿನ್ನವಾಗಿ ಕತ್ತರಿಸಿ ಎಂದಿನಂತೆ ಮಾರ್ಗಮಂ ಮಾಡಿ ಅಲ್ಲಿಂದ ಮುಂದೆ ಪೊರಮಟ್ಟು ಉತ್ತರಾಭಿಮುಖನಾಗಿ ಬಹು ದೂರ ಮಾರ್ಗಮಂ ನಡದುದಾನದಿಯಂ ಕಂಡು ಸ್ನಾನಮಂ ಮಾಡಿ ನಿಯಮಂಗಳನಾಚರಿಸುತಿದ್ದನೆಂಬಲ್ಲಿಗೆ ॥ * ಇಂತು ಶ್ರೀಮಹಿಶೂರಪುರವರಾಧೀಶ ಶ್ರೀಮತ್ಕೃಷ್ಣರಾಜವಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀಕೃಷ್ಣರಾಜವಾಣೀವಿಲಾಸಮೆಂಬಾಂಕಿತಮಪ್ಪ ಕರ್ನಾಟಕಭಾಷಾವ್ಯಾಖ್ಯಾನರೂಪಕವಾಗಿ ರಚಿಸಿರುವ ಶ್ರೀ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ನವಮೋಧ್ಯಾಯಕ್ಕೆ ಮಂಗಳಮಹಾ ॥ ಶ್ರೀ *



# ಹತ್ತನೇ ಅಧ್ಯಾಯಂ.

ಇತ್ತಲಾರಕ್ಕಸರು ರಾಜಕುಮಾರನಿಂದವಮಾನಿತರಾಗಿ ಜವದಿಂದಣ್ಣನೆಡೆಗೈದಿಕ್ಷಣಾರ್ಧವಿಲ್ಲಿರಕೂಡದೀಗಲೆ ಪೊರಟು ದ್ವೀಪಾಂತರಕ್ಕೆ ಪೋಗಬೇಕೆಂದು ನುಡಿಯಲು. ರುರುವು ಅನುಜರ ಶಿರೋಮುಂಡನಮಂ ನೋಡಿ ಎನ್ನ ದಕ್ಷಿಣಭುಜಕ್ಕೆ ಆದಂತಾಯಿತೆಂದು ಮನದೊಳು ನೊಂದು ಅನುಜರಂ ಕುರಿತು ಸಹಸ್ರಾಯುವಿನ ಮುಖಮಂ ನೋಡಬೇಕು. ಶಿರಮಂ ತೋರಿಸೆಂದು ಕೇಳಲು, ಸಹಸ್ರಾಯುವೆಂಬ ಶಬ್ದಶ್ರವಣಮಾತ್ರಕ್ಕೆ ಪುನಃ ಬಂದನೋ ಎಂದು ಭಯದಿಂದ ಕಾತರಬಿದ್ದು ಈಕ್ಷಣವೇ ಪೋಗುವೆವು ತಡಮಾಡುವುದಿಲ್ಲವೆಂದು ಪ್ರಯಾಣಸನ್ನಾಹವಂ ಮಾಡಲು. ಅನುಜರಾದ ಭೀಷಣ ಶುಕ್ರೀವರ್ಣರೂ ಕಂಡು ರೋಷಾಮರ್ಷಪರವಶರಾಗಿ ಏಕಿಂತು ಭಯಪಡುವಿರಿ ಸ್ಥೈರ್ಯವಂ ಮಾಡಿ ತಾವಿರುವಲ್ಲಿ ಭಯವೇನು, ದಿಕ್ಪತಿಗಳಾವಡೆಯುಂ ಸಂಹಾರವಂಮಾಡದೆ ಬಿಡುವೆವಾದೊಡೊಂದು, ನೀವು ಇಲ್ಲಿಂದ ಪೊರಟು ಪುನಃ ಇಲ್ಲಿಗೆ ಬರುವ ಪರ್ಯಂತರ ನಡೆದ ವೃತ್ತಾಂತಮಂ ವಂಚನೆಯಿಲ್ಲದೆ ಪೇಳದಿರಾದೊಡೆ ಎಮಗೀಕಾರ್ಯವೀಷತ್ಕರವಲ್ಲದೆ ಬೇರಿಲ್ಲ, ಕ್ಷಿಪ್ರದಿಂ ಹೇಳಬೇಕೆಂದು ಕೇಳೆ. ಕ್ರೋಧನು ಸಹಸ್ರಾಯುವಿನ ಧೈರ್ಯ ಸ್ಥೈರ್ಯ ಪರಾಕ್ರಮಗಳನ್ನು ವಿಸ್ತರಿಸಿ ಪೇಳ, ತಾವೀರ್ವರೂ ಪೋಗಿ ಮಾಡಿದ ಸಾಹಸಂಗಳ ಪೇಳೆ, ಆ ರಾಕ್ಷಸರು ಚಂಡಕ್ರೋಧರಂ ಕುರಿತು ನೀವು ಮಾಡಿದ ಸಾಹಸವು ಅಕ್ರಮವಾದಕಾರಣಶತ್ರುವಸಾಧ್ಯನಾದನವೆಂತೆಂದೊಡೆ? ಶತ್ರುವಂಜಯಿಸುವಡೆರಾಜ್ಯಲಕ್ಷ್ಮಿಸಲಕ್ಷಣಮಾಗಿ ನ್ಯೂನವಿಲ್ಲದೆ ಸ್ವಾಮ್ಯಮಾತ್ಯಸುಹೃತ್ಕೋಶರಾಜ್ಯಭೃತ್ಯದುರ್ಗಗಳೆಂಬ ಸಪ್ತಾಂಗದಿಂ ಪೂರ್ಣನಾಗಿದ್ದವನಾದೊಡೆ ಚತುರೋಪಾಯದಿಂ ಜಯಿಸಲಿಬೇಕು, ಸಪ್ತಾಂಗದಲ್ಲಿ ಕೋಶ ಬಂದಿಲ್ಲದವನಾದೊಡೆ ದಾನೋಪಾಯವೇ ಮುಖ್ಯವಾದುಪಾಯ ಚತುಷ್ಟಯದಿಂದ ಜಯಿಸಲಿಬೇಕು, ಸಪ್ತಪ್ರಕೃತಿಗಳಲ್ಲಿ ಸುಹೃದಮಾತ್ಯರೆರಡಿಲ್ಲದವನಾದೊಡೆ ಭೇದೋಪಾಯವೇ ಮುಖ್ಯವಾದ ಚತುರೋಪಾಯದಿಂ ಜೈಸಲಿಬೇಕು, ಸೇನೆಯಿಂದಲು

ಸ್ವಾತ್ಮಶಕ್ತಿಯಿಂದಲು ನ್ಯೂನವಾಗಿರುವನಾದೊಡೆ ದಂಡೋಪಾಯಗರ್ಭಿ
ತ ಚತುರೋಪಾಯದಿಂ ಜಯಿಸಬೇಕು, ಇಂತು ಇರುವಲ್ಲಿ ಸರ್ವಸಾಧನ
ಗಳಿಂ ಪೂರ್ಣನಾಗಿರುವ ಸಹಸ್ರಾಯುವಂ ಕೇವಲ ಭೇದೋಪಾಯದಿಂದ
ಲೇ ಜಯಿಸಬೇಕೆಂದುಪಕ್ರಮಿಸಿದರಾವಕಾರಣ ನಿಮಗವಮಾನವಾದುದು,
ಇದಕೆ ಚಿಂತಿಸಲ್ಯಾಕೆ, ಈಗ ತಾವು ಕೇವಲ ದಂಡೋಪಾಯದಿಂದಲೆ ಆತನ
ಶಿರವಂ ತರಿದು ತರುವೆನೆಂದು ಪ್ರತಿಜ್ಞೆಯಂ ಮಾಡಿ ನಿಜಾಯುಧಗಳಂ ಕೈಗ
ದುಕೊಂಡು ಆರ್ಯರಿಂಗೆ ವಂದನೆಯಂ ಮಾಡಿ ಅಪ್ಪಣೆಕೇಳಲು. ದುರುವೆಂ
ಬರಕ್ಕಸನು ಅನುಜಂಕುರಿತು ಎಲಾ ಅನುಜರಾ ಕೇಳಿ; ಬರಿದೆ ಅಹಂಕಾರ
ದಿಂದ ಕಾರ್ಯಮಂ ನೀಡಾಡಬ್ಯಾಡ, ಕೇವಲ ದಂಡೋಪಾಯಮಂ ಮಾಡಿ
ತಾನು ಈತೆರನಾದೆ, ದ್ವಿತೀಯೋಪಾಯಮಂ ಮಾಡುತಿವರೀರ್ವರೀತೆರನಾ
ದರು, ಇನ್ನು ಸಾಮಮಾತ್ರದಿಂದೋರ್ವರೊಳು ಶತ್ರುನಿಗ್ರಹವಾಗುವದೆ,
ತ್ರಿಲೋಕವನಾಳುವಂತಪ್ಪಸಾಮರ್ಥ್ಯವುಳ್ಳವನಲ್ಲಿ ದಾನೋಪಾಯಪ್ರ
ಯೋಗವೆಂತಹುದು, ತಸ್ಮಾದುಪಾಯ ಚತುಷ್ಟಯಾತೀತನಾ ರಾಜಕುಮಾ
ರನು, ಈ ಸಮಯದೊಳಾತನೊಡನೆ ಧೂರ್ಜಟಿಯಾದೊಡೆಯುಂ ಕಾದಲ
ರಿಯನದುಕಾರಣ ಪೇದುರಾಭಿಮಾನದಿಂ ಕೆಡಬ್ಯಾಡಿ, ರಂಧ್ರಾನ್ವೇಷಣೆ
ಯಂ ಮಾಡಿ ಕಾಲಮಂ ಪ್ರತೀಕ್ಷಿಸಿ ಪ್ರಬಲನಾದ ಶತ್ರುವಂ ನಿಗ್ರಹಮಾ
ಡಬೇಕಲ್ಲದೆ ಕಾತರಬೀಳುವದರಿಂದ ಫಲವೇನು, ಅದರಿಂದ ವ್ಯರ್ಥಾಭಿಮಾ
ನದಿಂ ಕೆಡಬ್ಯಾಡಿ, ಪ್ರಕೃತದಲ್ಲೀಖಂಡಮಂ ಬಿಟ್ಟು ವರ್ಷಾಂತರದಲ್ಲಿ ಸು
ಖದಿಂ ಕೆಲವುದಿನ ವಾಸವಮಾಡಿ ಬದುಕಿ ತರುವಾಯ ಕಾಲಾಂತರದಲ್ಲಿ ಶ
ತ್ರುನಿಗ್ರಹಪ್ರಯತ್ನವಂ ಮಾಡುವುದೆಂದು ಬಹುಪ್ರಕಾರದಿಂ ಪೇಳಲು.
ಆ ಭೀಷಣಶುಕ್ರೀರ್ವರೂ! ಆರ್ಯನು ಪೂರ್ವಭಯದಿಂದಾಡುವನೆಂದು
ಲಕ್ಷ್ಯಮಾಡದೆ ಘೋರವಾದ ರೂಪಮಂ ಧರಿಸಿ ಅಟ್ಟಹಾಸಮಂ ಮಾಡು
ತ್ತಲ್ಲಿಂದ ಪೊರಮಟ್ಟು ಸಹಸ್ರಾಯುವಂ ತನ್ನ ಮೃತ್ಯುವನ್ನರಸುವಂತೆ
ಅರಣ್ಯದೊಳರಸುತ್ತ ಬರಲು, ಎಲ್ಲಿಯುಂ ಕಾಣದೆ ಅರಣ್ಯದೊಳಿರುವ
ಮೃಗಪಕ್ಷಿಗಳಂ ಸಹಸ್ರಾಯುವಂ ತೋರಿಸೆಂದು ಕೇಳುತ್ತ ನರ್ಮದಾ
ತೀರಕ್ಕೆ ಬಂದು ನದಿಯಂ ಕುರಿತು ಸಹಸ್ರಾಯು ಪೋದ ಮಾರ್ಗವಂ

ತೋರಿದಡೆ ನಿನ್ನುಭಯಕೂಲವುಂ ರತ್ನಮಯವಾಗಿ ಮಾಡುವೆನೆಂದುಬಹುಪ್ರಕಾರವಾಗಿ ನುಡಿಯುತ್ತಿರಲು. ಸಹಸ್ರಾಯುಃ ಶಬ್ದವಿಷಯವಾದ ಪ್ರಬಂಧಕಸಹಸ್ರಗಳಿಂದಲು, ಅಪ್ರತಿಹತವಾದ ಪ್ರೇಮಪ್ರವಾಹದಿಂದ ದಾಕ್ಷಾಯಿಣೀ ಚರಣಕಮಲವಂ ಧ್ಯಾನಿಸುತ್ತಿದ್ದ ಸಮಯದೊಳು ಈ ರಾಕ್ಷಸರ ಧ್ವನಿಯಂಕೇಳಿ ಸಮಾಧಿಯಿಂ ಬಹಿರ್ಮುಖನಾಗಿ ಕಣ್ದೆರೆಗಳಂತೆಗದು ದೈತ್ಯೇಯರಂ ಕಂಡು ವಿಸ್ಮಿತನಾಗಿ ಮಹೋದರೀತನಯರಿವರಾಗಿರಬೇಕು, ತದ್ರೂಪಾನುಕಾರಿಯಾಗಿರುವುದಿವಗಾದ ಕಾರಣ ಸಹಜಾತರವಮಾನದಿಂದತ್ಯಮರ್ಷಿತರಾಗಿ ಬಂದಿರುವರಿವರು, ಮೇಣಿವರಿಗಿಂತಧಿಕ ಶಿಕ್ಷೆಯುಂಮಾಡಿ ಕಳುಹುವೆನೆಂದು ನಿಜಚಾಪಬತ್ತಳಿಕೆಯಂ ಖಡ್ಗಮಂ ಧರಿಸಿ ರಾಕ್ಷಸರಿಗಭಿಮುಖನಾಗಿ ಅವರಂಕುರಿತು, ಎಲೈದಿತಿಜಾಧಮರಾ ಕೇಳಿ ! ತಾನೆ ಸಹಸ್ರಾಯುವು ಕೊಡು ಸಾಮ್ರಾಜ್ಯವುಂತನಗೆಂದು ಸಿಂಹನಾದಮಂ ಮಾಡಲು. ಅಂಡಭಿತ್ತಿಯೊಡೆದಂತ ಕಠೋರವಾದ ಧ್ವನಿಯಿಂದ ರಾಕ್ಷಸರ ಎದೆವಡೆದು ಧೈರ್ಯಮಂನೀಡಾಡಿ ಮುಂದೇನುಗತಿಎಂದು ಚಿಂತಿಸಿ ಪರಸ್ಪರಮುಖಮಂನೋಡಿ ಸಹಸ್ರಾಯು ಮುಂದೊತ್ತಿ ಬರುತ್ತಿರಲು, ಭೀಷಣಶುಕ್ರರೀರ್ವರುಂ ಶರವರ್ಷಮಂಸುರಿಯಲು, ಸಹಸ್ರಾಯುವು ನಿಜಚಾಪಚ್ಯುತಶಿಲೀಮುಖಗಳಿಂ ಕತ್ತರಿಸಿ ಲಾಘವದಿಂದ ಈರ್ವರ ಚಾಪಮಂ ಕತ್ತರಿಸಲು. ಭೀಷಣಶುಕ್ರರೀರ್ವರೂ ಚಾಪಾಂತರದಿಂದ ದಿವ್ಯಾಸ್ತ್ರಮಂ ಪ್ರಯೋಗಮಾಡಲು ಅದಂಖಂಡಿಸಿ ಗಣನೆಯಿಲ್ಲದೆ ಯುದ್ಧರಂಗದೊಳು ಸಂಚಾರಮಾಡುತ್ತಿರಲಾರಕ್ಕಸರು ನೋಡಿಕ್ರೋಧಮೂರ್ಛಿತರಾಗಿ ನಿಶಿತವಾದ ಶಿಲೀಮುಖಗಳಿಂದ ಸಹಸ್ರಾಯುವಿನ ಸರ್ವಾಂಗಮಂಮುತ್ತಲೂ, ರಾಜಕುಮಾರನತ್ಯಂತ ಲಾಘವದಿಂದ ಇವರ ಬಾಣಂಗಳಂಕಡಿದು ಪುನಶ್ಚ ಈರ್ವರ ಶರಾಸನವುಂ ಬಿಡಿಸಲು. ಭೀಷಣಶುಕ್ರರೀರ್ವರೂ ಖತಿಯಿಂದ ಶಕ್ತಿಪರಿಘಾಯುಧಂಗಳಂ ಪಿಡಿದು ಎಲಾ ಮಾನುಷಪೋತ! ಇದಕೋ ನೋಡೆಂದೆನುತ ತೂಗಿಬಿಡಲು, ಸಹಸ್ರಾಯು ನಸುನಗುತ ಯುಗಾಂತಾಗ್ನಿಯೋಪಾದಿಯಲ್ಲಿ ಬರುತ್ತಿರುವ ಶಕ್ತಿಪರಿಘಾಯುಧಂಗಳಂನೋಡಿ ಮೂರುಬಾಣಗಳಿಂದ ಪರಿಘಮಂ ಕಡಿದೆರಡುತುಂಡಾಗಿ

ನೆಲಕ್ಕೆ ಬೀಳಿಸಲು ಶಕ್ತಿಯುಬಂದು ವಕ್ಷಸ್ಥಲವಂತಗುಲಿ ಸಹಸ್ರಾಯುವಿಗೆ ದಿವ್ಯಮುಕ್ತಾಹಾರವಾಗಲು. ಭೀಷಣ ಶುಕ್ರರೀರ್ವರೂ ನೋಡಿ ವಿಸ್ಮಿತರಾಗಿ ಈತನೊಡನೆ ಯುದ್ಧವಂಮಾಡುವರೇ ತ್ರಿಪುರಾರಿಗಳವಲ್ಲ ತಮ್ಮ ಪಾಡೇನಿನ್ನು, ಮಾಯಾಯುದ್ಧದಿ ಕೊಲ್ಲುವೆನೆಂದು ಈರ್ವರೂ ಅದೃಶ್ಯರಾಗಿ ಪೂರ್ವನಂತರಿಕ್ಷಮನೈದಿ ನಾನಾವಿಧ ಶಸ್ತ್ರವೃಷ್ಟಿಯಂ, ಮಹತ್ತಾದ ಪರ್ವತಗಳಂ ವರ್ಷಿಸಲು. ಇನ್ನೋರ್ವನು ಅಗ್ನಿಯಾಗಿಯೂ, ಧೂಮವಾಗಿಯೂ, ಹರ್ಯಕ್ಷಶಾರ್ದೂಲಗಳಾಗಿಯೂ, ನಾನಾವಿಧ ಪ್ರೇತಭೂತಗಣಗಳಾಗಿ ಸಮುದ್ರಮೇರೆದಪ್ಪಿಬರುವಂತೆ ಬರುತ್ತಿರಲು. ಸಹಸ್ರಾಯುವದಂನೋಡಿ ಬಾಣಗಳಿಂದ ಕಡಿಕಡಿದು ಅವಧಿಯಿಲ್ಲದಿರಲು, ಮಹಚ್ಚಿಂತಾಯುಕ್ತನಾಗಿ ರಾಕ್ಷಸಮಾಯಾವಿದ್ಯವಿದೆಂದು ನಿಶ್ಚಯಮಾಡಿ ರಕ್ಷೋಘ್ನಮಂ ಜಪಿಸಲು, ತತ್‌ಕ್ಷಣದೊಳು ಜಗದ್ವ್ಯಾಪಿಯಾದ ಮಹಾಂಧಕಾರಗಳು ಇನೋದಯವಾಗಲಂತಹುದೋ! ಆರೀತಿಯಿಂದ ರಾಕ್ಷಸಮಾಯೆ ಮಾಯವಾಗಲು. ರಾಜಕುಮಾರನು ವಿನೋದಮಂ ಮಾಡಲೋಸುಗ ಉದಕಸ್ಪರ್ಶಮಂಮಾಡಿ ಪರಿಕ್ಷೆಯಂಮಾಡಬೇಕೆಂಬ ಕುತೂಹಲದಿಂದ ಮಹೇಂದ್ರಜಾಲವಿದ್ಯಮಂ ಈ ರಾಕ್ಷಸರಂ ಕುರಿತುಪ್ರಯೋಗಮಂಮಾಡಲು, ಮಹಾಂಧಕಾರವಾವರಿಸಿ ಸಿಡಿಲುಮಳೆಗರೆಯುತ್ತ ಕಾಲಮೇಘವಾವರಿಸಿ ರಕ್ತವೃಷ್ಟಿಯುಂಕರೆಯೆ, ಚಂಡಮಾರುತನು ಸವ್ಯಾಪಸವ್ಯದಿಂಬೀಸುತಕ್ಷುದ್ರಪಾಷಾಣಗಳನ್ನು ಎರಚುತ್ತಿರಲು, ಆಭೀಷಣ ಶುಕ್ರರಂಧಕಾರ ಚಾರಿಗಳಾದಡೆಯುಂ ಧರೆಗಗನದಿಕ್ಕುಗಳಕಾಣರೆ ಸಹಸ್ರಾಯುವನ್ನರಸಿಕಾಣದೆ ಮುಂದೇನುಗತಿಯೆಂದು ಯೋಚಿಸುತ್ತಾತಿರುಗುತಿರೆ. ಶುಕ್ರನು ಭೀಷಣನಂಕುರಿತು ಅಸ್ಮತ್ಕೃತಮಾಯವು ನಾಶವಾಗಿ ಈ ಮಹದಂಧಕಾರವಾವರಿಸುವುದಕ್ಕೆ ಕಾರಣವೇನೊ ತಿಳಿಯದೀಅಂಧಕಾರದೊಳು ಮಹಾಕಾಳಮೇಘವಾವರಿಸಿ ರಕ್ತವೃಷ್ಟಿಯಂ ಕರೆಯುತ್ತಿದೆ. ಸಹಸ್ರಾಯುವೇನಾದನೋ ಕಾಣೆನೆಂದು ಮರುಗಲು. ಭೀಷಣನು ಈ ರಾಜಕುಮಾರನು ಅಚಿಂತ್ಯಪ್ರಭಾವನು, ಆ ಮಹಾನುಭಾವನಸ್ಮನ್ಮಾಯೆಯಂ ನಿಜಪ್ರಭಾವದಿಂ ಜಯಿಸಿ ಮಹಾವಿದ್ಯಾಪ್ರಯೋಗಮಂ ಮಾಡಿರುವನಾತನದೃಶ್ಯನಾಗಿರುವಂ

ತೆ ತೋರುತ್ತಿದೆ, ಹಿರಿಯರಾದವರ ನುಡಿಯಂನುಲ್ಲಂಘಿಸಿ ಬಾಲ್ಯಬುದ್ಧಿಯಿಂ ಮಾಡಿ ಬಂದುದಕೆ ಫಲವಾದುದಿನ್ನು ಮುಂದೇನಹುದೋ ಎಂದು ಮರುಗುತ್ತಿರಲು. ಸಹಸ್ರಾಯುವು ಈ ದಿತಿಜಾಲಾಪಮಂ ಕೇಳಿ ಧ್ಯಾನಮಾಡಲು, ಮೇಘವೆಲ್ಲವು ಪೋಗಿ ನಿರ್ಮಲಾಕಾಶದೊಳು ಚಂದ್ರನುದಯಿಸಲು. ಶುಕ್ರನು ಅಗ್ರಜನಂ ಕುರಿತು ಸಹಸ್ರಾಯುವು ಭೀತನಾಗಿ ಎಲ್ಲಿಯೋ ಪೋದನಾತನಂ ಅರಸಿ ಮನೋರಥವನೈದಬೇಕೆಂದು ಈರ್ವರೂ ಅಲ್ಲಿ ಸಂಚಾರಮಾಡುತ್ತ ಬರುತಿರಲು. ಸಹಸ್ರಾಯುವು ಧ್ಯಾನಮಾಡಲು ಈ ಭೀಷಣ ಶುಕ್ರರು ದಿವ್ಯವಾದೊಂದುಪವನವಂ ಕಂಡು ತತ್ಸಮ್ಮಂಧಿಗುಣತ್ರಯೋಪೇತ ಮಾರುತ ಸುಖಸ್ಪರ್ಶದಿಂದಾಹ್ಲಾದಮಂನೈದಿ, ಮೃದಂಗಮುರಜವೀಣಾದಿ ವಾದಿತ್ರಕಲಮಧುರ ಸ್ವರಕಲಿತವಿದ್ಯಾಧರೀಗಾನಮಂ ಕೇಳಿ ಮೂರ್ಛಿತರಾಗೆಚ್ಚತ್ತು ವನಮಂ ಪ್ರವೇಶಮಾಡಲು, ಆ ವನದಲ್ಲಿ ಸುಪುಷ್ಪಿತವಾದ ಪುನ್ನಾಗವೃಕ್ಷದಡಿಯಲ್ಲಿ ಸಾಕ್ಷಾತ್ ರತಿಯಂತೆ ಕುಳಿತು ಗಾನಮಂ ಮಾಡುತಿರುವ ದಿವ್ಯಮಾನಿನಿಯಂ ಕಂಡು ವಿಸ್ಮಿತರಾಗಿ ತತ್ಸಮೀಪಮನೈದಿ ನೀನ್ಯಾರೆಂದು ಕೇಳಲು. ಮಾಯಾಮಾನಿನಿಯು ಮಾನುಷರೂಪಳಾಗಿ ಬಂದು ಮಾತಾಡುವ ದೈತ್ಯರಂ ಕುರಿತು ತಾನು ಕೋಸಲಾಧಿಪತಿಯಾದ ಸಹಸ್ರಾಯುವೆಂಬ ರಾಜಕುಮಾರನ ಪತ್ನಿ, ಆತನು ಗುರುದಕ್ಷಿಣಾರ್ಥವಾಗಿ ರಾಕ್ಷಸರೊಡನೆ ಯುದ್ಧಮಾಡುತ್ತಿರುವ ಸಮಯದೊಳು ಆ ದೈತ್ಯ ಜನನಿಯಾದ ಮಹೋದರಿಯೆಂಬ ರಾಕ್ಷಸಿಯು ಪುತ್ರಸಹಾಯಾರ್ಥ ಅದೃಶ್ಯವಾಗಿ ಬಂದು ಮಾಯಾಯುದ್ಧವಂ ಮಾಡಿ ರಾಜಕುಮಾರನಂ ಸಂಹಾರ ಮಾಡಿ ಶಿರವಂ ತೆಗದುಕೊಂಡುಹೋದಳದುಕಾರಣ ತಾನು ಪರಮ ಸಂತೋಷಯುಕ್ತಳಾಗಿ ಗಾನವಂ ಮಾಡುವೆನೆಂದು ನುಡಿಯಲು. ದೈತ್ಯರು ವಿಸ್ಮಿತರಾಗಿ ಪತಿಯು ಮೃತಿಯು ನೋಡಿ ಸಂತೋಷವನೈದುವ ಸತಿಯುಂಟೇ ಎಂದು ಕೇಳಲು. ಸಹಸ್ರಾಯುವದೃಶ್ಯವಾಗಿ ಧ್ಯಾನವಂ ಮಾಡಲು, ಆ ಮಾಯಾಮಾನಿನಿಯು; ಪತಿಯಿಂದ ಮಾನಿನಿಗೆ ಸುಖವಿರ್ದಡೆ ಪತಿಯ ಕ್ಷೇಮವನ್ನಪೇಕ್ಷಿಸುವಳು ಸುಖಲೇಶವನ್ನರಿಯದೆ ನಿರ್ಬಂಧವಂ ಮಾಡಿದ್ದನೆಂದೆನಲು. ಶುಕ್ರನು ಭೀಷಣನಿಂಗೆ ವಂಚಿಶಿ ಈ ಮಾನಿನಿಯನಪಹರಿ

ಸಬೇಕೆಂದು ಮನದೊಳಾಲೋಚನೆಮಾಡಿ ಮಾನಿನಿಯಂ ಕುರಿತು; ತನ್ನೊಡನೆ ನೀನು ಬಂದೊಡೆ ನಿನ್ನದಾಸನಾಗಿರುವೆ, ನಿನ್ನಮನೋಗತಾನುಸಾರವಾಗಿ ನಡೆಯುವೆನೆಂದೆನಲು. ಪುನಃ ಸಹಸ್ರಾಯುವು ಧ್ಯಾನಮಂಮಾಡಲು, ಆ ಮಾಯಾಮಾನಿನಿಯು ಸಹಸ್ರಾಯುವಿನ ಶಿರಮಂ ತಂದಿತ್ತೊಡೆ ನಿನ್ನೊಡನೆ ಬರುವೆನೆಂದೊಡಂಬಡಲು, ಭೀಷಣನು ಶುಕ್ರನಂ ಸಂಚಿಸಿ ಇವಳನ್ನಪಹರಿಸಬೇಕೆಂದು ಯೋಚಿಸಿ ಅನುಜನಂ ಕುರಿತು ಎಲೈ! ಶುಕ್ರನೆ ಕೇಳು! ನೀನು ಜವದಿಂದ ಜನನಿ ಎಲ್ಲಿರುವಳೋ ನೋಡಿ ಶಿರಮಂ ತೆಗದುಕೊಂಡು ಬಂದಡಾನು ಈ ಮಾನಿನಿಯ ಸಮೀಪದಲ್ಲಿರುವೆನೆಂದು ನುಡಿಯಲು. ಸಹಸ್ರಾಯುವು ಪುನಃ ಧ್ಯಾನಮಂಮಾಡಲು, ಆ ಮಾಯಾಮಾನಿನಿಯು ಕಳೇಬರವನ್ನು ದಹನಮಾಡಿ ಶಿರಮಾತ್ರ ತರಬೇಕೆಂದು ಪೇಳಲು. ಭೀಷಣನು ಎಲ್ಲಿರುವುದಾ ಕಳೇಬರವೆಂದು ಕೇಳಲು ಮಹೋದರಿಯೆಂಬ ರಕ್ಕಸಿಯು ಈ ವನಕ್ಕೆ ಪೂರ್ವದಿಕ್ಕಿನಲ್ಲಿ ಒಂದು ಗಿರಿಗುಹಾಂತರಾಳದೊಳಿಟ್ಟು ಶಿರಮಂ ಪುತ್ರರಿಂಗೆ ತೋರಿಸಲು ಕೊಂಡೊಯ್ದಳೆಂದೆನಲು, ಶುಕ್ರನು ಇಂತೀ ವಿಚಾರಮೆಲ್ಲ ನಿನಗೆಂತು ತಿಳಿದುದೆನಲು. ಮಿಥಿಲಾನಗರದಲ್ಲಿರುವ ಮುಖ್ಯಾಮಾತ್ಯಪುತ್ರಿಯಾದ ಕನಕಾಂಗಿ ಎಂಬ ಮಾನಿನಿಯು ತನ್ನ ಸಖಿಯು ಮಹಾಸಮರ್ಥಳಾಕೆ, ಎನ್ನಮೇಲಣ ಪ್ರೀತಿಯಿಂದ ಈ ವೃತ್ತಾಂತಮಂ ನೋಡಿ ಬಂದು ಎನಗೆ ಪೇಳಿ ಆ ಮಹೋದರಿ ಎಂಬ ರಕ್ಕಸಿಯಂ ವಂಚಿಸಿ ಶಿರಮಂ ತರುವೆನೆಂದು ತನಗಭಯಮಂ ಇತ್ತು ಪೋಗಿರುವಳೆನಲು. ಭೀಷಣನು ಯಥಾರ್ಥವೆಂದು ತಿಳಿದು ತಮ್ಮ ಜನನಿಯಂ ಬಹುವಿಧವಾಗಿ ಶ್ಲಾಘನೆಯಂ ಮಾಡಿ ಶಿರಮಂ ತರುವದಕ್ಕೆ ಫಲವೇನೆಂದು ಕೇಳಲು ಮಾಯಾಮಾನಿನಿಯು ಪುನರುಜ್ಜೀವನಾಶಕ್ತಿಯಿಂದ ಪುಟ್ಟಿರುವ ಯುಪರಿ ಇದವೇ ಫಲ, ಮರಣವಂನೈದಿದವನು ಬದುಕುವುದದೆಂತೆಂದು ಕೇಳಲು ಸದ್ಯಃ ಮಾಯಾಂಗನೆಯು ಬಹ್ವಾವರ್ತಿ ವ್ಯತಿಯಂನೈದಿ ಪುಟ್ಟಿರುವನದರಿಂದ ಶಿರಮಂ ತರಲು ಪೋಗಿರುವಳೆಂದೆನಲು. ಶುಕ್ರನು ಭೀಷಣನಂ ಕುರಿತು ಗುಹಾಂತರಾಳಕ್ಕೆ ಪೋಗಿ ಕಾಯಮಂ ತರುವೆನೋ, ಜನನಿಯಡೆಗೆ ಪೋಗಿ ಶಿರಮಂ ತರುವೆಯೋ ಎಂದು ಕೇಳಲು. ಭೀಷಣನು ನಿನ್ನಿಂದ ಅಶಕ್ಯವಾದ ಕಾರ್ಯಮಂ ತಾನು ಮಾಡು

ವೆನೆಂದೆನಲು, ತನ್ನ ಜನನಿಯುಂ ನರಸಿ ಶಿರಮಂ ತರುವೆ, ನೀನು ಗುಹೆಯುಂ ಪೊಕ್ಕು ಕಾಯುವುಂತಿರುವುದೆಂದು ಪೇಳಲು, ಹಾಗೆ ಆಗಲೆಂದೊಡಂಬಟ್ಟು. ಈರ್ವರೂ ವನವಂಬಿಟ್ಟು ಪೂರ್ವಾಭಿಮುಖನಾಗಿ ಭೀಷಣನು, ದಕ್ಷಿಣಾಭಿಮುಖನಾಗಿ ಶುಕ್ರನು ಬರುತಿರಲು. ಮಾಯಾರಾಜಚಂದ್ರನಸ್ತಂಗತನಾಗಿ ಪುನಃ ಮಹದಂಧಕಾರವಾವರಿಸಲು, ದಿಕ್ಕುಗಳ ಕಾಣದೆಧ್ಧರಣೀಗಗನಗಿರಿಗುಹಾರಣ್ಯಾಜಲಾಶಯನಿಮ್ನಗಾಗರ್ತಕಂಟಕಾದಿಗಳೊಂದೂ ತಿಳಿಯದೆ ಸುತ್ತಿಸುತ್ತಿ ಪಥಮಂ ಕಾಣದೆ ಸರ್ಪಾದಿ ನಾನಾವಿಧ ದುಷ್ಟಜಂತುಗಳಿಂದ ದಷ್ಟರಾಗಿ ಬಹುಯಾತನೆಯಿಂದ ಬರುತ ಬಹುದಿವಸಗಳೀರೀತಿ ನಾನಾವಿಧಕ್ಲೇಶದಿಂದ ತಿರುಗುತ್ತಿರಲು. ದೈವವಶಾದೀರ್ವರೂ ಒಂದೇಪ್ರದೇಶದೊಳು ಕೂಡಿ ಪರಸ್ಪರ ಗುರುತಹನರಿಯದೆ ದಸ್ಯುಬುದ್ಧಿಯಿಂದನ್ಯೋನ್ಯವಾಗಿ ಮಹದ್ಯುದ್ಧವಂ ಬಹುಕಾಲಮಾಡಿ ಪರಸ್ಪರ ಕರ್ಣನಾಸಿಕಾಛೇದನಗಳಂ ಮಾಡಿ ಕ್ರೋಧಮರ್ಷಣದಿಂದ ಗತಶ್ರುತಿನಾಸಿಕರಾಗಿ ಮೂರ್ಛೆಯನೈದಿನೀನ್ಯಾರುನೀನ್ಯಾರೆಂದುಪರಸ್ಪರ ಪ್ರಶ್ನೆಯುಂಮಾಡಿ ಸಹೋದರರೆಂಬುದಂ ತಿಳಿದುಬಹುದುಃಖಿತರಾಗಿ ಇದೇನೊ ಮಾಯಾಂಧಕಾರವೆ ಹೊರತು ಮತ್ತೊಂದಲ್ಲ, ಯೇನಮಾಡುವವೆಂದು ಚಿಂತಿಸುತ ಕರ್ಣನಾಸಿಕಗಳು ಪೋದವೆಂದು ಕ್ಲೇಶಯುಕ್ತರಾಗಿ ಸಂಚಾರಮಾಡುತ್ತಿರಲು, ಒಂದು ಪ್ರದೇಶದೊಳು ಆ ರಕ್ಕಸರ ಜನನಿಯಾದ ಮಹೋದರಿಯೆಂಬ ರಕ್ಕಸಿಯು ನಾಲ್ಕುಮಂದಿ ಪುತ್ರರಛಿನ್ನಂಗಳಾದ ಶಿರಗಳಂ ತೆಗದು ಮುಂದಿಟ್ಟು ರೋದನವ ಮಾಡುತ್ತಿರಲದಂಕೇಳಿ ಭೀಷಣನು ಜನನಿಯಧ್ವನಿಯು ಕೇಳುತ್ತಿದೆ ಎಂದು ಗಕ್ಕನೆ ಸಮೀಪಕ್ಕೆ ಬಂದು ಜನನಿಯಂ ಅಗ್ರಜಾನುಜರಛಿನ್ನವಾದಶಿರಗಳಂನೋಡಿ ಇದೇನವ್ವಾ ಎಂದು ಕೇಳಲು. ಸದ್ಯಃಮಾಯಾರಕ್ಕಸಿಯು ಮಲಗಿರುವ ಕಾಲದೊಳು ಸಹಸ್ರಾಯುವು ಬಂದು ನಾಲ್ವರ ಶಿರಮಂತರಿದು ಪೋದನ ದುಃಕಾರಣ ಶಿರಗಳಂತೊರಿಸಲೋಸುಗ ಶೀರ್ಷಗಳಂಪಿಡಿದು ರಾಜ್ಯಮೆಲ್ಲಮಂ ತಿರುಗಿನೋಡಿ ಕಾಣದೆ ರೋದನವಂಮಾಡುತ್ತ ಕುಳ್ಳಿದ್ದೆನೆಂದೆನಲು. ಭೀಷಣ ಶುಕ್ರರೀರ್ವರೂ ಮಾಯಾಮಾನಿನಿಯ ನುಡಿಯುಂನೆನದು ಅಃ; ಇದೇನೊ ಮಹತ್ತಾದ ಮಾಯಾಬಲೆಯೊಳು ಸಿಕ್ಕಿದೆವು ಮುಂದೇನು

ಗತಿಯಿಂದು ಮುಕ್ತಕಂಠರಾಗಿ ರೋದನವಮಾಡಲವಂಕಂಡು ಸಹಸ್ರಾಯುವು ಕರುಣದಿಂ ಮಹಾವಿದ್ಯಾಪ್ರಯೋಗವಮಾಡಲು ಆಡೆಯುವಯೋಗ್ಯನೆಯಿಲ್ಲವೀರರ್ಕ್ಕಸರಿಗೆ ಮ ಯೋಜಿಸಿ ಮಂತ್ರೋಪಸಂಹಾರವಂಮಾಡಲು. ಅಂಧಕಾರವು ಪೋಗಿ ಜನನಿಯೂ ಅಗ್ರಜಾನುಜರ ಶಿರಗಳೆಲ್ಲವು ಅದೃಶ್ಯವಾಗಿ ಮಧ್ಯಾಹ್ನ ಕಾಲವಾಗಿರಲು. ಭೀಷಣಶುಕ್ರರೀರ್ವರೂ ಸಹಸ್ರಾಯುವಂಕಂಡು ಗಡಗಡನೆ ನಡುಗಿ ಸಾಷ್ಟಾಂಗದಿಂನಮಿಸಿ ಈ ಜಂಬೂದ್ವೀಪಮಂಬಿಟ್ಟು ಪೋಗುವೆವೆಂದು ಶಪಥವ ಮಾಡಲು. ಇನ್ನುಮೇಲೆ ಪೋಗವೆ ಸಾವಕಾಶವಮಾಡಿಪೊಡೆ ಉಚಿತಶಿಕ್ಷೆಯಂ ಮಾಡುವೆನು ಪೋಗುವುವೆಂದು ಕಟ್ಟಳೆಯಂಮಾಡಿ ಮುಂದೆ ಉತ್ತರಾಭಿಮುಖನಾಗಿನಡೆಯಲು

ಭೀಷಣ ಶುಕ್ರರೀರ್ವರೂ ನಿಜಗುಹೆಯಂ ಕುರಿತು ಬಂದು ಅಗ್ರಜರಿಂಗೆ ವಂದನೆಯಂ ಮಾಡಿ ಕುಳ್ಳಿರಲು. ಅವರೀರ್ವರ ಮುಖಮಂನೋಡಿ ನಾಸಿಕಾಕರ್ಣಗಳು ದಾರಿಂಗೆ ಕಾಣಿಕೆಯಮಾಡಿದಿರಿಯೆಂದು ನುಡಿಯಲು ಲಜ್ಜಿತರಾಗಿ ಇನ್ನು ಕ್ಷಣಮಾತ್ರ ಇಲ್ಲಿರಕೂಡದು, ಈ ಜಂಬೂದ್ವೀಪಮಂ ಬಿಟ್ಟು ಪೋಗದಿರೆ ಅವಶೇಷಿತಶರೀರವೂ ಕೂಡಾ ಪೋಗುವದೆಂದು ನುಡಿಯಲು. ಗುರುವು ಪೋಗಿ ಬಂದ ವೃತ್ತಾಂತವಂ ಪೇಳುವದೆಂದು ಕೇಳಲು. ಅನುಜರೀರ್ವರೂ ಎಳ್ಳನಿತು ಬಿಡದೆ ವರ್ಣಿಸಲು. ರಾಜಕುಮಾರನ ವಿದ್ಯಾಪ್ರಭಾವಮಂ ಕೇಳಿ ವಿಸ್ಮಿತರಾಗಿ ಪ್ರಯಾಣಸನ್ನಾಹವಂ ಮಾಡಲು. ಮಾಯಾವಿದ್ಯವಿಶಾರದನಾದ ಕನೀಯಸಪುತ್ರನಾದ ಕುಕ್ಕುರನೆಂಬವಂ ಅಗ್ರಜರು ಮಾಡುವ ಪ್ರಯಾಣಸನ್ನಾಹವಮಂ ನೋಡಿ ಅಗ್ರಜರಂ ಕುರಿತು ತಾನು ಜೀವಂತನಾಗಿರುವಲ್ಲಿ ಪೋಗುವುದೇಕೆ, ತನಗಪ್ಪಣೆಯನಿತ್ತು ಕಳುಹಬೇಕೆಂದು ವಂದನೆಯಂ ಮಾಡಲು. ಗುರುವಾತನಂ ಕುರಿತು ಐವರೂ ಪರಾಜಿತರಾದ ಬಳಿಕ ಆತನಂಜಯಿಸುವೆನೆಂದು ವೃಥಾ ಮೋಹಿಸುವರುಂಟೆ ಬಾಲ್ಯಬುದ್ಧಿಯಂ ಮಾಡಬ್ಯಾಡ, ಪ್ರಯಾಣಕ್ಕನುಕೂಲನಾಗಿ ಯತ್ನವಂ ಮಾಡೆಂದು ಪೇಳಲು. ಕುಕ್ಕುರನು ಆರ್ಯನಂ ಕುರಿತು ತನಗಿಂತ ನೀವೈವರೂ ಸಮರ್ಥರೇಸರಿ, ಆದರೊಂದುಂಟು! ನೀವು ಮಾಡಿದ ಸಾಹಸವು ಸಾಂಗೋಪಾಂಗವಾಗಲಿಲ್ಲ ಅವರಿಂದ ಪರಾಜಯಮಂ ನೈದಿ

ದಿರಿ, ಸಾಂಗವೇನೆಂದೊಡೆ; ಸಾಮಕ್ಕೆ ಚಿರಕಾಲ ಸಹಾಯವು, ದಾನಕ್ಕೆ ದ್ರವ್ಯಾರ್ಜನೆಯೆ ಸಹಾಯವು, ಭೇದಕ್ಕೆ ವಂಚನೋಪಾಯವೇ ಸಹಾಯವು, ದಂಡಕ್ಕೆ ಸರ್ವಶಸ್ತ್ರಾಸ್ತ್ರಗಳು ಸಹಾಯವು, ಈರೀತಿಯಿಂದ ಪರಸ್ಪರಾಪೇಕ್ಷೆಯುಳ್ಳ ಚತುರೋಪಾಯಗಳು ಅಂಗೋಪಾಯಸಹಿತವಾದೊಡೆ; ಶುದ್ಧವಾಗಿರುವ ಉಪಾಯಚತುಷ್ಟಯದಿಂದ ಶತ್ರುಪರಾಜಯಮಂ ಮಾಡಿದವರನ್ಯಾರನಂ ಕಾಣೆ, ಪ್ರಕೃತದಲ್ಲಿ ಶತ್ರುವಿನಪರಾಕ್ರಮವನರಿಯದೆ; ದಂಡೋಪಾಯಮನುಪಕ್ರಮಿಸಿ ನೀನು ಪರಾಜಿತನಾದೆ, ಚಂಡಕ್ರೋಧರೀರ್ವರೂ ಭೇದೋಪಾಯಮಂ ಬಿಟ್ಟು ಶುದ್ಧವಂಚನೋಪಾಯಮಂ ಮಾಡಿ ಅವಮಾನಿತರಾದರು, ಭೀಷಣ ಶುಕ್ರರೀರ್ವರೂ ಶತ್ರುವಿನಲ್ಲಿ ರಾಕ್ಷಸಮಾಯಾನಿಗ್ರಹವಂ ಮಾಡುವ ಸಾಮರ್ಥ್ಯವಿರುವದನರಿಯದೆ; ಮಾಯಾಯುದ್ಧೋಪಕ್ರಮವಂ ಮಾಡಿ ಕರ್ಣನಾಸಾದಿಗಳನ್ನು ಕಳದುಕೊಂಡರು ನಾನಂತು ಜಯಿಸುವೆನೆಂದೊಡೆ; ವಂಚನೆಯಿಂದ ಮಿಶ್ರವಾದ ಭೇದೋಪಾಯಮಂ ಮಾಡಿ ವಿಪಕ್ಷನಂ ಜಯಿಸುವೆನೆಂದು ಅಗ್ರಜನೊಡಂಬಡಿಸಿ ಮುಂದೆ ತಾನು ಮಾಡುವ ಕಾರ್ಯಾಕಾರ್ಯವಂ ವಿಜ್ಞಾಪನೆ ಮಾಡಿ, ಜ್ಯೇಷ್ಠನಮುಖದಿಂದ ಸಹಸ್ರಾಯುವಿನ ಕುರುಹಂ ತಿಳಿದು ವಂದನೆಯಂ ಮಾಡಿ ಸಿದ್ಧಾಯುಧನಾಗಿ ಪೊರಮಟ್ಟು ಸಹಸ್ರಾಯುವಂ ಸರಸುತ್ತ ಬರುದೂರ ಮಾರ್ಗವಂ ಕಳೆದು ಬಹುದೇಶಾರಣ್ಯಗಳಂತಿರುಗಿ ಆರ್ಯರು ಹೇಳಿರುವ ಕುರುಹಿನಮೇಲೆ ಅರಸುತ್ತ ಉತ್ತರಾಭಿಮುಖನಾಗಿ ಪೋಗುವ ಸಹಸ್ರಾಯುವಂ ದೂರದಲ್ಲಿ ಕಂಡು ಆರ್ಯರು ಹೇಳಿದ ಕುರುಹಂ ನೋಡಿ ಈತನೆ ಸರಿಯೆಂದು ನಿಶ್ಚೈಸಿ, ಮುಂದೆ ಪೋಗುವ ಸಹಸ್ರಾಯುವು ಕಾಣದಂತೆ ತ್ವರೆಯಿಂ ಮುಂದೋಡಿಪೋಗಿ, ಸಹಸ್ರಾಯು ಬರುವ ಮಾರ್ಗದಲ್ಲಿ ನಿಂದು ರಿಕ್ತಬ್ರಾಹ್ಮಣವೇಷವಂ ಧರಿಸಿ, ಅತ್ಯಂತ ಕೃಶನಾಗಿ ರೋಗದಿಂ ಬಾಧಿತನಂತೆ ಬಳಲುತ್ತ, ಅರಣ್ಯದಲ್ಲಿರುವ ಕಾಷ್ಠಂಗಳಂತಂದು ಚಿತೆಯಂ ನಿರ್ಮಾಣವಂ ಮಾಡಿ, ಚಿತಾಗ್ನಿಪ್ರವೇಶವಂ ಮಾಡುವವನಂತೆ ಪ್ರದಕ್ಷಿಣೆಯಂ ಮಾಡುತ್ತಿರಲು.

ಇತ್ತಲಾ ಸಹಸ್ರಾಯುವು ಮಾರ್ಗಾನುಸಾರವಾಗಿ ಬಂದು ಬ್ರಾಹ್ಮಣನು ಚಿತಿಪ್ರವೇಶವಂ ಮಾಡುವದಂಕಂಡು ಆಶ್ಚರ್ಯಯುಕ್ತನಾಗಿ ಬ್ರಾ

ಹ್ಮಣನು ಅಗ್ನಿಪ್ರವೇಶವಂ ಯೇನುಕಾರಣ ಮಾಡುವನೋ ವಿಚಾರಿಸಿ ತಿಳಿಯಬೇಕೆಂದುತ್ಸವೆಯೊಂದತಾಳೆತಾಳೆಂದುಕೂಗುತ್ತ,ಸಮೀಪಕ್ಕೆ ಹೋಗಿ ಬ್ರಾಹ್ಮಣನ ಕರಮಂಪಿಡಿದುಅಗ್ನಿಪ್ರವೇಶಮಾಡುವನೆಕಾರಣವೇನೆಂದು ಕೇಳಲು ದುರಾತ್ಮನಾದ ರಾಕ್ಷಸನು ತಾನು ಮಹಾ ಪಾಪಿಯು ತನ್ನ ಕರ ಮಂ ಪಿಡಿದೆ ಯಾತಕೆ ಸಾವಕಾಶವಾಗುವುದು ಬಿಡು ಬಿಡೆಂದು ನುಡಿಯಲು. ದಯಾಶಾಲಿಯಾದ ಸಹಸ್ರಾಯುವು ಅಗ್ನಿಪ್ರವೇಶವಂ ಮಾಡುವರೆ ಕಾರಣವುಂ ಪೇಳದಡೆ ಬಿಡುವೆನು, ದಾರಿದ್ರ್ಯಾನುಭವವಂ ಮಾಡಲಾರದೆ ಯೋ; ದಯಿತಾವಿಯೋಗದಹನಜ್ವಾಲೆಯಿಂತಪ್ತನಾಗಿ ಸಹನಮಾಡಲಾರ ದೆಯೋ, ಉತ್ತಮವರ್ಣಜನದುರುಕ್ತಿಶಲವರಂಪರಾಜನಿತವೇದನಾಸಹನದಿಂ ದಲೋ, ರೋಗಾದ್ಯುಪದ್ರವದಿಂದಲೊ, ದುರ್ಜನರವ್ಯಾಪಾರದೊಳಾಸ ಕ್ತನಾದ ಕ್ಷುದ್ರನರಪತಿಕೃತಾಪಮಾನವಂನನುಭವಿಸಲಾರದೆಯೋ, ಜ್ಞಾತಿಜನಕೃತೋಪದ್ರವದಿಂದುತ್ಪನ್ನವಾದವಿಷಾದದಿಂದಲೋ ರಾಜಸನ್ಮಾನದಿಂ ದಹಂಕೃತರಾದಖಲಜನರಿಂದಂತರಂಗಳು ಮಾಡುವ ನಾನಾವಿಧ ಯಾತನೆ ಯಂ ಸಹಿಸಲಾರದೆಯೋ, ಶರಣಾಗತರಿಗಭಯಪ್ರದಾನವಂ ಮಾಡಿತತ್ಕಾರ್ಯವಂ ಮಾಡಲಸಾಧ್ಯವಾದುದದರಿಂದಲೋ ಎಂದುನಾನಾವಿಧ ವಿಕಲ್ಪದಿಂ ಕೇಳಲು, ಆ ಕಪಟಬ್ರಾಹ್ಮಣನು ಪೇಳದಡೆ ತತ್ಪರಿಹಾರವಂ ಮಾಡುವ ಸಾಮರ್ಥ್ಯ ನಿನಿಗುಳ್ಳಡೆ ಪೇಳುವೆನೆಂದೆನಲು. ಸಹಸ್ರಾಯುವು ದಯೆಯಿಂದ ಬ್ರಾಹ್ಮಣಾರ್ಥವಾಗೇನುಮಾಡಿದಡೆಯುಂ ಮಾಡಬಹುದೆಂದು ದ್ವಿಜನಂ ಕುರಿತು ನೀನು ಯೇನುಬೇಕೆಂದುಬೇಡದಡೆಯುಂ ಕೊಡುವೆನೆಂದಭಯಮುಂನಿತ್ತು, ಅಲ್ಲಿಂದ ಮುಂದೆ ಆತನಂ ಕರದುಕೊಂಡುಪೋಗಿ ನಿನ್ನ ವೃತ್ತಾಂತ ಮೇನೆಂದು ಕೇಳಲು. ಆ ವಿಪ್ರರೂಪಿಯಾದ ಕುಕ್ಕುರನು ರಾಜಕುಮಾರನಂ ಕುರಿತು ಚಿರಕಾಲದಿಂದೆನ್ನ ಜನನಿಜನಕರು ವಾರಣಾಸಿ ಕ್ಷೇತ್ರದಲ್ಲಿ ವಾಸವಂ ಮಾಡಿ ಅಯುತಸಂಖ್ಯಾತದ್ರವ್ಯಋಣವಂ ಮಾಡಿ ಕಾಲಪ್ರಾಪ್ತವಾಗೆ ಈರ್ವರೂ ಮರಣವನ್ನೈದಲು. ತಾನು ಅನ್ನಪಾನಂ ಗಳಿಗೆ ಮಾರ್ಗವಿಲ್ಲದೆ ನಾನಾವಿಧ ಶ್ರಮಪಡುವೆನಾದಡೆಯುಂ, ಆ ಮಹಾ ಕ್ಷೇತ್ರಮಂ ಬಿಡಲಾರದೆ ಭಿಕ್ಷಾನ್ನದಿಂ ಜೀವಿಸುತಿರಲು. ಋಣಬಾಧೆಯಂ ನಿರ್ವಾಹಮಾಡಲಾರದೆ ಐಹಿಕಸುಖವೊಂದಿಲ್ಲದಡೆಯುಂ ಋಣಬಾಧೆಯಿಂ

ಕಪಟಕಾರಣ ಇಂತು ಜೀವಿಸುವುದಕಿಂತಲು ಮರಣಮಂನೈದುವದೇ ಲೇಸೆಂದು ಅಗ್ನಿಪ್ರವೇಶಮಂ ಮಾಡುತಿದ್ದೆನೆಂದು ಪೇಳೆ, ಇಂತಿವರ ತನಗೆ ನೀನೊಂದು ಗತಿಯಂ ಕೊಡುವ ವರಿಗೂ ಕ್ಷಣಾರ್ಧವಾದರೂ ನಿನ್ನಂ ಬಿಟ್ಟಿರುವವನಲ್ಲ ತಾನೆಂದೆನಲು. ಸಹಸ್ರಾಯುವದಂ ಕೇಳಿ ಹಾಗೆ ಆಗಲೆಂದೊಡಂಬಟ್ಟು ನಾನು ಕಾರ್ಯಗೌರವದಿಂದ ಮುಂದೆ ಪೋಗಿ ಬರುವೆನು ತಾವತ್ಪರ್ಯಂತವು ನೀನಿಲ್ಲಿಯೇ ಯಿದ್ದೆಯಾದೊಡೆ ತಾನುಬರುವುದುಂ ನಿನ್ನ ಋಣದಿಂ ಮುಕ್ತನಂ ಮಾಡಿ ಐಹಿಕಸುಖವಿಷಯವಾಗಿ ನೀನಪೇಕ್ಷಿಸಿದಂತೆ ಮಾಡಿಕೊಡುವೆನೆಂದು ನುಡಿಯಲು. ಆ ವಿಪ್ರನದಂಕೇಳಿ ನಿನ್ನಂ ಕ್ಷಣಮಾತ್ರ ಬಿಟ್ಟಿರುವವನಲ್ಲ, ತನ್ನಂ ಬಿಡುವೆನೆಂಬಿಚ್ಛೆಯುಳ್ಳವನಾದೊಡೆ ಖಡ್ಗದಿಂ ಸಂಹರಿಸುತಿಂತಿಲ್ಲಿಂದ ಮುಂದೆ ಪೋಗೆಂದು ನುಡಿಯಲು. ಸುಶರ್ಮಾತ್ಮನದಂಕೇಳಿ ಮನದಿ ವಿಪ್ರನಿಗಿತ್ತ ನುಡಿಯು ತಪ್ಪಬಾರದೆಂದಾತನಂಕರೆದುಕೊಂಡು ಪ್ರಯಾಣಾಭಿಮುಖನಾಗಿ ಮುಂದೆ ನಡೆಯುತಿರಲು. ಆ ಕಪಟಬ್ರಾಹ್ಮಣನು ಸಹಸ್ರಾಯುವಿನ ಚಿತ್ತಾನುಸಾರಿಯಾಗಿ ಸರ್ವದಾ ಶುಶ್ರೂಷೆಯಂ ಮಾಡುತ್ತ ಸಹಚರನಾಗಿ ನಡೆಯುತ್ತಿರಲು. ಕಾಂತಿಮಾಲಿನೀತನಯನಿವನಿಂದೊಡಗೂಡಿ ಬಹುದೂರ ಮಾರ್ಗಮಂ ನಡದು ವಾರಣಾಸಿಯನೈದಿ ಭಾಗೀರಥಿಯಂ ಕಂಡು ಸಾಷ್ಟಾಂಗದಿಂ ನಮಿಸಿ ಬಹುಪ್ರಕಾರದಿಂದ ಸ್ತೋತ್ರವಂ ಮಾಡಿ, ತರುವಾಯ ಸ್ನಾನವಂ ಮಾಡಿ, ನಿತ್ಯನಿಯಮಂಗಳಂತೀರಿಸಿ, ತತ್ತೀರದಲ್ಲಿ ವಿವಿಕ್ತರಮಣೀಯ್ಯವಾಗಿರುವ ಶಿಲಾರಂಜಿತ ದಿವ್ಯಮಂಟಪವನಾಶ್ರೈಸಿ, ಸಹಸ್ರಾಯುವು ಬ್ರಾಹ್ಮಣನಂಕುರಿತು ಈರ್ವರಿಗೂ ಆಹಾರಕೊಂದುಪಾಯವುಮಂ ಮಾಡೆಂದು ಪೇಳಲು. ಆ ದ್ವಿಜರೂಪಿಯಾದ ರಾಕ್ಷಸನು ತರುವೆನೆಂದಲ್ಲಿಂದಪೊರಮಟ್ಟು ವನಕ್ಕೆ ಪೋಗಿ ಸವಿಮಾಚೀನಕಂದಮೂಲ ಫಲಾದಿಗಳಂತೆಗದುಕೊಂಡು ರಾಜಕುಮಾರನೆಡೆಗೆ ಬಂದು ಮುಂಜಿಡಲು, ಅವನ್ನೀರ್ವರೂ ಭಕ್ಷಿಸಿ ದಿವ್ಯೋದಕವಂ ಪಾನ ಮಾಡಿ, ಆ ರಾತ್ರಿ ಸುಖದಿಂದಿದ್ದು ಪ್ರಾತಃಕಾಲದೊಳೆದ್ದು, ಕೆಲವು ಕಾಲವೀಮಹಾಕ್ಷೇತ್ರದಲ್ಲಿ ವಾಸಮಾಡಬೇಕೆಂದು ನಿಶ್ಚೈಸಿ, ಯಥಾಪೂರ್ವವಾಗಿ ಸ್ನಾನಾಹಾರಗಳ ಮಾಡಿಕೊಂಡೀರೀತಿಯಿಂದಿರುತಿರಲು. ಆ ದೈತ್ಯನು ರಾಜಪುತ್ರನ ಚಿತ್ತವು ತನ್ನಲ್ಲಿ ಹ್ಯಾಗೆ ಅನುರಕ್ತವಾಗಬೇಕೋ ಆರೀತಿ

ಯಿಂದನಿಶವು ಶುಶ್ರೂಷೆಯಲ್ಲಿ ತತ್ಪರನಾಗಿ ಪರೋಕ್ಷ ಪ್ರತ್ಯಕ್ಷದಲ್ಲಿಯುಪಕಾರೂಪವಾಗಿರುತಿರಲು ಸಹಸ್ರಾಯುವಿದಂ ಕಪಟವೆಂದರಿಯದೆ ಪರಮಾಪ್ತನೆಂದು ತಿಳಿದಿರಲು.

ಒಂದುದಿನವಾಹಾರಮಂ ತರುವೆನೆಂದು ಅಪ್ಪಣೆಯಂ ಕೇಳಿ ತದಾಜ್ಞಾನುಸಾರವಾಗಿ ಪೋಗುವವನಂತೆ ವನವನೈದಿ ಕಿಂಚಿತ್ಫಲಸಂಗ್ರಹವಂ ಮಾಡಿಕೊಂಡು ಸತ್ವರದಿ ವನದಿಂತಿರುಗಿ ಆಶ್ಚರ್ಯವಂ ಕಂಡು ಬಂದವನಂತೆ ತ್ವರೆಯಿಂದೋಡಿಬಂದು ತಂದ ಫಲವೆಲ್ಲವಂ ಸಹಸ್ರಾಯುವಿಗಿತ್ತು, ತಾನು ಪೋಗಿದ್ದ ವನದಲ್ಲಿ ಮಹಾದಾಶ್ಚರ್ಯವಂ ಕೇಳಿ ಅದಂ ನಿನಗೆ ತಿಳುಹಬೇಕೆಂದು ತ್ವರೆಯಿಂದ ಸ್ವಲ್ಪ ಫಲವಂ ಸಂಗ್ರಹವಮಾಡಿಕೊಂಡೈದಿದೆನೆಂದು ಪೇಳಲು. ಅದಂ ಕೇಳಿ ಸಹಸ್ರಾಯುವದೇನಾಶ್ಚರ್ಯವೆಂದು ಕೇಳಲು. ತಾನು ಪೋಗಿದ್ದ ವನದಲ್ಲೊಂದುರಸಾಲವೃಕ್ಷದೊಳು ವರಟೆಯು; ಪತ್ಯಾಗಮನವಂ ನಿರೀಕ್ಷಿಸುತ ವ್ಯಸನಪಡುತಿರಲದಂ ಕಂಡು ಕಾರಣವೇನೋ ತಿಳಿಯಬೇಕೆಂದು ಗೂಢನಾಗಿರುತಿರಲು, ಅನಿತರೊಳಾಹಂಸಪಕ್ಷಿಯು ಫಲಸಂಗ್ರಹವಂ ಮಾಡಿಕೊಂಡು ಬಂದು ದುಗುಡದಿಂದಿರುವ ಪತ್ನಿಗೆ ಕೊಡಲು, ಆ ವರಟೆಯು ಫಲವಂ ಭಕ್ಷಿಸಿ ಪತಿಯಂಕುರಿತು ತಾನು ಅಂತರ್ವತ್ನಿಯಾಗಿರುವ ಕಾಲದೊಳು ನೀನು ಬರುವರೆ; ಇನಿತು ತಾವಕಾಸವಂ ಮಾಡುವರೆ ಎಂದು ಕೇಳಲು. ಆ ಹಂಸನು ಪತ್ನಿಯಂ ಕುತ್ತರಿಸಿ ನೀನು ಗರ್ಭಿಣಿಯಾದಂದಿನಾರಭ್ಯ ನಿನ್ನ ಮನೋರಥವಿನೋದಾರ್ಥವಾಗಿ ಅಸ್ಮಲ್ಲೋಕಸಂಚಾರವಂ ಬಿಟ್ಟು ನಿನ್ನಸಮೀಪದಲ್ಲೇಯಿದ್ದೆನಾದಕಾರಣ ಈದಿನತಾನು ಪೋಗಿದ್ದೆನಾಸಮಯದಲ್ಲಿ ಬ್ರಹ್ಮದೇವರ ಸನ್ನಿಧಾನವಂ ಕುರಿತು ನಾರದರೇ ಮೊದಲಾದ ಸಮಸ್ತ ಮಹರ್ಷಿಗಳು ಮೇರುಶಿಖರಮಂನೈದಿ ಅನೇಕಕೋಟಿ ಸೂರ್ಯರಿಂಗೆ ಸಮಾನವಾಗಿರುವ ದಿವ್ಯಮಹಾಸಭಾಸ್ಥಾನವಂ ಪೊಕ್ಕು ಸಾಕ್ಷಾದ್ವಾಗೀಶನಂ ಕಂಡು ಸಾಷ್ಟಾಂಗ ಪ್ರಣಾಮವಂ ಮಾಡಿ ನಾನಾಪ್ರಕಾರ ಸ್ತೋತ್ರವಂ ಮಾಡಿ ಅಂಜಲಿಬದ್ಧರಾಗಿ ನಿಂದಿರಲು, ದ್ವಿಯುಗಮುಖನಿವರೊಳ್ ನಾರದನಂ ಕುರಿತು ವಿಶೇಷವೇನೆಂದು ಕೇಳಲು. ನಾರದರು ಕೈಮುಗಿದು ಭೂಲೋಕದಲ್ಲಿ ಹಿಂಸಾಕರ್ಮವು ಬಹಳವಾಗಿ ನಡೆಯುವದೆಂದು ವಿಜ್ಞಾಪನೆಯಂ ಮಾಡಲು. ಅದಂ ಕೇಳಿ ಶತಾನಂ

ದನತ್ಯಂತ ಕುಪಿತನಾಗಲಾ ಕೋಪದಿಂದ ಕಾಲಪುರುಷನುಂ ಭ್ರಮಿಸಿ ತನಗೇ ನಪ್ಪಣೆಯುಂದು ಕೇಳಲು. ಆ ಪದ್ಮಯೋನಿಯು ವಿಪ್ರರು ಯಾಗಾತಿರಿಕ್ತ ಹಿಂಸಾಕರ್ಮವನ್ನು ಸ್ವಪ್ನದಲ್ಲಿಯೂ ಮಾಡುವುದಿಲ್ಲ. ದುರಾತ್ಮರಾದ ಕ್ಷತ್ರಿಯರೇ ಮೊದಲಾದವರು ಐಶ್ವರ್ಯದಿಂದುನ್ಮತ್ತರಾಗಿ ಸದಾ ಶಸ್ತ್ರಧಾರಿಗಳಾಗಿ, ನಿರಂತರ ಪ್ರಾಣಿಹಿಂಸಾತತ್ಪರರಾಗಿರುವರದರಿಂದ ನೀನು ಭೂಲೋಕವಂ ಕುರಿತು ಪೋಗಿ ಶಸ್ತ್ರಧಾರಿಗಳ್ಯಾರಾದಡೆಯುಂ ಸಂಹಾರವಂ ಮಾಡಿ ದಿನತ್ರಯದಲ್ಲಿ ಬರುವುದೆಂದು ಅಪ್ಪಣೆಯಂನಿತ್ತು ಕಳುಹಿದರೀವಾರ್ತೆಯಂ ಕೇಳುತತ್ತಾಶ್ಚರ್ಯಯುಕ್ತನಾಗೊಂದುಕ್ಷಣವಲ್ಲಿದ್ದು ಗಣನಾಸನಯವಲ್ಲಿ ಸ್ವಯೂಥಪತಿಯಂಕಂಡು ಕೈಮುಗಿದು ಬರಲು ಸಾವಕಾಶನಾದುದೆಂದು ಪತ್ನಿಯಂನೊಡಂಬಡಿಸುತಿರಲು. ತಾನಾವಾರ್ತೆಯಂಕೇಳಿ ಸತ್ವರದಿ ನಿನಿಗೆ ತಿಳುಹಬೇಕೆಂಬ ತವಕದಿಂ ಕಿಂಚಿತ್ಫಲಸಂಗ್ರಹವಂ ಮಾಡಿಕೊಂಡು ಬಂದೆನೆಂದು ಪೇಳಲು. ಸಹಸ್ರಾಯುವದಂ ಕೇಳಿ ವಿಸ್ಮಿತನಾಗಿ ಆಸಂಗತಪ್ರಲಾಪವಿದೇನೆಂದು ಕ್ಷಣವಾಲೋಚನೆಮಾಡಿ, ಈ ಭೂಸುರನು ಪರಮಾಪ್ತನಾದಕಾರಣ ಅನ್ಯಥಾಮಾಡುವನೆಂದು ತೋರುವುದಿಲ್ಲ. ಆದಡೆಯುಂ ಮಹೋದರೀಪುತ್ರರೊಳೋರ್ವನವಶೇಷಿತನಾಗಿರುವನಿತಿಜಾತರಿಂಗೆ ಕಾಮರೂಪ ಮಾಯಾದಿಗಳು ಕುಲವಿದ್ಯವದರಿಂದ ಪರಿಕ್ಷೆಯಂ ಮಾಡಬೇಕೆಂದು ಮನದಿ ನಿಶ್ಚಯಮಾಡಿ, ಕಪಟದ್ವಿಜನಂ ಕುರಿತು ಸಾಕ್ಷಾತ್ಸರಸ್ವತೀಶನಾಗ್ರಹದಿಂದ ಪುಟ್ಟಿ, ತದಾಜ್ಞೆಯಿಂದಲೇ ಬರುವನಾದ ಬಳಿಕ. ಆ ಮಹಾಕಾಳಪುರುಷನೊಡನೆ ತಮ್ಮ ಸಾಹಸ ಸಾಗಲರಿಯದೆಂದು ಪೇಳಿ, ಆದ್ಯಕಾರಣ ಧನುರ್ಬಾಣ ನಿಸ್ತ್ರಿಂಶವಂ ಮೂರುದಿನ ಪರ್ಯಂತ ಮರೆಮಾಡುವೆನೆಂದೊರೆದು, ಎಲೈ ದ್ವಿಜೋತ್ತಮನೆ! ಈ ಮಹಿಮೆಯೊಳು ತನಗೆ ಭವಾದೃಶಮಿತ್ರರಿನ್ನುಂಟೇ ಎಂದು ಶ್ಲಾಘನೆಯಂ ಮಾಡಿ ತವಕದಿಂ ಪೋಗಿ ಸ್ನಾನವುಂ ಮಾಡಿ ಬಾರೆಂದು ಪೇಳಲು. ಕುಹನಾದ್ವಿಜನಾದ ಕುಕ್ಕುರನು ಸ್ನಾನಾರ್ಥವಾಗಿ ವಿಷ್ಣುಪದಿಯುಂನೈದಲು. ಸಹಸ್ರಾಯು ಜವದೊಳಾಯುಧಂಗಳನಾಚ್ಛಾದನವಂ ಮಾಡಿ ಫಲಾದಿಗಳ ಭಕ್ಷಣೆಯುಂ ಮಾಡುತ್ತ ಕುಳಿತಿರಲು. ಕುಕ್ಕುರನೈತಂದು ನಿರಾಯುಧನಾಗಿರುವ ರಾಜಕುಮಾರನಂ ಕಂಡು ನಿಜಾಯುಧಗಳನೆಲ್ಲಿರಿಸಿದನೋ ಕಾಣೆ, ಇದೆನ್ನ ಮನೋರಥಸಿ

ದ್ಧಿಯಾಗುವದಾಗಿ ತೋರುತಿದೆ ಎಂದಾಲೋಚನೆಯಂ ಮಾಡಿ ರವಿಯಸ್ತಮಯವಾಗಲು; ಆ ಕಪಟದ್ವಿಜನು ರಾಜಕುಮಾರನಂ ಕುರಿತು ಇಂದಿನದಿನವಾಹಾರದೊರೆಯಲಿಲ್ಲವದುಕಾರಣ ನೀನಪ್ಪಣೆಯಿತ್ತಡೆ ಗ್ರಾಮಪ್ರವೇಶಮಂ ಮಾಡಿ ಭಿಕ್ಷಾನ್ನವಂ ಬೇಡಿ ಭಕ್ಷಿಸಿ ಬರುವೆನೆಂದು ಕೇಳಲು. ಸಹಸ್ರಾಯುವು ಪೋಗಿ ತ್ವರೆಯಿಂದಬಾರೆಂದು ಅಪ್ಪಣೆಗೊಡಲು. ಆ ಕಪಟದ್ವಿಜನು ಕ್ಷಿಪ್ರದಿಂ ಬರುವೆನೆಂದಲ್ಲಿಂದ ಪೊರಮಟ್ಟು ಮಾನುಷಾಹಾರಮಂ ಮಾಡಿ ಸತ್ವಗುಂದಿತು, ಸಹಸ್ರಾಯುವಂ ಕೊಲ್ಲುವಡೆ ಸಮೃದ್ಧಿಯಾದ ಆಹಾರದೊರಕಿದಲ್ಲದೆ ನಿರ್ವಾಹವಮಾಡಕೂಡದೆಂದಾಲೋಚಿಸಿ ಗ್ರಾಮಪ್ರವೇಶವಂ ಮಾಡಿ ಸ್ವಕೃತಭೇದೋಪಾಯಸಫಲವಾಗುವದಾಗಿ ತೋರುತಿದೆ ಮುಂದು ನಿಜರೂಪಮಂ ಧರಿಸಿ, ಬರುತ ಮಾರ್ಗದೊಳೊಂದು ಶವಮಂ ಕಂಡು ಸಂತೋಷಚಿತ್ತನಾಗಿ, ಸಹಸ್ರಾಯುವಿಗೆ ಕೈದುಗಳನುಪಾಯದಿಂದ ಕೈತಪ್ಪಿಸಿರುವೆ, ಕೊಲ್ಲುವರೆ ಇದೇ ಸಮಯವೆಂದು ನಿಶ್ಚಯಮಾಡಿ ತವಕದಿಂ ಸ್ಮೃತಿಯಿಲ್ಲದೆ ಪೆಣಸಂತಿನ್ನುತಿರಲು.

ಇತ್ತಲಾ ಸಹಸ್ರಾಯುವು ಪರೀಕ್ಷೆಯಂ ಮಾಡಬೇಕೆಂಬ ಕುತೂಹಲದಿಂದ ಅವನಿಂಗೆ ತಿಳಿಯದಂತೆ ಬೆಂಬತ್ತಿ ಈ ದೈತ್ಯನು ಸ್ವರೂಪಮಂ ಧರಿಸಿ ನಾನಾವಿಧ ದುರ್ಭಾಷೆಗಳನುತ್ಸಾಹದಿಂ ತನ್ನೊಳುತಾನಾಡುತ್ತ ಸ್ಮೃತಿಯಿಲ್ಲದೆ ಪೆಣನಂ ಭಕ್ಷಿಸುವ ಸರ್ವವ್ಯಾಪಾರಮಂ ನೋಡಿ ವಿಸ್ಮಿತನಾಗಿ, ದೈತ್ಯರ ಸಾಹಸಕ್ಕೆಣೆಯಿಲ್ಲವೆಂದು ತಲೆದೂಗಿ ಇವನು ಮಹೋದರೀಪುತ್ರರೊಳವಶೇಷಿತನಾಗಿರುವಂತೆ ತೋರುತಿದೆ, ಪೂರ್ವದಲ್ಲಿ ಪರಾಜಿತರಾದವರಾಕಾರದಂತಿರುವದದರಿಂದೆಂದು ಕ್ರೋಧಮೂರ್ಛಿತನಾಗಿ ರಾಕ್ಷಸನೆಡೆಗೆ ಬಂದು ಶಿಖಿಯಂ ಪಿಡಿದು ಪಾದದಿಂದೊದೆಯಲು, ಆ ಕುಕ್ಕುರನು ಆ ಪ್ರಹಾರಮಂ ಸಹಿಸಲಾರದೆ ಮೂರ್ಛಿತನಾಗಿ ಭೂಮಿಯಲ್ಲಿ ಬೀಳಲು. ಅದಂ ಕಂಡು ರಾಜಕುಮಾರನಾಶ್ವಾಸಬಡಿಸಿ, ಎಲಾ ದುರಾತ್ಮನಾದ ರಾಕ್ಷಸಾಧಮನೆ! ನೀನ್ಯಾರೆಲ್ಲಿಂದಬಂದೆ ನಿನ್ನ ಪೆಸರೇನು, ಭೂಸುರಾಕಾರನಂ ತಾಳಿದುದಕೆ ಫಲವೇನು, ತಥ್ಯವಾಗಿ ಪೇಳಿದಡೆ ಬಿಡುವೆ, ಅನೃತವನ್ನಾಡಿದಡೆ ಶಿರಮಂತರಿವೆನೆಂದು ಘರ್ಜಿಸಿ ಕೇಳಲು. ಕುಕ್ಕುರನು ಪಾದಪ್ರಹಾರದಿಂದಾದ ಸುಖವಂ ನೆನದು ನೆನದು ಆನಂದ ಬಾಷ್ಪಗಳು ಸುರಿಯುತ್ತ ಆಃ ಭೀ

ದೋಷಾಯಭೇದಿಸಿದೆಂತೋ ಕಾಣೆ, ಶಿವಶಿವಾ ಇಂತು ವಂಚನೆಯಂ ಮಾಡಿದಡೆ ಸಂಹರಿಸದೆ ಬಿಡನೆಂದು ತನ್ನ ವೃತ್ತಾಂತಮಂ ವಿಸ್ತಾರವಾಗಿ ಬಿನ್ನಹವ ಮಾಡಿ, ದುರಾತ್ಮನಾದ ತನ್ನಪರಾಧಮಂ ಕ್ಷಮಿಸಿ ಪ್ರಾಣದಿಂದುಳಹಬೇಕೆಂದು ಬೇಡಲು, ಅದಂ ಕೇಳಿ ಆಶ್ಚರ್ಯಯುಕ್ತಿಯಿಂದವಿವೃದ್ಧನಾದ ಪುತ್ರಾಶನನಂತೆ ಕ್ರೋಧಯುಕ್ತನಾಗಿ ಎಲಾ ಮಹೋದರೀಪುತ್ರ; ಹಾಗಾದಡೆ ನಿರಾಯುಧನಾಗಿರುವೆನಲ್ಲ ಏನು ಮಾಡುವೆಯೋ ನೋಡುವೆನು ಮಾಡೆಂದೆನಲು. ಕುಕ್ಕುರನು ಕೈಮುಗಿದು ತನ್ನ ಬುದ್ಧಿಪ್ರಾಗಲ್ಭ್ಯಮನ್ಮಾದೃಶಮಹದರಿಂದಲಿಂತಾದುದೆಂದು ವಿಜ್ಞಾಪನೆಮಾಡಲು. ರಾಜಕುಮಾರನು ಕೇಳಿ ನಸುನಗುತ ಕರ್ಣನಾಸಾಭೇದನವಂ ಮಾಡಿ, ಎಲಾ ದುರಾತ್ಮನೆ ಕೇಳು; ಈಕ್ಷಣವಲ್ಲಿಂದ್ವೀಪವಂ ಬಿಟ್ಟು ಪೋದವನುತ್ತಮ, ಇಲ್ಲದಿರೆ ಶಿರಮಂ ಚೆಂಡಾಡುವೆನು ಪೋಗೆಂದು ಬಿಡಲು. ಕುಕ್ಕುರನು ವಂದನೆಯಂ ಮಾಡಿ, ಪ್ರಾಣಮಂನುಳುಹಿದನೆಂಬ ಸಂತೋಷದಿಂನಾಸಾಕರ್ಣಭೇದನಗಳಂ ಮರೆದು ನೈಮಿಶಾರಣ್ಯಮಂ ಕುರಿತು ನಡೆಯಲು. ಸಹಸ್ರಾಯು ನಿಜಾಯುಧಂಗಳಂ ತೆಗದುಕೊಂಡು ಯಥಾಸ್ಥಾನಕ್ಕೆ ಬಂದು ಕ್ರಮದಿಂದ ಮಹೋದರೀಪುತ್ರರೆಲ್ಲರೂ ಪರಾಜಿತರಾಗಿ ಪೋದರು, ಇತಃಪರ ಪ್ರಕೃತವಲ್ಲಿ ದಿತಿಜರಟ್ಟಳಿಯುಂ ಕಾಣೆ, ಇಂದಾವಡೆಯು ಸುಖದಿಂ ನಿದ್ರೆಯುಂ ಮಾಡುವೆನೆಂದು ಕುಳಿತು ಪೂರ್ವದಿಗ್ಭಾಗಮಂ ನೋಡಿ ಅರುಣೋದಯಮಂ ಕಂಡು ನಿದ್ರೆಗೆ ಕಾಲವಲ್ಲವೆಂದು ದೇವಿಯುಂ ನೆನೆಯುತ್ತಿರಲು.

ಅಲ್ಲಿಗೆ ಸೌಮ್ಯಕನೆಂಬ ಋಷಿಯು ಪತ್ನೀಸಹಿತನಾಗಿ ಸ್ನಾನಾರ್ಥವಾಗಿ ಭಾಗೀರಥೀತೀರವಂ ಕುರಿತು ಬರುತಿರುವ ಸಮಯದಿ ಅಂತರಿಕ್ಷದಿಂದೋರ್ವ ಮಹರ್ಷಿಯತಿತೇಜಸ್ವಿಯಾಗಿ ಸುರನದೀಕೂಲಮಂ ಕುರಿತು ಇಳಿದು ಬರುತಿರಲು, ಸೌಮ್ಯಕಋಷಿಯಾಗಸದಿಂದ ಬಂದ ಸುನಂದನೆಂಬ ಮಹರ್ಷಿಯಂ ಕಂಡು ಪರಸ್ಪರಪ್ರಣಾಮಪ್ರೇಮಾಲಿಂಗನ ಕುಶಲಪ್ರಶ್ನೆಗಳಂ ಮಾಡೆ, ತರುವಾಯ ಸುನಂದನೆಂಬ ಮಹರ್ಷಿಯು ಸೌಮ್ಯಕಋಷಿಯಂ ಕುರಿತು ತಾವು ಪತ್ನೀಸಹಿತರಾಗಿ ನಿಜಾಶ್ರಮವಂ ಬಿಟ್ಟು ಇಲ್ಲಿಗೈದುವವಕ್ಕೆ ಕಾರಣವೇನೆಂದು ಕೇಳಲು. ಸೌಮ್ಯಕನು ಎಲೈ ಮಹಾನುಭಾವನೆ ಕೇಳು; ನಿಮ್ಮಾಶ್ರಮಪ್ರದೇಶದಲ್ಲಿ ಮಹದನಾಹುತಸಡದುದಂ ನೋಡಿ

ಸಹನಮಾಡಲಾರವೆ ಮಹದ್ಭಯದಿಂದ ಆಸಲವನ್ನು ಬಿಟ್ಟು ಕ್ವಚಿತ್ಕಾಲವಾರಣಾಸಿಕ್ಷೇತ್ರವಾಸನಂ ಮಾಡಬೇಕೆಂಬ ಕುತೂಹಲದಿಂದ ಬಂದೆನೆಂದೆನಲು. ಸುನಂದನದೇನನಾಹುತವೆಂದು ಕೇಳಲು. ತವಾಶ್ರಮಕ್ಕೆ ನಾತಿದೂರವೊಳಿರುವ ಕ್ರೌಂಚಪರ್ವತದ ಗುಹೆಯಲ್ಲಿ ದೈತ್ಯಸ್ತ್ರೀಪುರುಷರಿಂಗೆ ಯುದ್ಧಪ್ರಾರಂಭನಾಗಿ ತಲಪ್ರಹಾರ ಶಬ್ದಗಳು ಅಸಹ್ಯಪ್ರಹಾರದಂತ ಕಠೋರವಾಗಿ ಕೇಳಿ ಅತ್ಯಂತತ್ರಸ್ತಹೃದಯನಾಗಿನ್ನು ತಾನಿರುವದಕ್ಕೆ ಯೋಗ್ಯವಲ್ಲೆಂದುಪರಿತ್ಯಾಗವಂಮಾಡಿಬಂದೆನಿಲ್ಲಿಗೆಂದೆನಲು,ಸುನಂದಮಹರ್ಷಿಯು ಕೇಳಿ ಅಜ್ಞಾತನಾದು ಪಾಪೀತಿಹೋತ್ರನೆಂಬ ರಾಜರ್ಷಿಯು ಕುಂಡಲಾಪಹಾರಿಯಾದ ಸುರಭಿಯುಂಬ ದೈತ್ಯನಿಗೂ ತತ್ಪತ್ನಿಗೂ ಯುದ್ಧಪ್ರಾರಂಭವಾಗೀರ್ವರೂ ಸಮಕಾಲದಲ್ಲಿ ಮೃತರಾದರೆಂಬ ಸುದ್ದಿಯನ್ನು ಇಂದ್ರದೇವರೊಡ್ಡೋಲಗದಲ್ಲಿ ಚಾರಣರೋರ್ವನೈತಂದು ವಿಜ್ಞಾಪನೆಯಂ ಮಾಡುತ್ತಿದ್ದನು. ಅವರಿಂದ ಆ ದೈತ್ಯನಿಧನ ವೃತ್ತಾಂತವ ದುದಿನ್ನು ನಿಜಾಶ್ರಮವಂನೈದಬಂದೆ ದು ಪೇಳಲು. ಸೌಮ್ಯನತ್ಯಂತಸಂತೋಷಚಿತ್ತನಾಗಿ ಕುಂಡಲಾಪಹಾರವಿಚಾರವಂ ಪೇಳಬೇಕೆಂದು ಕೇಳಲು. ಸಹಸ್ರಾಯುವೇನ ಪೇಳುವನೊ ಕೇಳಬೇಕೆಂದು ಪ್ರಸನ್ನನಾಗಿ ಕೇಳುತ್ತಿರಲು. ಆ ಸುನಂದನೆಂಬ ಮಹರ್ಷಿಯು ಸೌಮ್ಯಕನಂ ಕುರಿತು, ಪೇಳಿದನದೆಂತನೆ; ಪೂರ್ವದಲ್ಲಿ ವೀತಿಹೋತ್ರನೆಂಬಮಹರ್ಷಿಯು ಕರ್ಮಕಾಂಡೋಕ್ತಪ್ರಕಾರ ಯಾಗಾದಿಕರ್ಮಗಳನ್ನು ಬಹುಕಾಲ ಯಥಾವಿಧಿಯಿಂದ ಮಾಡಿ ಸಮಸ್ತದೇವತೆಗಳನ್ನು ಸಂತೋಷಪಡಿಸಲು, ಇಂದ್ರದೇವರು ಸಂತುಷ್ಟರಾಗಿ ಸಮಸ್ತದೇವತಾಸಮಾಜದೊಡಗೂಡಿ ಆ ರಾಜರ್ಷಿಯ ಯಾಗದಲ್ಲಿ ಪ್ರತ್ಯಕ್ಷನಾಗಿ ಆ ರಾಜರ್ಷಿಯಿಂದ ಬಹುಪ್ರಕಾರ ಪೂಜಿತನಾಗಿ, ಪರಮ ಸಂತೋಷದಿಂ ಸಂತುಷ್ಟನಾಗಿ, ಅನೇಕ ರತ್ನಖಚಿತವಾದ ಕಿರೀಟಕುಂಡಲಗಳಂ ನಿತ್ತು ರಾಜರ್ಷಿಯಂ ಕುರಿತು ಈ ಕಿರೀಟಕುಂಡಲಗಳನ್ನು ಯಾರು ಧರಿಸುವರೋ; ಅವರು ಮೂರ್ತಿತ್ರಯಾತಿರಿಕ್ತಸಮಸ್ತಚರಾಚರ ಪ್ರಾಣಿಗಳಿಂದ ಸೇವ್ಯನಾಗುವನಂತಪ್ಪ ಮಹಾಪ್ರಭಾವವಿಶಿಷ್ಟವಾದುದೀಕಿರೀಟಕುಂಡಲಂಗಳೆಂದು ತನ್ಮಾಹಾತ್ಮೆಯಂ ಪೇಳುತಂತರ್ಧಾನವಂ ನೈದಲು. ಅಂದಿನಾರಭ್ಯ ಕಿರೀಟಕುಂಡಲಧಾರಿಯಾದ ರಾಜರ್ಷಿಯು ಸಮಸ್ತದಿವಿಜೋರಗರಿಂ

ದ ಸೇವಕನಾಗಿ ಬಹುಕಾಲ ಪೃಥ್ವೀಸಾಮ್ರಾಜ್ಯವಂ ಮಾಡುತ್ತಿರಲು. ಈ ಸುರಭಿಯೆಂಬ ದೈತ್ಯನು ಕಿರೀಟಕುಂಡಲಾಸಕ್ತನಾಗಿ ಅವುಗಳನ್ನ ಪಹರಿಸುವರೆ ಈ ರಾಜರ್ಷಿಯಂಯುದ್ಧವಮಾಡಿ ಜಯಿಸಲಳವಲ್ಲವೆಂದುಭೃತ್ಯವೇಷವಂಧರಿಶಿ ಚಿರಕಾಲ ಭೃತ್ಯನಾಗಿ ಮಹೀಪತಿಯ ಸೇವೆಯಂಮಾಡುತ್ತಲಿದ್ದು, ಒಂದಾನೊಂದುದಿನ ವೀತಿಹೋತ್ರನು ಶಯನವಂಮಾಡಿಗಾಢ ಸುಷುಪ್ತಿಯಂನೈದಲು, ಈ ದುರಾತ್ಮನಾದ ಭೃತ್ಯವೇಷಧಾರಿಯಾದ ಸುರಭಿಯು ಕಿರೀಟವಂಮುಟ್ಟಲಂಜಿ ಕುಂಡಲವುಂನಪಹರಿಸಿ ಪಲಾಯನವಂಮಾಡಿ, ಆ ದೇಶವಂಬಿಟ್ಟು ಹಿಮಾಚಲಪ್ರಾಂತ್ಯದಲ್ಲಿರುವ ಅಂಜನಾಚಲದ ಶಾಲ್ಮಲೀವೃಕ್ಷವನದ ಸಮೀಪದಲ್ಲಿ ಮಹಾಂಧಕಾರದಿಂದುರ್ಗಮವಾದ ಗುಹೆಯಲ್ಲಿರಿಶಿ, ಪತ್ನೀಸಹಿತನಾಗಿ ಆ ಗುಹೆಯನ್ನಾಶ್ರೈಶಿ ವಾಸವಂಮಾಡಿ, ಕಿರೀಟಮನ್ನಪಹರಿಸಬೇಕೆಂಬಿಚ್ಛೆಯುಳ್ಳವನಾಗಿ ಕಾಲನಿರೀಕ್ಷಣವಂಮಾಡುತ್ತಿರಲು. ವೀತಿಹೋತ್ರನೆಂಬ ರಾಜರ್ಷಿಯು ಕುಂಡಲವುಪೋದಬಳಿಕ ಕಿರೀಟವಂ ಧರಿಸಿದಡೆ ಶೋಭಿಸಲರಿಯದು, ಅಥವಾ ಶೋಭಿಶಿದಡೆಯುಂ ಯಾರಾದರೂ ಅಯೋಗ್ಯರಾದವರು ಕುಂಡಲಮಂನಪಹರಿಶಿದಂತೆ ಕಿರೀಟವಂನಪಹರಿಶಿದಡೆ ತಾನೇನ ಮಾಡುವನೆಂಬ ಭಯದಿಂದ, ಪೂರ್ವದಲ್ಲಿ ತಾನು ಯಾಗವಂಮಾಡಿದ ದಂಡಕಾರಣ್ಯದ ಸಮೀಪದಲ್ಲಿರುವ ಗಜಾರಣ್ಯ ಮಧ್ಯದಲ್ಲಿ, ಇಂದ್ರದೇವರಿಂದ ಪ್ರತಿಷ್ಟಿತವಾದ ಕಾಳಿಯಾಲಯದಪುರೋಭಾಗದಲ್ಲಿರುವ ಶಮೀವೃಕ್ಷದಡಿಯೆಲ್ಲಿ ಸ್ಥಾಪನವಂಮಾಡಿ, ತದ್ರಕ್ಷಣಾರ್ಥವಾಗಿ ಅನೇಕ ಕೋಟಿ ನಿತ್ಯಪಿಶಾಚಂಗಳ ಕಾವಲಿರಿಸಿ, ಆ ಪಿಶಾಚಾಧಿಪತಿಯಾದ, ದೀರ್ಘಜಿಹ್ವನಂ ಕರದು ಯಾವ ಪುರುಷನು ಈ ಮಹದುನ್ನತವಾದ ಅತಿಸ್ಥೂಲವಾದ ಶಮೀವೃಕ್ಷವನ್ನು ಒಂದೇ ಖಡ್ಗಪ್ರಹಾರದಿಂ ಛೇದಿಸುವನೋ; ಆತನಿಂಗೆ ಕಿರೀಟವಂ ಕೊಡುವುದು. ಹಾಗಲ್ಲದೆ ದೇವಾಸುರರಪೇಕ್ಷಿಶಿದಡೆಯುಂ ಕೊಡಲಾಗದೆಂದಾಜ್ಞಾಪಿಸಿ, ಚಿರಕಾಲ ರಾಜ್ಯಭಾರವಂ ಮಾಡಿ ಕಾಲಪ್ರಾಪ್ತವಾಗಿ ಸ್ವರ್ಗಮನೈದಲು. ಈ ಸುರಭಿಯೆಂಬ ರಾತ್ರಿಂಚರನು ಕುಂಡಲಮಂ ರಕ್ಷಿಶಿ, ಕಿರೀಟ ಪೋದಮಾರ್ಗವಂನರಿಯದೆ; ಇರುತೊಂದುದಿನ ಆಹಾರಾಲಾಭದಿಂದ ಕ್ಷುಧಾರ್ತನಾಗಿ ಪತ್ನಿಯಂ

ಕರದು ಆಹಾರ ಸಂಗ್ರಹವಂ ಮಾಡಿಕೊಂಡು ಬರುವೆ, ನೀನು ಗುಹಾದ್ವಾರವಂ ಕಾದಿರುವದೆಂದು ಪೇಳಿ, ತಾನು ಬಹುದೂರದೇಶಮಂಕುರಿತು ನಡೆಯಲು. ಪತ್ನಿಯು ಬಹುಕಾಲ ಪತ್ಯಾಗಮನಮಂ ನೋಡಿ ಬಾರದಿರಲು, ಕ್ಷುದ್ಬಾಧೆಯಂ ಸಹಿಸಲಾರದೆ ದಿವ್ಯವಾದ ಮಾನುಷಸ್ತ್ರೀಯಾಗಿಋಷ್ಯಾಶ್ರಮಗಳಂಪೊಕ್ಕು ಮೋಹಿಸುತ್ತ, ಅವರನ್ನು ಭಕ್ಷಿಸುವೆನೆಂಬಿಛ್ಛೆಯುಳ್ಳವಳಾಗಿ ದಿವ್ಯರೂಪವಮಂ ಧರಿಶಿ ಗುಹಾದ್ವಾರವಂಬಿಟ್ಟು ಅಲ್ಲಲ್ಲಿ ಸಂಚಾರ ಮಾಡುತ್ತಿರಲು. ದೈವವಶದಿಂದ ಋಷ್ಯಾಶ್ರಮ ಸಮೀಪದಲ್ಲಿರುವ ವನದಲ್ಲಿ ಸುರಭಿಯೆಂಬ ರಾತ್ರಿಂಚರನು ದಿವ್ಯರೂಪವಂಧರಿಶಿ, ಬರುವ ಪತ್ನಿಯಂ ಕಂಡು, ಪತ್ನಿಯು ದರಿಯದೆ ಕಿಂಚಿತ್ಕಾಲ ರಹಸ್ಯವಾಗಿಪರೀಕ್ಷೆಯಂ ಮಾಡಿ, ಆಕೆಯ ಸೌಂದರ್ಯಮಂ ಚೇಷ್ಟೆಗಳಂ ನೋಡಿ ಕಾಮಾರ್ತಳಾಗಿರುವಳೆಂದು ನಿಶ್ಚಯಮಾಡಿ, ಇದಕೊಂದುಪಾಯಮಂ ಚಿಂತಿಸಬೇಕೆಂದು ಯೋಚಿಶಿ, ತದನುರೂಪವಾದ ದಿವ್ಯಸುಂದರಮಾನುಷಾಕಾರಮಂಧರಿಸಿ, ತಾನು ಕಾಮಾರ್ತನೋಪಾದಿಯಲ್ಲಿದುರ್ಗೆಬರಲು. ಆ ಮಾಯಾಮಾನಿನಿಯು ಬರುವ ಪುರುಷನಂ ಕಂಡು ಪತಿಯೆಂದರಿಯದೆ ಚೇಷ್ಟೆಗಳಿಂದ ಕಾಮಾರ್ತನಾಗಿರುವಂತೆತೋರುತ್ತಿದೆಎಂದುನಿಶ್ಚೈಶಿ, ಇವನಂಮೋಹಗೊಳಿಶಿಭಕ್ಷಿಸಬೇಕೆಂಬ ಕುತೂಹಲದಿಂದ ಇವನಂ ಕಂಡು ಕೇವಲ ಲಜ್ಜೆಯಿಂದ ಸಮೀಪದಲ್ಲಿರುವ ಲತೆಯಂ ಮರೆಮಾಡಿಕೊಂಡು ಅಪಾಂಗದಿಂದಿವನಂ ನೋಡುತ್ತ, ಜಗಳುತಿರುವ ಶೆರಗಿನಿಂ ಕುಚಕುಂಭಗಳನೀಷತ್ತು ಮರೆಮಾಡುತ್ತ ನಿಂದಿರುವ ಭಾವಮಂ ನೋಡಿ ಸುರಭಿಯಂಬ ರಕ್ಕಸನು ಕಾಮಮೋಹಿತನಾಗಿ ತತ್ಸಮೀಪಮನೈದಿ ಎಲೈ! ಮೋಹನಾಂಗಿ ನೀನ್ಯಾರು; ಈ ವನದೊಳೋರ್ವಳೇ ಸಂಚಾರವಾಡುವದೇನುಕಾರಣ, ವನದೇವತೆಯೋ, ದೇವಮಾನಿನಿಯೊ, ಮಾನುಷಸ್ತ್ರೀಯೊ, ಮಾನುಷರಿಗೀಸೌಂದರ್ಯಮೆಲ್ಲಿಹುದು ಎಂದು ಕೇಳಲು. ಈ ಕಪಟಮಾನಿನಿಯು ಮುಗುಳುನಗೆಯಿಂ ತಲೆವಾಗಿ ಅಪಾಂಗದಿಂದೀದೈತ್ಯನ ಸ್ವರ್ವಸ್ವಮಂನಪಹರಿಸುತ್ತ ಎಲೈ ಸುಭಗನೆ ಕೇಳು, ತಾನು ಋಷಿಪತ್ನಿಯು, ಪತಿಯ ನಿರ್ಬಂಧದಿಂ ವೈಷಯಿಕಾನಂದಮಂ ನರಿಯದೆ ದುಃಖಿತಳಾಗಿದ್ದೆ ನಿಂತಿರುತಿರಲೋರ್ವ ರಕ್ಕಸನು ಮಸೌ

ತ್ಪೂರ್ವದಲ್ಲಿ ನಿಶಿಯಲ್ಲಿ ಬಂದು ತನ್ನ ಪತಿಯಂ ಭಕ್ಷಿಸಿಪೋದ, ತಾನು ಪುಷ್ಪಿಣಿಯಾಗೊಂದು ಕುಟೀರದೊಳು ಮಲಗಿದ್ದುದರಿಂದ ತನ್ನಂಕಾಣದೆ ಪೋದನಾರಕ್ಕಸನೆ ತನಗಿಷ್ಟದೇವತೆಯು ಎಂದು ನಾಂತಿಳಿದು, ಅಂದಿನಾರಭ್ಯ ಸಂತೋಷಯುಕ್ತಳಾಗಿ, ಅನಾಥಳಾದ ತಾನು ವನದಲ್ಲಿ ಸಂಚಾರವಮಾಡುತ್ತ ಆಶ್ರಯಮಂನರಸುತ್ತ, ಪ್ರಕೃತದಲ್ಲಿ ಧನುರ್ಬಾಣಯುಕ್ತನಾಗಿ ಗಿಳಿದೇರನೋರ್ವನನವರತ ಸಹಾಯಭೂತನಾಗಿರುವನಿದುವೆಯನ್ನ ವೃತ್ತಾಂತವೆಂದು ಪೇಳಲು. ರಕ್ಕಸನಾನುಡಿಯಂ ಕೇಳಿ ಅನುರಾಗಾತಿರೇಕದಿಂ ಪರವಶನಾಗಿ ಎಲೈ ಮಾನಿನಿಯೆ; ತಾನು ಈ ಮೂರು ಲೋಕದೊಳು ತನಗನುರೂಪವಾದ ನಾರಿಯಂನರಿಶಿ ಕಾಣದೆ ವಿಷಾದದಿಂದರಣ್ಯಪ್ರವೇಶಮಂ ಮಾಡಿ ತಪವನಾದಡೆಯುಂ ಮಾಡುವೆನೆಂದು ಬರುತ ಕಂಡೆನು ನಿನ್ನ, ಎನ್ನೊಳನುರಾಗದಿಂ ಕರವಪಿಡಿದೆಯಾದೊಡೆ ನಿನ್ನಡಿಂಗರಿಗನಾಗಿರುವೆನೆಂದು ಕೈಮುಗಿದು ಕುಚಗ್ರಹಣಮಂ ಮಾಡಲುದ್ಯುಕ್ತನಾದಭಿಪ್ರಾಯಮಂ ತಿಳಿದು, ಮುಂದಿರುವನರ್ಥಮಂ ನರಿಯದೆ ಈರ್ವರೂಕೈಪಿಡಿದು ಕ್ರೀಡಿಸುವದಕ್ಕೆ ರಹಸ್ಯವಾದ ಪ್ರದೇಶವಮಂನರಸುತ್ತ ಯುಷ್ಮದಾಶ್ರಮ ಸಮೀಪದಲ್ಲಿರುವ ಗಿರಿಗುಹಾಂತರಾಳದೊಳೀರ್ವರೂ ಮೂರುದಿನಪರ್ಯಂತರ ಕ್ರೀಡಿಶಿ ತದನಂತರದಲ್ಲಿ ಪುರುಷನು ಶಾಂತನಾದ ಕಾಲದೊಳು, ಅವನಂ ಸಂಹರಿಸುವರೆ ತನ್ನ ಬಾಹುಗಳಿಂದ ರಕ್ಕಸಿಯು ಕಂಠಮಂನೊತ್ತಲು, ದೈತ್ಯನಾಶ್ವಾಸವು ಬಂಧಿಶಿ ಪ್ರಾಣೋತ್ಕ್ರಮಣಾವಸ್ಥೆಯಿಂದ ಬಾಹುಗಳಂದ ಬಿಡಿಶಿಕೊಳ್ಳಲಾರದೆ, ಅತಿ ಪ್ರಯಾಸದಿಂದಿವಳು ರಾಕ್ಷಸಿಯು, ತಾನು ಶಾಂತನಾದ ಕಾಲದೊಳು ತನ್ನ ಪ್ರಿಯಳಂತಿರ್ದು ತನ್ನಂ ಕೊಲುವರೆ ಯತ್ನವಂ ಮಾಡಿದಳೆಂದು ತಿಳಿದು, ಆ ಅಂಧಕಾರದೊಳು ರೂಪಾಕೃತಿಗಳನರಿಯದೆ, ಪರಸ್ಪರ ಯುದ್ಧವಂ ಮಾಡಿ ಮೃತರಾದರೆಂದು, ಸುನಂದಮಹರ್ಷಿನುಡಿಯಲು. ಸಹಸ್ರಾಯುವದಂ ಕೇಳಿ ಆ ಶಮೀವೃಕ್ಷದೊಳಿರುವುದೀಕಿರೀಟವೆಂದು ಸ್ಮೃತಿಗೆ ತಂದು ಕೇಳುತಿದ್ದನೆಂಬಲ್ಲಿಗೆ. * ಇಂತು ಕರ್ನಾಟಕಭಾಷಾವಿರಚಿತ ಶ್ರೀ ಮಹಿಶೂರಪುರವರಾಧೀಶ ಶ್ರೀಮತ್ಕೃಷ್ಣರಾಜವಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀಕೃಷ್ಣರಾಜ

ವಾಣೀವಿಲಾಸವೆಂಬಾಂಕಿತದಿಂದ ಕರ್ನಟಭಾಷಾ ವ್ಯಾಖ್ಯಾನರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪ ಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಸ್ತ್ಯಸಂವಾದದಲ್ಲಿ ದಶಮಾಧ್ಯಾಯ ಸಂಪೂರ್ಣವು. * * * *



## ಹನ್ನೊಂದನೇ ಅಧ್ಯಾಯ.



ಅನಂತರದಲ್ಲಿ ಆ ಸೌಮ್ಯಕನೆಂಬ ತಾಪಸನು ಸುನಂದನೆಂಬ ಮಹರ್ಷಿಯಾಡಿದ ನುಡಿಯಂ ಕೇಳಿ ಸ್ವರ್ಗದಿಂದಿಳೆಗೆ ತಾವೈದುವರೆ; ಕಾರಣವೇನೆಂದು ಕೇಳಲು. ಆ ಸುನಂದನು ಸಹಸ್ರಾಕ್ಷನು ಕಾರ್ಯಗೌರವದಿಂದ ಕಳುಹಿಸಿರುವನದರಿಂದ ಬಂದಿರುವೆನೆಂದು ನುಡಿಯಲು, ಸೌಮ್ಯಕನು ಸಾಕ್ಷಾತ್ತ್ರಿಲೋಕಾಧಿಪತಿಯಾದ ಶಚೀಪತಿಗೆ ಭೂಲೋಕದಲ್ಲಿರುವ ಕಾರ್ಯಮೇನೆಂದು ಕೇಳಲು. ಸುನಂದನು ಸೌಮ್ಯಕನಂ ಕುರಿತು ಪೂರ್ವಯುಗದಲ್ಲಿ ನಾಕಾಧಿಪತಿಯಾದ ಪುರಂದರನು ಸ್ವಕಾರ್ಯಮನ್ನುದ್ದೇಶಮಾಡಿ ದೇವಗಿರಿಯೆಂಬ ಪರ್ವತದಲ್ಲಿ ಮಹಾಕಾಳಿಯಂ ಕುರಿತು ಚಿರಕಾಲ ತಪವಂ ಮಾಡಲು, ಸಾಕ್ಷಾತ್ಸರ್ವಮಂಗಳೆಯು ಪ್ರಸನ್ನಳಾಗಿ ನಿಜರೂಪವಂ ತೋರಿ ಪುರಂದರನಪೇಕ್ಷಿತಾಶೇಷವರಗಳನ್ನಿತ್ತು, ಆ ತ್ರಿದಿವೇಶ್ವರನಿಂದ ಬಹುಪ್ರಕಾರ ಸ್ತೋತ್ರವಂ ಮಾಡಿಸಿಕೊಂಡು, ಇಂದಿನಾರಭ್ಯ ಈ ದೇವಗಿರಿಯಲ್ಲಿ ತಾನು ನೆಲಸಿ ಬೇಡಿದವರಿಗೆ ವರವಂ ಕೊಡುವೆನೆಂದು ಅಪ್ಪಣೆಗೊಡಲು. ನಗಾರಿಯು ಪೂರ್ಣಕಾಮನಾಗಿ ದೇವಿಯನ್ನು ಸಕಲೋಪಚಾರಗಳಿಂದ ಪೂಜೆಯಂ ಮಾಡಿ, ದಿವ್ಯಾಮೃತಕಲಶಮಂ ದೇವಿಗೆ ಸಮರ್ಪಣೆಯಂ ಮಾಡಿ, ದೇವಿಯ ಅಪ್ಪಣೆಗೊಂಡು ನಾಕಮನೈದಲು. ಅಂದಿನಾರಭ್ಯ ಆ ಜಗನ್ಮಾತೆಯಾನಗಾಗ್ರದೊಳು ನೆಲಸಿ, ಯೋಗ್ಯರಾಗಿ ಬೇಡಿದವರಿಗೆ ವಾಂಛಿತಾರ್ಥವನ್ನು ನೀಡುತ್ತಿರಲು. ಈ ವರ್ತಮಾನಕಾಲದೊಳೋರ್ವ ತಸ್ಕರನು ಪತ್ನಿಪುತ್ರಸಹಿತನಾಗಿ ದಂಡಕಾರಣ್ಯ ಸಮೀಪದಲ್ಲಿರುವ ಮರುಭೂಮಿಯೊಳು

ಕುಟೀರಮಂಕಟ್ಟಿ ವಾಸವಂಮಾಡುತ್ತಾ, ಮಾರ್ಗವಶದಿಂ ಬಂದವರಂ ಸಂಹರಿಸಿ ಸರ್ವಸ್ವಮಂ ನಪಹರಿಸಿ, ಇಂತುಮಲ್ಲದೆ ಸಮೀಪದಲ್ಲಿರುವ ಪುರಗ್ರಾಮಗಳಲ್ಲಿ ಚೌರ್ಯಮಂಮಾಡಿ, ಸಂಪಾದಿತದ್ರವ್ಯಪದಾರ್ಥಂಗಳಲ್ಲಿ ದೇವಗಿರಿವಾಸಿಯಾದ ಮಹಾಕಾಳಿಗರ್ಧಮಂ ಸಮರ್ಪಣೆಮಾಡಿ, ಶೇಷಾರ್ಧಭಾಗದಿಂದಾತ್ಮರಕ್ಷಣೆಯಂ ಮಾಡುತ್ತಾ, ಈರೀತಿಯಿಂದ ಕಂದಮೂಲಫಲವೇ ಮೊದಲಾದ ಪದಾರ್ಥಂಗಳಲ್ಲಿ, ದ್ರವ್ಯಾಭರಣ ಮೊದಲಾದ ವಸ್ತುವಿನಲ್ಲಿ ಏನುಸಿಕ್ಕಿದಡೆಯುಂಕಾಳಿಗರ್ಧಭಾಗಮಂ ನೀವೆನೆಂದು ಪ್ರತಿಜ್ಞೆಯಂ ಮಾಡಿ. ತಸ್ಕರಾಪಶದತ್ಯಂತ ಭಕ್ತಿಯಿಂದಿರುತಿರ್ದು, ಒಂದಾನೊಂದು ದಿನ ದ್ರವ್ಯಾಕಾಂಕ್ಷೆಯಿಂದ ಮಣಿಪುರವನಾಳುವ ಮಹಾ ಪ್ರತಾಪಶಾಲಿಯಾದ ಉಗ್ರಸೇನರಾಯನ ಅರಮನೆಗೆ ಕನ್ನವಸಿಟ್ಟು ಒಳಪೊಕ್ಕು ಅನೇಕದ್ರವ್ಯ ದುಕೂಲಾಭರಣಗಳನರಸಿ ಸಂಗ್ರಹಮಾಡುತಿರಲನಿತರೊಳು ಆ ಮಹೀಪತಿಯುಎಚ್ಚತ್ತು ಚೋರನಂಕಂಡು ಬಹುಪ್ರಕಾರವಾಗಿ ಪ್ರಹರಿಸಿ, ಹಸ್ತನಾಸಾಚ್ಛೇದನವಂ ಮಾಡಿ ಪೋಗೆಂದು ದಾಟಿಸಲು. ಚೋರನತ್ಯಂತದುಗುಡದಿಂ ಪೊರಮಟ್ಟು ಪರಮೇಷ್ಟದೇವತೆಯಾದ ಕಾಳಿಯಾಲಯಕ್ಕೆ ಬಂದು ದೇವಿಯಂ ಬಹುವಿಧವಾಗಿ ಪೂಜೆಯಂಮಾಡಿ, ಒಂದುವತ್ಸರಪರ್ಯಂತ ಪರ್ಣಾಹಾರಮಂ ಮಾಡಿಕೊಂಡು ಕಾಳಿಯಾರಾಧನೆಯಂ ಮಾಡಲು, ಕಾಳಿಕಾದೇವಿಯು ತಾಮಸಯೋನಿಯಾದ ನೀಚನಾರಾಧನೆಯಂಮನಕ್ಕೆ ತಾರದಿರಲು, ಚೋರನತ್ಯಂತ ಖಿನ್ನನಾಗಿನ್ನು ಈ ಕಳೇಬರವಿದ್ದೇನು ಫಲವೆಂದು ಶಿರಮಂಕಡಿದು ದೇವಿಗೆ ಸಮರ್ಪಣೆಮಾಡಲು. ದೇವಿಯತ್ಯಂತ ವಿಸ್ಮಿತಳಾಗಿ ತಸ್ಕರನ ಧಾರಾಢ್ಯಾತಿಶಯಕ್ಕೆ ಮೆಚ್ಚಿ ಪ್ರತ್ಯಕ್ಷಳಾಗಿ, ಚೋರನಕಾಯದೊಡನೆ ಶಿರಮಂನಳವಡಿಸಿ, ಹಸ್ತನಾಸಾದಿಗಳೇ ಮೊದಲಾಗಿ ಎಂದಿನಂತೆ ಮಾಡಿ. ಪುನರುಜ್ಜೀವನವಂ ಮಾಡಲು. ಚೋರನು ಕಣ್ಣುತೆರದು ಅನೇಕಕಾಲದಿಂ ಯೋಗಿಗಳು ಧ್ಯಾನಮಾಡಿದಡೆಯುಂ ದೊರೆಯದ ಪರದೇವತೆಯಂ ಕಂಣಾರನೋಡಿ, ಹಸ್ತನಾಸಾದಿಗಳು ಬಂದುದಂಕಂಡು ಪರಮಸಂತೋಷಯುಕ್ತನಾಗಿ ದೇವಿಯಂ ಬಹುಪ್ರಕಾರವಾಗಿ ಸ್ತುತಿಮಾಡಲು. ದೇವಿಯು ಪ್ರಸನ್ನಮುಖಿಯಾಗಿ ನಿನ್ನಪೇಕ್ಷಿತಮೇನೆಂದು ಕೇಳ

ಲು. ತನಗೆ ಉಗ್ರಸೇನರಾಯನಿಂದಾದ ಅಪಮಾನವಂ ಬಿನ್ನಹವಮಾಡಿ, ಆ ನರಪತಿಯಂಜಯಿಸಿ ಆತನ ಸರ್ವಸ್ವಮಂ ತನ್ನಸ್ವಾಧೀನವಮಂ ಮಾಡಿಕೊಂಡು, ತನಗಾ ಮಹೀಪತಿ ಮಾಡಿದಂತ ಅವನಿಂಗೆ ತಾನು ಮಾಡುವಂತಪ್ಪಸಾಹಸವಂದಯವಮಾಡಬೇಕೆಂದುಬೇಡಲು.ದೇವಿಯುರದಂಕೇಳಿ ಕಿಂಚಿತ್ಕುಪಿತರಾಗಿಉಗ್ರಸೇನನಂಜಯಿಸುವರೆಇಂದ್ರಾದಿಗಳವಲ್ಲ ಈತಸ್ಕರಾಧಮನುಜಯಿಸಬೇಕೆಂಬಪೇಕ್ಷಿಸುವ,ಲೋಕದಲ್ಲಿ ಅಲ್ಪಜನರಿಗವಕಾಶವಸ್ಸಿತ್ತಡೆಮನೋವಿವಾದಕ್ಕೆಹೇತುವಾಗುವದು, ಅವನಿಂಗೆಸ್ವಪರಯೋಗ್ಯತಾಜ್ಞಾನವಿಲ್ಲದರಿಂದ ಒಂದುಕ್ಷಣ ವಾಲೋಚನೆಯುಂಮಾಡಿ ಉಪಾಯಾಂತರದಿಂದವನಿಂಗೆಉಚಿತಶಿಕ್ಷೆಯುಂಮಾಡಬೇಕೆಂದು ಇಂದ್ರದೇವರು ಪೂರ್ವದಲ್ಲಿ ಪೂಜಾಂಗವಾಗಿ ಸಮರ್ಪಣೆಯುಂಮಾಡಿದ್ದ ಸುಧಾಕಲಶಮಂಕರದೊಳಾಂತು ಎಲಾ ತಸ್ಕರನೆ! ಕೇಳು.ನಿಂನಭಕ್ತಿಗೆಮೆಚ್ಚಿದೆನು, ಉಗ್ರಸೇನರಾಯನೆಂಬವನು ಅನೇಕಮಹೀಪತಿಗಳೊಳು ಕಶ್ಚನನರಪತಿಯು, ತನ್ನವರಿಕೆಗೊಂಡಮೇಲೆ ಜಯಿಸುವದೇನಚ್ಚರಿಯುಂದು ಮೂರುಲೋಕಮಂ ಜಯಿಸುವಂತೆ ಸತ್ವಮಂನೀವೆ ಭಯಬೇಡವೆಂದು ಅಮೃತಕಲಶಮಂನಿತ್ತು. ನಿರ್ಮಲೋದಕದಲ್ಲಿಸ್ನಾನವಂ ಮಾಡಿ, ಶುಚಿಯಾಗಿ ಇಷ್ಟದೇವತಾ ಪ್ರಾರ್ಥನೆಯುಂಮಾಡಿ, ಅನಂತರದಲ್ಲಿ ಈ ದಿವ್ಯಾಮೃತವನ್ನು ಅನ್ಯರಿಂಗೆ ಲೇಶವಾದರೂ ತೋರಿಸದೆ, ಈ ಪೂರ್ಣಕಲಶವಂ ನೀನೊರ್ವನೆ ಎಳ್ಳನಿತು ಬಿಡದೆ ಏಕಕಾಲದಲ್ಲಿ ಪಾನವಂ ಮಾಡಿದೆಯಾದೊಡೆ, ಒಂದೊಂದು ಬಾಹುವಿಗೆ ಅಯುತ ಗಜಬಲವುಂಟಾಗುವದು, ಸಕಲಶತ್ರುಗಳು ಪಾದಾಕ್ರಾಂತರಾಗುವರು ಇನ್ನು ಪೇಳುವದೇನು, ಜರಾಮರಣ ವಲೀಪಲಿತ ನಿದ್ರಾಮಯ ತಂದ್ರಿ ಮೊದಲಾದ ನಾನಾವಿಧ ವಿಪತ್ಪರಂಪರೆಗಳಿಂದ ಮುಕ್ತನಾದ ನಿನಗೆ ಈ ಮೂರು ಲೋಕವು ಮಶಕಪ್ರಾಯವಾಗಿ ತೋರುವವುಪೋಗೆಂದುಪೇಳಿ, ಎಲೈ ಚೋರನೆ ಕೇಳು ಇತರವರತನ್ನನು ನೀನು ಪೂಜಿಸಬೇಡ, ನಿನಗೆ ತಾನು ಪ್ರಸನ್ನಳಾಗುವದಿಲ್ಲವೆಂದು ಪೇಳಿ ಅಂತರ್ಧಾನಮಂನೈದಲು.

ಆ ತಸ್ಕರನು ಹಾಗೆಆಗಲೆಂದೊಡಂಬಟ್ಟು ಅಮೃತಕಲಶವಂ ಶಿರದ ಮೇಲಿಟ್ಟು ದೇವಿಯಡಿಗೆರಗಿ ತನ್ನಮನೆಗೈತರುತ ಮಾರ್ಗದೊಳುತನ್ನೊ

ಳು ತಾನು ಆಲೋಚನೆಯಂಮಾಡಿ, ಈ ದಿವ್ಯಾಮೃತಕಲಶವನ್ನು ಮನೆಗೆ ತೆಗೆದುಕೊಂಡು ಪೋದಡೆ, ಪತ್ನಿಪುತ್ರರು ಭಾಗಕ್ಕೆ ಬರುವರು, ಅದುಕಾರಣ ಗೃಹಕ್ಕೆ ಪೋಗದೆ ಮತ್ತೆಲ್ಲಾದಡಂ ಜಲಾಶಯವಿದ್ದಲ್ಲಿ ಪೋಗುವೆನೆಂದೊಡೆ ಪಿಪೀಲಿಕಾದಿ ಬ್ರಹ್ಮಪರ್ಯಂತವೂ ಸಕಲಪ್ರಾಣಿನಿಕಾಯಂಗಳು ಸುಧಾಪೇಕ್ಷೆಯುಳ್ಳವರೇ ಹೊರತು ನಿರತಪೇಕ್ಷೆಗಳಾದ ಜಂತುಗಳೆಯಿಲ್ಲ ಅದುಕಾರಣ ಏನುಮಾಡುವೆನೆಂದು ಮುಹೂರ್ತಮಾತ್ರ ಚಿಂತಿಸಿ, ಅದಕ್ಕೊಂದುಪಾಯಮಂ ನಿಶ್ಚಯಿಸಿ, ಸ್ವಗೃಹಮಂನೈದಿ ಪತ್ನಿಯಂಕರದು ವಿಷಕಲಶವಿದು ಇದಂನೊಪ್ಪದಿಂದಿರಿಸಬೇಕು, ಇದರಿಂದಾಗುವ ಕಾರ್ಯವೇನೆಂದೊಡೆ, ದ್ರವ್ಯಾರ್ಥ್ಯರಾಗಿರುವವರು ಯಾರಾದಡೆಯು ಮಾರ್ಗವಶದಿಂದ ಬಂದಡೆ, ಈ ವಿಷಮುದಿವ್ಯೋದಕವೆಂದವರ್ಗಳಿಗಿತ್ತು ಸಂಹರಿಸಿ ಅವರ ಸರ್ವಸ್ವಮಂನಪಹರಿಸಬೇಕೆಂದು ತಂದೆನೀವಿಷಕಲಶಮನೆಂದು ಪೇಳಿ, ಸ್ನಾನಮಂಮಾಡಿಉದಕಮಂ ತರುವೆನೆಂದು ಪುತ್ರನಿಂದಸಹಿತನಾಗಿಜಲಾಶಯವಿದ್ದೆಡೆಗೆ ಪೋಗಲು. ಈ ಅರ್ಥವನು ಸಹಸ್ರಾಕ್ಷನು ಕೇಳಿ ದೇವಿಯರಿಗೆ ತಾನು ಸಮರ್ಪಣೆ ಮಾಡಿದ ದಿವ್ಯಾಮೃತಕಲಶವು ನೀಚನಧೀನಮಾದುದೆಂದು ಚಿಂತಿಸುತಿರುವ ಸಮಯದೊಳು, ದೈವಾಧೀನದಿಂದ ತತ್ಕಾಲದಲ್ಲಿ ಗೌರೀಪ್ರಸಾದ ಪರಿಪೂರ್ಣನಾಗಿರುವನೋರ್ವ ಸಹಸ್ರಾಯುವೆಂಬರಾಜಕುಮಾರನು ಗುರುಕಾರ್ಯಾರ್ಥನಾಗಿ ಆ ಮಾರ್ಗದಲ್ಲಿ ಬಂದು ತೃಷಾತುರನಾಗಿ ಜಲಾಶಯಮಂನರಸಿ ಕಾಣದೆ ಚೋರನ ಕುಟೀರಮಂಕಂಡು ಬಂದು ಚೋರಪತ್ನಿಯಂಕಂಡು ಪಾನೀಯಮಂಬೇಡಲು. ಆ ಚೋರಪತ್ನಿಯು ರಾಜಕುಮಾರನಂಕಂಡು ರತ್ನಾಭರಣಮಂ ನಪಹರಿಸಬೇಕೆಂದು ಪತಿಯಿತ್ತ ವಿಷಕಲಶವಂ ವಿಷಮೆಂದೇ ತಿಳಿದು ಸಹಸ್ರಾಯುವಿಂಗೆ ತಂದೀಯ್ಯಲು. ಸಹಸ್ರಾಯುವು ದೈವಪ್ರೇರಣೆಯಿಂದ ಬಂದುದನ್ನು ವಿಚಾರಮಾಡದೆ ವಿಶಿಷ್ಟಕಲಶಾಮೃತವನ್ನು ಎಳ್ಳನಿತು ಬಿಡದೆ ಪಾನಮಂಮಾಡಿ, ತನ್ಮೌಲ್ಯವಾಗಿ ಚೋರಪತ್ನಿಗೆ ಯತ್ಕಿಂಚಿದಾಭರಣಮಂನಿತ್ತು, ಅಲ್ಲಿಂದಮುಂದೆ ಪೋರಮಟ್ಟು ಅನೇಕ ಸಹಸ್ರಗಜ ಬಲವುಳ್ಳವನಾಗಿ ಸತ್ವವು ಹೆಚ್ಚಿದ ಕಾರಣಮಂ ಸರಿಯದೆ ಚಿಂತಿಸುತ ಉತ್ತರಾಭಿಮುಖನಾಗಿ ಪೋದ ವೃತ್ತಾಂತಮಂ ಶ

ಚೀಪತಿಕೇಳಿ, ಅಮೃತಕಲಶವು ಸಾಫಲ್ಯವಾದುದೆಂದು ಹರ್ಷಪೂರಿತನಾಗಿ ತನ್ನಂಕರದು ದಿವ್ಯವಾದೊಂದು ಮಣಿಯಂ ತನ್ನಕೈಯೊಳಿತ್ತು ತನ್ಮಾಹಾತ್ಮೆಯಂಪೇಳಿ,ಆ ಸಹಸ್ರಾಯುವೆಂಬ ರಾಜಕುಮಾರಕನಿಗಿತ್ತು ಬರುವದೆಂದಾಜ್ಞಾಪಿಸಲು. ಆ ರಾಜಕುಮಾರನು ಮಾರ್ಗವಶದಿಂದಿಲ್ಲಿಗೆ ಬರುವನೆಂಬ ಸುದ್ದಿಯನೋರ್ವ ಚಾರನು ಪೇಳದನಾತ್ರನಂನರಶಿಕೊಂಡೈದಿಬರುವನೆಂದು ಪೇಳಲು. ಸೌಮ್ಯನದಂಕೇಳಿ, ಮಣಿಯುವೃತ್ತಾಂತವೇನೆಂದು ಕೇಳಲು. ಸುನಂದನಾಸೌಮ್ಯನಂ ಕುರಿತು ಪೇಳುತಿದ್ದನು.

ಇಂದ್ರನೊಂದಾನೊಂದುದಿನ ಕೈಲಾಸಮಂನೈದಿ ಬರುವ ಸಮಯದೊಳು ವೀರಬಾಹುವೆಂಬ ಪ್ರಮಥನಂ ಕಂಡು ಬಹುವಿಧವಾಗಿ ಸ್ತೋತ್ರಂಮಾಡಲು, ಆ ರತ್ನೋದ್ಭವನಾದ ವೀರಬಾಹುವೆಂಬ ಪ್ರಮಥನು ಸಹಸ್ರಾಕ್ಷನಲ್ಲಿ ಪರಮಪ್ರೀತಿಯುಳ್ಳವನಾಗಿ, ರತ್ನದ್ವಯವನ್ನು ಶಚೀಪತಿಗಿತ್ತು, ಲೋಕದಲ್ಲಿ ಕ್ಷುದ್ರದೈವಗಳಿಂದಲೂ, ದೈತ್ಯರಿಂದಲೂ, ಸ್ಥಾವರತ್ವವು,ತಿರ್ಯಕ್ಶರೀರವು ಪ್ರಾಣಿಗಳಿಗೆ ಯಿರುವದುಂಟು, ಈ ರತ್ನವಂಧರಿಶಿಯಿದ್ದಡೆ ಅವರ ಕೃತ್ಯಗಳು ಬಂದೂನಡಿಯುವದಿಲ್ಲ. ಅಥವಾ ಪೂರ್ವದಲ್ಲಿ ನಡದು ಇದ್ದಾಗ್ಯೂ ಈ ರತ್ನಖಚಿತವಾದ ಅಂಗುಲೀಯಕಸ್ಪರ್ಶಮಂ ಮಾಡಿದರೆ ಅದರಿಂದ ಮುಕ್ತರಾಗಿ ಸ್ವರೂಪಸ್ಥಿತಿಯನೈದುವರು, ಸಂಶಯವಿಲ್ಲವೆಂದು ಪೇಳುತಪ್ಪಣೆಗೊಡಲು. ಸುರೇಶನಾಲಯಕ್ಕೆ ಬಂದು ಒಂದು ರತ್ನವಂ ಕಂಠಹಾರದಲ್ಲಿ ಅಳವಡಿಶಿ, ಯರಡನೇರತ್ನದಿಂದಿವ್ಯವಾದ ಅಂಗುಲಿಯಕಮಂರಚಿಶಿ ಹಾರಾಂಗುಳೀಯಗಳಂ ತಾನು ಧರಿಶಿ,ಕದಾಚಿತ್ತು ಒಂದು ದಿನ ಹಿಮಾಚಲಕ್ಕೆ ಪೋಗಲು. ಆ ಹಿಮಾಚಲದ ಸಾನುವಿನಲ್ಲಿ ಮಹೋಕ್ಷನೆಂಬ ಮಹಾತಾಪಸನು ಕಾಮದುಘವೆಂಬ ಧೇನುವಿನಿಂದೊಡಗೂಡಿ ತಪವಂ ಮಾಡುತಿದ್ದು ನಿಜಾಶ್ರಮಕ್ಕೆ ಬಂದ ನಗಾರಿಯಂ ಕಂಡು ಪರಮ ಸಂತೋಷಯುಕ್ತನಾಗಿ ಪ್ರಶ್ರಯಾನತನಾಗಿ, ಸಹಸ್ರಾಕ್ಷನಂ ತನ್ನಪರ್ಣಾಲಯಕ್ಕೆ ಕರತಂದು ವಶವರ್ತಿಯಾದ ಕಾಮಘೂಯೆಂಬ ಧೇನುವಿನ ಪ್ರಭಾವದಿಂದ ಆತಿಥ್ಯವಂಮಾಡಿ ಶಚೀಪತಿಯನ್ನು ಬಹುಪ್ರಕಾರದಿಂ ಪೂಜೆಯಂ ಮಾಡಲು. ಪಾಕಶಾಸನನಾತನು ಮಾಡಿದ ಪೂಜಾವಿಶೇಷಮಂ ಮನ

ಕ್ಕೆ ತಂದು ಪರಮಸಂತೋಷಚಿತ್ತನಾಗಿ ಕಂಠದಲ್ಲಿದ್ದ ಮಣಿಘಟಿತ ಹಾರ ಮಂ ಋಷಿಗುಚಿತವಂಮಾಡಿ ಸ್ವರ್ಗಮಂನೈದಿ ಹಾರಘಟಿತ ಪ್ರಮಥದ ತ್ತಮಣಿಯುಂ ಸ್ಮೃತಿಗೆ ತಂದು ದತ್ತಾಪಹಾರಮಂ ಮಾಡಕೂಡದೆಂದು ಸುಮ್ಮನಿರಲು. ಈಗ ಪ್ರಕೃತದಲ್ಲಿ, ಸಹಸ್ರಾಯುವೆಂಬ ರಾಜಕುಮಾರ ನು ಸಾಕ್ಷಾದ್ಗೌರೀ ಪ್ರಸಾದದಿಂದುತ್ಪನ್ನನಾಗಿ ತತ್ಕಟಾಕ್ಷದಿಂ ಪರಿಪೂ ರ್ಣನಾಗಿ ಸಮಸ್ತ ದೈತ್ಯಕುಲಮಂ ಸಂಹಾರಮಾಡುವದಕ್ಕೆ ಪಾತ್ರನಾಗಿ ರುವನದರಿಂದ ಆತ್ಮರಕ್ಷಾರ್ಥವಾಗಿ ಇರಬೇಕೆಂದು, ಸ್ವಕರಾಲಂಕೃತವಾದ ಮಣಿಘಟಿತ ಅಂಗುಳೀಯಮಂ ನಿತ್ತು ಬಾರೆಂದು ಕಳುಹಲಾನುಬಂದಿರುವೆ ನೆಂದು ಪೇಳಿ, ಪರಸ್ಪರಾಲಿಂಗನವಂಮಾಡಿಕೊಂಡು ಪ್ರಯಾಣೋದ್ಯುಕ್ತ ರಾಗಲು. ಸಹಸ್ರಾಯುವವರಂ ಕಂಡು ಜವದಿಂದೆದ್ದು ಸುನಂದನೆಂಬ ಮಹ ರ್ಷಿಯ ಸನ್ನಿಧಿಗೆ ಪೋಗಿ, ಗೋತ್ರನಾಮ ಪುರಸ್ಸರವಾಗಿಪ್ರವರೋಚ್ಚಾರ ಣೆಯುಂ ಮಾಡಿ ವಂದನೆಯುಂ ಮಾಡಲು. ಸುನಂದನದಂ ಕೇಳಿ ಪರಮ ಸಂ ತೋಷದಿಂ ಯುಕ್ತನಾಗಿ ವೃತ್ತಾಂತವೇನೆಂದು ಕೇಳಲು. ಸಹಸ್ರಾಯು ಸಂಕ್ಷೇಪದಿಂ ತನ್ನ ವೃತ್ತಾಂತವೆಲ್ಲಮಂ ನೊರೆಯಲು, ಆಮಹರ್ಷಿಯು ಹ ರ್ಷಯುಕ್ತನಾಗಿ ಸಹಸ್ರಾಯುವನಾಲಿಂಗಿಸಿಕೊಂಡು ಪೂರ್ಣಾನುಗ್ರಹವಂ ಮಾಡಿ, ಜಂಭಾರಿಯಾಜ್ಞೆಯುಂ, ಮಣಿಪ್ರಭಾವವಂವಿಸ್ತರದಿ ಪೇಳಿ ದಿವ್ಯ ಮಣಿಘಟಿತಾಂಗುಳಿಯಮಂ ನಿತ್ತು ನಾಕಮಂನೈದಲುದ್ಯುಕ್ತನಾಗಲದಂ ತಿ ಳಿದು ಕೋಸಲಾಧಿಪತಿಯು ಭೋತಾಪಸೋತ್ತಮ; ನೀನು ಸೌಮ್ಯಕನಂ ಕುರಿತು ಪೇಳಿದ ಕಥೆಯನ್ನು ಸಮೀಪದಲ್ಲಿದ್ದು ತಾನು ಕೇಳಿದೆನು. ತಾನ ಮೃತಪಾನವಂ ಮಾಡಿದ ಬಳಿಕ,ಚೋರನವೃತ್ತಾಂತವೇನಾದುದೆಂದು ಕೇ ಳಲು. ತಾಪಸನು ಸಹಸ್ರಾಯುವಂ ಕುರಿತು; ಚೋರನು ಸ್ನಾನಾರ್ಥವಾಗಿ ಜಲಾಶಯದೆಡೆಗೆ ಬರಲು, ತಟಾಕದ ಸಮೀಪದೊಳೋರ್ವ ಪಥಿಕಬ್ರಾಹ್ಮ ಣನು ಸ್ನಾನ ಸಂಧ್ಯಾವಂದನಾದಿಗಳನಾಚರಿಸಿ, ಒಂದು ವೃಕ್ಷಮೂಲದಲ್ಲಿ ಕುಳಿತು, ನಿಜಾಲಯದಿಂ ತಂದ ಅನ್ನಾದ್ಯುಪಹಾರಮಂ ಭಕ್ಷಿಸಿ ಉದಕಪಾನ ವಂ ಮಾಡಿ, ಪರಿಶೇಷವಾದ ಉಪಹಾರಮಂ ಕಟ್ಟಿ ಅದನ್ನೇ ಶಿರಃಪೀಠಮಂ ಮಾಡಿ ಶಯನಮಂ ಮಾಡಲು. ಚೋರನು ಬ್ರಾಹ್ಮಣನಲ್ಲಿರುವ ಉಪಹಾರ

ವಂ ಕಂಡು ಸ್ವಭಾವ ಚಾಪಲ್ಯದಿಂದ. ಆ ಭೂಸುರನಲ್ಲಿರುವ ಉಪಹಾರವಂ ನಪಹರಿಸಿ ಭಕ್ಷಿಸಬೇಕೆಂದು ದುರಾಶೆಯಿಂದ ದ್ವಿಜವರನ ನಿದ್ರಾಕಾಲವಂ ಪ್ರತೀಕ್ಷಿಸುತ್ತಿರಲು. ದೂರಮಾರ್ಗವಂ ಮುಂದೆ ಪೋಗಬೇಕೆಂಬ ಸಂಭ್ರಮದಿಂದ ನಿದ್ರೆಯಂ ಮಾಡದೆ, ಮುಹೂರ್ತದ್ವಯ ವಿಶ್ರಮಿಸಿಕೊಂಡಿದ್ದು, ಮುಂದೆ ಪೋಗಬೇಕೆಂಬ ತ್ವರೆಯಿಂದೆದ್ದು ನಡೆಯುತ್ತಿರಲು. ಆ ತಸ್ಕರನು ಅಲ್ಪಬುದ್ಧಿಯಂ ಮಾಡಿ ಕಾಲಹರಣವಾದುದು, ಜವದಿಂ ಕುಟೀರಕ್ಕೆ ಪೋಗಿ ಪೀಯೂಷಪಾನವಂ ಮಾಡುವೆನೆಂಬ ಕುತೂಹಲದಿಂದ ಪುತ್ರನ ಸಹಿತನಾಗಿ ಕುಟೀರಕ್ಕೆ ಪೋಗಿ ಪತ್ನಿಯಂ ಕರದು ಕಲಶಮಂ ತಾರೆಂದು ಕೇಳಲು. ವೃಥಾಕಲಶವು ಪೋದುದೆಂದು ಪೇಳದಡೆ ಸಂಹರಿಸುವನೋ ಏನೋ ಎಂಬ ಭಯದಿಂದ ರಾಜಕುಮಾರನಿತ್ತ ಮುಕ್ತಾಹಾರವಂ ನಿತ್ತು ನಡದ ವೃತ್ತಾಂತವಂ ವಂಚನೆಯಿಲ್ಲದೆ ಪೇಳಲು. ತಸ್ಕರಾಪಶದನದಂ ಕೇಳಿ ಕ್ರೋಧಮೂರ್ಛಿತನಾಗಿಸ್ಮೃತಿಯಿಲ್ಲದೆ ನಿಜಾಯುಧದಿಂದ ಪತ್ನಿಯಂ ತತ್ಕ್ಷಣದಿ ಸಂಹಾರವಂ ಮಾಡಲು. ಪುತ್ರನು ನಿರಪರಾಧಿಯಾದ ಜನನಿಯಂ ವೃಥಾ ಸಂಹಾರಮಾಡಿದನೆಂದು ರೋಷಯುಕ್ತನಾಗಿ, ಜನನಿ ವಿಯೋಗವಂ ಸಹನಮಾಡಲಾರದೆ, ಪಿತಾಪುತ್ರರೀರ್ವರೂ ಮಹತ್ಕಲಹವಂ ಮಾಡಿ ಮಹದ್ಯುದ್ಧದಿಂದ ಸಮಕಾಲದಲ್ಲಿ ಈರ್ವರೂ ಮೃತರಾದರೆಂದು ಪೇಳಿ ರಾಜಕುಮಾರನಿಂಗೆ ಪೂರ್ಣಾನುಗ್ರಹವಂ ಮಾಡಿ ನಾಕವಂ ನೈದಲು. ಸಹಸ್ರಾಯುವು ಅಂಗುಳೀಯಕವಂ ತನ್ನ ಹಸ್ತದೊಳಿಟ್ಟು ಅಮೃತಪಾನಪ್ರಕಾರವಂ ನೆನದು ವಿಸ್ಮಿತನಾಗಿ ಅಂಬಿಕಾಪ್ರಸಾದಕ್ಕೆಣೆಯಿಲ್ಲವೆಂದು ಪರಮಾಹ್ಲಾದ ಯುಕ್ತನಾಗಿ ವಿಷ್ಣುಪದಿಯಂನೈದಿ ಸ್ನಾನವಂ ಮಾಡಿ ನಿತ್ಯನಿಯಮಾದಿಗಳಂ ತೀರಿಸಿಕೊಂಡು ಮುಂದೆ ಪ್ರಯಾಣೋದ್ಯುಕ್ತನಾಗಿ, ಸುರಭಿ ಎಂಬ ರಾಕ್ಷಸನು ಹಿಮಾಚಲಪ್ರಾಂತ್ಯದಲ್ಲಿರುವ ಅಂಜನಾಚಲದ ಶಾಲ್ಮಲೀ ವೃಕ್ಷ ವನದ ಸಮೀಪದಲ್ಲಿರುವ ಮಹಾಂಧಕಾರದಿಂದುರ್ಗಮವಾದ ಗುಹೆಯಲ್ಲಿರಿಸಿರುವ ಕುಂಡಲದ್ವಯಮಂ,ಯಾರಾದರೂ ಅಪಹರಿಸುವದಕ್ಕೆ ಮುನ್ನಲೆ ಸ್ವಾಧೀನಮಾಡಿಕೊಳ್ಳಬೇಕೆಂದು ಮನದಲ್ಲಿನಿಶ್ಚೈಸಿ, ಹಿಮವದಭಿಮುಖನಾಗಿ ಬಹುದೂರ ಮಾರ್ಗಮಂನಡದು ಹಿಮಾಗಮಂ ನೈದಿ, ತತ್ಸಮೀಪ

ದಲ್ಲಿರುವ ಅಂಜನಾಚಲವಂ ಕಂಡು, ಶಾಲ್ಮಲೀವನದ ಸಮೀಪದಲ್ಲಿರುವಗು ಹೆಯಂ ನರಸುತ್ತ ಶಾಲ್ಮಲೀ ವನವಂ ಪ್ರೊಕ್ಕು ಬರುತಿರಲು. ಗುಹಾದ್ವಾರ ವಂ ಕಾದಿರುವ ಮಾರೀಗ್ರಹವು ಪತಿಯಂ ನರಸಿಕೊಂಡು ಪೋಗುವಕಾ ಲದೊಳು ಸುರಭಿ ಪತ್ನಿಯಿಂದ ಸ್ಥಾಪಿತವಾದ ದಾವಮಾರಿಯು, ಗುಹಾಭಿಮು ಖನಾಗಿ ಪ್ರಳಯಭೈರವನಂತೆ ಜ್ವಲಿಸುತ್ತ ಬರುತಿರುವ ಸಹಸ್ರಾಯುವಂ ಕಂಡು ಈತನ್ಯಾರೋ ದಿವ್ಯಪುರುಷನು, ಏನುಕಾರಣ ಬರುವನೋ ವಿಚಾ ರಿಸಬೇಕೆಂದು ಗುಹಾದ್ವಾರವಂ ಬಿಟ್ಟು ಎದುರ್ಗೆ ಬಂದು ನೀನ್ಯಾರೆಂದು ಕೇಳಲು. ತಾನು ಸಹಸ್ರಾಯು ಕುಂಡಲಾರ್ಥವಾಗಿ ಬಂದಿರುವೆ; ನೀನ್ಯಾ ರೆಂದು ಕೇಳಲು, ತನ್ನ ವೃತ್ತಾಂತವಂ ಪೇಳ ಬಲಿಯಂ ನಿತ್ತಡೆ ಬಿಡುವೆ ನೆಂದು ಪೇಳಲು, ರಾಜಕುಮಾರನದಂ ಕೇಳಿ ಕ್ರೌಂಚಪರ್ವತದ ಗುಹೆಯ ಲ್ಲಿ ನಿನ್ನೊಡತಿಯೂಪತಿಯೂಈರ್ವರೂ ಮೃತರಾಗಿಬಿದ್ದಿರುವರು ಆಕಳೇ ಬರಗಳಂ ಭಕ್ಷಿಸುಪೋಗೆಂದೆನಲು. ಸಹಸ್ರಾಯುವಾಡಿದ ನುಡಿಯಂ ಕೇಳಿ ಸಂಶಯ ಯುಕ್ತರಾಗಿ ಕುಂಡಲವಂ ಬಿಟ್ಟು ಪೋಗುವದಿಲ್ಲವೆಂದೆನಲು. ಸ ಹಸ್ರಾಯು ಕಿಂಚಿತ್ಕುಪಿತನಾಗಿ ಶಿರವಂ ಚಂಡಾಡುವೆನೆಂದು ಖಡ್ಗವಂ ನೆತ್ತ ಲು, ಮಾರಿಯು ಗಡಗಡನೆ ನಡುಗಿ ರಾಕ್ಷಸ ಮಿಥುನವು ಮರಣವಂನೈದಿದ ಬಳಿಕ ಕುಂಡಲವೇನಾದುದೋ ಎಂದು ಅಂಜನಾಚಲದ ಸಮೀಪವಂ ಸೈ ದಿ, ಅವರ ಮೃತಿಯಂ ನೋಡಿ ಸ್ವಸ್ಥಾನಕ್ಕೆ ಪೋಗಲು. ಸಹಸ್ರಾಯುವಾ ಗುಹಾಂತರಾಳವಂ ಪೊಕ್ಕು ಮಹಾಂಧಕಾರದೊಳು ಪುಷ್ಪವಂತರಂತೆ ಪ್ರ ಕಾಶಿಸುತ್ತಿರುವ ಕುಂಡಲ ಯುಗ್ಮವಂ ಕಂಡು ವಿಸ್ಮಿತನಾಗಿ ಸಮೀಪಕ್ಕೆ ಪೋ ಗಿ, ಕುಂಡಲಂಗಳಂ ಕರದೊಳಾಂತು ಪರಮ ಸಂತೋಷಯುಕ್ತನಾಗಿ ಕರ್ಣ ದೊಳು ಕುಂಡಲಂಗಳಂ ಧರಿಸಿ, ದಿವಾಕರ ನಿಶಾಕರರಿಂದ ಶೋಭಿಸುವ ಉದ ಯಾಚಲದಂತೆ ಪ್ರಕಾಶನಾಗಿ ಗುಹಾದ್ವಾರದಿಂದ ಪೊರಮಟ್ಟು ಉತ್ತರಕು ರುವಂ ನೋಡಿ ಜವದಿಂದ ಗುರುಸನ್ನಿಧಿಗೆ ಪೋಗಿ, ಮುಂದಿನ ಕಾರ್ಯವಂ ನೋಡಬೇಕೆಂದು ಜವದಿಂದುತ್ತರಾಭಿಮುಖನಾಗಿ ಬರುತ್ತ ಮಹದ್ಗಹನ ಪ್ರ ವೇಶವಂ ಮಾಡಿ ಬರುತಿರಲು.

ಸಹಸ್ರಾಯುವು ಬರುವ ಮಾರ್ಗದೊಳು ಬಂದು ಖುಷ್ಯಾಶ್ರಮವಂ

ಕಂಡು ಋಷಿಗೆ ವಂದನೆಯಂ ಮಾಡಿ ಮುಂದೆ ಪೋಗುವೆನೆಂದು, ಆಶ್ರಮಮಂ ಪೊಕ್ಕು ನೋಡುತ್ತ ಬರುತ್ತೊಂದುಧೇನುವು ರೋದನವಂಮಾಡುತ್ತ ನಿಂದಿರುವದಂ ನೋಡಿ ಇದೇನಾಶ್ಚರ್ಯವೆಂದು ಗೋವಿನ ಸಮೀಪಕ್ಕೆ ಬರುತಿರಲು. ಧೇನುವು ರಾಜಕುಮಾರನಂ ಕಂಡು ಓಡಿಬಂದು ವಂದನೆಯಂ ಮಾಡಿ ಕಂಬನಿಗರೆಯುತ್ತ ಎದುರ್ಗೆ ಬಂದು ನಿಲ್ಲಲು. ಕರುಣಾಳುವಾದ ರಾಜಕುಮಾರನು ಗೋವಂ ಕುರಿತು ಏನುಕಾರಣ ರೋದನವಂ ಮಾಡುವೆ, ಕಾರಣವಂ ಪೇಳಿದಡೆ ಎನ್ನಿಂದ ಸಾಧ್ಯವಾಗುವ ಕಾರ್ಯವಾದೊಡೆ ಸಾಧಿಸುವೆನೆಂದು ನುಡಿಯಲು. ಎನ್ನಂ ಕಾಯುವದಸಾಧ್ಯವದಂತಿರಲಿ, ನಿನ್ನಿಂದಾಗುವ ಕಾರ್ಯವೊಂದುಂಟು, ಅದಂಮಾಡಬೇಕೆಂದು ನುಡಿಯಲು. ಸಹಸ್ರಾಯುವು ಧೇನುವಿನವಾಕ್ಯಮಂ ಕೇಳಿ ಗೋಬ್ರಾಹ್ಮಣಸಂರಕ್ಷಣೆಯಂಮಾಡಲೋಸುಗ ಕ್ಷತ್ರಿಯನು ಪುಟ್ಟುವದು. ತಥಾಪಿ ಅವಶ್ಯಕವಾದ ಕಾರ್ಯಮಿನ್ನೊಂದಿಲ್ಲವದುಕಾರಣದಿಂ ನಿನಿಗೇನು ಕಾರ್ಯಮಿದ್ದಡೆಯುಂ ಪೇಳಿದಡೆ ಸರ್ವಸಾಹಸದಿಂದ ಮಾಡುವೆನೆಂದು ನುಡಿಯಲು. ಗೋವು ರಾಜಕುಮಾರನ ದಿವ್ಯವಾಕ್ಯವಂ ಕೇಳಿ ದುಃಖವಂ ಬಿಟ್ಟು, ಋಷಿಯು ಮೃತನಾಗಿರುವತಾಣಮಂಕುರಿತು, ಸಹಸ್ರಾಯುವಂ ಕರದುಕೊಂಡು ಪೋಗಿ, ಪ್ರೇತಶರೀರಮಂ ತೋರಿಸಿ, ಈ ಮಹರ್ಷಿಗೆ ಪ್ರೇತತ್ವ ನಿವೃತ್ತಿ ನಿನ್ನಿಂದಾಗಬೇಕೆಂದು ಪೇಳಲು. ರಾಜಕುಮಾರನದಂ ಕೇಳಿ ಧೇನುವಂ ಕುರಿತು ತಪೋನಿಧಿಯಾದ ಇಂತಪ್ಪ ತಾಪಸನಿಗೆ ದುರ್ಮರಣವಾಗುವದಕ್ಕೆ ಏನುಕಾರಣವೆಂದು ಕೇಳಲು. ಧೇನುವು ಕುಮಾರನಂ ಕುರಿತು ಪೂರ್ವದಲ್ಲಿ ಚತುರ್ಥನೋರ್ವನು ಬಹುಕಾಲದಿಂದ ಬ್ರಾಹ್ಮಣಸೇವೆಯನ್ನೇ ಮಾಡಿ ತದ್ದತ್ತವೇತನದಿಂದ ಜೀವನವಂ ಮಾಡಿಕೊಂಡಿದ್ದು. ಬ್ರಾಹ್ಮಣರು ನಡೆಯುವ ರೀತಿಯಂ ನೋಡಿ, ತಾನು ಅದೇರೀತಿಯಿಂದ ಬ್ರಾಹ್ಮಣನಾಗಿರಬೇಕೆಂಬ ಇಚ್ಛೆಯುಳ್ಳವನಾಗಿ, ವಿಪ್ರವೇಷವಂ ಧರಿಸಿ ನಿಂತಲ್ಲಿ ನಿಲ್ಲದೆ ಬಂದೊಂದುದಿನ ಬಂದೊಂದು ಋಷ್ಯಾಶ್ರಮದಲ್ಲಿ ಸಂಚಾರಮಾಡುತ್ತ, ಈರೀತಿಯಿಂದ ಬಹುಕಾಲವಿರುತಿರಲು. ಋಷಿಗಳೆಲ್ಲರು ಇವನ ವೇಷವ್ಯಾಪಾರಗಳನೋಡಿ ಬ್ರಾಹ್ಮಣನೆಂದೇ ತಿಳಿದು ಸುಮ್ಮನಿರಲು.

ಬಂದಾನೊಂದು ದಿನ ಈ ಮೃತನಾಗಿರುವ ಕವಿಯೆಂಬ ತಾಪಸನು ಹಿಮಾಚಲಪರ್ವತ್ಯದಲ್ಲಿ ಸಮಸ್ತಋಷಿಗಳಂಕುರಿತು ನಾಳೇದಿನ ಸಮಸ್ತ ಋಷಿಗಳಿಗೂ ಆತಿಥ್ಯಮಂ ಮಾಡಬೇಕೆಂದು ಸಂಕಲ್ಪವಂ ಮಾಡಿರುವೆ, ತನ್ನಲ್ಲಿ ದಯೆಯಿಂದ ನಾಳೆ ಸರ್ವರೂ ತನ್ನಾಶ್ರಮಕ್ಕೆ ದಯಮಾಡಿ ಆತಿಥ್ಯವಂ ಸ್ವೀಕರಿಸಿ ಉದ್ಧಾರಮಾಡಬೇಕೇದು ಪ್ರಾರ್ಥನೆಯಂಮಾಡಲು. ಆ ತಾಪಸರೆಲ್ಲರೂ ಹಾಗೇಆಗಲೆಂದೊಡಂಬಟ್ಟು ಅಪ್ಪಣೆಗೊಡಲು. ಈ ಕವಿಯೆಂಬ ತಾಪಸನು ನಿಜಾಶ್ರಮಕ್ಕೆ ಬಂದು ಮರುದಿನ ಪ್ರಾತಃಕಾಲದೊಳೆದ್ದು ಮುನಿಗಳಾಗಮನವಂ ನಿರೀಕ್ಷಿಸುತ್ತಿರಲು. ಮುನಿಗಳೊಬ್ಬರೊಬ್ಬರಾಗಿ ಆಶ್ರಮಕ್ಕೆ ಬಂದು ಮೇಳನ ಮಾಗಲು. ಕವಿಯು ತನ್ನಂ ಕುರಿತು ಬಹುಮಂದಿ ಋಷಿಗಳೆಲ್ಲರು ದಯಮಾಡಿ ಬಂದಿಹರು, ಇವರೆಲ್ಲರಂ ಸರ್ವಪ್ರಕಾರದಿಂದ ಹ್ಯಾಗೆ ಸಂತೋಷಯುಕ್ತರಹರೋ ಆರೀತಿಯಿಂದ ಆತಿಥ್ಯವ ಮಾಡಿಸಬೇಕೆಂದು ತತ್ಪ್ರಕಾರಮಂ ನೆರೆಯುತ್ತಲಿರಲು. ಅನಿತರೊಳುಸಾಕ್ಷಾತ್ ಶಚೀಪತಿಯು ಏಕದೇಶದಿಂದ ವಿಹಾರಮಾಡಬೇಕೆಂಬ ಕುತೂಹಲದಿಂದ ಹಿಮಾಚಲಕ್ಕೆ ಬಂದು ಕ್ವಚಿತ್ಕಾಲ ಅಲ್ಲಿ ಸಂಚಾರ ಮಾಡಿ ನಾಕಮಂ ಸೈದಬೇಕೆಂದು ಬರುತಕಾತನಾಶ್ರಮುವಲ್ಲಿ ಬಹುಮಂದಿ ಋಷಿಗಳು ಮೇಳನವಾಗಿರುವದಂ ಇದೇನೋ ವಿಶೇಷವಿಧೆ, ಆದ್ದರಿಂದ ವಿಚಾರಿಶಿ ಪೋಗುವೆನೆಂದು ಆಶ್ರಮಾಭಿಮುಖನಾಗಿ ಬರುತ್ತಿರಲು. ತಾಪಸರೆಲ್ಲ ಕಂಡು ಎದುರ್ಗೆ ಪೋಗಿ ಅರ್ಘ್ಯಪಾದ್ಯ ಮಧುಪರ್ಕಾದಿಗಳಿಂದ ಪೂಜೆಯಂ ಮಾಡಿ ಸ್ತೋತ್ರವಂ ಮಾಡುತ್ತ ಆಶ್ರಮಕ್ಕೆ ಬಂದುಆತಿಥ್ಯಮಂ ಸ್ವೀಕರಿಶಿ ಮುಂದೆ ದಯಮಾಡಬೇಕೆಂದು ಪ್ರಾರ್ಥನೆಯಂ ಮಾಡಲು. ಇಂದ್ರನು ಇನಿತುಮಂದಿ ಋಷಿಗಳೆಲ್ಲರು ಏಕತ್ರಮೇಳನವಾಗಲು ಕಾರಣವೇನೆಂದುಕೇಳಲು. ಋಷಿಗಳು ಸಹಸ್ರಾಕ್ಷನಂ ಕುರಿತು ಈ ಆಶ್ರಮವಾಸಿಯಾದ ಕವಿಯೆಂಬ ಋಷಿಯು ಆತಿಥ್ಯವಂ ಮಾಡುವೆನೆಂದು ಕರದನಾದ್ದರಿಂ ಋಷಿಸಮಾಜವೆಲ್ಲ ಬಂದು ನೆರದಿರುವೆವೆಂದು ಪೇಳಲು. ದೇವತಾ ಸಾರ್ವಭೌಮನದಂ ಕೇಳಿ ಪರಮ ಸಂತೋಷಯುಕ್ತನಾಗಿ ಪ್ರಯಾಣಾಭಿಮುಖನಾಗಲು. ಕವಿಯು ಬಂದು ಬಹುಪ್ರಕಾರದಿಂ ಸ್ತೋತ್ರವಂ ಮಾಡಿ ಬಿಡದೆ ಆಶ್ರಮಕ್ಕೆ ಕರತಂ

ದು ದಿವ್ಯವಾದ ಆಸನವಂ ನಿತ್ತು, ಅರ್ಘ್ಯಪಾದ್ಯ ಮಧುಪರ್ಕಾದಿಗಳಿಂದ ಸತ್ಕರಿಸಿ, ಸಮಸ್ತ ಋಷಿಗಳಿಂದ ಸಮೇತನಾದ ಸಹಸ್ರಾಕ್ಷನಿಂಗೆ ಆತಿಥ್ಯವಂ ಮಾಡಿಸುವ ಕ್ರಮವಂ ನೊರದು, ಸರ್ವರಿಗೂ ಸಮಕಾಲದಲ್ಲಿ ಆತಿಥ್ಯವಂ ಮಾಡಿಸಬೇಕೆಂದೆನಗೆ ಅಪ್ಪಣೆಗೊಡಲು. ತದಾಜ್ಞೆಯಿಂದ ತನ್ನ ಶರೀರದಿಂದನೇಕಕೋಟ ಅಪ್ಸರಸ್ತ್ರೀಜನರು ಆವಿರ್ಭವಿಸಿ ಪಂಗ್ತಿ ಪಂಗ್ತಿಗಳಾಗಿ ಕುಳ್ಳಿರುವಋಷಿಗಳಿಗೆ ಸುವರ್ಣಪಾತ್ರೆಗಳ ಮಂಡಿಶಿ, ಬ್ಯಾರೆಬ್ಯಾರೆ ಸರ್ವರಿಗೂ ಯಾರ್ಯಾರಿಗೇನೇನಪೇಕ್ಷಿತವೋ ಅದನ್ನು ಸಮೃದ್ಧಿಯಾಗಿ ಬಡಿಸುತ್ತಿತಲು, ಸಮಸ್ತರೂ ಇಷ್ಟಾನುಗುಣವಾಗಿ ಭೋಜನವಂ ಮಾಡುತ್ತಿರಲು.

ಆ ಪಂಗ್ತಿಯಲ್ಲಿ ವಿಪ್ರವೇಷಧಾರಿಯಾದ ಪಾದಜನು ಬಂದು ಕುಳ್ಳಿರಲವನಿಗೆ ಪಾತ್ರವನ್ನು ಹಾಕದೆ ಪದಾರ್ಥವನ್ನು ಬಡಿಸದೆ ಇರಲು. ಈ ಕಪಿಋಷಿಯು ಪಂಗ್ತಿ ಪಂಗ್ತಿಯಾಗಿ ಆದರ ಪುರಸ್ಸರವಾಗಿ ಉಪಚಾರೋಕ್ತಿಗಳ ಹೇಳುತ್ತ ಬರುತ ಭೋಜನವ ಮಾಡದೆ ಕುಳ್ಳಿರುವ ವೇಷಧಾರಿಯಂ ಕುರಿತು ಭೋಜನಮೇನುಕಾರಣ ಮಾಡುವದಿಲ್ಲವೆಂದು ಕೇಳಲು ವೇಷಧಾರಿಯು ಕಪಿಯಂ ಕುರಿತು ನಿಮ್ಮಾಶ್ರಮದಲ್ಲಿ ಪಂಗ್ತಿಭೋಜನವು ಉತ್ಪನ್ನವಾದಕಾರಣವೆನ್ನಲು. ಈ ತಾಪಸನು ಕಿಂಚಿತ್ಕುಪಿತನಾಗಿ ತನ್ನಿಂದುತ್ಪನ್ನರಾದ ಅಪ್ಸರೊಮಾನಿನಿಯರಂ ಕರದು ಏನು ನಿಮಿತ್ತ ಈ ವಿಪ್ರನಿಂಗೆ ಭೋಜನವಂ ಮಾಡಿಸಲಿಲ್ಲವೆಂದು ಕೇಳಲು. ಆ ಧೇನುಜೆಯರು ಕಪಿಯಂ ಕುರಿತು ನೀನು ಸಮಸ್ತ ಮಹರ್ಷಿಗಳಿಂದ ಸಮೇತನಾದ ಸಾಕ್ಷಾತ್ಯಚೀರಮಣನಿಂಗೆ ಆತಿಥ್ಯವಂ ಮಾಡುವರೇ ಧೇನುವಂ ಪ್ರಾರ್ಥಿಶಿದೆ; ಯಲ್ಲದೆ ಬ್ರಾಹ್ಮಣವೇಷಧಾರಿಯಾದ ಪಾದಜನಿಗೋಸ್ಕರ ಬೇಡಲಿಲ್ಲ, ಅದರಿಂದ ಆತಂಗೆ ಭೋಜನವು ಮಿಲ್ಲದಂತಾದುದೆನೆ, ಕಪಿಯದಂ ಕೇಳಿ ಆಶ್ಚ ರ್ಯವಾದಬಂದುದೆಂದು ವಿಜ್ಞಾನದೃಷ್ಟಿಯಿಂದವನ ವೃತ್ತಾಂತವಂ ತಿಳದು ತಾಡನೆಯಂ ಮಾಡಿ ಪಾದಪ್ರಹಾರವಂ ಮಾಡಿ ಬಹುಪ್ರಕಾರ ಅವಮಾನ ವಂಗೈದು ಪೋಗೆಂದು ಕಳುಹಲು. ಇದಂ ಸಮಸ್ತ ಋಷಿಗಳೂ ನೋಡಿ ವಿಸ್ಮಿತರಾಗಿ ಭೋಜನವಂ ಮಾಡಲು. ಈ ಕಪಿಯು ಸಮಸ್ತ ಋಷಿಗಳ

ನ್ನು ಪೂಜಿಸಿ, ಸ್ರಕ್ಚಂದನಾಂಬರಾಭರಣಂಗಳಿಂದಲಂಕರಿಸಿ, ಯಥೇಷ್ಟ ದಕ್ಷಿಣಾಸಹಿತ ತಾಂಬೂಲವನ್ನಿತ್ತು ಅವರವರ ಆಶ್ರಮಂಗಳಿಗಪ್ಪಣೆಯಿತ್ತು, ಸುರಪತಿಯುಂ ಬಹುವಿಧ ಸ್ತೋತ್ರವಂ ಮಾಡಿ ಯಥಾಶಕ್ತಿ ಪೂಜೆಯಂ ಮಾಡಲು. ಇಂದ್ರನು ಪರಮ ಸಂತುಷ್ಟನಾಗಿ ತನ್ನ ಕಂಠದೊಳಿದ್ದ ದಿವ್ಯ ಮುಕ್ತಾಹಾರಮಂ ಋಷಿಗಿತ್ತು ನಾಕಮಂ ಕುರಿತು ಬಹುಸುಪ್ರೀತನಾಗಿ ನಡೆಯಲು.

ಅಂದು ಮೊದಲಾಗಿ ಆ ಶೂದ್ರನು ತನ್ನ ಅಪಮಾನವಂ ಸಹಿಸಲಾರದೆ ಮನದಲ್ಲಿ ವೈರವಂ ತಾಳಿ ಸಂಹಾರವಂ ಮಾಡಬೇಕೆಂದು ನಿಶ್ಚಯವಂ ಮಾಡಿ, ರಂಧ್ರಪ್ರತೀಕ್ಷೆಯಂ ಮಾಡುತ್ತಿದ್ದು, ತಾನು ಸಂಚಾರಾರ್ಥವಾಗಿ ಆಶ್ರಮವಂ ಬಿಟ್ಟು ವನಕ್ಕೆ ಪೋಗುವನಿತರೊಳು ಋಷಿಯು ಅಸಂಪ್ರಜ್ಞಾತಸಮಾಧಿಯಲ್ಲಿರುವ ಭಾವವಂ ತಿಳಿದು ಇದೇ ಸಮಯವೆಂದು ಖಡ್ಗದಿಂ ಶಿರಚ್ಛೇದನವಂ ಮಾಡಿ ಪೋಗುತ್ತಿರಲು, ತಾನು ಆ ಶೂದ್ರನಂ ಕಂಡು ಮಾರ್ಗದೊಳವನಂ ಸಂಹಾರ ಮಾಡಿ ಆಶ್ರಮಕ್ಕೆ ಬಂದು ನೋಡಿ ಹ್ಯಾಗಾದರೂ ಈ ಮುನಿಗೆ ಪ್ರೇತತ್ವನಿವೃತ್ತಿಮಾಡಿ ಅನಂತರದಲ್ಲಿ ತಾನು ಕಾಣುವೆನೆಂದು ಕಾದಿರುವೆ. ಸುಭಗ ; ಅದರಿಂದ ತನ್ನಲ್ಲಿ ದಯೆಯಿಂ ನೀನು ಈ ಕವಿಗೆ ಪ್ರೇತತ್ವನಿವೃತ್ತಿಯಂಮಾಡಬೇಕೆಂದು ವಂದನೆಯಂ ಮಾಡಲು. ಸಹಸ್ರಾಯುವು ಈ ಋಷಿಗೆ ಪ್ರೇತತ್ವನಿವೃತ್ತಿಯಂಮಾಡುವದಂತಿರಲಿ, ನೀನು ತಾಪಸನಲ್ಲಿ ಶೇರುವುದಕ್ಕೆ ಕಾರಣವೇನು ಪೇಳಬೇಕೆಂದೆನಲು. ಆಧೇನುವು ರಾಜಕುಮಾರನಂ ಕುರಿತು ಎಲೈ ದಯಾನಿಧಿಯೆ ಕೇಳು, ಪೂರ್ವಜನ್ಮದಲ್ಲಿ ಈ ತಾಪಸನೂ ತಾನೂ ದಂಪತಿಗಳು, ಪರಲೋಕಸಂಪಾದನಾರ್ಥವಾಗಿ ಕಾಶೀಕ್ಷೇತ್ರದಲ್ಲಿ ಒಂದು ಕುಟೀರವಂ ಕಟ್ಟಿ ಬಹುಕಾಲ ವಾಸಮಾಡಿ, ಪತಿಯು ತಪವಂ ಮಾಡುತಿರಲಾನು ಕುಟೀರವಂ ನಾಶ್ರೈಸಿ, ಯಥಾಶಕ್ತಿ ಅತಿಥಿ ಪೂರಿತಳಾಗಿ ಪತಿಶುಶ್ರೂಷೆಯಂ ಮಾಡುತ್ತ ಪರಸ್ಪರಾನುರಾಗದಿಂದಿರುತಿರಲು. ಒಂದಾನೊಂದುದಿನ ಸೋಮಯುಕ್ತಪರ್ವಣಿ ಬರಲು. ಅಂದಿನ ದಿನ ಮೇರುಪರ್ವತವಾಸಿಗಳಾದ ಸಮಸ್ತ ಮಹರ್ಷಿಗಳು ಅಮರತಟಿನೀ ಸ್ನಾನಾರ್ಥವಾಗಿ ವಾರಣಾಸೀಕ್ಷೇತ್ರಮಂ ಕುರಿತುಬರಲು, ತತ್ಕಾಲದಲ್ಲಿ ಪ

ಸಿಷ್ಠಮಹರ್ಷಿಗಳು ಪತ್ನೀ ಧೇನು ಸಹಿತನಾಗಿ ಬಂದು ಗಂಗಾಸ್ನಾನವಂ ಮಾಡಿ, ಆದಿನ ನಿರಾಹಾರನಾಗಿದ್ದು, ಮರುದಿನ ಪ್ರಾತಃಕಾಲದೊಳು ಸಮಸ್ತ ಋಷಿಗಳಿಗೂ ಆತಿಥ್ಯಕ್ಕೆ ಬರಬೇಕೆಂದು ಪೇಳಿ, ನಿತ್ಯಕರ್ಮಂಗಳನಾಚರಿಸುತ್ತ ಸ್ವಸ್ಥ ಚಿತ್ತನಾಗಿ ಕುಳ್ಳಿರಲು. ಸ್ನಾನಾರ್ಥವಾಗಿ ಬಂದಿದ್ದ ಮಹರ್ಷಿಗಳು ಪೂರ್ವದಿನದಲ್ಲಿ ನಿರಾಹಾರಿಗಳಾದ ಪ್ರಯುಕ್ತ ಮಧ್ಯಾಹ್ನಕಾಲವಂ ಕಂಡು ಕೇವಲ ಕ್ಷುದ್ಬಾಧೆಯಿಂದ ಪೀಡಿತರಾಗಿ ಶಿಷ್ಯರಂ ಕರದು ವಸಿಷ್ಠಾಶ್ರಮಕ್ಕೆ ಪೋಗಿ ಆತಿಥ್ಯಕ್ಕನುಕೂಲವಾಗಿರುವದೋ ಯೇನೋ ಮಹರ್ಷಿ ಯೇನುಮಾಡುವನೋ ನೋಡಿ ಬರುವೆವೆಂದು ಪೇಳಿ ಕಳುಹಲಾ ಶಿಷ್ಯರು ವಶಿಷ್ಠರ ಸನ್ನಿಧಿಗೆ ಬಂದು ವಂದನೆಯಂ ಮಾಡಲು. ಆ ಮಹರ್ಷಿಯು ನೀವ್ಯಾರೆಂದು ಕೇಳಲು. ಅಂತೇವಾಸಿಗಳು ಮೇರುಪರ್ವತವಾಸಿಗಳಾದ ಋಷಿಗಳು ನಾವು, ನೆನ್ನೇ ಕ್ಷೇತ್ರೋಪವಾಸವಂ ಮಾಡಿ ಶ್ರಾಂತರಾಗಿ ಆತಿಥ್ಯಸಮಯವಾಗಿರುವುದೋ; ಅಥವಾ ಇನ್ನು ಸಾವಕಾಶವೋ ನೋಡಿ ಬರುವುದೆಂದು ಕಳುಹಿದಕಾರಣ ಭವತ್ಸನ್ನಿಧಾನಕ್ಕೆ ಬಂದೆವೆಂದೆನಲು. ಆ ಮಹರ್ಷಿಯು ಪತ್ನಿಯಂ ಕರದು ಇವರೊಡನೆ ಪೋಗಿ ಋಷಿಗಳೆಲ್ಲರಂ ಆತಿಥ್ಯವಂ ಮಾಡಲೋಸುಗ ಕರೆತರುವುದೆಂದು ಪೇಳಲು. ಇವರೊಡನೆ ಅರುಂಧತಿಯು ಬರುತಿರಲು. ಶಿಷ್ಯರು ಬಹುಮುಂದಿ ಋಷಿಗಳಿಂಗಾತಿಥ್ಯವಂ ಪೇಳಿ! ತತ್ಸಾಧನಂಗಳ ನೀಕ್ಷತ್ತಾದಡೆಯುಂಮಾಡದೆ ಸಮಸ್ತರಂ ಕರಕೊಂಡು ಬರುವುದೆಂದು ಕಳುಹಿದರಿದೇನಾಶ್ಚರ್ಯವೋ ಎಂದು ವಿಸ್ಮಿತರಾಗಿ ಬರುತಿರಲು, ಆ ಅರುಂಧತಿದೇವಿಯು ಋಷಿಸಮೂಹವಂ ಕಂಡು ವಂದನೆಯಂ ಮಾಡಿ ಸರ್ವರು ಆತಿಥ್ಯಾರ್ಥವಾಗಿ ದಯಮಾಡಬೇಕೆಂದು ಕೈಮುಗಿಯಲು. ಋಷಿಗಳು ಶಿಷ್ಯರಂ ಕರದು ಎನೆಂದು ಕೇಳಲು, ಯುಷ್ಮದಾಜ್ಞಾನುಸಾರವಾಗಿ ಪೋಗಿದ್ದೆವಲ್ಲಿಗವನೆಮ್ಮನು ನೋಡಿ ಪತ್ನಿಯಂ ಕರದು ಕಳುಹಿದರಾಶ್ರಮದಲ್ಲಿ, ತದನುಕೂಲವಾಗಿ ಯತ್ನಮನೀಕ್ಷತ್ತು ಕಾಣೆವೆಂದು ಜನಾಂತಿಕದಿಂದ ಪೇಳಲು. ಋಷಿಗಳದಂ ಕೇಳಿ ವಿಸ್ಮಿತರಾಗಿ ಆಶ್ರಮದಲ್ಲಿ ಪ್ರಯತ್ನವೂ ಇಲ್ಲ, ತತ್ಸಾಧಕಳಾದ ಪತ್ನಿಯನ್ನೂ ತಮ್ಮಾಹ್ವಾನನಿಮಿತ್ತವಾಗಿ ಕಳುಹಿರುವನೆಂತುಮಾಡುವನೋ ? ಶ್ರೀಹರಿಯೆ

ಬಲ್ಲನಾಮಹರ್ಷಿಯಚಿಂತ್ಯಪ್ರಭಾವನದರಿಂದ ತದಾಜ್ಞಾನುಸಾರ ಪೋಗಬೇಕೆಂದು ಎಲ್ಲರೊಂದಾಗಿ ಬಂದು ಪಂಕ್ತಿಯಾಗಿ ಕುಳ್ಳಿರಲು. ಅರುಂಧತೀಪತಿಯು ನಂದಿನೀಧೇನುವಂ ಕರೆದು ಮಹರ್ಷಿಗಳೆಲ್ಲ ಬಂದಿರುವರಾತಿಥ್ಯಮಂ ಮಾಡಿಸುವದೆಂದು ಪ್ರಾರ್ಥನೆಯಂ ಮಾಡಲು. ತತ್ಕ್ಷಣದಲ್ಲಿ ವಿಶಾಲವಾದ ದಿವ್ಯಭೋಜನಶಾಲಾನಿರ್ಮಾಣವಾಗಲು, ಋಷಿಸಮಾಜವೆಲ್ಲ ಕ್ಷೇತ್ರವಾಸಿಗಳಾದ ಬ್ರಾಹ್ಮಣರಿಂದ ಕೂಡಾ ಪಂಕ್ತಿ ಪಂಕ್ತಿಯಾಗಿ ಶಾಲಾಪ್ರವೇಶಮಂಮಾಡಿ ಕುಳ್ಳಿರಲು, ಧೇನುವಿನಂಗದಿಂದನೇಕಮಂದಿ ಅಪ್ಸರಸ್ತ್ರೀಯರಾವಿರ್ಭವಿಸಿ, ದಿವ್ಯಾಂಬರಾಭರಣಾದಿಗಳಿಂದ ಮನೋಹರವಾಗಿ, ಯೌವನಲಾವಣ್ಯವೈದಗ್ಧ್ಯಾದಿಗುಣಗಳಿಂದ ಶೋಭಿತರಾಗಿ, ಯಾರಿಗೇನು ಅಪೇಕ್ಷಿತವೋ ಅದನ್ನು ಅವರಿಂಗೆ, ಈರೀತಿಯಿಂದ ಸರ್ವರಿಗೂ ಬಡಿಸಲು. ಸರ್ವರೂ ತಮತಮಗೆ ಅಪೇಕ್ಷಿತವಾದ ಪದಾರ್ಥವನ್ನು ಸಮೃದ್ಧಿಯಾಗಿ ಭೋಜನವಂ ಮಾಡಿ ವಿಸ್ಮಿತರಾಗಿ, ಋಷಿಯ ಮಾಹಾತ್ಮ್ಯಮಂ ಕೊಂಡಾಡುತ, ದಕ್ಷಿಣಾದಿಗಳಿಂದ ಸತ್ಕೃತರಾಗಿ, ಅಪ್ಪಣೆಗೊಂಡು ನಿಜಾಲಯವಾದ ಕನಕಾಚಲಮನೈದಲುದ್ಯುಕ್ತರಾಗಲು. ಎನ್ನಯ ಪತಿಯು ಪೂರ್ವದಲ್ಲೇ ತಪಶ್ಚರ್ಯಾಸಮಾಸಕ್ತನಾಗಿದ್ದವನಾದಕಾರಣ, ಆ ತಪೋಧನರ ತಪಸ್ಸಾಮ್ರಾಜ್ಯವಂ ನೋಡಿ, ತಪಾಸಕ್ತನಾಗುತ್ತವರೊಡನೆ ತಪಶ್ಚರಣಾರ್ಥವಾಗಿ ಪೋಗಲು ಪ್ರಯಾಣಮಂ ಮಾಡಲದಂ ಕಂಡು, ತಾನು ಪತಿಯೊಡನೆ ಪೋಗಲುದ್ಯುಕ್ತಳಾಗಲು, ಪತಿಯು ತನ್ನಂ ನೋಡಿ, ಎಲೈ ಸತಿಯೆ! ಕೇಳು, ನೀನು ಅತಿಥಿಪೂಜಾತತ್ಪರಳಾದ ಪ್ರಯುಕ್ತ ತಪೋಭೂಮಿಯಲ್ಲಿ ನೀನು ಬಂದು ಮಾಡುವುದೇನು, ಚಿರಕಾಲದಿಂದನುಷ್ಠಿತವಾದ ಅತಿಥಿಪೂಜೆಯಲ್ಲಿಯೆ ತತ್ಪರಳಾಗಿದ್ದು, ಗತಿಯಂನೈದು ಪೋಗೆಂದು ಅಪ್ಪಣೆಯಂನಿತ್ತು, ತಾನು ಋಷಿಸಮಾಜದೊಡನೆ ನಡೆಯಲು. ತಾನು ಆ ಕ್ಷೇತ್ರದಲ್ಲಿ ಕ್ವಚಿತ್ಕಾಲ ವಾಸವಂ ಮಾಡಿ, ಪ್ರತ್ಯುಪಕಾರವಾಗಿ ಯಥಾಶಕ್ತಿಯಾಗಿ ಅತಿಥಿಪೂಜೆಯಂ ಮಾಡುತ್ತಿರಲು, ಜರೆಯಿಂದ ಇಂದ್ರಿಯಂಗಳೆಲ್ಲ ಕುಂಠಿತವಾಗಿ ಅವಯವಂಗಳು ಗಳಿತವಾಗಲು, ತಾನು ಇನ್ನಿದ್ದು ಫಲವೇನೆಂದು ತ್ರಿವೇಣಿಯೊಳು ಶರೀರಮಂ ಬಿಡಬೇಕೆಂಬ ಇಚ್ಛೆಯುಳ್ಳವಳಾಗಿ, ಪ್ರವೇಶಕಾಲದೊಳು ತಾನು

ವಸಿಷ್ಠಋಷಿಗಳಿಗೆ ಆತಿಥ್ಯಮಂ ಮಾಡಿದಕಾಲದಲ್ಲಿ ಕಾಮಧೇನುವಿನ ಪ್ರ
ಭಾವಮಂ ಸ್ಮೃತಿಗೆತಂದು, ತಾನು ಆ ಧೇನುವಿನಂತಾಗಬೇಕೆಂಬ ತಾತ್ಪ
ರ್ಯದಿಂ ಪ್ರವೇಶನ ಮಾಡಿ ದೇಹಮಂ ಬಿಟ್ಟನಾದಕಾರಣ, ತದನುಗುಣ
ವಾದ ಗೋಶರೀರವೇ ತನಗೆ ಬಂದು ಕಿಂಚಿನ್ಮಾಹಾತ್ಮೆಯು ಪ್ರಾಪ್ತವಾದು
ದರಿಂದ ಅತಿಥಿಮನೋರಥಪೂರ್ತಿಯಂ ಮಾಡುವ ಯೋಗ್ಯತೆ ಬಂದುದಾ
ವೇಣೀಮಾಹತ್ಮೆಯಿಂದ. ತನ್ನ ಪತಿಯು ಚಿರಕಾಲತಪಮಂ ಮಾಡಿ ಆ ಕಳೇ
ಬರಮಂ ಬಿಟ್ಟು ಪೂರ್ವಜನ್ಮಕೃತಾತ್ಯಂತದುಸ್ಸಹತಪಃಪ್ರಭಾವದಿಂ ಋಷಿ
ಜನ್ಮಮಂ ನೆತ್ತಿ, ಪುಟ್ಟಿರುವ ಪತ್ನಿಯನರಶಿ ತದಾಶ್ರಯದಿಂದ ಪಿಂತಿರುಗುತಿ
ರಲು, ಮಹದಾಪತ್ತಿನಿಂದಾಕಸ್ಮಿಕವಾಗಿ ಮೃತ್ಯುವನ್ನೈದಲು. ಈತಂಗೆ ಪ್ರೇ
ತತ್ವ ನಿವರ್ತಿಯಂ ಮಾಡಿ, ತನ್ನ ಗತಿಯಿದ್ದಂತೆ ಪೋಗುವೆನೆಂದು ಕಾದಿರು
ವೆನೆಂದು ವಿನಯದಿಂ ಪೇಳಲು. ರಾಜಕುಮಾರನದಂ ಕೇಳಿ ಧೇನುವಂ ಕು
ರಿತು ನಿನ್ನಯ ಪತಿಗೆ ಪ್ರೇತತ್ವನಿವೃತ್ತಿಮಾಡುವದರಲ್ಲಿಯೆ ಮುಖ್ಯತಾತ್ಪ
ರ್ಯವೋ, ನಿನಿಗೆ ಜೀವಿಶಿದಡೆಯು ಸಂಮತವೋ, ಎಂದು ಕೇಳಲು. ಧೇ
ನುಪಾನುಡಿಯಂ ಕೇಳಿ ಪರಮಾಹ್ಲಾದಯುಕ್ತಳಾಗಿ, ಯವಾಗೂರಸಮಂ
ಬೇಡುವನಿಂಗೆ ಅಮೃತಪ್ರಾಶನವಂ ಮಾಡಿಶಿದಂತೆ, ಸರ್ವಪ್ರಕಾರದಿಂದಲೂ
ಪತಿಯು ಜೀವಿಸುವಂತೆ ಮಾಡಬೇಕೆಂದು ಬಹುವಿಧ ಪ್ರಾರ್ಥನೆಯಂಮಾ
ಡಲು. ರಾಜಕುಮಾರನು ಮೃತಶರೀರಮಂನೆತ್ತಿಕೊಂಡು ಜಲಾಶಯದೆಡೆಗೆ
ಪೋಗಿ, ನಿರ್ಮಲೋದಕದಲ್ಲಿ ಪೆಣನಂತೊಳೆದು ತಾನು ಸ್ನಾನವಂಮಾಡಿ,
ಆ ಮೃತಶರೀರ ಕಬಂಧ ಶೀರ್ಷವಂನೊಂದಿಸಿ ಸಂಧಾನಕರಣಿಯಂ ಸ್ಪರ್ಶ
ನಮಾಡಲು, ಕಬಂಧ ಶರೀರವು ಬಂದಾಗಿ ಅವ್ರಣವಾಗಲು. ರಾಜಕುಮಾರ
ನು ಮೃತಸಂಜೀವಿನೀ ಮಂತ್ರದಿಂದಭಿಮಂತ್ರಿತವಾದ ಉದಕಮಂ ಪ್ರೋ
ಕ್ಷಿಸಲು, ತಕ್ಷಣದೊಳಾತಾಪಸನು ಸುಪ್ತೋತ್ಥಿತನಂತೆ ಎದ್ದು ಕಣ್ದೆರೆದು
ಮುಂದೆ ನಿಂದಿರುವ ರಾಜಕುಮಾರನಂಧೇನುವಂಕಂಡು ಪರಮವಿಸ್ಮಿತನಾಗಿ,
ಈ ಅಸ್ಮಜ್ಜೀವನರೂಪಮಹತ್ಕಾರ್ಯವು ಈ ದಿವ್ಯಪುರುಷನಿಂದಾದುದಲ್ಲದೆ
ಧೇನುವಿನಶಕ್ತಿಯಿಂದಾದ ಕಾರ್ಯವಿದಲ್ಲವೆಂದು ತಿಳಿದು ಎದ್ದೋಡಿಬಂದು
ಕುಮಾರನನ್ನಾಲಿಂಗಿಸಿ, ಸಹಸ್ರಾಯುವಿನ ಕರಮಂಪಿಡಿದು, ಧೇನುವಂಕು

ರಿತು, ಈ ಕನ್ಯೆಯರು ಎಲ್ಲಿಂದಬಂದು ಮುಂದೆಲ್ಲಿಗೆ ಪೋಗುವನು, ನಡದವೃತ್ತಾಂತವೇನೆಂದು ಕೇಳಲು, ಧೇನುವು ತಾಪಸನಿಂಗೆ ವಂದನೆಯಂಮಾಡಿ ಸಹಸ್ರಾಯುವಿನ ಆಗಮನ ಮೊದಲಾಗಿ ತತ್ಕ್ಷಣವವರಿವಿಗೂ ನಡದವೃತ್ತಾಂತಮಂ ಎಳ್ಳನಿತು ಬಿಡದೆವರ್ಣಿಸಲು, ತಾಪಸನು ಕೇಳಿ ವಿಸ್ಮಿತನಾಗಲು. ಧೇನುವು ಶೂದ್ರನು ಮಾಡಿದವ್ಯಾಪಾರವನ್ನು, ತಾನು ಆ ಪಾದಜನ ಸಂಹಾರಮಾಡಿದುದನ್ನು ಪೇಳಲು. ತಾಪಸನದಂಕೇಳಿ ಧೇನುಮಾಡಿದ ಮಹದುಪಕಾರವನ್ನು, ರಾಜಕುಮಾರನು ಮಾಡಿದ ಪುನಸ್ಸೃಷ್ಟಿಯನ್ನು ಅಡಿಗಡಿಗೆ ನೆನೆದು, ಸಹಸ್ರಾಯುವಂ ಬಹುವಿಧವಾಗಿ ಸ್ತೋತ್ರಮಾಮಾಡಿ, ತನ್ನ ಕಂಠದೊಳು ಧರಿಶಿದ್ದ ಇಂದ್ರದೇವರಿಂದತ್ತವಾದ ದಿವ್ಯಮಣಿ ಘಟಿತಮುಕ್ತಾಹಾರವನ್ನು ಸಹಸ್ರಾಯುವಿನ ಕಂಠದೊಳು ಸಮರ್ಪಣೆಯಂಮಾಡಿ ಆ ಹಾರವು ತನಗೆ ಬಂದವೃತ್ತಾಂತಮಂಪೇಳಲು, ರಾಜಕುಮಾರನದಂಕೇಳಿ ಇಂದ್ರದೇವರಿಂದ ಪ್ರೇಷಿತನಾಗಿ ಬಂದಿದ್ದ ಸುಸಂಗಮಹರ್ಷಿಯ ನುಡಿಯೂ, ಈ ತಾಪಸನವಾಕ್ಯವೂ ಏಕವಾಕ್ಯತೆಯಾದುದೆಂದು ಸಂತೋಷಯುಕ್ತನಾಗಿರುತಿರಲು. ರಾಜಕುಮಾರನ ಕರಮಂಪಿಡಿದು ತನ್ನ ಪರ್ಣಶಾಲೆಗೆ ಕರದುಕೊಂಡುಪೋಗಿ, ಬಹುಪ್ರಕಾರ ಉಪಚಾರಮಂಮಾಡಿ, ಆತನಾಗಮನ, ಪ್ರಯಾಣವನ್ನು ವಿಸ್ತಾರವಾಗಿ ತಿಳಿದು, ಕಿಂಚಿತ್ಕಾಲಾತನಾಶ್ರಮದಲ್ಲಿದ್ದು ಪೋಗೆಂದು ಬಹುಪ್ರಕಾರದಿಂ ಪ್ರಾರ್ಥಿತನಾಗಿ, ಕೆಲವು ದಿವಸ ಋಷ್ಯಾಶ್ರಮದಲ್ಲಿ ಸಕಲೋಪಚಾರದಿಂ, ಮುನಿಯ ಅನುರಾಗದಿಂ ಬದ್ಧನಾಗಿ ಇರುತಿರಲು.

ಇತ್ತಲಾ ಮಹೋದರೀಪುತ್ರನಾದ ಕುಕ್ಕುರನು ಸಹಸ್ರಾಯುವಿನಿಂದ ಶಿಕ್ಷಿತನಾಗಿ, ಅತ್ಯಂತ ವಿಷಾದದಿಂದ ನೈಮಿಷಾರಣ್ಯಕ್ಕೆಪೋಗಿ, ಆರ್ಯನಂಕಂಡು ಸಹಸ್ರಾಯುವಂ ಜಯಿಸುವರೆ ದೇವಾಸುರರಿಗಳವಲ್ಲ, ವೃಥಾ ಮೋಹಿಸಿ ಪ್ರಾಣವಂಕಳೆಯುವದಲ್ಲದೆ ಕಾರ್ಯ ಬಂದೂಕಾಣುವದಿಲ್ಲವೆಂದು ಸಂತಾಪಯುಕ್ತನಾಗಿ, ತ್ವರೆಯಿಂದ ಈ ಭಾರತಖಂಡಮಂಬಿಟ್ಟು ಪೋದಡೆ ಕ್ಷೇಮವಾಗುವದೆಂದು ವಂದನೆಯಂಮಾಡಿ ತ್ವರೆಯಂಮಾಡುತ್ತಿರಲು. ಇವರುಕನಿಯ್ಯುಸನವಸ್ಥೆಯಂನ್ನೋಡಿ, ತಮ್ಮನಂಕೇಳದೆ; ಕರ್ಣನಾಶಿ

ಕಗಳಂ ನೀಡಾಡಿಬಂದೆಯಲ್ಲದೆ ಎಳ್ಳನಿತು ಕಾರ್ಯವಂ ಕಾಣಲಿಲ್ಲವೆಂದು ಬಹುವಿಷಾದಯುಕ್ತರಾಗಿ, ಆಡಿಫಲವೇನಿನ್ನು ವೃಥಾ ಕಾಲಹರಣದಿಂದೇನುಪ್ರಯೋಜನ, ಪೋಗುವಾನಡೆಯಿರೆಂದಾರ್ವರೊಂದಾಗಿ ಜನನಿಯಾದ ಮಹೋದರಿಯೆಡೆಗೆ ಪೋಗಿ ವಂದನೆಯಂ ಮಾಡಿ, ತಾವಿಲ್ಲಿರಕೂಡದೆಂದು ಆತ್ಮದುಃಖವಂ ಪೇಳಿ, ಈ ಭಾರತಖಂಡವಂ ಬಿಟ್ಟು ಇನ್ನೆಲ್ಲಾದಡೆಯುಂ ತಾಣವಂ ನರಶಿ ಕ್ವಚಿತ್ಕಾಲ ವಾಸವಂ ಮಾಡಿ, ರಂಧ್ರವಂ ಪ್ರೇಕ್ಷಿಸಿ ಆರ್ವರೊಂದಾಗಿ ಶೇರಿ ಸಹಸ್ರಾಯುವಂ ಸಂಹಾರವಂ ಮಾಡದೆ ಬಿಡುವದಿಲ್ಲ, ಪರಂತು ಇದು ಸಮಯವಲ್ಲವದರಿಂದ ಪ್ರಕೃತದಲ್ಲಿ ಈ ಖಂಡವಂ ಬಿಟ್ಟಲ್ಲದೆ ತಮಗೆ ಕ್ಷೇಮವಾಗುವದಿಲ್ಲ, ನಡೆ ಎಂದು ನುಡಿಯುವ ಮಕ್ಕಳಂ ನೋಡಿ, ಮಹೋದರಿಯು ತಾನು ಬರುವದಿಲ್ಲ, ನೀವು ಎಲ್ಲಾದಡೆಯು ಪೋಗಿ ಆತ್ಮಸಂರಕ್ಷಣೆಯಂ ಮಾಡಿಕೊಂಬುವದು ನಿಮಗೆ ಶಾಪವಿದ್ಯವಂ ಪೇಳದ ಸತ್ಯವ್ರತನ ನಿಮಿತ್ತವಾಗೆಂದು ಅಪ್ಪಣೆಯನ್ನೀಯಲು. ಪುತ್ರರು ತಾಯಿಗೆ ವಂದನೆಯಂ ಮಾಡಿ, ಅಲ್ಲಿಂದ ಪೊರಮಟ್ಟು ಇಳಾವೃತ, ಕೇತುಮಾಲ, ಭದ್ರಾಶ್ವ ಮೊದಲಾದ ಖಂಡಗಳಂ ತಿರುಗಿ ನೋಡಿ, ಸಮಸ್ತಪ್ರದೇಶವು ಶೂರರಿಂದಾಕ್ರಾಂತವಾಗಿರುವದಂ ಕಂಡು, ಮನವೆರಗದೆ ನೋಡುತ್ತ ಬರುತ ಕಿಂಪುರುಷಖಂಡದಲ್ಲಿರುವ ಹರಿಕೇತನನ ನಗರಿಯಾದ ಗಜಪುರಿಯಂ ಕಂಡು, ಅತಿರಮಣೀಯವಾಗಿ ದುರ್ಗಮವಾಗಿರುವದಂ ನೋಡಿ, ಸಾಧ್ಯಾಸಾಧ್ಯವಂ ತಿಳಿಯಬೇಕೆಂದು ಸೂಕ್ಷ್ಮರೂಪಿನಿಂ ಪುರಪ್ರವೇಶವಂ ಮಾಡಿ, ಆ ನಗರಿಯನಾಳುವ ಮಹೀಪತಿಯು ಮೃತನಾಗಿ ಆ ನರಪತಿಯ ಪುತ್ರಿಯು ರಾಜ್ಯಭರಣವಂ ಮಾಡುವ ಸಂಗತಿಯಂ ತಿಳಿದು, ಇದುವೆ ಸ್ಥಾನವೆಂದು ನಿಶ್ಚೈಸಿ, ಪುರದಿಂ ಪೊರಮಟ್ಟು, ಆರ್ವರೂ ಘೋರರೂಪವಂ ಧರಿಸಿ, ಮಹದಟ್ಟಹಾಸವಂ ಮಾಡಿ ಕೂಗಲು. ಪುರಜನರೆಲ್ಲರೂ ತ್ರಸ್ತಹೃದಯರಾಗಲು. ಸುಪ್ರಭೆಯು ರಾಕ್ಷಸರಟ್ಟುಳಿಯಂ ನೋಡಿ, ಯೂಥಪತಿಗಳಿಂದ ಯುಕ್ತನಾದ ಸೇನಾಪತಿಯಂ ಕರಸಿ, ಮಂತ್ರಾಲೋಚನೆಯಂ ಮಾಡಿ ಸೇನಾವಿಭಾಗವಂ ಮಾಡಿ, ಉಡುಗೆರೆಯನ್ನಿತ್ತು ಕಳುಹಲಾ ಸೇನಾಪತಿಯು ಸರ್ವಸನ್ನಾಹದಿಂ ಪೊರಮಟ್ಟು ಯುದ್ಧಮಾಡು

ತ್ತಿರಲು. ರಾತ್ರಿಂಚರರಾರ್ವರೂ ಸ್ವಲ್ಪಕಾಲ ಯುದ್ಧವಂಮಾಡಿ, ಅನಂತರದಲ್ಲಿ ಮಾಯಾಯುದ್ಧದಿಂದ ಸರ್ವರಂ ಸಂಹಾರವಂಮಾಡಿ ಪುನರಟ್ಟಹಾಸಧ್ವನಿಯಂಮಾಡಲು. ಸುಪ್ರಭೆಯೆಂಬ ರಾಜಕನ್ಯೆಯು ಕೇಳಿ, ಮನದೊಳಾಲೋಚನೆಯಂಮಾಡಿ, ಸರ್ವಸೈನ್ಯವಂ ಕ್ಷಣಾರ್ಧದಲ್ಲಿ ಸಂಹಾರವಂಮಾಡಿದರು, ಸೇನಾಪತಿಯು ಮೃತಿಯನೈದಿದನು. ಇನ್ನು ಯುದ್ಧದಲ್ಲಿದೈತ್ಯರಂ ನಿಗ್ರಹವಂಮಾಡುವ ಪರಾಕ್ರಮಶಾಲಿಗಳಾದ ಶೂರರ್ಯಾರಿಹರು, ಈ ರಾತ್ರಿಂಚರರೇನಮಾಡುವರೋ, ತಾನು ಮಾನಿನಿ, ಇಲ್ಲಿದ್ದಡಿನ್ನೇನು ಪ್ರಮಾದಬರುವದೋ ತಿಳಿಯಲಿಲ್ಲವದುಕಾರಣ, ಈ ಸ್ಥಾನಮಂಬಿಟ್ಟಲ್ಲದೆ ನಿರ್ವಾಹವಿಲ್ಲವೆಂದು ಜನನಿಯೂ ತಾನೂ ಆಲೋಚನೆಯಂಮಾಡಿ, ಸಕಲಸಂಪತ್ಸಮೃದ್ಧವಾದರಾಜ್ಯಲಕ್ಷ್ಮಿಯನ್ನಗಲಲಾರದೆ ಬಹುದುಃಖಿತರಾಗಿ ಈರ್ವರೂ ಪರಮಾಪ್ತರಾದ ಸಖಿಯುಗ್ಮದಿಂ ಸಹಿತರಾಗಿ ಯಥೋಚಿತದಿವ್ಯಾನರ್ಘ್ಯರತ್ನಾಂಬರಾದಿಗಳಂ ಸಂಗ್ರಹಿಸಿಕೊಂಡು, ವಿಮಾನಾರೂಢರಾಗಿ ನಿಶಿಯಲ್ಲಿ ಪುರಜನರರಿಯದಂತೆ ಅಲ್ಲಿಂದಪೊರಟು ನಿರಾಲಂಬಮಾರ್ಗದೊಳುಸಂಚಾರವಮಾಡುತ್ತ ದೇಶದೇಶದೊಳು ತನಗನುರೂಪವಾದಪುರುಷನನ್ನರಸುತ್ತ ಬರುತಿರ್ದಳೆಂಬಲ್ಲಿಗೆ. *ಇಂತು ಕರ್ಣಾಟಕಭಾಷಾವಿರಚಿತಮಾದ ಶ್ರೀಕೃಷ್ಣರಾಜವಾಣೀವಿಲಾಸವೆಂಬಾಂಕಿತದಿಂದ ಕರ್ಣಾಟಕಭಾಷಾವ್ಯಾಖ್ಯಾನರೂಪಕವಾಗಿ ರಚಿಸಿರುವ ಶ್ರೀಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ಏಕಾದಶೋಧ್ಯಾಯಃ.

ಹನ್ನೊಂದನೇ ಅಧ್ಯಾಯ ಸಂಪೂರ್ಣವು.



## ಹನ್ನೆರಡನೇ ಅಧ್ಯಾಯ.



ಇತ್ತಲಾ ರಾಕ್ಷಸರು ಪುರಪ್ರವೇಶವಂ ಮಾಡಿ, ಅರಮನೆಯೊಳಾ ರಾಜಕನ್ನೆಯನ್ನರಸಿ ಕಾಣದೆ ಪುರಜನರನ್ನು ಕರೆಸಿ, ರಾಜಕನ್ಯೆಯು, ರಾಜಪತ್ನಿಯೂ ಎಲ್ಲಿಗೆ ಪೋದರೆಂದು ಕೇಳಲು. ನೆನ್ನೆಯ ನಿಶಿಯಲ್ಲಿ ವಿಮಾನಾರೂಢರಾಗಿ ಎಲ್ಲಿಯೋ ಪಲಾಯನವ ಮಾಡಿದರೆಂದು ಬಿನ್ನಹಮಾಡಲು. ರುರುಯೆಂಬ ದೈತ್ಯನು ಪುರಜನರಂ ಕುರಿತು ರಾಜ್ಯಮನಾಳುವರು ರಾಕ್ಷಸರೆಂದು ಭಯಪಡಬ್ಯಾಡಿ, ಸ್ವರಾಜ್ಯಮಂ ರಕ್ಷಿಸಿ, ಇತರ ರಾಜ್ಯದೊಳು ನಂಮ ಮಟ್ಟುಳಿಯಂ ತೋರುವದಲ್ಲದೆ, ನಿಮ್ಮ ಗೋಜಿಗೆ ಬರುವದಿಲ್ಲವೆಂದು, ಅಭಯವಂ ನೀಡಿ, ಸ್ವಸ್ಥದಿಂದಿರುವಂತೆ ಮಾಡಿ, ತಾವಾರ್ವರೊಂದಾಗಿ ರಾಜ್ಯಶ್ರೀಯಂ ಅನುಭವಿಸುತ್ತ ಸುತ್ತಮುತ್ತಲಿರುವ ರಾಜ್ಯಮಂ ಅರಣ್ಯವಾಗುವಂತೆ ನಿಪಾತಮಾಡಿ ಯಿರುತಿರಲು

ಇತ್ತಲಾ ಸಹಸ್ರಾಯುವು ಒಂದು ಮಾಸಪರ್ಯಂತರವಿದ್ದು, ಋಷಿಗೆ ವಂದನೆಯಂ ಮಾಡಿ, ಬಹುಕಾಲವತೀತವಾದುದೆಂದು ಗುರುಕಾರ್ಯಾರ್ಥವಾಗಿ ಪೋಗಲಿಬೇಕು, ಅಪ್ಪಣೆಯಂ ಕೊಡಬೇಕೆಂದು ಕೇಳಲು, ಗುರುಕಾರ್ಯಾರ್ಥವಾಗಿ ಪೋಗುವರೆ ವಿಘ್ನವಂ ನಾಚರಿಸಬಾರದೆಂದು, ರಾಜಕುಮಾರನಂ ಕುರಿತು ನೀನು ಮಾಡಿದುಪಕೃತಿಗೆ ಪ್ರತಿಯಾಗಿ ತಾನೇನ ಮಾಡುವೆನು. ಅದರಂತಿರಲಿ, ನಿನಿಗೆ ಸಹಾಯವಾಗಿ ಎನ್ನಲ್ಲಿರುವ ಕಾಮದುಘವೆಂಬ ಧೇನುವಂ ಕೊಡುವೆನಿದಂ ಕರಕೊಂಡು ಪೋಗಿ ಸ್ವಕಾರ್ಯಮಂ ನಿರ್ವಹಿಸಿಕೊಂಡು, ಯಾವಾಗೆನ್ನಲ್ಲಿ ಕಳುಹುವದೆಂದು ನಿನಿಗೆ ತೋರುವದೋ! ಆವಾಗ ಕಳುಹುವದೆಂದು ಪೇಳಿ, ಗೋವಂ ಕರದು ರಾಜಕುಮಾರನೊಡನೆ ಪೋಗಿ ಎನ್ನನ್ನು ರಕ್ಷಿಸುತ್ತಿದ್ದಂತೆ ಆತನಾಜ್ಞಾನುಸಾರವಾಗಿ ರಕ್ಷಿಸುತ್ತಿದ್ದು ಆತನು ಅಪ್ಪಣೆಯಿತ್ತು ಕಳುಹಿದಾಗ ತನ್ನೆಡೆಗೆ ಬರುವದೆಂದು ಪೇಳಿ ಕಳುಹಲು. ಸಹಸ್ರಾಯುವು ಮುನಿಗೆ ವಂದನೆಯಂ ಮಾಡಿ, ಕಳುಹಿಸಿಕೊಂಡು ಧೇನುಸಹಿತನಾಗಿ ಅಲ್ಲಿಂದ ಪೊರಮಟ್ಟು, ಉತ್ತರಾಭಿಮುಖನಾಗಿ ಬಹುದೂರ ಮಾರ್ಗವಂ ಕಳೆದು, ಒಂದುದಿನವಾತಪದಿಂದ ಬಹು ಶ್ರಾಂತನಾಗಿ ನಿ

ಲ್ಲವರೆ ತಾಣಮನರಸುತ್ತ ಬರುತ್ತಿರಲು. ಪುರೋಭಾಗದಲ್ಲಿ ವಿಶಾಲವಾದ ಮನೋಹರಾರಾಮಮಂ ಕಂಡು, ಆ ವನಮಂ ಪೊಕ್ಕು, ತನ್ಮಧ್ಯದಲ್ಲಿರುವ ಸ್ಫಟಿಕಶಿಲಾರಚಿತ ಸೋಪಾನಗಳುಳ್ಳ ನಿರ್ಮಲೋದಕ ವಿಶಿಷ್ಟಕಾಸಾರಮಂ ಕಂಡು. ಪರಮಾನಂದಭರಿತನಾಗಿ ಆ ದಿವ್ಯೋದಕದಲ್ಲಿ ಸ್ನಾನಮಂ ಮಾಡಿ, ನಿತ್ಯನಿಯಮಗಳನಾಚರಿಸುತ್ತಿರಲು. ತತ್ಕಾಲದೊಳು ಸಿಂಹಕೇತನನ ಮಗಳಾದ ಸುಪ್ರಭೆಯು ಜನನಿ ಸಖಿಯರಿಂದೊಡಗೂಡಿ ನಿಜನಗರದಿಂ ಪೊರಮಟ್ಟು, ಬಂದು ವಾಸದಿಂದ ವಿಮಾನದೊಳು ಕುಳಿತು ಸಮಸ್ತ ಪೃಥ್ವಿಯಂ ಸಂಚಾರಮಾಡಿ, ತನಗನುರೂಪ ಪತಿಯಂ ನರಸಿ ಕಾಣದೆ, ಬಹು ದುಗುಡದಿಂ ಪ್ರಾಯೋಪವೇಶನಂ ಮಾಡುವೆನೆಂದು ಯೋಚಿಸುತ್ತ ಬರುತ ದೈವಗತಿಯಿಂದ ಸರೋವರಮಧ್ಯದಲ್ಲಿ ಪ್ರತಾಪವೇ ಮೂರ್ತೀಭವಿಸಿದಂತೆ ಅನಂಗನಂಗಮನಂಗೀಕರಿಸಿ ಕುಳ್ಳಿರುವಂತೆ, ತ್ರಿಭುವನಾಭ್ಯುದಯವೇ ಸಾಕಾರಮಾಂತು ಬಂದಂತೆ, ತನ್ನ ಮನೋರಥವೆ ಸಾವಯವಿಯಾಗಿ ನಿಂದಿರುವಂತೆ, ಸರ್ವಗುಣಾಭಿರಾಮನಾದ ಸಹಸ್ರಾಯುವಂ ಕಂಡು, ಮೂರ್ಛಿತಳಾಗಿ ಎಚ್ಚತ್ತು, ಪರಮ ವಿಸ್ಮಯದಿಂದ, ಈತನ್ಯಾರೊ ದಿವ್ಯಪುರುಷನಾಗಿ ಕಾಣುತಲಿರುವನಿವನಂ ಪರಿಕ್ಷಿಸಿ ನೋಡಬೇಕೆಂದು ಅಂತರಿಕ್ಷದೊಳು ನೋಡುತ್ತಿರಲು.

ಸಹಸ್ರಾಯುವು ನಿತ್ಯಕರ್ಮವಂ ತೀರಿಸಿ, ಧೇನುವಂ ಸಮೀಪಕ್ಕೆ ಕರೆದು ಷೋಡಶೋಪಚಾರವಂ ಮಾಡಿ, ಪ್ರದಕ್ಷಿಣನಮಸ್ಕಾರವಂ ಮಾಡಿ, ತನಗೆ ಮೃಷ್ಟಾನ್ನಭೋಜನವಂ ನೀಯಬೇಕೆಂದು ಪ್ರಾರ್ಥನೆಯಂ ಮಾಡಲು. ತತ್‌ಕ್ಷಣದಲ್ಲಿ ಧೇನುವಿನ ಮುಖದಿಂದಲೋರ್ವ ದಿವ್ಯಮಾನಿನಿಯು ಕನಕಮಯಪೀಠವಂ ತೆಗದುಕೊಂಡು ಬಂದು ರಾಜಕುಮಾರನಿಗೀಯಲು, ಸಹಸ್ರಾಯುವಾ ಪೀಠದೊಳು ಕುಳ್ಳಿರಲು, ಮುಖದಿಂದ ದ್ವಿತೀಯಳೋರ್ವ ಸರ್ವಾಂಗಸುಂದರಿಯಾದಂಗನೆಯು ಬಂದು ರತ್ನಮಯವಾದ ಭೋಜನಪಾತ್ರೆಯಂ ತಂದಿಟ್ಟು ಅಲಂಕಾರವಂ ಮಾಡಲು, ಮನೋಹರಾಕಾರದಿಂ ಪ್ರಕಾಶಮಾನಳಾದ ತೃತೀಯಾಂಗನೆಯು ಅಕ್ಷಯಪಾತ್ರೆಯಂ ಪಿಡಿದು ಬಂದು ಷಡ್ರಸೋಪೇತವಾದ ಅನ್ನವಂ ತಂದು ನೀಡಲು, ರಾಜಕುಮಾರನು

ಭೋಜನವಂ ಮಾಡಿ ಕುಳ್ಳಿರಲು. ಮತ್ತೊರ್ವ ಮಾನಿನಿಯು ದಿವ್ಯತಾಂಬೂಲವುಂತಂದಿತ್ತು ನಿಂದಿರಲು. ಓರ್ವಳು ಗಂಧವುಂ, ಮತ್ತೊರ್ವಳು ಪುಷ್ಪಮಾಲಿಕೆಯನಿತ್ತು, ಅನೇಕ ದಿವ್ಯಾಂಗನೆಯರಾಧೇನುವಿನಂಗದಿಂದಾವಿರ್ಭವಿಸಿ, ರಾಜಕುಮಾರನಿಗೆ ಸರ್ವೋಪಚಾರಗಳಮಾಡುತಿರಲು, ಸಹಸ್ರಾಯುವು ಸಂತೋಷಯುಕ್ತನಾಗಿ, ಆದಿವ್ಯಾಂಗನೆಯರಂ ಕುರಿತು ಎಂದಿನಂತೆ ಪೋಗುವುದೆಂದು ಅಪ್ಪಣೆಯಿತ್ತು, ತಾನು ಪೋಗುವರೆ ಯೋಚಿಸುತ್ತಿರಲು.

ಅನಿತರೊಳು ವಿಮಾನಾರೂಢಳಾಗಿ ಪ್ರಚ್ಛನ್ನಳಾಗಿರುವಸುಪ್ರಭೆಯು ರಾಜಕುಮಾರನ ಮಾಹಾತ್ಮ್ಯಯುಂನೋಡಿ, ಆಶ್ಚರ್ಯಭರಿತಳಾಗಿ, ಈತನು ನರನಂತೆ ಕಾಣುವವಿಲ್ಲ, ಮಾನುಷರಿಂಗೆ ಸ್ವಾಧೀನ ಕಾಮಧೇನುವೆತ್ತಣದು, ಸಾಕ್ಷಾತ್‌ಸಹಸ್ರಾಕ್ಷನಾದೊಡೆ ವಜ್ರಾಯುಧಗಳಿಲ್ಲ, ಭೂಸ್ಪರ್ಶವಮಾಡುವದಿಲ್ಲ, ವಸಿಷ್ಠನಾದೊಡೆ ಕಮಂಡಲಾದಿಗಳಿಲ್ಲ, ಕ್ಷತ್ರಿಯನೀತನಾಗಿರಬೇಕು, ಇವನು ದಾರೊ ತಿಳಿಯಲಿಲ್ಲ. ತೇಜಸ್ಸಿನಿಂದಲೂ, ಪ್ರಭಾವದಿಂದಲು, ಅಮಾನುಷವ್ಯಕ್ತಿಯಾಗಿ ತೋರುತಿದೆ ಎಂದು ಯೋಚನೆಯಂ ಮಾಡಿ, ಪರಂತು ತನ್ನ ಶತ್ರುಗಳಾದ ದೈತ್ಯನಿಗ್ರಹವೆಂಬುದು, ಈತಂಗೆ ಈಷತ್ಕರವೆಹೊರ್ತು ದುರ್ಘಟವಲ್ಲವದರಿಂದ ಈತನೇ ತನಗೆ ಪತಿಯೆಂದು ಮನದೊಳಗೆ ನಿಶ್ಚಯವಂ ಮಾಡಿ, ಈತನೆಡೆಗೆ ತಾನಾಗಿಪೋಗಿ ಪ್ರಾರ್ಥನೆಯಂ ಮಾಡಿದಡೆ ಅಂಗೀಕಾರಮಾಡುವನೋ, ನಿರಾಕಾರಣಮಾಡುವನೋ ಎಂದು ಸಂಶಯದಿಂದ ಭ್ರಾಂತಳಾಗಿ, ತದವಲೋಕನಮಾತ್ರದಿಂದುತ್ಪನ್ನವಾದ ಮನೋಭವದಿಂದಭಿವೃದ್ಧವಾದ ಅನುರಾಗೋದ್ರೇಕದಿಂ ಮುಂಪೋರದೆ, ಏನಾದಡಾಗಲಿ, ಈತನ ಶರಣಾಗತಳಾಗಿ ನೋಡುವೆನು, ಅಂಗೀಕಾರವಂ ಮಾಡಿದಡೆ ಉತ್ತಮವಾಯ್ತು, ಇಲ್ಲದಿರೆ ಇನ್ನು ಈ ಶರೀರದಿಂ ಪ್ರಯೋಜನವೇನು, ಇದಂ ಬಿಡುವೆನೆಂದು ನಿಶ್ಚಯಮಾಡಿ, ಜಂಬೂವೃಕ್ಷಮೂಲದೊಳು ವಿಮಾನ ಸಹಿತವಾಗಿ ಇಳಿದು, ಜನನಿಯುಂ, ಸಖಿಯರ ಯುಗ್ಮವಂ ವಿಮಾನದೊಳಿರಿಸಿ, ತಾನು ಸರ್ವಾಭರಣಭೂಷಿತಳಾಗಿ, ಸಹಸ್ರಾಯುವಿದ್ದೆಡೆಗೆ ಲಜ್ಜಾಭಯಸ್ಖಲಿತಪಾದವಿನ್ಯಾಸದಿಂ ಮೆಲ್ಲನೆ ನಡೆದು ಬರುತಿರಲು. ಸಹಸ್ರಾ

ಯುವು ವಿಮಾನವು ವೃಕ್ಷಮೂಲದೊಳಿಳಿದುದಂ, ಆವಿಮಾನದ್ದೆಶೆಯಿಂದ ದಿವ್ಯಮಾನಿನಿಯು ಸಾಕ್ಷಾತ್ ರತಿಯಂತೆ ತನಗಭಿಮುಖಳಾಗಿ ಬರುವದಂ ಕಂಡು ವಿಸ್ಮಿತನಾಗಿ, ಇದೇನಾಶ್ಚರ್ಯವೆಂದು, ವಿಮಾನದಿಂದಾಗಸದಿಂದಿಳಿವಳಾದ್ದಕಾರಣ ಮಾನುಷಸ್ತ್ರೀಯಲ್ಲ, ಅಥವಾ ಮಾನುಷಸ್ತ್ರೀಯಾದೊಡೆ ಈ ಸೌಂದರ್ಯ, ಸೌಭಾಗ್ಯವೆಲ್ಲಿಹುದು. ಆದುಕಾರಣ ಸಾಕ್ಷಾತ್ ದೇವಕನ್ಯೆ ಎಂದು ನಿಶ್ಚಯಮಾಡುವರೆ; ದೇವತೆಗಳು ಭೂಸ್ಪರ್ಶವಂಮಾಡುವದಿಲ್ಲ, ಈಕೆ ಯಾರೆಂದು ಮನದೊಳಾಲೋಚಿಸಿ, ಆ ಮಾನಿನಿಯ ಸೌಂದರ್ಯ, ಸೌಕುಮಾರ್ಯ, ಗಾಂಭೀರ್ಯ, ವೈದಗ್ಧ್ಯ, ಲಜ್ಜಾವಿಲಾಸಗಳನ್ನೋಡಿ ಪರವಶನಾಗಿ ಕುಳ್ಳಿರಲು. ಸುಪ್ರಭೆಯು ಸಮೀಪಕ್ಕೆ ಬಂದು ರಾಜಕುಮಾರಂಗೆ ಸಾಷ್ಟಾಂಗದಿಂ ಮಣಿದು, ಸಮೀಪದಲ್ಲಿ ರಾಜಕುಮಾರನ ಅವಯವಸೌಷ್ಟವಮಂ ನೋಡಿ ವಿಸ್ಮಯಯುಕ್ತಳಾಗಿ ಮನಸ್ಸಮಾಧಾನಮಂ ಮಾಡಿ, ಕೈಮುಗಿದೆದುರ್ಗೆನಿಂದಿರಲು. ಸಹಸ್ರಾಯುವು ದೇವಮಾನಿನಿಯು ತನ್ನೆಡೆಗೆ ಬಂದು ಶರಣಾಗತಳಾಗುವದಕ್ಕೆ ಕಾರಣವೇನೆಂದು ಯೋಚಿಸಿ ಕೇಳಿ ತಿಳಿಯುವೆನೆಂದು, ಆ ಸುಪ್ರಭೆಯಂಕುರಿತು ನೀನ್ಯಾರು; ಎಲ್ಲಿಂದ ಬಂದೆ, ಎನಗ್ಯಾಕೆ ವಂದನೆಯಂಮಾಡುವೆ, ತನ್ನಿಂದ ನಿನಿಗಾಗುವ ಕಾರ್ಯವೇನದಂ ತಥ್ಯವಾಗಿ ಪೇಳೆಂದೆನಲು. ಆ ಕನ್ನೆಯು ಪುನಶ್ಚ ವಂದನೆಯಂಮಾಡಿ, ತನ್ನ ಯಾವದ್ವೃತ್ತಾಂತಮಂ ವಿಸ್ತಾರವಾಗಿ ಪೇಳಿ, ಬಹುಮಾತಿನಿಂದೇನು; ಎನ್ನ ಪಾಣಿಗ್ರಹಣವಂಮಾಡಿ, ನನ್ನನುದ್ಧಾರವಂ ಮಾಡಬೇಕೆಂದು ವಿಜ್ಞಾಪನೆಯಂಮಾಡಲು. ಸಹಸ್ರಾಯುವಾದರಪುರಸ್ಸರವಾಗಿ ಕೇಳಿ, ಆ ಕನ್ನೆಯಂಕುರಿತು ಕರಗ್ರಹಣಮಂಮಾಡುವಕಾರ್ಯವದಂತಿರಲಿ, ನಿನ್ನ ಶತ್ರುವಂನಿಗ್ರಹಮಾಡಿ, ರಾಜ್ಯಮಂ ನಿನ್ನ ಸ್ವಾಧೀನಮಂ ಮಾಡಿಕೊಡುವೆನೆಂದು ತಿಳುಹಲು. ಸುಪ್ರಭೆಯದಂಕೇಳಿ, ಶತ್ರುನಿಗ್ರಹದಿಂದ ತಮಗಾಗುವದೇನು, ರಾಜ್ಯಲಕ್ಷ್ಮಿಯು ಮಾನಿನಿಯರಿಗವಶ್ಯಕವಲ್ಲ, ರಾಜ್ಯಾಭಿಷೇಕವೆನಗೆ ಸಲ್ಲದು, ತನ್ನ ಕರಗ್ರಹಣಮಂ ನೀನುಮಾಡಿದಡೆ ಅದುವೇ ತನಗಮೃತಾಭಿಷೇಕವೆಂದು ನುಡಿಯಲು. ಸಹಸ್ರಾಯುವದಂ ಕೇಳಿ, ಸುಪ್ರಭೆಯಂ ಕುರಿತು, ಎಲೈ ಮಾನಿನೀರತ್ನವೆ! ಕೇಳು, ತಾನು ಗುರುಕಾ

ರ್ಥಾರ್ಥವಾಗಿ ರಾಜ್ಯ, ಕೋಶ, ಜನನಿ, ಜನಕ, ಪತ್ನಿ, ಪುತ್ರರೆಲ್ಲರಂ ಬಿಟ್ಟು ಬಂದಿರುವೆ. ತಾನು ಬಹು ಪತ್ನೀಕನದರಿಂದಲೆನ್ನ ಪಾಣಿಗ್ರಹಣವಂ ಮಾಡೆ ನಿನಿಗೆ ಸುಖವೇನಹುದು, ತಾನು ಪಾಣಿಗ್ರಹಣವಂ ಮಾಡುವೆನ ದೆಂತು, ವೃಥಾ ಮೋಹಿಸಬ್ಯಾಡ, ತಾನಾಡಿದಂತೆ ಅಂಗೀಕಾರವಂ ಮಾಡಿ ದೆಯಾದೊಡೆ, ನಿನ್ನ ಶತ್ರುಗಳಂ ಸಂಹರಿಸಿ, ರಾಜ್ಯವಂ ನಿರುಪಾಧಿಕವ ಮಾಡಿಕೊಡುವೆನೆಂದು ನುಡಿದು, ನಿನಿಗೆ ಸಮ್ಮತವಿಲ್ಲದಿರೆ, ಬಂದಂತೆ ಪೋ ಗೆಂದು ನುಡಿಯಲು. ಸುಪ್ರಭೆಯಾನುಡಿಯಂ ಕೇಳಿ. ನಿಷ್ಪ್ರಭೆಯಾಗಿ, ಮ ರವೇರಿಕೈಬಿಟ್ಟಂತೆ ಮೂರ್ಛಿತಳಾಗಿ, ಬಿಟ್ಟು ಪೋಗುವನೋ ಏನೋಎಂ ದು ಭಯದಿಂದಲೆಚ್ಚೆತ್ತು, ಸಹಸ್ರಾಯುವಿನ ಚರಣವಂ ಪಿಡಿದು,ತನ್ನದುಃ ಖವಂ ವಿಸ್ತಾರವಾಗಿ ಬಿನ್ನಹವ ಮಾಡಿ, ತನ್ನನುದ್ಧಾರವಂಮಾಡುವದು, ಅದು ಮನಕ್ಕೆ ಬಾರದಿರೆ ಖಡ್ಗದಿಂ ಸಂಹರಿಸಿ ಪೋಗುವದೆಂದು ಗದ್ಗದಸ್ವರ ದಿಂದ ನುಡಿದು ಕಂಬನಿಗರೆಯಲು, ಸಹಸ್ರಾಯುವಾಕೆಯ ದುಃಖವಂ ನೋಡಿ ಸಹನಮಾಡಲಾರದೆ, ಪರಮದಯಾಶಾಲಿಯಾದಕಾರಣ ತದೀಯ ಯವ್ವನ ಸೌಂದರ್ಯದಿಂದಪಹೃತಚಿತ್ತನಾಗಿ ಕರವಂ ಪಿಡಿದೆತ್ತಿ, ನಿನ ಮನೋರಥಪೂರ್ತಿಮಾಡುವೆನೆಂದು ಗೃದ್ಧ್ರೋಕ್ತ ಕಥೆಯಂ ನೆನದು, ಪತಿವ್ರತೆಯೆಂದು ನಿಶ್ಚಯವಮಾಡಿ ಅಭಯವನೀಯಲು. ಸುಪ್ರಭೆಯು ಪರ ಮಸಂತೋಷಯುಕ್ತಳಾಗಿ, ವಿಮಾನದೊಳು ತಮ್ಮ ಜನನಿ ಇರುವಳೆಂ ದು ಬಿನ್ನಹವಮಾಡಲು. ಸಹಸ್ರಾಯುವಾಕೆಯಕರವಂಪಿಡಿದಿರ್ವರೂ ವಿಮಾ ನವಂ ಪೊಕ್ಕು, ಆಕೆಯನುಮತಿಯಿಂದ ಗಾಂಧರ್ವವಿಧಿಯಿಂ ಸುಪ್ರಭೆ ಯಕರಗ್ರಹಣವಂಮಾಡಿ, ತ್ರಿರಾತ್ರಿಯಾನದಲ್ಲಿ ರಮಿಸುತ್ತಲಿದ್ದು, ಅನಂ ತರದೊಳಾಧೇನುಸಹಿತವಾಗಿ ವಿಮಾನವೋಳ್ಕುಳಿತು,ಕಿಂಪುರುಷಖಂಡ ಮಂನೈದಿ, ಗಜಪುರಿ ಮಧ್ಯಭಾಗದಲ್ಲಿನಿಂದು, ಪುರದವಿಸ್ತಾರವಂ ನೋಡುತ್ತಿರಲು.

ಮದಕರಿಯಂತೆ ಪಿಶಾಚಸ್ತ್ರೂಉಳ್ಳವನಾಗಿ ರುರು ಎಂಬ ರಾಕ್ಷಸನು ಅನುಜರೇ ಮೊದಲಾದ ಸರ್ವಾಧಿಕಾರಿಗಳಿಂದ ಸೇವ್ಯಮಾನನಾಗಿ, ರಾಜ್ಯ ಭಾರವಂಮಾಡುತಿರಲು. ಚಾರರು ಆ ದಿವ್ಯವಿಮಾನವಂಕಂಡು ಜವದಿಂದ

ಸಿಂಹಾಸನಾರೂಢನಾಗಿರುವ ರುರುವಿಂಗೆ ವಿಜ್ಞಾಪನೆಯಂ ಮಾಡಲು. ರುರುವು ತಾನು ಸಮಸ್ತವಿಭವದಿಂ ಬಂದುನೋಡಿ, ಅತ್ಯಂತಪ್ರಕಾಶಮಾನವಾಗಿ ನಿಂದಿರುವ ವಿಮಾನಮಂ ಕಂಡು, ದೇವತೆಗಳ್ಯಾರೋ ತಮ್ಮ ರಂಧ್ರವಂ ನೋಡಿರುವರೇ ಬಂದಿರುವರೆಂದು ಯೋಚಿಸಿ, ಕಸೀಯುಸನಾದ ಕುಕ್ಕುರನಂ ಕರದು ಸಾಯುಧನಾಗಿ ಬಂದಿರುವರಂ ನೋಡಿಬಾರೆಂದು ಕಳುಹಲು. ಆ ಕಾಮಚಾರಿಯಾದ ಕುಕ್ಕುರನು ಆಯುಧಪಾಣಿಯಾಗಿ ಅಂತರಿಕ್ಷಮಾರ್ಗವನೇರಿ, ವಿಮಾನಾರೂಢನಾಗಿರುವ ಸಹಸ್ರಾಯುವಂ ಕಂಡು, ಸಂತೋಷಯುಕ್ತನಾಗಿ, ತಾನಾಗಿ ಸ್ವಸ್ಥಾನಕ್ಕೆ ಓರ್ವನೇ ಬಂದಿರುವನಾದಕಾರಣ ತಾವಾರ್ವರೊಂದಾಗಿ ಸೇನಾಸಹಿತರಾಗಿ, ಶತ್ರುನಿಕ್ಷೇಪವಂ ಮಾಡಬೇಕೆಂದು ಮನದಿ ನಿಶ್ಚಯಮಾಡಿ, ಅರಿಯದವನಂತೆ ರಾಜಕುಮಾರನಂ ಕುರಿತು ನೀನ್ಯಾರೆಂದು ಕೇಳಲು, ಸಹಸ್ರಾಯುವು ಎದುರ್ಗೆ ನಿಂದಿರುವ ಕುಕ್ಕುರನಂ ನೋಡಿ, ಆ ದಿತಿಜಾತನಂ ಕುರಿತು ಎಲಾ ದುರಾತ್ಮನೆ? ಕೇಳು, ಜಂಬೂದ್ವೀಪಮಂ ಬಿಟ್ಟು ಪೋಗುವೆವೆಂದು ಪ್ರಯಾಣವಂ ಮಾಡಿ, ನೈಮಿಷಾರಣ್ಯವುಂ ಬಿಟ್ಟು ಖಂಡಾಂತರದೊಳ್ ವಾಸಮಾಡಿರುವ ನಿಮ್ಮ ಶಿರಗಳಂ ಚಂಡಾಡುವರೇ ಬಂದಿರುವ ಸಹಸ್ರಾಯುವಂ ಮರತೆಯಾ, ನಿನ್ನ ಕರ್ಣನಾಸಾದಿಗಳ ನೆನದು ನೆನದು ಮಾತಾಡೆಂದು ಸಿಂಹನಾದವಂ ಮಾಡಲು. ಕುಕ್ಕುರನದಂ ಕೇಳಿ, ಕ್ರೋಧಮೂರ್ಛಿತನಾಗಿ, ಎಲಾ ಕ್ಷತ್ರಿಯಡಿಂಭನೆ; ಕೇಳು, ಓರ್ವನಾಗಿದ್ದವನಂ ಜಯಿಸಿದೆನೆಂಬ ಗರ್ವದಿಂ ನುಡಿಯದಿರು, ಇಂದೆಮ್ಮ ಪರಾಕ್ರಮವಂ ನೋಡೆಂದು ಧನುರ್ಜ್ಯಾನಾದವಂ ಮಾಡಿ, ನಿಶಿತಶಿಲೀಮುಖದಿಂದೆಸೆಯಲಾ ಬಾಣಮಂ ನೋಡಿ ವಿಸ್ಮಿತನಾಗಿ, ನಿಜಚಾಪಮಂ ನೆತ್ತಿ ಜ್ಯಾನಾದವುಂ ಮಾಡಲು, ಸಮಸ್ತನಗರಿವಾಸಿಗಳು ತ್ರಸ್ತಹೃದಯರಾಗಿ, ವಿಮಾನವಂ ನೋಡಿ ಪರಿಧ್ವಜನ ವಿಮಾನದಂತಿದೇನೋ ಕಾರಣವೆಂದು ನಡುಗುತ್ತಿರಲು. ರಾಜಕುಮಾರನು ಶರಮಂ ಪೂಡಿ ಎಲಾ ಕುಕ್ಕುರನೆ ನೋಡು, ಈ ಬಾಣಮಂ ತರಪರಿಶಿಕೋ ಎಂದು ಬಿಡಲು. ತಚ್ಚಾಪಚ್ಯುತನಿಶಿತಶಿಲೀಮುಖದಿಂ ಭಿನ್ನಹೃದಯನಾಗಿ ಮೂರ್ಛೆಯಿಂ ಮೈಮರೆದು, ನಗರದಬೀದಿಯೊಳು ಮೃತಪ್ರಾಯನಾಗಿ ಬಂದುಬೀಳಲು. ರುರುವದಂ ಕಂಡು ದುಃ

ಖಪೀಡಿತನಾಗಿ, ಆಸ್ಥಾನಮಂಬಿಟ್ಟೋಡಿಬಂದು ಕುಕ್ಕುರನಂಕಂಡು ಮೂರ್ಛಿತನಾಗಿರುವದಂನೋಡಿ, ಸ್ವಗೃಹಕ್ಕೆ ತಂದು ಶೈತ್ಯೋಪಚಾರವಂ ಮಾಡಿ, ಹೃದಯದೊಳ್ಮಡಿರುವ ಶರಮಂಕಿತ್ತು, ತೊಳದೌಷಧಿಗಳಂ ಹಾಕಲಾ ಕುಕ್ಕುರನು ಆಶ್ವಾಸಿತಪ್ರಾಣನಾಗಿ ಕಂದೆರದು ರುರುವಂನೋಡಿ, ಸಹಸ್ರಾಯುವು ಬಂದಿರುವನೆಂದು ಪೇಳಲು, ರುರುವದಂಕೇಳಿ ಕ್ರೋಧ ಮೂರ್ಛಿತನಾಗಿ, ವಿವೇಕಿಯಾದೊಡೆಯು, ಪ್ರಭುತ್ವಮದದಿಂದ ಮುಂದುಗಾಣದೆ, ಅರುಮಂದೀ ಸಹಜಾತರೂ ಕೂಡಿ, ಮಂತ್ರಾಲೋಚನೆಯಂ ಮಾಡಿ, ಸರ್ವಸಾಹಸದಿಂದಲೂ ಸಹಸ್ರಾಯುವಂಕೊಲ್ಲಬೇಕೆಂಬರ್ಥವಂ ನಿಶ್ಚೈಶಿ, ಆರ್ವರೂ ಮಿಂದುಭೋಜನವಂಮಾಡಿ, ರಕ್ತಾಹಾರದಿಂ, ಮದ್ಯಪಾನದಿಂ, ಮಾಂಸಭಕ್ಷಣೆಯಿಂದುನ್ಮತ್ತರೋಪಾದಿಯಲ್ಲಿ ಕವಚ, ಕಿರೀಟ, ಕುಂಡಲಗಳಿಂದಲಂಕೃತರಾಗಿ, ರಕ್ತವಸ್ತ್ರಗಳನ್ನುಟ್ಟು, ರಕ್ತಮಾಲ್ಯಗಳಧರಿಶಿ, ದಿವ್ಯಶಸ್ತ್ರಾಸ್ತ್ರಭರಿತವಾದ ಸ್ಯಂದನಂಗಳನೇರಿ, ಯುದ್ಧಾರ್ಥವಾಗಿ ಪೊರಮಟ್ಟು ಗಗನಮಂನೇರಲು. ಪುರಜನರು ಮಹಾಘೋರರೂಪಿಗಳಾದ, ಈ ರಾಕ್ಷಸಬಾಧೆ ಎಂದಿಗೆ ನಿವರ್ತಿಯಾಧೀತೋ ಎಂದು ಪರಮೇಶ್ವರನ ಬೇಡಿಕೊಳ್ಳುತ್ತಿರಲು. ಏರಿ ವಿಮಾನಕ್ಕೆ ಪೂರ್ವಪಶ್ಚಿಮಗಳಲ್ಲಿ ನಾಲ್ವರು, ದಕ್ಷಿಣೋತ್ತರಗಳಲ್ಲಿ ಈರ್ವರು, ಇಂತು ಸಹಸ್ರಾಯುವಿನ ವಿಮಾನಮಂಸುತ್ತಿ, ಧನುರ್ಬಾಣಮಂನೆತ್ತಿ ರುರುವೆಂಬದೈತ್ಯನು ಸಹಸ್ರಾಯುವಂಕುರಿತು, ಎಲಾದುರಾತ್ಮನಾದ ನರಾಧಮನೇ! ಕೇಳು, ನಮ್ಮಾರ್ವರಂಜಯಿಶಿದೆನೆಂಬಹಂಕಾರದಿಂ ಹೇಸುವರೆ, ನಾವಿರುವಲ್ಲಿಬಂದೆಯಾ, ಆದರೇನಾಯ್ತು, ಓಡಿಪೋಗದೆ ಕ್ಷಣಾರ್ಧನಿಂದೆಯಾದೊಡೆ ಯಮಾಲಯಕ್ಕೆ ಕಳುಹುವೆವು, ತಮ್ಮಸಾಹಸವನೋಡೆಂದು ಬೊಬ್ಬಿರಿದು, ಬ್ಯಾರೆಬ್ಯಾರೆ ಪೃಥಕ್ ಪೃಥಕ್ಕಾಗಿ ನಿನ್ನೊಡನೆ ಸಂಘಶಿದೆವಾದಕಾರಣ ನಿನ್ನಿಂದ ಪರಾಜಯವನ್ನೈದಿದೆವು. ಇಂದಾರ್ವರೊಂದೆಡೆಯೊಳಿರುವಲ್ಲಿ ದೈವವಶದಿಂದ ಮೃತ್ಯುವನರಸಿ ಬಂದಂತೆ ಬಂದೆ, ನಿನ್ನಸುವನೀಗುವೆನು ನೋಡೆಂದು ಪರಿಘಾಯುಧವಂ ತೆಗೆದು ವಾಮಕರದಿಂದ ತೂಗಿಬಿಡಲು. ಮಿಗಿಲಾದ ಐವರೂ ನಾನಾವಿಧದುರುಕ್ತಿಗಳಿಂದ ಚಾಪವಂ ಪಿಡಿದು ಯುಗಪದ್ಬಾ

ಣಪರಂಪರೆಗಳಂ ವರ್ಷಿಸಲು. ಸಹಸ್ರಾಯುವು ಕ್ರೋಧಪರವಶನಾಗಿ, ಇ
ವರ್ವರಿಂಗೆ ಸಮಕಾಲದಲ್ಲಿ ಮರಣವಾಗಲೆಂದು ಕಣಾದನಿತ್ತ ಶಾಪವೃ
ತ್ತಾಂತಮನರಿಯರೀದುರ್ಭಾಗರೆಂದು ತಿಳಿದು, ಪರಿಘಾಯುಧಮಂ ಮೂರು
ಬಾಣದಿಂ ಖಂಡಿಸಿ, ಮಿಗಿಲಾದ ಐವರು ಪ್ರಯೋಗಮಾಡಿದ ಬಾಣವೃಷ್ಟಿ
ಯಂ ಕಡಿದು, ತಾನು ಬಾಣಮಂ ವರ್ಷಿಸಲು. ಅವರದಂಕಡಿದು, ಶಸ್ತ್ರಾ
ಸ್ತ್ರಪ್ರಯೋಗಮಂ ಮಾಡಲು. ಇಂದು ದೈತ್ಯರೊಡನೆ ಒರ್ವನೇ ಯು
ದ್ಧಮಾಡುವ ರಾಜಕುಮಾರನಂ ಜಯಲಕ್ಷ್ಮಿ ನೋಡುವಂತೆ ಸುಪ್ರಭೆಯು
ವಿಮಾನದೊಳು ಪ್ರಚ್ಛನ್ನಳಾಗಿ ಕುಳಿತು ನೋಡುತಿರಲು. ಮೂರುದಿನದ
ಹೋರಾತ್ರಿ, ಯುದ್ಧಮಂ ಮಾಡಿ, ಸುಪ್ರಭೆಯು ಮರುಗುವಳಿನ್ನು ಸಾವಕಾ
ಶಮಂ ಮಾಡಬಾರದೆಂದು, ಪಾರ್ವತೀಪ್ರಸಾದದಿಂ ಲಬ್ಧವಾದ ದಿವ್ಯಾಸ್ತ್ರ
ಮಂ ಪೂಡಿ ಬಿಡಲು. ಆ ಮಹಾಸ್ತ್ರವು ಕಾಲಾಗ್ನಿಯಂತೆ ಜ್ವಲಿಸುತ್ತ ಆರ್ವ
ರನ್ನೇಕಕಾಲದಲ್ಲಿ ದಹಿಸಿಬಿಡುವಂತೆ ಬಂದು, ಆರುಮಂದಿಯೂಪ್ರಯೋ
ಗಮಾಡುವ ಶಸ್ತ್ರಗಳಂ ನುಂಗಿ, ಆರುಮಂದಿ ದೈತ್ಯರ ಶಿರಗಳಂ ಕಚ್ಚಿ
ಕೆಡಹಿ, ಪುನಶ್ಚ ನಿಷಂಗಮನ್ನೈದಲು. ಸಹಸ್ರಾಯುವು ಸತ್ವರದೊಳಾರ್ವರ ಶ
ರೀರಗಳು ನಗರದಮೇಲೆಬಿದ್ದರೆ ನಾಗರಿಕರು, ನಗರಪ್ರದೇಶಸಹಿತನಾಶಮ
ನೈದುವರೆಂದು ಐಂದ್ರಾಸ್ತ್ರಪ್ರಯೋಗಮಂ ಮಾಡಲು. ಆ ದಿವ್ಯಾಸ್ತ್ರವು
ದೈತ್ಯರ ಶರೀರಮಂ ಕಚ್ಚಿ ಪುರಾದ್ಬಹಿರ್ಭಾಗದಲ್ಲಿ ಕೆಡಹಲು. ದೈತ್ಯಮಾ
ನುಷರ ಯುದ್ಧಮಂ ನೋಡಬೇಕೆಂದು ಸಮಸ್ತವೈಮಾನಿಕರು ಅಂತರಿಕ್ಷ
ದೊಳು ನೋಡುತ್ತಲಿದ್ದು, ಸಹಸ್ರಾಯುವಿನ ಸಾಹಸವನೋಡಿ ವಿಸ್ಮಿತ
ರಾಗಿ. ಸಾಕ್ಷಾತ್ ಅಭಿನವಸವ್ಯಸಾಚಿಯೆಂದು ಪೊಗಳಿ, ಪುಷ್ಪವೃಷ್ಟಿಯಂ ಕ
ರೆದು, ನಿಜಸ್ಥಾನಮಂ ಕುರಿತು ನಡೆಯಲು. ಸಹಸ್ರಾಯುವು ವಿಮಾನಸಹಿ
ತನಾಗಿ ರಾಜಾಲಯದ ಪುರೋಭಾಗದೊಳು ಇಳಿದು, ಪುರದ ಸೌಭಾಗ್ಯಮಂ
ನೋಡಿ, ಮೃತಪ್ರಾಯರಾಗಿದ್ದ ಅಮಾತ್ಯರೇ ಮೊದಲಾದ ಸಕಲ ಅಧಿಕಾ
ರಿಗಳಂ ಕರೆಸಲು. ಆ ನಗರವಾಸಿಗಳು, ಮೂರುದಿನದಹೋರಾತ್ರಿ ಕಾಮ
ಚಾರಿಗಳಾದ, ನಕ್ತಂಚರರೊಡನೆ ಯುದ್ಧಮಂಮಾಡಿ, ಆರುಮಂದಿಯನ್ನು
ಏಕಕಾಲದಲ್ಲಿ ಸಂಹಾರಮಂ ಮಾಡಿ ಪುರಪಥ್ಯದಲ್ಲಿ ವಿಮಾನಸಹಿತನಾಗಿ

ಇಳಿದುದಂ ಕಂಡು, ಸಾಕ್ಷಾದ್ದೇವೇಶನೇ ಇವನೆಂದು ನಿಶ್ಚಯುವಂ ಮಾಡಿ, ತತ್ಸವಿಾಪದೊಳು ಶಿರವಂ ತಗ್ಗಿಸಿ ನಿಂದಿರುವಸುಪ್ರಭೆಯಂ ಕಂಡು ಪರಮ ವಿಸ್ಮಯುವನೈದಿ, ಕಾಂತೆಗನುರೂಪನಾದ ಪತಿಯೇ ದೊರಕಿದನೇನುಪು ಣ್ಯವೋ! ಎಂದು ಮಾತನಾಡುತ್ತ ಬಂದು ಸಮಸ್ತಪುರಜನರು ಸವಿಾಪವ ನೈದಿ ವಂದನೆಯಂ ಮಾಡಿ, ಬಹುಪ್ರಕಾರ ಸ್ತುತಿಯಂ ಮಾಡಿ, ರಾಕ್ಷಸಬಾ ಧೆಯಿಂ ತಪ್ಪುದೆಂಬುದದಂತಿರಲಿ, ಲೋಕೋತ್ತಮನಾದ ನಿನ್ನ ಚರ ಣಕಮಲದರ್ಶನವಾದುದರಿಂದ ಎಮ್ಮ ಸುಕೃತಕ್ಕೆಣೆಯಿಲ್ಲವೆಂದು ಬಹುಪ್ರ ಕಾರ ಕೊಂಡಾಡುವ ಸಮಸ್ತನಾಗರಿಕಜನರಿಂಗೆ ಅಭಯುವಂ ಕೊಟ್ಟು, ಸುಖ ದಿಂದಿರುವುದೆಂದು ಅಪ್ಪಣೆಯನೀಯಲು. ಅಮಾತ್ಯರೇ ಮೊದಲಾದ ಸಕಲಾ ಧಿಕಾರಿಗಳು ಬಂದು ವಂದನೆಯಂ ಮಾಡಿ ಅಂಜಲಿಬದ್ಧರಾಗೆದುರ್ಗೆ ನಿಂದಿರ ಲು. ಸಹಸ್ರಾಯುವು ದೈತ್ಯ್ಯವಾಸದಿ ದೂಷಿತವಾದ ರಾಜಾಗಾರಮಂ ಪರಿ ಶೋಧಿಸಿ, ಶುದ್ಧಿಯಂ ಮಾಡಿ, ಲೇಪನ ಪೂರಣತೋರಣಾದಿಗಳಿಂದಲಂಕೃತ ವ ಮಾಡುವುದೆಂದು ಶಿಲ್ಪಿಗಳಂ ಕರಸಿ ಕಟ್ಟಲೆಯಂ ಮಾಡಿ, ರಾಜಾಸ್ಥಾನವಂ ಟವದಲ್ಲಿ ಕುಳಿತು ಅವರವರ ವಿದ್ಯಮಾನವಂ ವಿಚಾರಿಸಿ ಮನಕೆತಂದು, ಅನಿತರೊಳು ಸುಮುಹೂರ್ತದೊಳು ಅಲಂಕೃತವಾದ ರಾಜಾವಸಥಪ್ರವೇ ಶವಂ ಮಾಡಿ ಸುಧಾಲೇಪದಿಂ ಮಂಗಳಕರವಾದ ಭಿತ್ತಿಗಳಿಂದ, ಗೋಮ ಯಾದಿಗಳಿಂದ ಪರಿಶುದ್ಧವಾದ ಸ್ಥಳಗಳಿಂದ, ಕನಕತೋರಣಗಳಿಂದ, ಕದ ಳೀಸ್ತಂಭದೀಪಗಳಿಂದ ಅತ್ಯಂತ ಪ್ರಕಾಶವಾಗಿರುವ ರಾಜಭವನಮಂ ನೋ ಡಿ ಸಂತೋಷಚಿತ್ತನಾಗಿ, ಆರಾತ್ರಿ ಸ್ನಾನಭೋಜನಾದಿಗಳಂ ಮಾಡಿ, ಸು ಪ್ರಭೆಯಿಂದೊಡಗೂಡಿ ಶಯ್ಯಾಲಯಮನೈದಿ ಸುಖದಿಂದಿದ್ದು, ರವಿಯುದ ಯವಾಗಲು ಎದ್ದು ಸ್ನಾನಸಂಧ್ಯಾವಂದನೆ ಮೊದಲಾದ ನಿಯಮಂಗಳನಾಚ ರಿಸಿ ದೇವತಾರಾಧನೆಯಂ ಮಾಡಿ, ನಿತ್ಯದಾನವನಿತ್ತು, ಸರ್ವಾಭರಣಭೂಷಿ ತನಾಗಿ ಅಲಂಕಾರದಿಂ ಶೋಭಿತವಾದ ಸಭಾಸ್ಥಾನಮಂ ಪೊಕ್ಕು, ರತ್ನಖಚಿ ತಸಿಂಹಾಸನಾರೂಢನಾಗಿ, ಸಮಸ್ತಗತಾಧಿಕಾರಿಗಳಂ ಕರಸಿ ಅವರವರ ಯೋಗ್ಯತಾ, ಕ್ರಿಯಾ, ಕುಲ, ಶೀಲ ಸ್ವಭಾವ ಚಾತುರ್ಯ ನಿರ್ವಾಹಸ್ಥೈ ರ್ಯ ಧೈರ್ಯಾದಿಗಳಂ ನೋಡಿ ಅವರವರ ಪೂರ್ವಾಪರಮಂ ವಿಚಾರಿಸಿ

ವಸ್ತ್ರಾಭರಣಗಳಂ ತಾರತಮ್ಯಾನುಸಾರವಾಗಿ ಇತ್ತು, ಸುಪ್ರಭಾನುಮತಿಯಿಂದ ಅವರವರ ಅಧಿಕಾರಸ್ಥರಾಗಿರುವಂತೆ ಕಟ್ಟಳೆಯಂ ಮಾಡಿ, ಭೂಸುರೋತ್ತಮರಂ ಕರೆದು ಸಿಂಹಾಸನಂಗಳನಿತ್ತು; ವಸ್ತ್ರಾಭರಣಗಳಂ ಸತ್ಕರಿಸಿ ವಿನಯಮಧುರೋಕ್ತಿಯಿಂ ವಿವಾಹಲಗ್ನವಂ ಸವಿಸ್ತಾರವಲ್ಲ ತ್ವರೆಯಿಂದ ಮಾಡಿಕೊಡಬೇಕೆಂದು ಕೇಳಲು. ಆ ಭೂಸುರೋತ್ತಮರು ಸಹಸ್ರಾಯುವಿನ ಸವಿನಯಮಾಧುರ್ಯಗಾಂಭೀರ್ಯ ಸೌಂದರ್ಯ ಮೊದಲಾದ ಮಹಾಗುಣಗಳಂ ನೋಡಿ, ಮಾನುಷನಲ್ಲ, ದೇವಾಂಶನೆಂದು ನಿಶ್ಚಯವ ಮಾಡಿ, ಪರಮಸಂತೋಷದಿಂ ತಮ್ಮ ಸುಕೃತಕ್ಕೆಣೆಯಿಲ್ಲವೆಂದು ಪರಮಾನಂದ ಭರಿತರಾಗಿ, ತತ್ಕ್ಷಣದೊಳೆಲ್ಲರೊಂದಾಗಿ ಲಗ್ನವಂ ನೋಡಿ, ಗ್ರಹಭಾವ, ಬಲಾಬಲ, ದೋಷಾದೋಷ, ಪಂಚಕ, ತಾರೇಂದು ಬಲಾದಿಗಳಪರಿಶೋಧನೆಯಂ ಮಾಡಿ, ವಿವಾಹಲಗ್ನವಂ ನಿಶ್ಚೈಸಿ ಪೇಳಲು ಅದಂ ಕೇಳಿ ಅಮಾತ್ಯರೇ ಮೊದಲಾದ ಸಮಸ್ತ ಅಧಿಕಾರಿಗಳಂ ಕರದು ದಿನತ್ರಯದಲ್ಲಿ ನಗರಾಲಂಕಾರವೊದಲಾದ ಸರ್ವವಿವಾಹಸನ್ನಾಹವಂ ಮಾಡುವುದೆಂದು ಅಪ್ಪಣೆಯಿತ್ತು ಅಂತಃಪುರವಂ ಪೊಕ್ಕು ಸುಖದಿಂದಿದ್ದು, ಮರುದಿವಸ ಮಂಗಳಸ್ನಾನ ಮೊದಲಾದ ಶುಭಾರಂಭವಂ ಮಾಡಿ, ವಿವಾಹಕ್ಕೆ ಬರತಕ್ಕ ಸಮಸ್ತ ಜನರಂ ಕರಸಿ ಮಂಟಪಾಲಂಕಾರವಂ ಮಾಡಿ ಶುಭಮುಹೂರ್ತ ಶುಭಲಗ್ನದಲ್ಲಿ ವಿವಾಹಾರಂಭವಂಮಾಡಿ ವೈದಿಕೋಕ್ತವಿಧಿಯಿಂದ ಸುಪ್ರಭಾಕರಗ್ರಹಣವಂಮಾಡಿ ಸಪ್ತಪದ್ಯನಂತರದಲ್ಲಿ ಭೂಸುರರಿಗೆ ಯಥೇಷ್ಟ ಭೂರಿದಕ್ಷಿಣೆಯನಿತ್ತು ಭೂದೇವತೆಗಳಿಗೆಸಮಾರಾಧನೆಯಂಮಾಡಿ ದಿವ್ಯಷಡ್ರಸೋಪೇತ ಭೋಜನವಂಮಾಡಿಸಿ ಸ್ವಜನಾಮಾತ್ಯರೇ ಮೊದಲಾದ ಸಮಸ್ತಜನರಿಗೂ ಯಥಾಯೋಗ್ಯವಾಗಿ ಬಹುಮಾನವಂಮಾಡಿ ತಾನು ಸ್ವಜನರಿಂದೊಡಗೂಡಿ ಭೋಜನವಂಮಾಡಿಆರಾತ್ರಿ ಶಯನಾಲಯವಂ ಮುಕ್ತಾರತ್ನನಿಕರಗಳಿಂದ ಅಲಂಕಾರಮಾಡಲು. ರತ್ಯುಪಯುಕ್ತಸ್ರಕ್ಚಂದನ ತಾಂಬೂಲಾದಿ ದ್ರವ್ಯಸಮಾಜದಿಂ ಸಂಪೂರ್ಣವಾದ ಶಯನಾಗಾರವಂ ಸಭಾಸಮ್ಮತಿಯಿಂದ ದಂಪತಿಗಳೀರ್ವರೂ ಪ್ರವೇಶವಂ ಮಾಡಿ, ಪರಸ್ಪರ ನಿರಂತರಾನುರಾಗದಿಂ ಕ್ರೀಡಿಸಿ ರತ್ಯಾಂತರ ವಿಶ್ರಾಂತರಾಗಿ ಸುಖ

ನಿದ್ರೆಯಂ ಮಾಡಿ ಅರುಣೋದಯದೊಳೆದ್ದು ಸ್ನಾನಮೊದಲಾದ ನಿಖಿಲನಿತ್ಯನಿಯಮಾದಿಗಳನಾಚರಿಸಿ ಸಾಲಂಕೃತನಾಗಿ ಸಭಾಮಂಟಪಮಂ ನೈದಿ ವಿವಾಹಾರ್ಥವಾಗಿ ಬಂದಿರ್ದವರ್ಗೆ ಯಥೋಚಿತಸನ್ಮಾನಮಂ ಮಾಡಿ ಅವರವರ್ಗೆ ಅಪ್ಪಣೆಯಿತ್ತು ಈರೀತಿ ಇಂದ ಸುಪ್ರಭಾಕರಗ್ರಹಣಂ ಮಾಡಿ. ತರುವಾಯ ಧರ್ಮತತ್ಪರನಾಗಿ ರಾಜ್ಯಮಂ ಪರಿಪಾಲಿಸುತ್ತಿರಲು. ತದ್ದೇಶವಾಸಿಗಳಾಗಿರುವ ಭೂದೇವತೆಗಳೇ ಮೊದಲಾದ ಸಮಸ್ತ ಪ್ರಜೆಗಳು ಸ್ವರ್ಗವಾಸಿಗಳಂತೆ ಸರ್ವಸಮೃದ್ಧಿಯಿಂದ ಸುಖದಿಂದಿರುತ್ತಿರಲು. ಋತುಧರ್ಮಗಳು ಸಮವಾಗಿ ನಡೆದು ಸಸ್ಯಸಮೃದ್ಧಿಯಿಂ ತಿರೆಯು ಮೆರೆಯುತ್ತಿರುವುದು. ಅಪ್ರಜಾಧರ್ಮ ಪರರಾದ ಜನರೆಯಿಲ್ಲ. ಅಕಾಲ ಮರಣ ಕ್ಷುದ್ರಮೃಗಕೀಟ ಚೋರಾದಿಗಳ ಭಯವು ಪ್ರಜೆಗಳಿಗೆ ಸ್ವಪ್ನದಲ್ಲಿಯೂ ಇಲ್ಲ. ಸರ್ವಪ್ರಾಣಿಗಳು ಸಂತೋಷಚಿತ್ತರಾಗಿ ಸುಖದಿಂದಿರಲು. ದೀನದಯಾಪರನಾದ ಮಹಾರಾಜನೆ; ಸಾವಧಾನದಿಂದವಧರಿಸುವುದು ಮುಂದಿನಾಖ್ಯಾನಮಂ.

ಇತ್ತಲಾ ಮಹೋದರೀಯೆಂಬ ರಾಕ್ಷಸಿಯು ರುರುವೇ ಮೊದಲಾದ ಪುತ್ರರೆಲ್ಲರೂ ನೈಮಿಷಾರಣ್ಯಮಂ ಬಿಟ್ಟು ಪೋಗಲು. ಸಹಸ್ರಾಯುವಿನಿಂದ ಉಪಟಳಂಗರಾದ ಪುತ್ರರವಸಾನವಂ, ತದ್ವಿಯೋಗವುಂ ನೆನೆದು ಪರಮದುಃಖಿತಳಾಗಿ ಇಂತನರ್ಥಗಳು ಈ ಸತ್ಯವ್ರತನಿಂದಲೇ ಆದುದೆಂದು ಕ್ರೋಧಮೂರ್ಛಿತಳಾಗಿ, ಸರ್ವಪ್ರಯತ್ನದಿಂದಲೂ ಸತ್ಯವ್ರತನಕೊಂದು ಅನಂತರದಲ್ಲಿ ಪುತ್ರರೆಡೆಗೈದುವೆನೆಂದು ಮನದೊಳಗೆ ನಿಶ್ಚಯಮಾಡಿ, ಕಾಮರೂಪಿಯಾದ ಪ್ರಯುಕ್ತೆ ಮನೋಹರಾಕಾರವುಂ ಧರಿಶಿ ಪರಮದುಃಖಿತಳೋಪಾದಿಯಲ್ಲಿ ಸತ್ಯವ್ರತನಿರುವ ಕುಟೀರದ ಪ್ರದೇಶದಲ್ಲಿ ಬಂದು ವೃಕ್ಷಮೂಲದೊಳ್ ಕುಳಿತು ರೋದನಮಂ ಮಾಡುತ್ತಿರಲು. ಆ ರೋದನಧ್ವನಿಯನ್ನು ಸತ್ಯವ್ರತನು ಕೇಳಿ ಕಾರುಣಿಕನಾದ ಪ್ರಯುಕ್ತೆ ತತ್ಸಮೀಪಕ್ಕೆ ಬಂದು ನೀನ್ಯಾರು? ಯಾತಕ್ಕಳುವೆ ಎಂದು ಕೇಳಲು. ತಾನು ವೈಶ್ಯಸ್ತ್ರೀಪತಿಯಿಂದಕೂಡಿ ತೀರ್ಥಯಾತ್ರೆಯಂಮಾಡುತ್ತಿರಲು, ಈ ಅರಣ್ಯದೊಳೊಂದು ಪುಂಡರೀಕವು ವಂಚಿಸಿ ಪತಿಯಂ ಭಕ್ಷಿಸಲು, ತಾನು ಪ್ರಿಯೈಕ

ಶರಣಳಾಗಿದ್ದ ಪ್ರಯುಕ್ತ, ಅನಾಥಳಾಗಿ, ತಾ ತ್ರಣರಂನರಿಶಿ ಕಾಣದೆ, ಈ ವಿಪಿನದೊಳೊಂದು ಮಾಸದಿಂ ದಿಕ್ಕುಗಳಕಾಣದೆ ತಿರುಗುತ್ತಿರುವೆನೆಂದು ಪೇಳಲು, ಸತ್ಯವ್ರತನದಂ ಕೇಳಿ ಕರುಣಾರ್ದ್ರಹೃದಯನಾದಕಾರಣ ಕಟಕಟಾ? ಇಂತಪ್ಪ ದಿವ್ಯಮಾನಿನಿಗೆ ಏತಾದೃಶ ಶೋಕಪರಿತಾಪ ಬಂದುದೇ ಎಂದು ಮರುಗಿ, ತತ್ಕಾಲೋಚಿತವಾದ ಒಂದೆರಡು ನುಡಿಯುಂ ಪೇಳಿ ಸ್ವಾಶ್ರಮಾಭಿಮುಖನಾಗಲು, ಈ ಮಹೋದರಿಯು ಸತ್ಯವ್ರತನ ಪಾದಗಳಂ ಪಿಡಿದು ನಿನ್ನ ದಾಸಿಯಾಗಿರುವೆ, ತನಗನ್ನವಸ್ತ್ರಾದಿಗಳನಿತ್ತು, ಸಂರಕ್ಷಣೆಯಂ ಮಾಡಬೇಕೆಂದು ಬಹುವಿಧದಿಂದ ಬೇಡಿಕೊಳ್ಳಲು. ವ್ಯಾಧನದಂ ಕೇಳಿ ಮಹೋದರೀ ವೃತ್ತಾಂತಮಂ ನೆನೆದು, ಆ ವೈಶ್ಯಮಾನಿನಿಯಂ ಕುರಿತು-ತಾನು ಏಕಾಕಿಯು, ಈ ಮಹದ್ಗಹನದೊಳು ಕಂದಮೂಲಫಲಾದಿಗಳಿಂದ ಶರೀರಧಾರಣೆಯಂ ಮಾಡಿಕೊಂಡಿರುವೆನದರಿಂದ ತಾನೆಂತು ರಕ್ಷಿಸುವೆನೆಂದು ನುಡಿದಿಂತಲ್ಲದೆನಗೆ ನಿನ್ನಿಂದಾಗುವ ಕೃತ್ಯಮಂ ಕಾಣೆನದುಕಾರಣ? ನಿನ್ನ ರಕ್ಷಿಸಲು ಶಕ್ತರಾದವರನರಿಶಿ ಜೀವಿಸು ಹೋಗೆಂದು ನುಡಿಯಲು. ಅದಂ ಕೇಳಿ ಕಪಟರೂಪಧಾರಿಯಾದ ಮಹೋದರಿಯು ವ್ಯಾಧನಂ ಕುರಿತು ತಲೆವಾಗಿ ಎಲೈ ಮಹಾನುಭಾವನೆ? ಕೇಳು-ಬಾಲೆಯಾಗಿಯು, ಮುಗ್ಧೆಯಾಗಿಯು, ಲೋಕವ್ಯವಹಾರಾಭಿಜ್ಞಳಾಗಿಯು, ಇರುವೆನಗೆ ಶಕ್ತನಾದ ಪುರುಷನೆಂತು ದೊರಕುವನು. ಅಥವಾ ದೊರಕಿದಡೆಯುಂ, ತನ್ನ ಪಾತಿವ್ರತ್ಯ ಮೆಂತು ನಿರ್ವಹಿಸುವುದು. ಅಥವಾ ಪಾತಿವ್ರತ್ಯಕ್ಕೆ ಭಂಗಬಂದಡೆಯು, ಸ್ವಾನುರೂಪನಾಗಿರುವ ಪುರುಷನೆಂತು ದೊರೆಯುವನು. ಅದುಕಾರಣ ವ್ರತಭಂಗವಾಗದಂತೆ ನಿಮ್ಮಡಿಯಂ ಸೇವಿಶಿ ಪರಲೋಕಮಂ ಸಂಪಾದಿಸಬೇಕೆಂಬ ಕುತೂಹಲದಿಂದ ಬೇಡುವೆನೆಂದು ಕೈಮುಗಿಯಲು, ಅವಳ ದೀನೋಕ್ತಿಯಿಂ ದ್ರವೀಭೂತವಾದ ಅಂತಃಕರಣವುಳ್ಳವನಾದಕಾರಣ ತಿರಸ್ಕಾರವಂಮಾಡದೆ ಮನಬಾರದ ಸತ್ಯವ್ರತನು ಪೂರ್ವಭಯದಿಂದ ಅರ್ಧಾಂಗೀಕಾರಮಂ ಮಾಡಲು. ಆ ಮಹೋದರಿಯು ಗುಹಾದಿಬಹಿರ್ಭಾಗದಲ್ಲಿ ಸಮ್ಮಾರ್ಜನೆಯೇ ಮೊದಲಾದ ಶುಶ್ರೂಷೆಯಲ್ಲಿ ತತ್ಪರಳಾಗಿಮಾಡುತ್ತಲಿದ್ದು, ರಂಧ್ರಾನ್ವೇಷಣೆಯಂ ಮಾಡುತ್ತಲಿದ್ದಳು.

ಒಂದು ದಿನ ವ್ಯಾಧ ಪುತ್ರನು ಕಂದಮೂಲಾಹರಣಾರ್ಥವಾಗಿ ಪೋಗಿರಲು, ವ್ಯಾಧನು ಕಿಂಚಿನ್ನಿದ್ರಾವಸ್ಥೆಯನ್ನೈದಿರುವ ಸಂದರ್ಭವಂ ನೋಡಿ, ದುರ್ಭಗಳಾದ ರಕ್ಕಸಿಯು ಗುಹಾಂತರಾಳವಂ ಪೊಕ್ಕು ವ್ಯಾಧನಂ ಸಂಹರಿಸಿ ಭಕ್ಷಿಸುವೆನೆಂದುದ್ಯುಕ್ತಳಾಗಿ, ಗುಹಾಂತ ಪ್ರವೇಶವಂ ಮಾಡಿ ನೋಡಲಾಂತರಾಳವತಿಸಂಕೋಚವಾಗಿರುವುದಂ ನೋಡಿ, ಮನದೊಳಾಲೋಚನೆಯಂ ಮಾಡಿ, ಮನುಷ್ಯರೂಪದಿಂ ಸಂಹರಿಸುವವಸಾಧ್ಯ, ಬಲಾಧಿಕನಾದಪ್ರಯುಕ್ತ ನಿಜರೂಪವಂ ತಾಳಿ ಸಂಹರಿಸಲಡೆಯಿಲ್ಲ, ಏನಮಾಡುವೆನೆಂದು ತತ್ಕಾಲೋಚಿತ ಯುಕ್ತಿಯಂ ಯೋಚಿಸಿ, ಮರಣ ಸದೃಶವಾದ ಕಾರ್ಯವಂ ಮಾಡಿ ಪೋಗುವೆನೆಂದು ನಿಶ್ಚೈಸಿ, ಸ್ವಜಾತಿ ಸುಲಭವಾದ ಮಾಯಾವಿದ್ಯದಿಂ ವ್ಯಾಧನಂ ಪಾಷಾಣರೂಪವಂ ಮಾಡಿ, ಗುಹಾದ್ಬಹಿರ್ಭಾಗಕ್ಕೆ ಬರುವನಿತರೊಳು, ವ್ಯಾಧ ಪುತ್ರನು ಬಂದು ಗುಹಾದ್ವಾರದಲ್ಲಿ ದಾಸಿಯಂ ಕಾಣದೆ, ಎಲ್ಲಿಗೆ ಪೋದಳೋ ಎಂದು ಸಂಶಯದಿಂದ ಗುಹಾಂತರಾಳವಂ ಪೊಕ್ಕು, ಶಿಲಾರೂಪಿಯಾಗಿರುವ ಪಿತನಂ ಕಂಡು ಶೋಕಮೂರ್ಛಿತನಾಗಿ, ಆಹಾ; ಪ್ರಮಾದಬಂದುದೀದಾಸಿಯ ವ್ಯಾಪಾರವೇ ಇರಬಹುದೆಂದು ನಿಶ್ಚಯವ ಮಾಡಿ, ಧನುರ್ನಿಷಂಗ ಖಡ್ಗಗಳಿಂ ಸಹಿತನಾಗಿ ಜವದಿಂ ಗುಹಾದ್ಬಹಿರ್ಭಾಗಕ್ಕೆ ಬಂದು ನೋಡಲು ನಾಲ್ದೆಸೆಯಂ; ಪಶ್ಚಿಮಾಭಿಮುಖಳಾಗಿ ರಕ್ಕಸಿಯು ದಾಸೀರೂಪದಿಂದಲೇ ಮಾರ್ಗವಂ ಪಿಡಿದು ಪೋಗುತ್ತಿರುವುದಂ, ದೂರದೊಳು ಕಂಡು, ಜವದಿಂ ಬೆಂಬತ್ತಿ, ಸಮೀಪವಾಗಲು ಮೆಲ್ಲಮೆಲ್ಲನೆ ಹಿಂದಕ್ಕೆ ಪೋಗಿ, ಖಡ್ಗದಿಂ ಶಿರಚ್ಛೇದನವಂ ಮಾಡೆ ಆ ಮಹೋದರೀ ಶಿರವು ಧರೆ ನಡುಗುವಂತೆ ದೀನಸ್ವರದಿಂ ಕೂಗುತ್ತ ಗಿರಿಯಂತೆ ನೆಲಕುರುಳಲು, ವ್ಯಾಧಪುತ್ರನಾ ನವೀಯ ಕಾಯವಂ ನೋಡಿ ವಿಸ್ಮಿತನಾಗಿ ಭಯಕಲಿತಹೃದಯನಾಗಿ, ತಾನು ಬಂದಿದ್ದುದಂ ಕಂಡರೀ ಮಹೋದರಿಯು ತನ್ನಂ ಭಕ್ಷಿಸದೆ ಬಿಡಳು, ದೈವಾಧೀನದಿಂದ ಜೀವಿಸಿದೆ, ಪುನಶ್ಚ ಗುಹಾಂತರಾಳವಂ ಪೊಕ್ಕು ಪಿತನಿದ್ದೆಡೆಗೆ ಬಂದು ತಾನು ಪೋಗಿ ಬಂದ ವೃತ್ತಾಂತವಂ ಪ್ರಕೃತದಲ್ಲಿ ಮಹೋದರೀಸಂಹೃತಳಾದ ವಿದ್ಯಮಾನವಂ ವಿಜ್ಞಾಪನೆಯಮಾಡಲು, ಶಿಲಾರೂಪಿಯಾಗಿರುವ ಜನಕಸುತ್ತರವನಾಡದಿರೆ,

ಆವ್ಯಾಧಪುತ್ರನತ್ಯಂತ ದುಃಖಪೀಡಿತನಾಗಿ ಮಾತೃವಿಯೋಗವಂ ನೆನದು ಬಹುವಿಧವಾಗಿ ಮುಕ್ತಕಂಠನಾಗಿ ರೋದನವಂ ಮಾಡಲು. ಪಿತನು ತಾನಳುವದಂ ನೋಡಿ ಸಮಾಧಾನವಂ ಮಾಡದೆ ಮೌನದಿಂದಿರಲು, ತಾತನಿಂತಾದಬಳಿಕ ತಾನಿದ್ದು ಫಲವೇನೆಂದು ಸ್ವಜೀವನದಲ್ಲಿ ನಿರ್ವೇದಮಂ ನೈದಿ, ಉನ್ನತವಾದ ವೃಕ್ಷಮನೇರಿ ಬಿದ್ದು ಪ್ರಾಣವಂ ಬಿಡುವೆನೆಂದು ಮನದೊಳು ನಿಶ್ಚಯವಂ ಮಾಡಿ, ಗುಹೆಯುಂ ಬಿಟ್ಟು ಬಂದುನ್ನತವಾದ ಮಹೀರುಹದೆಡೆಗೆ ಬರುವನಿತರೊಳು; ದೈವಕೃಪೆಯಿಂದ ಪೂರ್ವಪರಿಚಿತರಾದ ಋಷಿಗಳು ನೈಮಿಷಾರಣ್ಯದೊಳು ಚಿರಕಾಲ ತಪವಂ ಮಾಡುತಿದ್ದು, ಮಹೋದರೀಪುತ್ರರಾದ ರುರುವೇ ಮೊದಲಾದ ದೈತ್ಯರಟ್ಟುಳಿಯಿಂದ ತಪ್ತರಾಗಿ, ನೈಮಿಷಾರಣ್ಯವಂ ಬಿಟ್ಟು ಮಹೇಂದ್ರಾಚಲವನಾಶ್ರೈಸಿ ಕ್ವಚಿತ್ಕಾಲ ವಾಸವಂ ಮಾಡಿ, ಮಹೋದರೀ ಪುತ್ರರು ಮೃತ್ಯುವಿನಿಂದ ಸಹಿತರಾಗಿ ಜಂಬೂದ್ವೀಪವನುಂ ಬಿಟ್ಟು, ಪೋಗಿ ಮೃತರಾದರೆಂಬ ಕಿಂವದಂತಿಯ ಕೇಳಿ ನಿಜಸ್ಥಾನಮನೈದಿ ಸುಖದಿಂ ತಪವಂ ಮಾಡುವೆವೆಂದು ಸಂತೋಷಚಿತ್ತರಾಗಿ, ಮಹೇಂದ್ರಾಚಲದಿಂದ ಪೊರಮಟ್ಟು, ನೈಮಿಷಾರಣ್ಯವಂ ಕುರಿತು ಬರುವ ಮಾರ್ಗದೊಳು ದೈವವಶದಿಂದ ವೃಕ್ಷದಡಿಯಲ್ಲಿ ಶೋಕಪರವಶನಾಗಿ ರೋದನವ ಮಾಡುತ್ತ ನಿಂದಿರುವ ವ್ಯಾಧಸುತನಾದ ಸುತೀಕ್ಷ್ಣನಂ ಕಂಡು ಸಮೀಪಕ್ಕೆ ಬಂದು ರೋದನವ ಮಾಡುತ್ತ ಮರದಡಿಯಲ್ಲಿ ನಿಂದಿರುವದಕ್ಕೆ ಕಾರಣಮೇನೋ ವಿಚಾರಿಸಬೇಕೆಂದು,-ಭೋ ವ್ಯಾಧಪುತ್ರ; ಹೇ ಸುತೀಕ್ಷ್ಣ ಎಂದು ಕೂಗುತ್ತ ಸಮೀಪಕ್ಕೆ ಬಂದು ಏನು ನಿಮಿತ್ತ ಏಕಾಕಿಯಾಗೀವೃಕ್ಷದಡಿಯಲ್ಲಿ ನಿಂದು ರೋದನವಂ ಮಾಡುವೆ, ನಿನ್ನ ಜನನೀಜನಕರು ಕುಶಲಿಗಳೇ ಎಂದು ಪ್ರಶ್ನೆಯಂ ಮಾಡಲು. ಸುತೀಕ್ಷ್ಣನದಂ ಕೇಳಿ, ಪೂರ್ವಪರಿಚಿತರಾದ ತಾಪಸ ಸಮೂಹವಂ ಕಂಡು ಕಿಂಚಿದಾಶ್ವಾಸಿತಪ್ರಾಣನಾಗಿ, ಋಷಿಸಮಾಜಕ್ಕೆ ಸಾಷ್ಟಾಂಗ ಪ್ರಣಾಮವಂ ಮಾಡಿ, ಪರಮಗುರುಗಳಾದ ತಪೋಧನರಂ ಕುರಿತು-ಪೂರ್ವಕಥಾಸಂಗತಿಯುಂ ವಿಸ್ತಾರವಾಗಿ ವಿಜ್ಞಾಪನೆಯುಂ ಮಾಡಿ, ಪ್ರಕೃತದಲ್ಲಿ ನಡದನಾಹುತವನ್ನು ಬಿನ್ನಹಮಾಡಿ, ಪಿತನು ಶಿಲಾರೂಪಿಯಾಗಿರುವ ಗುಹಾಂತರಾಳಕ್ಕೆ ಈ ಸಮಸ್ತ ಋಷಿಸಮಾಜವಂ ಕ

ಧದುಕೊಂಡು ಪೋಗಿತೋರಿ, ಬಹುವಿಧ ಪ್ರಳಾಪವಂ ಮಾಡಲು. ಆ ತಾಪಸರು ನೋಡಿ ಜ್ಞಾನದೃಷ್ಟಿಯಿಂ ಸರ್ವವ್ಯಾಪಾರವಂ ತಿಳಿದು, ಎಲೆ ಸುತೀಕ್ಷ್ಣನೆ! ಕೇಳು-ಪಿತಕೆ ರೋದನವಂ ಮಾಡಿ ಬಳಲುವೆ, ಈಶ್ವರನ ಕೃಪೆಯಿದ್ದಂತಾಗುತ್ತಿದೆ, ಇದಕ್ಕೆ ಚಿಂತಿಸಲ್ಯಾಕೆ, ವ್ಯಸನವನೊಂದದಿರು ಎಂದು ಸಾಧಾರಣ ಜನರಂತೆ ಸಮಾಧಾನವಂ ಮಾಡಲು. ಸುತೀಕ್ಷ್ಣನಭಿವಂದನೆಯಂ ಮಾಡಿ-ಕರುಣಾರ್ದ್ರಹೃದಯರಾದ ತಾವೆಲ್ಲರು ಜನಕನುಜ್ಜೀವನಕ್ಕೊಂದುಪಾಯಮಂ ಪೇಳಬೇಕೆಂದು ಬಹುಪ್ರಕಾರದಿಂ ಪ್ರಾರ್ಥನೆಯಂ ಮಾಡೆ, ಋಷಿಗಳದಂ ಕೇಳಿ, ಸಮಾಧಿಯಿಂದ ತ್ರಿಕಾಲದರ್ಶಿಗಳಾದ ಪ್ರಯುಕ್ತ ಸಮಸ್ತೋದಂತವಂ ಮನಸ್ಸಿಗೆ ತಂದು ಮೋದದಿಂ ಯುಕ್ತರಾಗಿ, ಎಲೈ ಸುತೀಕ್ಷ್ಣನೆ ಕೇಳು-ನಿನ್ನ ತಂದೆಗೆ ಪರಮಾಂತೇವಾಸಿಯಾದ ಸಹಸ್ರಾಯುವೆಂಬ ಸುಕವರ್ಮಾತ್ಮಜನು ಗುರುಕಾರ್ಯಾರ್ಥವಾಗಿ ಪೋಗಿರುವುದಂ ನೀನು ತಿಳಿದಿರುವೆ, ಕಣಾ ಆ ರಾಜಕುಮಾರನು ಕಿಂಪುರುಷಖಂಡದೊಳು ಈರುರು ಮೊದಲಾದ ದೈತ್ಯರಂ ಸದೆದು, ಸುಪ್ರಭಾ ಎಂಬ ಹರಿಧ್ವಜ ಸುತಾಮನೋಹರ ಬಿಬ್ಬೋಕಾಸಕ್ತನಾಗಿ, ರಾಜ್ಯವಂ ಪರಿಪಾಲನೆಯಂ ಮಾಡುತ್ತಿರುವನು. ಆತನು ಜವದಿಂದ ಗುರುಕಾರ್ಯ ನಿರ್ವಾಹವಂ ಮಾಡಿಕೊಂಡು, ಕ್ಷಿಪ್ರದಿಂ ಬರುವನು. ಆ ಮಹಾ ಪುರುಷನಲ್ಲಿ ನಿಮ್ಮ ಜನಕನುಜ್ಜೀವನೋಪಾಯವು ಕಾಶಾಂಗನಾಪಾಂಗದಿಂ ಕರಗತವಾಗಿರುವುದದರಿಂದ ನೀನು ಚಿಂತಿಸುವದ್ಯಾಕೆ, ಆ ರಾಜಕುಮಾರನಾಗಮನವಾಗುವದೂ ನೀನು ವೃತ್ತಾಂತವಂ ಪೇಳಿ ಪಿತನಂ ತೋರಿದಡೆ, ತತ್‌ಕ್ಷಣದೊಳು ನಿಮ್ಮ ಜನಕನಂ ಬದುಕಿಸುವನದರಲ್ಲಿ ಸಂಶಯವಿಲ್ಲ. ಅದರಿಂದ ರಾಜಕುಮಾರನಾಗಮನ ಪರ್ಯಂತರವೀ ಗುಹೆಯಲ್ಲೇ ಇರುವುದನವರತ, ನೀನಂಜಬೇಡಿದು ಸತ್ಯವೆಂದು ಪೇಳಿ ಪರಮಾನುಗ್ರಹ ಮಾಡಿ, ನೈಮಿಷಾರಣ್ಯವಂ ಕುರಿತು ನಡೆಯಲು. ಆ ಸುತೀಕ್ಷ್ಣನು ಪರೀಕ್ಷೆಯಂ ಮಾಡಿಕೊಂಡು, ಶರೀರಮಾತ್ರಾವಶೇಷಿತನಾಗಿ, ರಾಜಕುಮಾರನಾಗಮನವಂ ಪ್ರತೀಕ್ಷಿಸುತ್ತ ಗುಹಾದ್ವಾರವಂ ಕಾಯಿರಲು. ಇತ್ತಲಾ ಸಹಸ್ರಾಯುವು ಕಿಂಪುರುಷ ವರ್ಷದೊಳು ಗಜಪುರಿಯಲ್ಲಿ ಸುಪ್ರಭಾನುರಾಗಶೃಂಖಲಾಬದ್ಧನಾಗಿ ರಾಜ್ಯವಂ ಮಾಡುತ್ತಿದ್ದನೆಂಬಲ್ಲಿಗೆ ॥*॥

ಇಂತು ಕರ್ನಾಟಕಭಾಷಾವಿರಚಿತಮಾದಶ್ರೀಮನ್ಮಹಿಶೂರಪುರವರಾಧೀಶಶ್ರೀಕೃಷ್ಣರಾಜವಡೆಯರವರು ಲೋಕೋಪಕಾರಾರ್ಥವಾಗಿರಚಿಸಲ್ಪಟ್ಟ ಶ್ರೀಕೃಷ್ಣರಾಜವಾಣೀವಿಲಾಸಮೆಂಬಾಂಕಿತದಿಂದಕರ್ನಾಟಕಭಾಷಾವ್ಯಾಖ್ಯಾನರೂಪಕವಾಗಿ ರಚಿಸಿರುವ ಶ್ರೀ ಬ್ರಹ್ಮಾಂಡೋಪ ಪುರಾಣದಲ್ಲಿ, ಉತ್ತರ ಭಾಗದಲ್ಲಿ, ಲಲಿತೋಪಾಖ್ಯಾನದಲ್ಲಿ, ಪೂರ್ವಖಂಡದಲ್ಲಿ, ಹಯಗ್ರೀವಾಗಸ್ತ್ಯಸಂವಾದದಲ್ಲಿ, ದ್ವಾದಶೋಧ್ಯಾಯಃ. ಶ್ರೀ

ಹನ್ನೆರಡನೇ ಅಧ್ಯಾಯ ಸಂಪೂರ್ಣವು



ಶುಭಮಸ್ತು.

## ಹದಿಮೂರನೇ ಅಧ್ಯಾಯ



ಗಜಪುರಿಯಲ್ಲಿ "ಸುಪ್ರಭಾ"ಎಂಬ ಮಾನಿನೀ ರತ್ನವು ತನ್ನ ಪಾತಿವ್ರತ್ಯಮಾಹಾತ್ಮೆಯಿಂದಲೂ, ಮಹಾನುಭಾವನಾದ ಸಹಸ್ರಾಯುವಿನ ಸಂಸರ್ಗದಿಂದಲು ಗರ್ಭಿಣಿಯಾಗಲು, ಅದಂ ಕಂಡು ಹೃಷ್ಟಮಾನಸಳಾಗಿ, ತರುವಾಯ ಮಾಸಚತುಷ್ಟಯವಾಗಲು, ಸಹಸ್ರಾಯುವು ಲೋಕೈಕವೀರನಾದ ಪುತ್ರನುದಯಿಸುವನೆಂದು ನಿಶ್ಚಯಮಂ ಮಾಡಿ, ಗುರುಕಾರ್ಯಮಂ ನೆನದು, ಪತ್ನಿಯಂ ಕುರಿತು ಗುರುದಕ್ಷಿಣಾರ್ಥವಾಗಿ ಬಂದು ಬಹುಕಾಲ ವಿಳಂಬವಾದುದು, ಎಲೈ ವಿದಗ್ಧೆಯೆ! ಕೇಳು-ಲೋಕದಲ್ಲಿ ಸರ್ವಾರ್ಥಸಾಧಕವಾದ ಗುರುಕಟಾಕ್ಷಕ್ಕೆ ಸಮಾನವಾದ ವಸ್ತ್ವಂತರವಿಲ್ಲ. ಗುರುಮನೋವಿಷಾದಕ್ಕೆ ಸರಿಯಾದ ಆಪದವು ಯಿಲ್ಲದು ಕಾರಣ, ಬುದ್ಧಿಶಾಲಿಯಾದ ಪುರುಷನು ಸ್ವಪ್ನದಲ್ಲಿಯೂ ಗುರುಕಾರ್ಯಮಂ ಮರೆಯಬಾರದು. ತನ್ಮನೋವಿಷಾದಗಳು ಪುಟ್ಟದಂತೆಜಾಗ್ರತನಾಗಿ ಅಭಿಪ್ರಾಯಾನುಗುಣವಾಗಿ ನಡೆಯುವದೇ ಸಕಲ ಪುರುಷಾರ್ಥಸಾಧನವಾದುದರಿಂದ, ನೀನು ಸಮಾಧಾನಚಿತ್ತಳಾಗಿ ಪ್ರಯಾಣಕ್ಕನುಕೂಲಳಾದಡೆ, ಪೋಗಿ ಉತ್ತರ

ಕುರುವಂ ಸೇರಿ ಕ್ಷಿಪ್ರದಿಂ ಬರುವೆನೆಂದೆನಲು. ತದುಕ್ತಿಶ್ರವಣಮಾತ್ರದಿಂ ಮೂರ್ಛೆಯನೈದಿನೆಲಕುರುಳಲು, ಸಹಸ್ರಾಯುವು ಜವದಿಂದೆತ್ತಿಸಂತೈಸಲು, ಸುಪ್ರಭೆಯು ಕಣ್ದೆರದು ಪ್ರತ್ಯುತ್ತರವನಾಡದೆ ಸ್ತಬ್ಧಳಾಗಿರಲು, ರಾಜಕುಮಾರನಾಕೆಯಂ ಸಮ್ಮತಪಡಿಸಬೇಕೆಂಬ ಅಭಿಪ್ರಾಯದಿಂ ಬಹುಪ್ರಕಾರದಿಂದಾದರಿಸಿ, ಗಲ್ಲವಂ ಪಿಡಿದು ಮುದ್ದಿಸಿ, ಇಂದುಮುಖಿ ಯಾಕೆ ಪ್ರತ್ಯುತ್ತರವನಾಡದೆ ಸುಮ್ಮನಿಹೆಯೆಂದಾಕೇಳೆ? ಸುಪ್ರಭೆಯು ಕೈಮುಗಿದು ನಿಮ್ಮಡಿದಾಸಿಯಾದತಾನು ಮಾರುತ್ತರವನಾಡುವಳೇ, ಶಕ್ತಳೇ, ಕಾಂತ, ಕಾಡುವಳಲ್ಲ, ಚಿತ್ತಕ್ಕೆಂತು ಸಮರ್ಪಕವೋ ತದನುಗುಣವಾಗಿನಡೆಯುವಲ್ಲಿ ಸಂಶಯವಿಲ್ಲ ಸುಭಗನೆ, ಕೇಳೆಂದಡಿನ್ನೊಂದುಂಟು ಬಿನ್ನಹವು, ಭಾವಜ್ಞ, ಮಾಸಿಸೀಸುರತಕ್ರೀಡಾಜನಿತಪರಮಾನಂದಕಾಲದೊಳ್ ಚಿತ್ತದೊಳು ತನ್ನ ಸ್ಮೃತಿಯಿರಬೇಕೆಂದು ಪೇಳಿ ವಂದನೆಯಂ ಮಾಡೆ, ಸಹಸ್ರಾಯುವಾನುಡಿಯಂಕೇಳಿ, ಕೇವಲ ಕರುಣಾರ್ದ್ರಹೃದಯನಾಗಿ ಮಡದಿಯಂತೆಗದಪ್ಪಿ, ಲಲನೆ, ನೀನಿಂತು ಧೈರ್ಯವಂ ತೊರೆದು ಕುಳಿತಡೆ ತಾನು ಪೋಗುವೆನೆಂತು, ಇಂತು ಅಧೈರ್ಯವಾಂತಾಳುವರೆ ಏನುಕಾರಣ, ನೀನು ಸ್ವಸ್ಥಮಾನಸಳಾಗಿರುವೆನೆಂದು ಭರವಸಮನಿತ್ತಡೆಪೋಗುವೆನು, ಇಲ್ಲದಿರೆ ಪೋಗುವದಿಲ್ಲವೆಂದುನುಡಿಯೆ; ಪತಿಯನಿರ್ಬಂಧಮಂನೋಡಿ ಮನದೊಳಾಲೋಚನೆಯಂಮಾಡಿ, ಗುರುಕಾರ್ಯಗೌರವದಿಂದ ಪೋಗುವೆನೆಂದೊಡೆ ವಿಘ್ನವನಾಚರಿಸಬಾರದು, ಇಂತಲ್ಲದೆನ್ನಸಂದರ್ಶನಕಾಲದಲ್ಲಿ ತಾನು ಪಾಣಿಗ್ರಹಣಾರ್ಥವಾಗಿ ಪ್ರಾರ್ಥನೆಯಂ ಮಾಡಿದ ಸಮಯದಲ್ಲಿ, ಸಮಯಬಂಧವಾಕ್ಯಗಳ ಸೂಚನೆಯಂ ಮಾಡಿರುವರು, ಎಂದಾಲೋಚನೆ ಮಾಡಿ, ಅರ್ಧಾಂಗೀಕಾರಿಯಾಗಲು. ಸಹಸ್ರಾಯುವು ಸಂತೋಷಯುಕ್ತನಾಗಿ ಸಭಾಸ್ಥಾನಮಂ ಪೊಕ್ಕು, ಸಿಂಹಾಸನಾಸೀನನಾಗಿ ಅಮಾತ್ಯರಂ ಕರೆದು ತಾನು ಪೋಗಿಬರುವ ಕಾರ್ಯಮಂತಿಳುಹಿಸಿ, ಈ ಸುಪ್ರಭಾಗರ್ಭದೊಳುದಯಿಸುವ ಪುತ್ರನಿಗೆ ಸುದರ್ಶನನೆಂದು ನಾಮದಿಂಕರೆಯುವದೆಂದುಪೇಳಿ, ಅಮಾತ್ಯರ ಅನುಮತಿಯಿಂದ ಶಿಖಾಸರಮುದ್ರಿಕೆಯಂ ಪತ್ನಿಕೈಯಲ್ಲಿತ್ತು ಈಕೆಯಾಜ್ಞಾನುಸಾರವಾಗಿಧರ್ಮದಿಂ ಪ್ರಜಾಸಂರಕ್ಷಣೆಯಂ

ಮಾಡಿಕೊಂಡಿರುವುದೆಂದು ಕಟ್ಟಲೆಯಂಮಾಡಿ, ದೈವಜ್ಞರಂ ಕರೆದು ಪ್ರಯಾಣಲಗ್ನವಂ ನಿಶ್ಚೈಸಿಪೇಳುವುದೆಂದುಕೇಳಲು. ಅವರು ವಿಚಾರಮಾಡಿ ತ್ರಿರಾತ್ರಾನಂತರದಲ್ಲಿ ಲಗ್ನವ ನಿಶ್ಚೈಸಿಪೇಳಲು ಆ ದಿನ ಅಂತಃಪುರಪ್ರವೇಶವನುಂಮಾಡಿ, ಸ್ನಾನಆರೋಗಣೆಯುಂಮಾಡಿ, ಗೃಧ್ರನುಪೇಳದಕಥೆಯೊಳು, ಆ ರಾಕ್ಷಸಾಸ್ತ್ರವಿಚಾರಮುಂನೆನದು, ಆ ಮಹಾಸ್ತ್ರವು ಈ ನಗರ ನುಪವನತರುಕೋಟರದಲ್ಲಿ ಮಯನಿಂದ ಸನ್ನಿಹಿತವಾಗಿರುವುದಾಮಹಾಸ್ತ್ರಮುಂ ಸ್ವಾಧೀನ ಮಾಡುವರೇ ಇದೇ ಸಮಯವೆಂದು ಪರ್ಯಾಲೋಚನೆಯುಂಮಾಡಿ, ಪತ್ನಿಯುಅಂತಃಪುರಕ್ಕೆ ಬಂದು ಸುಪ್ರಭೆಯುಂ ಕುರಿತು, ಎಲೈ ಮಾನಿನಿಯೆ- ನಿಮ್ಮ ಜನಕನುಮೃತಿಯಾದತಾಣಮುಂ ನೋಡಬೇಕೆಂದುಪೇಳಲು, ಸುಪ್ರಭೆಯು ಆ ವನದೊಳುಮಹಾಕಾಳಸರ್ಪವಾಸವಂ ಮಾಡಿರುವನು. ತಮ್ಮ ಜನಕನಾವನಮಧ್ಯದಲ್ಲಿರುವ ಮಹಾವಟವೃಕ್ಷದಡಿಯಲ್ಲಿ ಮೃತಯಾದಂದಿನಾರಭ್ಯ ಆ ಪ್ರದೇಶದಲ್ಲಿ ಮನುಷ್ಯ ಸಂಚಾರವೆಯಿಲ್ಲ. ವನವೆಲ್ಲ ವಿಷಕಲಿತವಾಗಿ, ಮಹದ್ಗಹನವಾಗಿರುವದರಿಂದ, ಆ ತಾಣಮಂ ತಾವು ನೋಡುವುದ್ಯಾಕೆ, ಕ್ರೂರಕಾಕೋದರನ ವಿಷಜ್ವಾಲೆಯಿಂವ್ಯಾಪ್ತವಾಗಿರುವುದಾ ಪ್ರದೇಶವದುಕಾರಣ, ತಾವಲ್ಲಿಗೈದಲಾಗದೆಂದು ಬಹು ಪ್ರಕಾರದಿಂ ಪ್ರಾರ್ಥನೆಯುಂ ಮಾಡಲು, ಎಲೈ ಮಾನಿನಿಯೆ- ಕೇಳು, ಶಿರದಡಿಯಲ್ಲಿ ಮೃತ್ಯುವನಿಟ್ಟು ಮಲಗುವರೆ, ಅದು ಕಾರಣ ರಾಜನಂಸಂಹಾರಮುಂ ಮಾಡಿದ ದುಷ್ಟನಾದ ದಂದಶೂಕನಂ ದಹಿಸಿದಲ್ಲದೆ ಮಲಗೆನೆಂದು ಪ್ರತಿಜ್ಞೆಯುಂಮಾಡೆ, ಸುಪ್ರಭೆಯು ಇನ್ನೇನಾಗುವದೋಎಂದು ಮರುಗುತ್ತಿರಲು; ಸಹಸ್ರಾಯುವು ಸ್ನಾನ ಭೋಜನವಮಾಡಿ, ಸಮಸ್ತವೈಭವದಿಂದ ಅಮಾತ್ಯರಿಂದೊಡಗೂಡಿ ಪತ್ನೀಸಹಿತನಾಗಿಪೋಗಿ ವನವಂ ಕಂಡು ವನಾಂತಃಪ್ರವೇಶವಂಮಾಡೆ, ಸರ್ಪರೂ ಭಯದಿಂದ ಹಿಂದೆಗೆಯಲು; ಆ ಸಹಸ್ರಾಯುವು ರಥದಿಂದಿಳಿದು ತಾನೋರ್ವನೇಬಳಪೊಕ್ಕು ಆ ಮಹಾ ವಟವೃಕ್ಷಮಂ ನೋಡಿ ಬಂದು ಗೃಧ್ರನಿಂದುಕ್ತವಾದ ಕಥಾಂತರಾಳದೊಳು ಹಂಸವಾಕ್ಯಮುಂ ಸ್ಮೃತಿಗೆತಂದು, ಬುದ್ಧಿಶಾಲಿಗಳಾದ ದೂತರಂ ಕರೆದು ಶುಕಮಾಂಸಮುಂ ತೆಗದುಕೊಂಡುಬರುವುದೆಂದು ಕಟ್ಟಲೆಯಂ ಮಾಡಿ ನಗ

ರಕ್ಕೆ ಬರಲು; ರವಿಯಸ್ತಮಯದೊಳು ಆಚಾರರು ಶುಕಮಾಂಸಪಿಂಡಮಂ
ತಂದು ಮುಂದಿಡಲು, ರಾಜಕುಮಾರನಾಕ್ಷಣವಿಚಾರರನ್ನು ಸಂಗಡ ಕರೆದು
ಕೊಂಡು ಸ್ವಾದನಾರೂಢನಾಗಿ ಉಪವನಮಂ ಪೊಕ್ಕು ಸರ್ಪನುಸಂಚಾರ
ಮಂ ಪೋಗಿರುವಕಾಲವೆಂದರಿದು, ಆವೃಕ್ಷದಡಿಗೆ ತಾನೇಪೋಗಿ ಆ ಶುಕ
ಮಾಂಸಪಿಂಡಮಂ ಇರಿಸಿ, ಆ ವನದ ಬಹಿರ್ಭಾಗಕ್ಕೆ ಬಂದು ನಾಲ್ಕು ಜನ
ಬುದ್ಧಿಶಾಲಿಗಳಾದ ದೂತರಂ ಕರೆದು, ಈ ರಾತ್ರಿ ಈ ವನ ಸಮೀಪದಲ್ಲಿ
ರುವ ಉನ್ನತವಾದ ನಾರಿಕೇಳವೃಕ್ಷದ ಮೇಲಿದ್ದು ಕಾಕೋದರನ ವೃ
ತ್ತಾಂತಮಂ ತಿಳಿದು ಬಂದೊರೆವುದೆಂದು ಕಟ್ಟಳೆಯಂ ಮಾಡಿ, ಭಯಪಡ
ಬ್ಯಾಡಿರೆಂದಭಯಮನಿತ್ತು, ತಾನು ನಗರಮಂ ಪೊಕ್ಕು ರಾತ್ರಿ ಸು
ಖದಿಂದಲಿದ್ದು, ಪ್ರಾತಃಕಾಲದೊಳೆದ್ದು ಸಭಾಸ್ಥಾನಮನೈದಿ ಸಮಸ್ತ
ಮಂತ್ರಿಗಳನ್ನು ಕರೆದು ಈ ದಿನ ವನಭೋಜನಮಂ ಮಾಡಲು; ನಾಗರಿಕ
ರೆಲ್ಲರೂ ಪೊರಡಬೇಕೆಂದು ಸಾರುವುದು, ವನಭೋಜನಾರ್ಥವಾಗಿ ಸ
ರ್ವಸನ್ನಾಹಮಂ ಮಾಡುವುದೆಂದು ಆಜ್ಞಾಪಿಸುತ್ತಿರಲು; ಅನಿತರೊಳು,
ದ್ವಾರಪಾಲಕನೊರ್ವನೈದಿ ಪೊಡಮಟ್ಟು, ಜೀಯ್ಯ: ಭುಜಂಗನಿರುವ ವ
ನದಲ್ಲಿದ್ದ ಕಾವಲು ದೂತರೈದಿ ಬಂದಿಹರೆಂದು ವಿಜ್ಞಾಪನೆಯಂ ಮಾಡಲು;
ಸಹಸ್ರಾಯುವು, ಒಳಗೆ ಕರೆಯಿರೆಂದಾಜ್ಞಾಪಿಸಲು; ಅವರೊಳಪೊಕ್ಕು
ದಿವ್ಯ ಸಿಂಹಾಸನದಲ್ಲಿ ಕುಳಿತಿರುವ ರಾಜಾಧಿರಾಜನಂ ಕಂಡು ಕೈ ಮುಗಿ
ದು ಜೀಯ್ಯ;-ಭವದಾಜ್ಞೆಯಿಂ ವೃಕ್ಷವನ್ನೇರಿ ನೋಡುತ್ತಲಿರಲು, ಅರ್ಧ
ರಾತ್ರಿಯೊಳು ಅಂಡಭಿತ್ತಿಯೊಡೆದಂತೆ ಮೊರೆಯುತ್ತ ಮಹಾಭೋಗವಿಶಿ
ಷ್ಟ ಸರ್ಪನು ಬಂದು ತಮ್ಮಿಂದ ನಿಕ್ಷಿಪ್ತವಾದ ಮಾಂಸಪಿಂಡಸ್ಪರ್ಶಮಂ
ಮಾಡಿದುತ್ತರಕ್ಷಣದಲ್ಲಿ, ಆ ಮಹಾಸರ್ಪನು ಭಸ್ಮೀಭೂತನಾಗಿ ಪೋ
ದನು. ಆ ಭಸ್ಮವು ಪರ್ವತದಂತೆ ಬಿದ್ದಿರುವದೆಂದು ವಿಜ್ಞಾಪನೆಯಂ
ಮಾಡಲು; ಸಭಾಸದರೆಲ್ಲರೂ, ಕೇಳಿ ವಿಸ್ಮಿತರಾಗಿ ನರನಲ್ಲ, ಈತನ್ಯಾರೋ
ಮಹಾನುಭಾವನೆಂದು ಅನ್ಯೋನ್ಯವಾಗಿ ಮೆಲ್ಲ ಮೆಲ್ಲನೆ ಮಾತನಾಡುತ್ತಿ
ರಲು; ಸಹಸ್ರಾಯುವು ದೂತರಾಡಿದ ನುಡಿಯಂ ಕೇಳಿ; ಪರಮಸಂತೋಷ
ಯುಕ್ತನಾಗಿ ಅಮಾತ್ಯರಂ ಕರೆಸಿ, ಅನೇಕ ಚಾರರಂ ಕಳುಹಿ; ವನವೆಲ್ಲ

ವರಿಶೋಧನೆಯಂ ಮಾಡಿ ಕಂಟಕಾದಿಗಳನ್ನು ತೆಗದು ಮಂಟಪಾದಿಗಳರಚಿಸಿ, ಸಕಲಸೋಪಸ್ಕರವಂ ವನಸಮೀಪದೊಳು ಸಿದ್ಧಮಾಡುವುದೆಂದು ಕಟ್ಟಳೆಯಂ ಮಾಡಿ, ತಾನು ಅಂತಃಪುರವಂ ಪೊಕ್ಕು ಸ್ನಾನಮಂ ಮಾಡಿ, ನಿತ್ಯನಿಯಮಾದಿಗಳನಾಚರಿಸಿ, ಸಮಸ್ತ ಸಖೀಜನರಿಂದೊಡಗೂಡಿ ವನವಿಹಾರಾರ್ಥವಾಗಿ ಬರುವುದೆಂದು ಪತ್ನಿಯೊಡನೊರದು, ತಾನು ಸಮಸ್ತವೈಭವದಿಂದ ಪುರದಿಂ ಪೊರಟು ಉಪವನವನ್ನೈದಲು; ಸಮಸ್ತ ಪುರ ಜನರು ವನಭೋಜನಾರ್ಥವಾಗಿ ಪರಮ ಹೃಷ್ಟಮಾನಸರಾಗಿ ಯಥಾವಿಭವದಿಂ ಆ ವನ ಸಮೀಪದೊಳು ಬಂದು ಸ್ನಾನ ಭೋಜನಾದಿಗಳನುತ್ಸವದಿಂದ ಮಾಡುತ್ತಿದ್ದರು· ಸುಪ್ರಭೆಯು ಅನೇಕ ಸಖೀಜನರಿಂದ ಸಹಿತಳಾಗಿ ಮಹಾ ವೈಭವದಿಂ ವನವಂ ಪೊಕ್ಕು ವಿನೋದದಿಂ ಕ್ರೀಡಿಸುತ್ತಿರಲು; ಸಹಸ್ರಾಯುವು ತವಕದಿಂದೆದ್ದು ಸ್ನಾನಮಂ ಮಾಡಿ ಮಡಿಯುಟ್ಟು ಆ ವಟವೃಕ್ಷದಡಿಗೆ ಬಂದು ವೃಕ್ಷವನ್ನು ಅರ್ಚನೆಯಂಮಾಡಿ, ಅಷ್ಟದಿಕ್ಕುಗಳಲ್ಲಿ ನಾನಾ ವಿಧ ಬಲಿಯನ್ನು ಹಾಕಿ, ಪಾರ್ವತೀಕಮಲಚರಣಗಳನ್ನು ನೆನೆದು ವೃಕ್ಷಕೋಟರದೊಳಪೊಕ್ಕು ವಿಶಾಲವಾದ ಆಯಸಮಯ ಶಕಟೋಪರಿ ಕಾಲಾಗ್ನಿಯಂತೆ ಪ್ರಜ್ವಲಿಪ ಮಹಾಸ್ತ್ರವಂ ನೋಡಿ ವಿಸ್ಮಿತನಾಗಿ, ಮಯನಮಾಹಾತ್ಮೆಯಂಕೊಂಡಾಡುತ್ತ, ಶಕಟಕ್ಕೆ ಕಟ್ಟಿರುವ ಆಯಸಮಯ ರಜ್ಜುವಂ ತನ್ನ ಕರದೊಳು ಪಿಡಿದು ಅಸ್ತ್ರಕ್ಕೆ ವಂದನೆಯಂ ಮಾಡಿ ಶಕಟವಂ ಮೆಲ್ಲನೆ ಶೆಳೆದು ಕೋಟರದಿಂ ಬಹಿರ್ಭಾಗಕ್ಕೆ ತರಲು; ಅಮಾತ್ಯರೇ ಮೊದಲಾದ ಸಮಸ್ತ ಪೌರಜನರು ಕಾಲಾಗ್ನಿಯಂತೆ ನೋಡಲಸಾಧ್ಯವಾದ ಮಹಾಸ್ತ್ರವಂ ಬಹು ಪ್ರಯಾಸದಿಂ ಕಣ್ದೆರದು ನೋಡಿ ವಿಸ್ಮಿತರಾಗಿ, ಸಹಸ್ರಾಯುವಂ ಬಹುಪ್ರಕಾರದಿಂ ಕೊಂಡಾಡುತ್ತಲಿರಲು; ಸಹಸ್ರಾಯುವು ಮಹಾ ವೈಭವದಿಂದ ಮಹಾಸ್ತ್ರವಂ ರಕ್ತ ಗಂಧ ಪುಷ್ಪಾಕ್ಷತಾದಿಗಳಿಂದ ಪೂಜೆಯಂ ಮಾಡಿ ಯಥೋಚಿತ ಬಲಿಯನಿತ್ತು ವಂದನೆಯಂ ಮಾಡಿ, ಅನಂತರದಲ್ಲಿ ಆ ಮಹಾಸ್ತ್ರವಂ ತನ್ನ ಹಸ್ತದೊಳಾಂತು ನಿಷಂಗದೊಳಗಿಟ್ಟು, ಭೂಸುರರಿಂಗೆ ಪುಷ್ಕಳವಾಗಿದಕ್ಷಿಣಾದಿಗಳನಿತ್ತು. ಆರೋಗಣೆಯಂಮಾಡಿ

ಸುಪ್ರಭಾ ದೇವಿಯೊಡನೆ ಜಲಕ್ರೀಡಾದಿಗಳನ್ನು ಪರಮ ಸಂತೋಷದಿಂದಾಡಿ, ರವಿಯಸ್ತಮಯವಾಗುತಿರಲಖಿಳನಾಗರಿಕ ಸಮಾಜದಿಂಪೆರಶಿ ನಗರಮಂ ಪೊಕ್ಕು ಸುಖದಿಂಇದ್ದು, ರವಿಯುದಯವಾಗಲು ಎದ್ದು, ಕೃತಾಹ್ನಿಕನಾಗಿ ಪರಮ ಭಕ್ತಿಯಿಂದ ಋಷಿಧೇನುವಂ ಪೂಜೆಯಂಮಾಡಿ ಪ್ರಯಾಣೋದ್ಯುಕ್ತನಾಗಲು; ಸುಪ್ರಭಾ ದೇವಿಯು ದುಗುಡದಿಂಬಂದು ವಂದನೆಯಂಮಾಡಿ ವಿಮಾನಮನೇರಿ ಪೋಗಬೇಕೆಂದು ಬಿನ್ನಹವಮಾಡಲು, ರಾಜಕುಮಾರನೊಡಂಬಟ್ಟು ಭೋಜನಾದಿಗಳಂಮಾಡಿ; ದೇವಿಯರಂ ಕರೆದು ಬಹುವಿಧ ಸಮಾಧಾನೋಕ್ತಿಯಂಪೇಳಿ ಒಡಂಬಡಿಶಿ, ನಿರಂತರ ಗೌರೀದೇವಿಯ ಚರಣಾರವಿಂದಗಳಂ ಆರಾಧನೆಯ ಮಾಡುತ್ತಲಿರುವದೆಂದಾಜ್ಞಾಪಿಶಿ, ಆಕೆಯಿಂದಪ್ಪಣೆಗೊಂಡು, ಸಮಸ್ತ ಪ್ರಕೃತಿಗಳಿಂಗೆ ಪೇಳುವ ಅರ್ಥಗಳಂಪೇಳಿ, ಧನುರ್ನಿಷಂಗಾಸಿ ಯುಕ್ತನಾಗಿಧೇನುನಿವಿನಿಂದೊಡಗೂಡಿ ವಿಮಾನಾರೂಢನಾಗಿ, ರಾಜಕುಮಾರನು-ಭೋ ವಿಮಾನರಾಜ, ತಾನು ಉತ್ತರಕುರುವಿಂಗೆ ಪೋಗಬೇಕೆನಲು; ವಿಮಾನವು ಕ್ಷಣಾರ್ಧದಲ್ಲಿ ಉತ್ತರಕುರುವಿಗೆ ಬರಲಾ ಪ್ರದೇಶವಾಸಿಗಳಾದ ದಿವ್ಯ ಪುರುಷರು, ತಾಪಸ ಜನರು ದಿವ್ಯಾನರ್ಘ್ಯರತ್ನಮಣಿಮಯವಾದವಿಮಾನವಂ ಕಂಡು ತದ್ರುಚಿ ಪ್ರತಿಹತೇಕ್ಷಣರಾಗಿ ಪ್ರಮುಖ ದೇವತೆಗಳೊಳಾವನೋ ಬಂದಿರುವನೀತನಂ ನೋಡಬೇಕೆಂದುತ್ಕಂಠತೆಯಿಂದ ಸ್ವಾನುಷ್ಟೇಯಮಾನಕಾರ್ಯಂಗಳಂಮರೆದು, ಊರ್ಧ್ವಮುಖರಾಗಿ ವಿಮಾನವನ್ನೇ ನೋಡುತ್ತಲಿರಲು; ವಿಮಾನವಾಪ್ರದೇಶದಲ್ಲಿಳಿದು ಭೂಸ್ಪರ್ಶವುಂಮಾಡದೆನಿಲ್ಲಲು, ಸಹಸ್ರಾಯುವು ವಿಮಾನದಿಂದಿಳಿದು ಸರ್ವ ವೃಕ್ಷಗಳು ಸಮಕಾಲದಲ್ಲಿ ಫಲಭರಿತವಾಗಿರುವುದಂ, ಸಮಸ್ತ ಲತೆಗಳು ಪುಷ್ಪಗುಚ್ಛದಿಂ ಮನೋಹರವಾಗಿರುವುದಂ, ನಿಖಿಲಕಾಸಾರಗಳು ಅಮೃತತುಲ್ಯವಾದ ಉದಕಗಳಿಂದ, ಸ್ಫಟಿಕಶಿಲಾರಚಿತ ಸೋಪಾನಗಳಿಂದ ಶೋಭಿಸುತ್ತಿರುವುದಂ, ದಿವ್ಯದೂನೀಕಮಲಿನೀ ಲತಾಲಯ ಹಂಸಮಿಥುನಾಲಯವುಂ, ಶುಕಪಿಕಾದಿಗಳೆಲ್ಲ ಸ್ಫುಟವಾಗಿ ಸಂಸ್ಕೃತವಾಣೀಪರಂಪರೆಗಳಿಂದ ಪರಸ್ಪರಾಲಾಪವಂ ಮಾಡುತ್ತಿರುವುದಂ, ದಿವ್ಯತೇಜೋಮಯಶರೀರದಿಂದಗಾಧ ಬೋಧ

ರಾದ ಮಹಾ ತಪೋಧನರಿಂದ ಸಾಂದ್ರವಾಗಿರುವ ಆಶ್ರಮಂಗಳಂ ನೋಡಿ ವಿಸ್ಮಿತನಾಗಿ, ಆತಪೋಭೂಮಿಯಲ್ಲಿ ನಿರ್ವೈರದಿಂದಿರುವ ಮೃಗಪಕ್ಷಿನಿಕರಮಂ ಕಂಡು ಪರಮಸಂತೋಷಚಿತ್ತನಾಗಿ ಆ ಪ್ರದೇಶವೆಲ್ಲ ಸಂಚಾರಮಂಮಾಡಿ ನೋಡುತ್ತ ಬಂದು, ಬಂದಾಶ್ರಮದ ಬಳಿಯಲ್ಲಿ ವೃಕ್ಷಮೂಲದಡಿಯಲ್ಲಿ ಕುಳಿತಿರಲು, ಆ ಪ್ರದೇಶದೊಳಿರುವ ತಪೋಧನರೆಲ್ಲರು ಬಂದಿರುವ ಸಹಸ್ರಾಯುವಂ ಕಂಡು ಕುಶಲಪ್ರಶ್ನೆಯಂಮಾಡಲು; ಸಹಸ್ರಾಯುವೆದ್ದು ತಾಪಸ ಸಮೂಹಕ್ಕೆ ಪ್ರದಕ್ಷಿಣಪ್ರಣಾಮಾದಿಗಳಂಮಾಡಿಅಂಜಲಿಬದ್ಧನಾಗಿ ಎದುರ್ಗನಿಂದು ಬಹುಪ್ರಕಾರದಿಂ ಸ್ತುತಿಮಾಡುವುದರೊ, ಋಷಿಗಳೆಲ್ಲ ಪರಮಾನುಗ್ರಹಮಾಡಿ ಆ ವೃಕ್ಷದಡಿಯಲ್ಲಿ ಕುಳಿತು ಸಹಸ್ರಾಯುವಿನ ವೃತ್ತಾಂತಮಂ ವಿಚಾರಮಾಡಲು; ಸಹಸ್ರಾಯುವುಸಮಾಧಿಯಿಂ ವಿಜ್ಞಾತ ಸಕಲ ಭುವನವೃತ್ತಾಂತವುಳ್ಳ ತಮ್ಮಡಿಗಳಿಗೆ ಅವಿದಿತವಾವುದಾದೊಡೆಯು ಭವದಾಜ್ಞೋಲ್ಲಂಘನಪ್ರಯುಕ್ತ ದೋಷಭೀತಿಯಿಂವಿಜ್ಞಾಪನವಂ ಮಾಡುವೆನೆಂದು ಸಂಕ್ಷೇಪದಿಂ ತನ್ನ ವೃತ್ತಾಂತಮಂ, ಗುರುಕಾರ್ಯಾರ್ಥವಾಗಿ ತಾನು ಬಂದಿರುವುದುಂ ತಿಳಿಸಿ, ಆ ಪ್ರದೇಶದಲ್ಲಿರುವ ಸಮಸ್ತ ಋಷಿಗಳಿಗೂ ಆತಿಥ್ಯಾರ್ಥವಾಗಿ ಧೇನುವಂ ಕರೆದು ಪ್ರಾರ್ಥನೆಯಂ ಮಾಡಲು; ಆ ಧೇನುವಿನ ಮಾಹಾತ್ಮ್ಯಯಿಂ ತತ್‍ಕ್ಷಣದಲ್ಲಿ ದಿವ್ಯಶಾಲಾನಿರ್ಮಾಣಮಾಗಲು, ಋಷಿಗಳೆಲ್ಲರುವಿಸ್ಮಿತರಾಗಿನೋಡುತ್ತಿರಲು; ಸಹಸ್ರಾಯುವು ಋಷಿಗಳಿಗೆಕೈಮುಗಿದು ಆತಿಥ್ಯಮಂ ಮಾಡಬೇಕೆಂದು ಪ್ರಾರ್ಥನೆಯಂಮಾಡೆ, ಸಮಸ್ತ ಋಷಿಗಳು ಶಾಲೆಯಲ್ಲಿ ಪಂಗ್ತಿ ಪಂಗ್ತಿಯಾಗಿ ಕುಳ್ಳಿರಲು; ಧೇನುವಿನ ಶರೀರದಿಂದುತ್ಪನ್ನರಾದನೇಕಾಪ್ಸರಸ್ತ್ರೀಯರತ್ಯದ್ಭುತ ಸೌಂದರ್ಯಭೂಷಣಮಯೋಶೋಭಿತರಾಗಿ ದಿವ್ಯಸುವರ್ಣ ಪಾತ್ರೆಯೊಳು ಪ್ರತ್ಯೇಕಪ್ರತ್ಯೇಕವಾಗಿ ಯಾವದಪೇಕ್ಷಿತ ಪದಾರ್ಥಗಳನಿತ್ತು ಭೋಜನಮಂ ಮಾಡಿಸಲು; ಸಮಸ್ತ ಋಷಿಗಳು ಧೇನುವಿನ ಪ್ರಭಾವಮಂ ನೋಡಿ ಯಾವದಪೇಕ್ಷಿತಾಶೇಷಭಕ್ಷ್ಯರಸಾನ್ನಗಳ ಭೋಜನಮಾಡಿ ತೃಪ್ತಿಯನ್ನೈದಿ, ಮಾನುಷನಾದ ರಾಜಕುಮಾರನ ಪ್ರಭಾವಮಂ, ಧೇನುವಿನಮಾಹಾತ್ಮ್ಯಮಂ ಕಂಡು, ಭೋಜನಾನಂತರದಲ್ಲಿ ಯಥೇಚ್ಛ ದಕ್ಷಿಣಾದಿಗಳಂ

ಸಂತುಷ್ಟರಾಗಿ, ಬಹುಪ್ರಕಾರದಿಂದ ಸ್ತುತಿಮಾಡಿ, ಆಶೀರ್ವಾದಗಳಮಾಡಿ, ರಾಜಕುಮಾರನ ಮುಖದಿಂದ ಧೇನುವಿನವೃತ್ತಾಂತಮಂ ತಿಳದು ವಿಸ್ಮಿತರಾಗಿ, ಶ್ರೀವೇಣೀಮಾಹಾತ್ಮೆಯಂ ಕೊಂಡಾಡಿ, ರಾಜಕುಮಾರಂಗೆ ವರಮಾನುಗ್ರಹಮಾಡಿ, ಭವದಾಗಮನದಿಂದೀಪ್ರದೇಶಗಳೆಲ್ಲ ಪರಮಪವಿತ್ರಮಾದುದೆಂದು ಸ್ತುತಿಮಾಡಿ ನೋಡುತ್ತಿರಲು; ಸಹಸ್ರಾಯುವು ಗುರುಸಮೀಪಕ್ಕೆ ಪೋಗಬೇಕೆಂದುಆತಪೋಧನರಿಂದ ಅಪ್ಪಣೆಗೊಂಡು,ಅಲ್ಲಿಂದ ಪೊರಮಟ್ಟು, ವಿಮಾನಾರೂಢನಾಗಿ, ಕ್ಷಣಮಾತ್ರದಲ್ಲಿ ಗಜಾರಣ್ಯದಲ್ಲಿರುವ ಕಾಳಿಯಾಲಯಸಮೀಪಕ್ಕೆ ಬಂದು, ಆ ಶಮೀವೃಕ್ಷವಂ, ಕಾಳಿಯಾಲಯಮುಮಂಕಂಡು ವಿಮಾನದಿಂದಿಳಿದು, ಕಾಳಿಯಾಗಾರಮಂ ಪ್ರದಕ್ಷಿಣೆಮಾಡಿ, ದಿವ್ಯಕಾಸಾರದೊಳು ಸ್ನಾನಮಂಮಾಡಿ ಮಡಿಯುಟ್ಟು, ಧೇನುವಿನಿಂದಯುಕ್ತನಾಗಿ ಆಲಯದೊಳಪೊಕ್ಕು ದೇವಿಗೆ ವಂದನೆಯಂ ಮಾಡಿ ಸುಮಸ್ತೋಪಚಾರಗಳಿಂದ ದೇವಿಯ ಪೂಜೆಯಂಮಾಡಿ ಸ್ತುತಿಗೈಯಲು; ಕಾಳಿಕಾದೇವಿಯು ಪ್ರಸನ್ನಳಾಗಿ ಪ್ರತ್ಯಕ್ಷಳಾಗಿ ಎಲೈ ವತ್ಸ, ಏನುಕಾರಣ ತನ್ನಂ ಪೂಜೆಸುವೆ? ಎಂದು ಕೇಳಲು; ಜನನಿಯುಡಿದಾವರೆಯ ಪೂಜೆಸುವುದೇ ತನ್ನ ಸ್ವಭಾವಜನ್ಮ, ಜನ್ಮಗಳಲ್ಲಿ ಜನನ ಮರಣಗಳಲ್ಲಿ, ಸಂಪದಾಪದದಲ್ಲಿ, ನಿರಂತರದಲ್ಲಿಯೂ ಎನ್ನಂಬೆನ್ನಬಿಡದೆ ಕಾದಿರುವ ನಿನ್ನಡಿಯುಂಪೂಜೆಸದೇ ತನಿಗನ್ಯಗತಿಯೇನೆಂದು ವಂದನೆಯಂ ಮಾಡಲು; ಸಹಸ್ರಾಯುವಿನ ಅಂತಃಕರಣ ವೃತ್ತಿಯಂ ಚಿತ್ತಕ್ಕೆತಂದು ಪ್ರಸನ್ನಮಾನಸಳಾಗಿ ದೇವಿಯು ವತ್ಸ, ಈದಿನವಿಲ್ಲಿರ್ದು ರವಿಯುದಯದೊಳಗೆದ್ದು ಮುಂದೆಪೋಗುವುದೆಂದು ಪೇಳಿ ಸಹಸ್ರಾಯುವಿನ ಕರಮಂ ಪಿಡಿದು ಆವನದಲ್ಲಿ ಸಂಚಾರಮಾಡುತ್ತ, ಸ್ವಯೋಗಮಾಯಾಸಾಮರ್ಥ್ಯದಿಂ ನಾನಾವಿಧ ಪರಮಾಶ್ಚರ್ಯಕರ ವಿಚಿತ್ರಗಳಾದ ಅತ್ಯದ್ಭುತ ವ್ಯಾಪಾರಮಂ ತೋರಿಸುತ್ತ, ವಿಸ್ಮಿತನಾಗಿರುವಸಹಸ್ರಾಯುವಿನಿಂದಸಹಿತಳಾಗಿರವಿಯಸ್ತಮಯಸಮಯದೊಳುನಿಜಾಲಯಕ್ಕೆ ಬಂದು, ತಾನು ಮಾನುಷಸ್ತ್ರೀಯಂತೆ ಆ ಸಹಸ್ರಾಯುವಿಂಗೆ ಸ್ವಾಧೀನಳಾಗಿ, ಭಕ್ತಪರಾಧೀನಳೆಂಬ ನುಡಿಯಂ ಸತ್ಯಮಂಮಾಡಲೋಸುಗ ರಾಜಕುಮಾರಂಗೆ ಸಮಸ್ತ ತತ್ವೋಪದೇಶಮಂಮಾಡುತ್ತ ಕುಳ್ಳಿರ್ದಳು.

ಅನಿತರೊಳಾ ಕಾಳಿಯಾಲಯ ಪುರೋಭಾಗದಲ್ಲಿ ಶಮೀವೃಕ್ಷದಲ್ಲಿ
ರುವ ಸಮಸ್ತ ಪಿಶಾಚ ಗಣಗಳು ಸಂಚಾರಾರ್ಥವಾಗಿ ಪೋಗಲುದ್ಯುಕ್ತ
ರಾಗಿ ಗುಂಪು ಗುಂಪಾಗಿ ಬಂದು ದೇವಿಯಡಿದಾವರೆಗೆ ವಂದನೆಯಂ ಮಾಡ
ಲು; ದೇವಿಯಾ ಗಣಾಧಿಪತಿಗಳಂ ಕುರಿತು- ಏತಾವತ್ಪರ್ಯಂತವು ನಿಮ್ಮಿಂ
ದ ರಕ್ಷಿತವಾದ ದಿವ್ಯ ಕಿರೀಟಕ್ಕೆ ಪಾತ್ರನಾಗಿರುವ ರಾಜಕುಮಾರ ಬಂದಿ
ರುವನು, ಆಕಿರೀಟವನೀತನಧೀನವಂ ಮಾಡುವುದೆಂದಪ್ಪಣೆಯನೀಯಲು;
ಆ ಗಣಾಧಿಪತಿಗಳು ವಂದೆಯಂ ಮಾಡಿ, ರಾಜರ್ಷಿಯು ಶಮೀವೃಕ್ಷವಂ
ಒಂದೇಪ್ರಹಾರದಿಂದ ಛೇದಿಸಿದವಂಗೆ, ಕಿರೀಟವಂ ಕೊಡುವುದೆಂದು ಸ
ಮಯಬಂಧಮಂ ಮಾಡಿರುವವೃತ್ತಾಂತವಂ ವಿಜ್ಞಾಪನೆಯಂ ಮಾಡಲು; ದೇ
ವಿಯಾನುಡಿಯಂ ಕೇಳಿ, ಸಹಸ್ರಾಯುವಿನ ಮುಖಮಂ ನೋಡೆ, ಸಹ
ಸ್ರಾಯುವು ದೇವಿಯ ಅಭಿಪ್ರಾಯವಂ ತಿಳಿದು, ಖಡ್ಗಹಸ್ತನಾಗಿ ಎದ್ದು
ವಂದನೆಯಂ ಮಾಡಿ ಪೊರಮಡಲು; ಸಮಸ್ತ ಪಿಶಾಚಗಳಿಂದ ಸಹಿತಳಾಗಿ
ದೇವಿಯೂ ವೃಕ್ಷದಡಿಗೆ ಬರಲು; ಸಹಸ್ರಾಯುವು ಖಡ್ಗಾಯುಧವಂ ನೆತ್ತಿ,
ಶಮೀವೃಕ್ಷದಡಿಯಲ್ಲಿ ಪ್ರಯೋಗವಂ ಮಾಡಲು; ಆ ಮಹಾ ವೃಕ್ಷವು
ಒಂದೇ ಪ್ರಹಾರದಿಂದ ಛಿನ್ನವಾಗಿ ಬಹುದೂರ ಪೋಗಿ ಬೀಳೆ, ಆಕ್ಷಣದ
ಲ್ಲಿ ಅನೇಕ ಕೋಟಿ ಪಿಶಾಚಗಳ ಸಮೂಹವು ಕಿರೀಟವಂ ಎತ್ತಿ ರಾಜಕು
ಮಾರನ ಮುಂದೆ ತಂದಿಡಲು; ಉದಯಿಸುವ ರವಿಯಂತೆ ಅತಿ ಪ್ರಕಾಶಮಾ
ನವಾಗಿರುವ ಆದಿವ್ಯ ಕಿರೀಟವಂ ನೋಡಿವಿಸ್ಮಿತನಾಗಿ, ಜವದಿಂದೆದ್ದು ಕಿರೀ
ಟವಂ ತನ್ನ ಹಸ್ತದೊಳೆತ್ತಿ ದೇವಿಯಡಿದಾವರೆಗೆ ಸಮರ್ಪಣೆಯಂ ಮಾ
ಡಲು; ದೇವಿಯುದಂ ತನ್ನ ಕರದಿಂದೆತ್ತಿ ಸಹಸ್ರಾಯುವಿನ ಶಿರದಮೇಲಿ
ಟ್ಟು ಪರಮಾನುಗ್ರಹನ ಮಾಡಿ ಅಂತರ್ಧಾನವನ್ನೈದಲು; ಪಿಶಾಚಗಣಗಳು
ಸಹಸ್ರಾಯುವಿಗೆ ವಂದನೆಯಂ ಮಾಡಿ ತಮಗೇನಪ್ಪಣೆ ಎಂದು ಕೇಳೆ; ದೇ
ವಿಯ ಅಡಿದಾವರೆಯ ಸೇವಿಸುತ್ತಿರುವುದೆಂದು ಅಪ್ಪಣೆಯನಿತ್ತು, ಆರಾತ್ರಿ
ಅಲ್ಲಿದ್ದು, ಪ್ರಾತಃಕಾಲದೊಳೆದ್ದು ವಿಮಾನಾರೂಢನಾಗಿ ದಂಡಕಾರಣ್ಯಕ್ಕೆ
ಬಂದು, ಮಾರ್ಗದೊಳು ಕಾದಿರುವ ಸಹಾಧ್ಯಾಯಿಗಳಾದ ರಾಜಕುಮಾರರೆ
ಲ್ಲಾ ತನ್ನಾಗಮನನಿರೀಕ್ಷಣೈಕತತ್ಪರರಾಗಿ, ಕ್ಲೇಶದಿಂ ಆವರಣನಿರ್ಮಾಣಮಂ

ಮಾಡಿಕೊಂಡಿರುವುದಂ ಕಂಡು, ಅಲ್ಲಿಗೆಬಂದು ವಿಮಾನಾವರೋಹಣಮಂ ಮಾಡಲು; ಅಮೃತಪ್ರಾಶನದಿಂದಲು, ದಿವ್ಯ ಕಿರೀಟಕುಂಡಲಾದಿಗಳಿಂದ ಸಾಕ್ಷಾತ್ಪರಭಾಸ್ಕರನಂತೆ ಜ್ಯೋತಿರ್ಮಯನಾಗಿ ಪ್ರಕಾಶಿಸುತ್ತಿರುವ ಸಹಸ್ರಾಯುವಂ ಕಂಡು ವಿಸ್ಮಿತರಾಗಿ ವಂದನೆಯಂ ಮಾಡಲು; ಅವರನಾಲಿಂಗಿಸಿ, ಕುಶಲ ಪ್ರಶ್ನೆಯಂ ಮಾಡಿ, ಅವರಿಂದ ಬಹು ಪೂಜಿತನಾಗಿ ನೈಮಿಶಾರಣ್ಯವಾಸಿಗಳಾದ ತಾಪಸರ ಮುಖದಿಂದ ರುರುವೇ ಮೊದಲಾದ ರಾಕ್ಷಸರ ಹನನಮಂ ಕೇಳಿ ಇದ್ದವರಾದಕಾರಣ, ರಾಜಕುಮಾರರು ಪೋಗಿ ಬಂದ ವೃತ್ತಾಂತಮಂ ಕೇಳಲು; ಸಹಸ್ರಾಯುವು ಸವಿಸ್ತಾರವಾಗಿ ಸಕಲವೃತ್ತಾಂತಮಂ ಪೇಳೆ, ಮಹೀಪತಿಗಳು ಮಹೋದರೀ ಪುತ್ರರು ಸಹಸ್ರಾಯುವಂ ಕೊಲ್ಲಬೇಕೆಂದು ಮಾಡಿದ ಚತುರೋಪಾಯಮಂ, ಕಿಂಪುರುಷಖಂಡದೊಳಾದ ವೃತ್ತಾಂತಮಂ, ಅಲ್ಲಿ ರುರು ಮೊದಲಾದ ರಕ್ಕಸರ ಮೃತಿಪ್ರಕಾರಮಂ, ಸುಪ್ರಭಾ ಕರಗ್ರಹಣಮಂ, ಕಿರೀಟಕುಂಡಲಪ್ರಾಪ್ತಿಸಂವಿಧಾನಮಂ, ಸುಧಾಕಲಶವು ಅನಾಯಾಸದಿಂದೊರೆದ ಚಮತ್ಕಾರಮಂ, ಧೇನು, ಮುದ್ರಿಕಾ, ಮುಕ್ತಾಹಾರ, ಮಹಾಸ್ತ್ರಾದಿಗಳು ಲಬ್ಧವಾದವೃತ್ತಾಂತಮಂ, ಉತ್ತರಕುರುಪ್ರವೇಶಮಾಹಾತ್ಮೆಯಂ ಸವಿಸ್ತಾರವಾಗಿ ಕೇಳಿ ಪರಮಾಶ್ಚರ್ಯಭರಿತರಾಗಿ, ಸಹಸ್ರಾಯುವಂ ಬಹುಪ್ರಕಾರದಿಂ ಕೊಂಡಾಡಿ, ಬಹುಮಾತಿನಿಂದೇನು, ಸಾಕ್ಷಾದ್ದಾಕ್ಷಾಯಣೀ ಕಟಾಕ್ಷವೇ ಪುರುಷಾಕಾರಮಂ ತಾಳಿರುವುದೆಂದು ಮನದೊಳು ನಿಶ್ಚಯಮಾಡಿ, ತಾವು ಬಹುಕಾಲ ತಪಮಂ ಮಾಡಿದ್ದವಾದಕಾರಣ, ಮಹಾನುಭಾವನಾದ ನಿನ್ನಲ್ಲಿ ಮೈತ್ರಿಯಂ ಸಂಪಾದಿಸಿ, ನಿನ್ನ ಕಟಾಕ್ಷಕ್ಕೆ ಪಾತ್ರರಾದೆವೆಂದು ವಿಜ್ಞಾಪನೆಯಂ ಮಾಡಲು; ಸಹಸ್ರಾಯುವಾ ಮಹೀಪತಿಗಳ ನುಡಿಯಂ ಕೇಳಿ ನಸುನಗುತ ಸಮಸ್ತ ನರಪತಿಗಳಿಂದ ಸಹಿತನಾಗಿ ವಿಮಾನಾರೂಢನಾಗಿ, ಸತ್ಯವ್ರತನಿರುವ ಗುಹಾದ್ವಾರ ಸಮೀಪಕ್ಕೆ ಬಂದು, ಸಮಸ್ತ ರಾಜಕುಮಾರರಿಂ ಸಹಿತನಾಗಿ ವಿಮಾನದಿಂದಿಳಿದು ಸಹಸ್ರಾಯುವು ಗುಹಾದ್ವಾರಕ್ಕೆ ಬರುತಿರಲು; ಸುತೀಕ್ಷ್ಣನು ನಿರ್ಧನಿಕನು ನಿಕ್ಷೇಪಮಂ ಕಂಡಂತೆ; ಕೋಸಲಾಧಿಪತಿಯಂ ಕಂಡು ಪರಮ ಸಂತೋಷದಿಂದೆದುರ್ಗೆಬಂದು ಆಲಿಂಗನಮಂ ಮಾಡಿ ಕುಶಲಪ್ರಶ್ನೆಯಂ

ಮಾಡಿ, ಗುಹಾದ್ವಾರಕ್ಕೆ ಬಂದು ಕುಳಿತು, ಧಾನ್ಯಮಾಲಿನೀಪತಿಯುः-ಆಚಾರ್ಯನೆಲ್ಲಿರುವನಾತನಡಿದಾವರೆಗೆ ವಂದಿಸುವೆ ತೋರೆಂದು ಗುರುಪುತ್ರನಂ ಕೇಳೆ; ಸುತೀಕ್ಷ್ಣನು ಕಂಬನಿದುಂಬಿ ಮುಕ್ತಕಂಠನಾಗಿ ರೋದನವಂ ಮಾಡಲು; ಸಹಸ್ರಾಯುವು ಖಿನ್ನನಾಗಿ ಚಾಪಾಚಾರ್ಯನು ಮೃತನಾದನೋ ಎಂಬ ಭಯದಿಂದ ಕಾತರನಾಗಿ, ಸುತೀಕ್ಷ್ಣನಂ ಕುರಿತು-ಏಕೆ ನೀನಳುವೆ, ಕಾರಣವೇನು ಪೇಳೆಂದೆನಲು; ಸುತೀಕ್ಷ್ಣನು ಸಕಲ ವೃತ್ತಾಂತವಂ ವಿಸ್ತಾರವಾಗಿ ಪೇಳೆ, ಕೇಳಿ, ಕೋಸಲಪತಿ ವಿಸ್ಮಿತನಾಗಿ, ಸತ್ಯವ್ರತನು ಶಿಲಾರೂಪಿಯಾಗಿರುವ ತಾಣವಂ ತೋರು ತನಗೆಂದು ಕೇಳಲು; ಸುತೀಕ್ಷ್ಣನು ಸಹಸ್ರಾಯುವಿನ ಕರವಂ ಪಿಡಿದು ಗುಹಾಂತರಾಳವಂ ಪೊಕ್ಕು ತೋರಲು; ಸಮಸ್ತ ರಾಜಕುಮಾರರಿಂ ಸಹಿತನಾದ ಸಹಸ್ರಾಯುವಾಚಾರ್ಯನಂ ನೋಡಿ ಬಹು ದುಃಖಿತನಾಗಿ, ಭಕ್ತಿಭಾವದಿಂ ವಿಹ್ವಲನಾಗಿ, ಜವದಿಂ ಶಿಲಾರೂಪಿಯಾದ ಸತ್ಯವ್ರತನಡಿಗೆ ವಂದಿಸುತಾಲಿಂಗನೆಯಂ ಮಾಡೆ, ಅವನಾಲಿಂಗನೆಯಿಂದಲು, ಹರಮುದ್ರಿಕಾ ಘಟಿತದಿವ್ಯಮಣಿಸ್ಪರ್ಶನಮಾತ್ರದಿಂದಲು ಸತ್ಯವ್ರತನು ಸುಪ್ತೋತ್ಥಿತನಂತೆ ಶಿಲಾರೂಪದಿಂ ತತ್‌ಕ್ಷಣದಲ್ಲಿ ನಿವೃತ್ತನಾಗಿ ಕಂದೆರದು ಸಹಸ್ರಾಯುವಂ ಸುತೀಕ್ಷ್ಣನಂ ಕಂಡು ಪರಮಸಂತೋಷಮಾನಸನಾಗಿ, ಸಹಸ್ರಾಯುವಂ ಆಲಿಂಗನವಮಾಡಿ, ತೊಡೆಯಮೇಲೆ ಕುಳ್ಳಿರಿಸಿ ಮೈದಡವಿ ಪರಮಾನುರಾಗದಿಂ ಪರವಶನಾಗಿ, ಸಹಸ್ರಾಯುವಂ ಕುರಿತು-ವತ್ಸ, ಶಿಲಾರೂಪ ಪರಿಹರವೆಂತಾದುದೆಂದು ಕೇಳಲು; ಸಹಸ್ರಾಯುವು ಹರಮುದ್ರಿಕಾ ಘಟಿತಮಣಿಮಯಮಾಹಾತ್ಮ್ಯೆಯಂ, ತತ್ಪ್ರಾಪ್ತಿ ಪ್ರಕಾರಮಂ ವಿಜ್ಞಾಪನೆಮಾಡೆ, ಮಣಿಸ್ಪರ್ಶಪ್ರಭಾವದಿಂದ ಮಂಗಳಕಳೇಬರ ಬಂದುದೆಂದು ವಿಜ್ಞಾಪನೆಯಂಮಾಡಲು; ಸತ್ಯವ್ರತನದಂಕೇಳಿಸಾಕ್ಷಾತ್ಶಚೀಪತಿಯಂತೆ ದಿವ್ಯತೇಜಸ್ಸಿನಿಂ ಮೆರೆವ ಮಹಾನುಭಾವನಾದ ಶಿಷ್ಯನಂ ನೋಡಿ, ತಾನು ಮಾಡಿದಪುಣ್ಯದಿಂ ದಕ್ಷಿಣಾಮೂರ್ತಿಯೇ ಶಿಷ್ಯಭಾವಮಂ ವಹಿಸಿ ಬಂದಿರುವನಲ್ಲದೆ ಮನುಜನಿವನಲ್ಲೆಂದು ನಿಶ್ಚೈಸಿ, ಪೋಗಿ ಬಂದ ವೃತ್ತಾಂತಮೇನೆಂದು ಕೇಳಲು; ಸಹಸ್ರಾಯುವು ಕೈಮುಗಿದು ಸರ್ವವೃತ್ತಾಂತಮಂ ಸಂಕ್ಷೇಪದಿಂದ ವಿಜ್ಞಾಪನೆಯಂ ಮಾಡೆ, ಸತ್ಯವ್ರತನು ಕೇಳಿ ವಿಸ್ಮಿತ

ನಾಗಿ, ಸಹಸ್ರಾಯುವಂ ಕೊಂಡಾಡಿ ಪ್ರಸನ್ನಾಂತಃಕರಣನಾಗಿ, ವಿಶ್ವಭುಗೆಂಬ ಮಹಾಸ್ತ್ರವನಿತ್ತು, ಅದರ ಪ್ರಭಾವಮಂ ವಿಸ್ತಾರವಾಗಿ ಪೇಳೆ, ಈ ಮಹಾಸ್ತ್ರವುಜಗತ್ಸಂಹಾರಕಾಲವಲ್ಲದೇಪ್ರಯೋಗಿಸಲಾಗದದುಕಾರಣ,ಪೂಜಿಸುತ್ತಿರಲು ಸಮಸ್ತ ದೇವಾಸುರರು ನಿನಗಂಜುವರು; ಸಮಸ್ತ ಚರಾಚರ ಪ್ರಾಣಿಗಳಿಂದ ವಂದ್ಯನಾಗಿರುವೆ, ಸಂಶಯವಿಲ್ಲವೆಂದು ಪರಮಾನುಗ್ರಹವ ಮಾಡಿ ಉತ್ತರಕುರುವಿಂಗೆ ಪೋಗಲು ಸಾವಕಾಶವುದೇನೆಂದು ಕೇಳಲು; ಸಹಸ್ರಾಯುವು ಕೈಮುಗಿದು ಸ್ನಾನಭೋಜನಾದಿಗಳ ಮಾಡಿ ಪೋಗುವಂತೆ ಮಾಡಬೇಕೆಂದು ಬಿನ್ನಹಮಾಡಲು, ಸತ್ಯವ್ರತನು ಹಾಗೆ ಆಗಲೆಂದೊಡಂಬಟ್ಟು ಸ್ನಾನಾರ್ಥವಾಗಿ ಸಹಸ್ರಾಯುವಿನಿಂದೊಡಗೂಡಿ ಗುಹೆಯಿಂ ಪೊರಮಟ್ಟು ಬಹಿರ್ಭಾಗಮನೈದಲು; ರಾಜಕುಮಾರಸಮುದಾಯವೆಲ್ಲಾವಂದನೆಯಂಮಾಡಲವರಿಂದೊಡಗೂಡಿ ಸ್ನಾನಾದಿಗಳ ಮಾಡಲು, ಸಹಸ್ರಾಯುವು ಜವದಿಂದ ಸ್ನಾನಮಂ ಮಾಡಿ, ನಿತ್ಯನಿಯಮಾದಿಗಳನಾಚರಿಸಿ, ಧೇನುವಿನ ಪೂಜೆಯಂ ಷೋಡಶೋಪಚಾರದಿಂ ಮಾಡಿ,ಆಚಾರ್ಯನೇ ಮೊದಲಾದ ಸಮಸ್ತ ರಾಜಕುಮಾರರಿಂಗೆ ಆತಿಥ್ಯಮಂ ಮಾಡಬೇಕೆಂದು ಪ್ರಾರ್ಥನೆಯಂ ಮಾಡಲು;ತತ್ಕ್ಷಣದಲ್ಲಿ ದಿವ್ಯಾಲಯನಿರ್ಮಾಣವಾಗಲು;ಸತ್ಯವ್ರತನದಂ ಕಂಡು ವಿಸ್ಮಿತನಾಗಿ ನೋಡುತ್ತಿರಲು; ಆ ರಾಜಕುಮಾರನು ಗುರುವಿನೆಡೆಗೆ ಬಂದು ವಂದನೆಯಂಮಾಡಿ, ಆತಿಥ್ಯಮಂ ಮಾಡುವರೆ, ಈ ಆಲಯಮಂ ಪ್ರವೇಶಮಾಡಬೇಕೆಂದು ಪೇಳಲು; ಸತ್ಯವ್ರತನು ಶಿಷ್ಯರಿಂದಲೂ, ಸುತನಿಂದಲೂ ಸಹಿತನಾಗಿ ದಿವ್ಯಾಲಯಪ್ರವೇಶಮಂ ಮಾಡಿ, ಪಂಗ್ತಿಪಂಗ್ತಿಯಾಗಿ ಕುಳಿತು ನೋಡುತ್ತಿರಲು; ಧೇನುವಿನ ಮುಖದಿಂದ ಅನೇಕ ಅಪ್ಸರಮಾನಿನಿಯರುದಯಿಸಿ, ಸುವರ್ಣಮಯಪಾತ್ರೆಯೊಳು ಸರ್ವರಿಗೂ ಯಾವದಪೇಕ್ಷಿತಪದಾರ್ಥಗಳ ಭೋಜನಮಾಡಿಸಿ, ಗಂಧ, ಸುಮಾಲಿಕಾ, ವಸ್ತ್ರಭೂಷಣಾದಿಗಳಿಂದ ಸತ್ಕರಿಸಿ, ಅಂತರ್ಧಾನಮಂ ಧೇನುವಿನಂಗದೊಳಗೈದಲು; ಸತ್ಯವ್ರತನೇ ಮೊದಲಾದ ರಾಜಕುಮಾರರೆಲ್ಲರು ನೋಡಿ, ಪರಮಾಶ್ಚರ್ಯಯುಕ್ತರಾಗಿ ಕೊಂಡಾಡಿ, ಧೇನುವಿಗೆ ವಂದನೆಯಂ ಮಾಡಲು; ಸಹಸ್ರಾಯುವು ಸ್ವಾಚಾರ್ಯನಿಂದ ಸಹಿತನಾಗಿ ಪ್ರಯಾಣೋದ್ಯುಕ್ತನಾ

ಗಲು ರಾಜಕುಮಾರರು ಗುರುವಿಗೆ ವಂದನೆಯಂಮಾಡಿ, ಮುಂದೆ ತಮಗೇನ ಪ್ಪಣೆಯೆಂದು ಕೇಳಲು; ಸಹಸ್ರಾಯುವಿನಆಜ್ಞಾನುಸಾರವಾಗಿರುವುದೆಂದು ಅಪ್ಪಣೆಗೊಡಲು; ಆ ರಾಜಕುಮಾರರು ಗುರುವಿನಾಜ್ಞೆಯಂ ಶಿರಸಾವಹಿ ಸುತಪ್ಪಣೆಗೊಂಡು, ಸಹಸ್ರಾಯುವಿದ್ದೆಡೆಗೆ ಬಂದು, ಸಮಸ್ತರೂ ವಂದ ನೆಯಂ ಮಾಡಿ, ಆಚಾರ್ಯನಾಜ್ಞೆಯಂ ವಿದಿತಮಾಡಿ, ತಮ್ಮ ತಮ್ಮ ಕಾರ್ಯ ಗಳಂ, ಉಪಪತ್ಯನುಪಪತ್ತಿಗಳಂ ವಿಜ್ಞಾಪನೆಮಾಡಿ, ಮುಂದೆ ತಮಗೇನಾ ಜ್ಞೆಯೆಂದು ಕೇಳಲು, ಸಹಸ್ರಾಯುವು ರಾಜಕುಮಾರರಂ ಕುರಿತು-ಧರ್ಮ ದಿಂ ಪ್ರಜಾಪರಿಪಾಲನವಮಾಡುತ್ತ, ಪರಸ್ಪರ ಸ್ಪರ್ಧೆಯಂ ಮಾಡದೆ, ಸರ್ವ ರೂ ಸುಖದಿಂದಿರುವುದು. ತನ್ನಂ ಮರೆಯಲಾಗದೆಂದು ಪೇಳಿ, ಆಲಿಂಗನಾದಿ ಗಳಿಂದ ಸತ್ಕರಿಸುತ ಅಪ್ಪಣೆ ಗೊಡಲು; ಸರ್ವ ಮಹೀಪತಿಗಳು, ಸಹ ಸ್ರಾಯುವನ್ನಗಲಲಾರದೆ ವಂದನೆಯಂ ಮಾಡಿ, ಸ್ವರಾಜ್ಯಮಂ ಕುರಿತು ನಡೆ ದರು.

ಕಾಂತಿಮಾಲಿನೀತನಯನಾದ ಸಹಸ್ರಾಯುವು. ಸತ್ಯವ್ರತನಂ ತ ತ್ಪುತ್ರನಂ, ಧೇನುವಂ, ವಿಮಾನವನೇರಿಸಿ, ತಾನು ವಿಮಾನವನೇರಿ, ಹೇವಿ ಮಾನರಾಜ, ಉತ್ತರಕುರುವಿಂಗೆ ಪೋಗಬೇಕೆಂದು ಪೇಳಲು, ತದುಕ್ತಿಶ್ರ ವಣಮಾತ್ರದಲ್ಲಿ ಆ ವಿಮಾನವು ಗಗನಮಾರ್ಗದೊಳು ಪೋಗುವ ವೈಭ ವಮಂ, ಸತ್ಯವ್ರತನು ನೋಡಿ, ಶಿಷ್ಯನಂ ಕೊಂಡಾಡುತ್ತ ಬರುತಿರಲು; ಮಾರ್ಗದೊಳ್ ವಾರಣಾಸಿಯಂ ಕಂಡು, ಮಹದುಲ್ಲಂಘನೆವಾಗದೆಂದು ವಿಮಾನಸಹಿತನಾಗಿ ಗಂಗಾತೀರಮನೈದಿ, ಸ್ನಾನಾದಿಗಳಮಾಡಿ, ಧೇನು ಪ್ರಭಾವದಿಂ ದಿವ್ಯಭೋಜನಾದಿಗಳಮಾಡಿ, ಅಲ್ಲಿಂದಪೊರಟು, ರವಿಯಸ್ತ ಮಯಕಾಲಕ್ಕೆ ಉತ್ತರಕುರುವಿಂಗೆ ಬಂದು, ವಿಮಾನರಾಜನಿಳಿಯುತ್ತಿರ ಲು; ನಿರಾಲಂಬಮಾರ್ಗದೊಳು ಆ ಪ್ರದೇಶಗಳನೆಲ್ಲವಂ ಸಹಸ್ರಾಯುವು ಸತ್ಯವ್ರತನಿಗೆ ತೋರಿಸುತ್ತಿರಲು, ಸತ್ಯವ್ರತನು ನೋಡುತಬರುತ, ಅತಿರ ಮಣೀಯಮಾದೊಂದು ಪ್ರದೇಶಮಂ ಕಂಡು, ಶಿಷ್ಯನಂ ಕುರಿತು-ಇಲ್ಲಿ ತಾನು ವಾಸಮಂಮಾಡಬೇಕೆಂದು ಪೇಳಲು; ವಿಮಾನದಿಂದಾಪ್ರದೇಶಕ್ಕೆ ಬಂದು ಸಹಸ್ರಾಯುವಿಳಿದು, ಆ ದಿವ್ಯತಟಿನೀಯಲ್ಲಿ ಸ್ನಾನವು ಮಾಡಿ,

ಸಾಯಾಹ್ನಕರ್ಮಗಳನಾಚರಿಸಿ, ಆ ರಾತ್ರಿ ಸುಖದಿಂದಿದ್ದು, ರವಿಯುದಯವಾಗಲು ಸ್ನಾನನಿಯಮಾದಿಗಳಮಾಡಿ, ಗುರುವಿಂಗೆವಂದನೆಯಂಮಾಡಿ ಅಂಜಲಿಬದ್ಧನಾಗಿ ನಿಂದಿರಲು; ಸತ್ಯವ್ರತನು ಸಹಸ್ರಾಯುವಿನ ಅತ್ಯದ್ಭುತಕರ್ಮವಂ ನೋಡಿ ಪರವಶನಾಗಿ ಪರಮಾನುಗ್ರಹವಂ ಮಾಡಿ ಕೊಂಡಾಡಿ, ದೈತ್ಯದಾನವರ ಭಯದಿಂದ ಮುದ್ರಿಕೆಯಂ ಬೇಡಲು, ಸಹಸ್ರಾಯುವು ಜಪದಿಂದ ಸಾರ್ಥಕವಾದುದೆಂದು ಮುದ್ರಿಕೆಯಂ ಸಮರ್ಪಣೆಮಾಡೆ? ಸತ್ಯವ್ರತನು ವಿಸ್ಮಿತನಾಗಿ ಮುದ್ರಿಕೆಯಂ ತನ್ನ ಕರದೊಳು ಧರಿಸಿ, ಪುತ್ರಸಂತೆಗದು ಸಹಸ್ರಾಯುವಿನ ಹಸ್ತದೊಳಿತ್ತು, ಯಿವನಂ ಎನ್ನಂತೆ ಸಂರಕ್ಷಣೆಯಂಮಾಡಬೇಕೆಂದು ಪೇಳಿ, ಆ ಸುತೀಕ್ಷ್ಣನಲ್ಲಿ ವೊಂದುಉತ್ಕೃಷ್ಟವಿದ್ಯೆಯಿರುವುದು, ಅದುನಿನ್ನಸಮಯಕೊದಗುವುದು, ಯಿವನಂ ಕೈಬಿಡಬ್ಯಾಡವೆಂದು ಪೇಳಿ, ಸಹಸ್ರಾಯುವನಗಲಲಾರದೆ ಆಲಿಂಗನವಂ ಮಾಡಿ, ಸತ್ಯವ್ರತನು ಅಪ್ಪಣೆಗೊಡಲು; ಸಹಸ್ರಾಯುವು, ಸತ್ಯವ್ರತನಿಗೆ ವಂದನೆಯಂ ಮಾಡಿ, ಆ ಸುತೀಕ್ಷ್ಣನಿಂದಲು ಧೇನುವಿನಿಂದಲು, ಸಹಿತನಾಗಿ ವಿಮಾನಾರೋಹಣವಂ ಮಾಡಿ, ದೈವಗತಿಯಿಂದ ಜನನೀಜನಕರಂ ಮರೆತು, ಧಾನ್ಯಮಾಲಿನಿಯಂ ನೋಡಬೇಕೆಂದು, ಆಕೆಯಿಂ ನಿರಂತರಪೂಜಿತಳಾಗಿರುವ ಸರ್ವಮಂಗಳಾದೇವಿಯಿಂದ ಪ್ರೇರಿತಹೃದಯನಾಗಿ, ಉತ್ತರಕುರುವಿನಿಂದ ಪೊರಟು, ರವಿಯಸ್ತಮಯಕಾಲಕ್ಕೆ ಮಿಥಿಲಾಪುರಿಗೆ ಬಂದು, ರಾಜದ್ವಾರದೊಳು ಇಳಿಯಲು; ಆ ಸಮಸ್ತ ಪುರಜನರು ಸಹಸ್ರಾಯುವಂ ನೋಡಿ ಸಂಭ್ರಮಯುಕ್ತರಾಗಿರಲು; ಸಹಸ್ರಾಯುವು ವಿಮಾನದಿಂದಿಳದು, ಸುತೀಕ್ಷ್ಣನಿಂದ ಸಹಿತನಾಗಿ ಧಾನ್ಯಮಾಲಿನಿಯ ಅಂತಃಪುರವಂ ಪೊಕ್ಕು ಬರುತಿರಲು, ಧಾನ್ಯಮಾಲಿನಿಯು ದಿವ್ಯಾಭರಣಭೂಷಿತಳಾಗಿ, ಲಜ್ಜೆಯಿಂ ತಲೆವಾಗಿ ಬಂದು ವಂದನೆಯಂ ಮಾಡಲು, ಸಹಸ್ರಾಯುವು ವಿಯೋಗಜನಿತಾತ್ಯಂತ ಸಂತಾಪದಿಂ ಸಂತಪ್ತಳಾಗಿರುವಳನಾಲಿಂಗಿಸಿ, ಧೇನುವಿಗೆ ವಂದನೆಯಂ ಮಾಡೆಂದು ಪೇಳಲು; ಧಾನ್ಯಮಾಲಿನಿಯು ಧೇನುವಿನ ಚರಣಕ್ಕೆ ವಂದನೆಯಂ ಮಾಡಿ, ಅಂತಃಪುರಕೆ ಕರಕೊಂಡುಪೋಗಿ, ದಿವ್ಯರತ್ನಖಚಿತಾಸನಗಳ ನಿತ್ತು, ದಿವ್ಯೋದಕದಿಂದ ಪಾದವಂ ತೊಳೆದು, ದಿವ್ಯಗಂಧ

ಪುಷ್ಪಾದಿಗಳಿಂದಲಂಕರಿಸಿ, ವಾಲವ್ಯಜನಮಂ ಕರದೊಳಾಂತು ಬೀಸುತ್ತುಂ ಸಾಕ್ಷಾತ್ ರೋಹಿಣೀರಮಣನಂತೆ ಅತಿಪ್ರಕಾಶನಾಗಿರುವ ಕಾಂತನಂ ಕಂಡು ಪರಮಾನಂದವಾರ್ಧಿಯೊಳು ಮುಳುಗಿ ಪರವಶಳಾಗಿ, ತನ್ನಭಾಗ್ಯಕ್ಕೆಣೆಯಿಲ್ಲವೆಂದು ನಲಿದಾಡುತ್ತಲಿರಲು; ಸಹಸ್ರಾಯುವು ಪತ್ನಿಯಿಂಸಹಿತನಾಗಿ ವೀರವರ್ಮರಾಯನಿದ್ದೆಡೆಗೆ ಪೋಗಿ, ದಂಪತಿಗಳಿಗೆ ವಂದನೆಯಂ ಮಾಡಿ ನಿಂದಿರಲು; ವೀರವರ್ಮನು ಜಾಮಾತನಂ ಕಂಡು, ಪರಮಸಂತೋಷಚಿತ್ತನಾಗಿ ದಿವ್ಯಾಸನವನಿತ್ತು, ಕುಶಲಪ್ರಶ್ನೆಯಂ ಮಾಡಿ ಸಕಲವೃತ್ತಾಂತಮಂ ಸಂಕ್ಷೇಪದಿಂ ತಿಳಿದು ಅಪ್ಪಣೆಗೊಡಲು; ಸುಶೀಷ್ಣನಿರುವುದಕ್ಕೆ ಪ್ರತ್ಯೇಕವಾಗೊಂದು ದಿವ್ಯಾಲಯುವ ಬಿಡದಿಯಂ ಮಾಡಿ, ಅನೇಕಸೇವಾಜನರಂ ನಿಷ್ಕರ್ಷೆಯಂ ಮಾಡಿ, ಶೈತ್ಯಾಸನಭೋಜನಾದಿಗಳನ್ನು ಯಥಾಭಿಲಷಿತವಾಗಿ ಮಾಡುವಂತೆ ಕಟ್ಟಲೆಯಂ ಮಾಡಿ, ಸರ್ವಮಂತ್ರಿಯಂ ಕರೆದು ಸಮಸ್ತವೈಭವದಿಂದ ಬಿಡದಿಯಾಲಯಕ್ಕೆ ಸುತೀಕ್ಷ್ಣನಂ ಕಳುಹಿ, ವಿಮಾನಮಂ ಯಿರಿಸುವದಕ್ಕೆ ತದನುರೂಪವಾದ ದಿವ್ಯಸ್ಥಾನಮಂ ನೋಡಿ, ಅತ್ಯಂತಮನೋಹರವಿಶಾಲನಿಲಯದೊಳಿಟ್ಟು, ಸಹಸ್ರಜನ ಸುಭಟರಂ ಕಾವಲಿರಿಸಿ, ಧೇನುವಂ ತನ್ನಂತಃಪುರದೊಳಗೊಂದಾಲಯದೊಳಿರಿಸಿ, ದಿವ್ಯಪರ್ಯಂಕಶಯ್ಯಾದಿಗಳನ್ನು ಧೇನುವಿಗೆ ಸಿದ್ಧವಂ ಮಾಡಿ, ಧೇನುವನ್ನು ಆ ದಿವ್ಯಾಲಯದೊಳಿರಿಸಿ, ತಾನು ಸ್ನಾನದಾಲಯಕೆ ಬಂದು, ಅನೇಕ ಸೇವಾಜನರಿಂದ ಸಾಂದ್ರಸಾದ ನಿಲಯಮನೈದಿ, ಸ್ನಾನಮಂ ಮಾಡಿ ಪೀತಾಂಬರವನುಟ್ಟು, ನಿತ್ಯನಿಯಮಾದಿಗಳಮಾಡಿ, ದಿವ್ಯಷೋಡಶೋಪಚಾರದಿಂ ಧೇನುವಂ ಪೂಜಿಸಿ, ತರುವಾಯ ತಾನು ಭೋಜನಮಾಡಿ, ಧಾನ್ಯಮಾಲಿನಿಯ ಶಯ್ಯಾಗಾರಮಂ ಪೊಕ್ಕು, ಶಯನನಿಲಯ ವೈಭವಮಂ ನೋಡಿ ವಿಸ್ಮಿತನಾಗಿ, ಧಾನ್ಯಮಾಲಿನಿಯ ಸಮೇತ ದಿವ್ಯ ಪರ್ಯಂಕದೊಳು ಕುಳಿತು, ತಾಂಬೂಲ ಚರ್ವಣಾದಿಗಳಂ ಮಾಡಿ, ನಾನಾವಿಧಕ್ರೀಡೆಗಳಿಂದ ಶ್ರಾಂತನಾಗಿ ಸುಷುಪ್ತಿಯನೈದಿ, ಅರುಣೋದಯವಾಗಲು ಎದ್ದು ನಿತ್ಯನಿಯಮಾದಿಗಳಮಾಡಿ; ಸರ್ವಾಭರಣಭೂಷಿತನಾಗಿ, ಸಮಸ್ತಪ್ರಕೃತಿಗಳಿಂದ ಸಂಪೂರ್ಣವಾದ ಸಭಾಸ್ಥಾನಮನೈದಿ, ದಿವ್ಯಸಿಂಹಾಸನದೊಳಾಸೀನನಾಗಿ ರಾಜ್ಯಭಾ

ರವಂ ಮಾಡುತ್ತಲಿದ್ದನು.

ಇತ್ತಲಾ ವೀರವರ್ಮರಾಯನು ಸುತೀಕ್ಷ್ಣನಮುಖದಿಂದ ಪರೋಕ್ಷದಲ್ಲಿ ಸಹಸ್ರಾಯುವಿನ ಮಾಹಾತ್ಮೆಯಂ ವಿಸ್ತಾರವಾಗಿ ಕೇಳಿ, ಪರಮ ಸಂತೋಷಯುಕ್ತನಾಗಿ, ಪತ್ನಿಯಸಂಗಡ ಮಗಳ ಪುಣ್ಯಕ್ಕೆಣೆಯಿಲ್ಲವೆಂದು ಧಾನ್ಯಮಾಲಿನಿಯಂ ಅಡಿಗಡಿಗೆ ಕೊಂಡಾಡುತ್ತಲಿದ್ದನು.

ಒಂದು ದಿನ ಸಹಸ್ರಾಯುವು ಮನೆಗೆ ಬಂದು ವಂದನೆಯಂಮಾಡಲು? ಮಹೀಪತಿಯು ಇದೇ ಸಮಯವೆಂದು ಸಹಸ್ರಾಯುವಂ ಕುರಿತು-ವತ್ಸ ರಾಜ್ಯ, ಬೊಕ್ಕಸ, ಸೇನಾದಿಸಪ್ತಪ್ರಕೃತಿಯಿಂ ಸಂಪೂರ್ಣವಾದ ಸರ್ವಸಾಮ್ರಾಜ್ಯವಂ ನಿನಗೊಪ್ಪಿಸಿರುವೆನು; ತಾನು ಪರಲೋಕಾರ್ಥವಾಗಿ ತಪವಂ ಮಾಡುವರೆ; ಸತಿಯಿಂಜೊಡಗೂಡಿ ತಪೋವನಕ್ಕೆ ಪೋಗುವೆನೆಂದು ಪೇಳಿ, ಅಮಾತ್ಯರೇ ಮೊದಲಾದ ಸರ್ವರಂ ಕರೆಸಿ-ನಿಮ್ಮರಸನೈದಿ ಬಂದಿರುವನು, ನೀವೀತನಾಜ್ಞಾನುಸಾರವಾಗಿರುವುದೆಂದಪ್ಪಣೆಯಿತ್ತು, ವಾನಪ್ರಸ್ಥಾಶ್ರಮ ಸ್ವೀಕಾರಮಂಮಾಡಿ, ದಂಪತಿಗಳೀರ್ವರೂ ಧಾನ್ಯಮಾಲಿನಿಯನಾಲಿಂಗಿಸಿ, ಮುದ್ದಾಡಿ ಕೊಂಡಾಡಿ, ಸರ್ವ ಪ್ರಕಾರದಿಂ ಪತಿ ಮನೋರಥಾನುಗುಣವಾಗಿ ನಡೆಯುವುದೆಂದುಪೇಳಿ, ಆಶೀರ್ವಾದಮಂಮಾಡಿ, ಸಂಸಾರಮಹಾಂಧಕೂಪದಿಂದುದ್ಧೃತರಾಗಿ, ನಗರಮಂಬಿಟ್ಟು ತಪೋವನಕ್ಕೆ ತೆರಳಿದರು.

ಅನಂತರದಲ್ಲಿ ಸಹಸ್ರಾಯುವುಪತ್ನೀಸಹಿತನಾಗಿ, ಸುಖಾನುಭೋಗವಂಮಾಡುತ್ತ ಧರ್ಮದಿಂ ರಾಜ್ಯಪರಿಪಾಲನೆಯಂಮಾಡುತಿರಲು; ಆ ರಾಜ್ಯದೊಳು ಆರ್ತರು, ರೋಗಿಗಳು, ಅಲ್ಪಾಯುಗಳು, ಅನೃತವಾದಿಗಳು, ಕುರೂಪಿಗಳು, ಅನ್ನಾರ್ಥಿಗಳು, ಅಂಗಹೀನರು, ಸ್ವಾಮಿಗುರು ಮಿತ್ರ ಮಾತಾಪಿತೃದ್ರೋಹಿಗಳು, ಜಾರಚೋರಾದಿ ದುಷ್ಟರ ಅರಸಿದಡೆಯುಮಿಲ್ಲ ದಾನಶೂರರು, ಮಾನಸ್ವಿಗಳು, ಮಧುರಭಾಷಿಗಳು, ಸತ್ಯವಾದಿಗಳು, ಧರ್ಮತತ್ಪರರು, ಗೋಬ್ರಾಹ್ಮಣಾತಿಥಿಪೂಜಾನಿರತರು, ವಿಚಕ್ಷಣರು, ದೂರದರ್ಶಿಗಳು, ಮಾನಿಗಳು, ಮಾತ್ಸರ್ಯಶೂನ್ಯರು, ಅಖಿಲಸಂಪದಗಳಿಂ ಸಮೃದ್ಧರಾದವರು, ನಿರಹಂಕಾರಿಗಳು, ವದಾನ್ಯರು, ಪರಲೋಕತತ್ಪರ

ರು, ಇಂತು ಪ್ರಜೆಗಳಖಿಳಗುಣಶಾಲಿಗಳಾಗಿ ಸಂತತಿ ಸಂಪದಗಳಿಂದ ನರರೆಲ್ಲ ಸುರರಂತಿರುವರು, ನಾಡೆಲ್ಲ ನಾಕದಂತಿಹುದು, ಆಧರಿತ್ರಿಕಾವುದು ಘುಳಾದಳೆನೆಂಬೆನದ್ಭುತವ;- ಅರಸ, ಕೇಳವಧರಿಸು, ಎಲ್ಲಿನೋಡಿದಡೆಯುಂ. ಧರ್ಮವೂ, ತಟಾಕ, ವಾಪೀ, ಕೂಪ, ಕಾಸಾರ, ಪ್ರಪಾಶಾಲೆಗಳು, ಆರಾಮಗಳು, ದೇವಾಲಯಗಳು, ಸಾಂದ್ರವಾಗಿರುವುದು. ಆನಾಡಿನೆಲ್ಲಿಯುಂ, ದಾರಿದ್ರ್ಯ ಮೃತ್ಯು ಚೋರಾದಿಭಯರಹಿತರಾಗಿ, ಸಂತತಿ ಸಂಪದದಿಂದ ಸಮೃದ್ಧರಾಗಿಹರು. ಜನರೆಲ್ಲ ರಾಜಾಜ್ಞೆಯಿಂದ ಸಮಸ್ತವರ್ಣದವರು, ಸ್ವಧರ್ಮದಲ್ಲಿ ನಿರತರಾಗಿರುವರು. ಅಂತುಮಲ್ಲದೆ, ಭೂಸುರರು ವೇದಾಧ್ಯಯನಶಾಸ್ತ್ರೇತಿಹಾಸಪುರಾಣಶ್ರವಣಮನನತತ್ಪರರಾಗಿ, ನಿರಂತರದಲ್ಲಿ ವಿಚಿತ್ರ ನಾನಾವಿಧಯಾಗವಂ ಮಾಡುತ್ತಿರುವರು; ಆದುದರಿಂದ ವರ್ಷಾದಿಗಳು ತತ್ಕಾಲದೊಳಾಗುತಿರುವರದರಿಂದ ಸಮಸ್ತ ಭೂಮಂಡಲವು ಸಫಲವಾಗಿರುವುದು. ಇಂತು ನಿಜ ಭುಜ ಪ್ರತಾಪಶಮಿತ ಸಕಲ ಧರ್ಮಪಕ್ಷನಾದ ಸಹಸ್ರಾಯುವು, ಅಹರ್ನಿಶವು ಆಪನ್ನರಾಗಿ ಯಾರು ಬಂದಡೆಯುಂ, ಆ ಕ್ಷಣದಲ್ಲಿ ಅವರ ವೃತ್ತಾಂತವಂ ವಿಚಾರಿಸಿ, ಅವರೆಡರಂ ಪರಿಹರಿಸಿ, ಅವರಿಷ್ಟಾರ್ಥವನ್ನು ಪೂರ್ತಿಮಾಡಿ ಯಿತ್ತಂಕಳುಹಿ ತದನಂತರದೊಳಿತರ ಕಾರ್ಯವಂ ನೋಡುವನು. ಇಂತು ಸಹಸ್ರಾಯುವು ನಿತ್ಯಕರ್ಮದಂತೆ ನಡೆಸುತ್ತಿರಲು; ಆರಾಷ್ಟ್ರದಲ್ಲಿ ಸರ್ವ ಪ್ರಾಣಿಗಳು ಸಮೃದ್ಧರಾಗಿ, ಮನೆ ಮನೆಯೊಳು ಸಹಸ್ರಾಯುವಂ ಕೊಂಡಾಡುತ್ತಲಿದ್ದರು.

ಇಂತುಸರ್ವ ವರ್ಣ ಧರ್ಮಗಳಲ್ಲಿ, ವ್ಯತ್ಯಾಸಬಾರದಂತೆಚಂಡಶಾಸನನಾಗಿ ರಾಜ್ಯವಂ ಪೊರೆಯುತ್ತ, ಸರ್ವ ಮಂಗಳಾಚರಣ ಕಮಲ ಸೇವಾತತ್ಪರನಾಗಿ, ಧಾನ್ಯಮಾಲಿನಿಯೊಡನೆ, ಸಕಲ ಭೋಗಾನುಭವವಂಮಾಡುತ್ತಿದನೆಂಬಲಿಗೆ * ಇಂತು ಕರ್ನಾಟಕ ಭಾಷಾವಿರಚಿತವಾದ ಶ್ರೀಮತ್ಸಮಸ್ತ ಭೂಮಂಡಲಮಂಡನಾಯಮಾನನಿಖಿಲದೇಶಾವತಂಸ ಕರ್ನಾಟಕ ಜನಪದಸಂಪದಧಿಷ್ಠಾನುಭೂತ ಶ್ರೀಮನ್ಮಹಿಶೂರ ಮಹಾಸಂಸ್ಥಾನಮಧ್ಯದೇದೀಪ್ಯಮಾನಾವಿಕಲ ಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ನಿಜ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡ

ಲಾನುಭೂತ ದಿವ್ಯ ರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ಪರಮೇಶ್ವರಪ್ರೌಢಪ್ರತಾಪಾಪ್ರತಿಮ ವೀರನರಪತಿಬಿರುದೆಂತೆಂಬರಗಂಡಲೋಕೈಕ ವೀರಯದುಕುಲಪಯಃ ಪಾರಾವಾರಕಳಾನಿಧಿಶಂಖ ಚಕ್ರಾಂಕುಶಕುಠಾರಮತ್ಸ್ಯಶರಭಸಾಳ್ವಗಂಡಭೇರುಂಡ ಧರಣೀವರಾಹಹನುಮದ್ಗರುಡ ಕಂಠೀರವಾದ್ಯನೇಕಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲಧರ್ಮಪತ್ನೀ ಕೆಂಪನಂಜಮ್ಮಾಂಬಾ ಗರ್ಭಸುಧಾಂಬುಧಿರಾಕಾ ಸುಧಾಕರಾಯಮಾನ ಶ್ರೀಚಾಮುಂಡಿಕಾಂಬಾವರ ಪ್ರಸಾದೋದ್ಭವರಾದ, ಆತ್ರೇಯಸಗೋತ್ರ ಆಶ್ವಲಾಯನ ಸೂತ್ರ ಋಕ್ಶಾಖಾನುವರ್ತಿಗಳಾದ, ಶ್ರೀ ಮಹಿಶೂರಪುರವರಾಧೀಶ ಶ್ರೀ ಮತ್ಕೃಷ್ಣರಾಜವಡೆಯರವರು, ಲೋಕೋಪಕಾರವಾಗಿ ರಚಿಸಲ್ಪಟ್ಟ, ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬಾಂಕಿತದಿಂದ ಕರ್ನಾಟಕ ಭಾಷಾವ್ಯಾಖ್ಯಾನರೂಪವಾಗಿ ರಚಿಸಲ್ಪಟ್ಟ, ಶ್ರೀ ಬ್ರಹ್ಮಾಂಡೋಪ ಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ, ಹಯಗ್ರೀವಾಗಸ್ತ್ಯ ಸಂವಾದದಲ್ಲಿ ತ್ರಯೋದಶೋಧ್ಯಾಯಃ॥ ಶ್ರೀ *

ಹದಿಮೂರನೇ ಅಧ್ಯಾಯ ಸಂಪೂರ್ಣವು.



# ಪದಿನಾಲ್ಕನೇ ಅಧ್ಯಾಯ.

ಜಯತ್ಯಪಾರಿಜಾತೋಪಿವಿಬುಧಪ್ರಕರಾಶ್ರಯಃ||
ಅಯಂಕುವಲಯಾಪ್ತೋಪಿನಿರ್ದೋಷಃ ಕೃಷ್ಣಭೂಪತಿಃ||
ನಿಜಭುಜಪ್ರತಾಪವಿದ್ರಾವಿತಾವಿಮಂಡಲನೇಕೇಳು,

ಇತ್ತಲಾ ಕಾಂತಿಮಾಲಿನಿಯಪ್ರಿಯ ಸಖಿಯಾದ ಮತಂಗಿಯೂ, ಸಮಿಧಾಹರಣಾರ್ಥವಾಗಿ, ವಯಸ್ಯರೊಡನೇ ಪೋಗಿ ಬರುವೆನೆಂದು ಪೇಳಿ, ಪ್ರಾತಃಕಾಲದೊಳೆದ್ದು ಪೋದ ಸಹಸ್ರಾಯುವು ರವಿಯಸ್ತಮಯಕಾಲವಾದಡೆಯುಂ ಬಾರದಿರೆ; ಮಹತ್ಸಂತಾಪಯುಕ್ತಳಾಗಿ, ಸಮಿಧಾಹರಣಾರ್ಥವಾಗಿ ಪೋಗಿದ್ದ ವಟುಗಳಂ ಕುರಿತು-ನಿಮ್ಮೊಡನೇ ಬಂದ ಸಹಸ್ರಾಯುವು ಏನಾದನೆಂದುಕೇಳಲು; ಬಾಲಕರು ಮತಂಗಿಯಂಕುರಿತು-ತಾವೆಲ್ಲರೊಂದಾಗಿ ಗ್ರಾಮಾದ್ಬಹಿರ್ಭಾಗಮನೈದಿ, ಯಾವ ದಿಕ್ಕಿಗೆ ಪೋಗುವೆವೆಂದು ಆಲೋಚನೆಯಂಮಾಡುತ್ತ, ಉತ್ತರದಿಕ್ಕನೊಂದುಳಿದು ಮಿಗಿಲಾದ ಯಾವದಿಕ್ಕಿಗೆಲ್ಲಿಗಾದಡೆಯುಂ ಪೋಗುವೆವೆಂದು ಆಲೋಚನೆಯ ಮಾಡುತ್ತ, ಪರಸ್ಪರ ಮಾತಾಡುತ್ತಿರಲು; ನಿನ್ನಮಗನು, ತಾನಿರುವೆ ಭಯ ಬ್ಯಾಡ, ಉತ್ತರದಿಕ್ಕಿಗೆ ನಾನು ಪೋಗುವೆನು, ನೀವ್ಯಾನು ಬರುವುದೆಂದೆನಲು; ನಾವು ಹಿರಿಯರಾಜ್ಞೆಯಂಪೇಳಲು; ಸಹಸ್ರಾಯುವು ಸತ್ವರದಿ ತಾನು ಪೋಗುವೆನೆಂದನು, ಅದಂ ಕೇಳಿ ಬಹುವಿಧದೊಳಾವೆಲ್ಲರು ಪೇಳಿದಡೆಯುಂ ಕೇಳದೆ, ಅತಿಜವದಿಂದ ಪೋದನು. ಅಲ್ಲಿಂದಮುಂದೆ ಏನಾದನೋಕಾಣೆವೆಂದು ನುಡಿಯಲು; ಆ ಮಾತಂಕೇಳಿ ಮತಂಗಿಯು ವೃದ್ಧರಂಕುರಿತು, ಕುಮಾರನುತ್ತರದಿಕ್ಕನೈದಿದನಂತೆ, ಅಲ್ಲೇನು ಭಯವೆಂದುಕೇಳಲು, ಆದ್ವಿಜವರರು ಮರುಗಿ, ಕೇಳೈ ತಾಯೆ, ನಿನ್ನಯ ಕುಮಾರನುತ್ತರದಿಕ್ಕಿಗೆ ಪೋದುದೇತಥ್ಯವಾದೊಡೆ, ಪುನಃ ಬರುವುದಂ ತಾವರಿಯೆವು; ಆ ವನದೊಳೊಂದು ಮೃತ್ಯುವಿಹುದಂತೆ, ಕೇಳದಂಕಂಡು ದೇವತೆಗಳಂಜುವರು, ಕಟಕಟಾ; ಸುಕುಮಾರನೆನ್ನಾದನೋ; ಎಂದು

ನುಡಿಯಲು; ಅದಂಕೇಳಿ, ಮತಂಗಿಯು ಮೂರ್ಛಿತಳಾಗಿ, ಹಂಬಲಿಸುತ್ತಾ ರಾತ್ರಿಯೊಂದು ಯುಗವಾಗಿಕಳೆದು, ಅರುಣೋದಯಂಪೊಳೆದುದು, ಸಹಸ್ರಾಯುವು ಹೋದ ಬಳಿಕ, ತನಗೆ ಜೀವನವಾಸೆಯಿನ್ನ್ಯಾಕೆನುತ, ತಾನೂ ಆ ಉತ್ತರದಿಕ್ಕಿನೊಳಿರುವ ಘೋರಕಾಂತಾರವಂಪೊಕ್ಕು ನೋಡುವೆನೆಂದು ಮುಕ್ತಕಂಠಳಾಗಿ ರೋದನವಮಾಡುತ್ತ, ಬಿಚ್ಚಿದ ಮಂಡೆಯುಳ್ಳವಳಾಗಿ, ತನ್ನತನುವಿನಾಶೆಯುಂಬಿಟ್ಟು, ಪೋಗುತ್ತಿರುವ ಸಮಯದೊಳು, ಸಹಸ್ರಾಯುವಂತಡೆದ ಪಾದಜನೆದುರ್ಗೆಬಂದು, ಪೋಗುವ ಮತಂಗಿಯಂ ಕುರಿತು,ತಾಯೆ-ನೀನೆಲ್ಲಿಗೈದುವೆ, ಇಂತು ದುಃಖಿಪುದ್ಯಾಕೆ, ಎಂದು ಕೇಳಲು; ಮತಂಗಿಯು ಮಗನ ವೃತ್ತಾಂತವಂಪೇಳಲು; ಶೂದ್ರನು ಸ್ಮೃತಿಗೆತಂದು, ತಾಯೆ ಕೇಳ್ತಾನು ಬಹುಪ್ರಕಾರ ಪ್ರತಿಷೇಧವಂ ಮಾಡಿದೆನು, ಆದಡೆಯುಂಕೇಳದೈದಿದನು, ಭುವಿಯೊಳಗೆತಾದೃಶವ್ಯಕ್ತಿಯುಂಕಾಣೆನು, ಕಟ ಕಟ; ಸುಕುಮಾರನೇನಾದನೊ; ಎಂದು ಮರುಗಲು. ಅದಂಕೇಳಿ, ಸಹಸ್ರಾಯುವು ಮೃತ್ಯುಗ್ರಸ್ತನಾದನೆಂದು ನಿಶ್ಚೈಸಿ, ತಾನುಮಾಡಿದಕೃತ್ಯವೆಲ್ಲ ವ್ಯರ್ಥವಾದುದು, ಕಾಂತಿಮಾಲಿನಿಗೆವೃಥಾತಾನು ಶತ್ರುವಾದೆನು,ತಾನಿದ್ದು ಫಲವೇನಿನ್ನು, ಬಾಲಕನುಉತ್ತರದಿಕ್ಕಿಗೆಪೋಗಿ ಮೃತನಾದಂತೆ, ತಾನು ತನುವನೀಗುವೆನೆಂದು ನಿಶ್ಚೈಸಿ, ಉತ್ತರಾಭಿಮುಖಿಯಾಗಿ ನಡೆದು, ಅರಣ್ಯವೆಲ್ಲವಂ ತಿರುಗಿ ಕಾಣದಳಲುತ್ತ, ತರುಲತಾಗಿರಿಗಳಂ, ಮೃಗಪಕ್ಷಿಗಳಂ ಕೇಳುತ್ತ, ಮಾತಾಡದಿರಲುಅತ್ಯಂತಕ್ಲೇಶದಿಂ ಬೀಳುತ್ತೇಳುತ್ತ, ಅನ್ನಾಹಾರನಿದ್ರೆಗಳಂ ತೊರೆದು, ಅರಣ್ಯವೆಲ್ಲವಂ ಸಂಚಾರವಮಾಡಿ ಸಹಸ್ರಾಯುವಂ ಕಾಣದೆ, ಅಡಿಗಡಿಗೆ ಮೂರ್ಛೆಯುಪೊಂದಿ, ಎಚ್ಚೆತ್ತು, ಸಹಸ್ರಾಯುವಂ ಭಕ್ಷಿಸಿದ ಮೃತ್ಯುವು ತನ್ನನದ್ಯಾಕೆಪೊಲ್ಲನೊ; ಎಂದು ಹಂಬಲಿಸಿ ಕರೆಯುತ್ತ, ಇಂತು ಸಪ್ತದಿನವಹೋರಾತ್ರಿಯೂ, ಅರಣ್ಯವೆಲ್ಲವಂ ತಿರುಗಿ ನೋಡಿ ಸಹಸ್ರಾಯುವಂ ಕಾಣದೆ, ಈ ಅರಣ್ಯದೊಳು ಮೃತ್ಯುವಿಹುದೆಂಬ ಕಿಂವದಂತಿಯು, ಯನ್ಮೂಲಕವೋ; ತಿಳಿಯಲಿಲ್ಲ, ಮೃತ್ಯುವಿನಿಂದಾಕ್ರಾಂತ ಮಾಗಿರವುದೀ ಕಾಂತಾರವೆಂಬ ನುಡಿಯನೃತವಲ್ಲದೆ ತಥ್ಯವಾದೊಡೆ, ತಾನುಳಿದಿರುವೆ

ನೆಂತು, ಅದರಿಂದ ಸಹಸ್ರಾಯುವೆಲ್ಲಿ ಪೋಗಿರುವನೋ, ದೇಶ ದೇಶಂಗಳಂ ತಿರುಗಿ ನೋಡಿ ಕಾಣಲಿಬೇಕು, ಎಲ್ಲಿಯುಂ ದೊರೆಯದಿರೆ ಶರೀರವಂ ಬಿಡುವೆನೆಂದು ನಿಶ್ಚಯಮಾಡಿ, ಆ ಅರಣ್ಯದೊಳಿರುವ ಕಾಸಾರದೊಳುಮಿಂದು, ಕಂದಮೂಲಾದಿಗಳತಿಂದು, ಅಲ್ಲಿಂದಪೊರಮಟ್ಟು, ದೇಶದೇಶಂಗಳೊಳು, ಸಕಲನಗರ, ಗ್ರಾಮ, ಶಿಬಿರ, ದೇವಾಲಯ, ಗಿರಿ, ಗಹನ, ತೀರ್ಥ, ಕ್ಷೇತ್ರ, ಮೊದಲಾದ ಸಕಲ ಪ್ರದೇಶಗಳ ನರಸುತ್ತ, ದೇಶಾಟನದಿಂದಲೂ, ನಿದ್ರಾಹಾರಂಗಳಿಲ್ಲದಿರುವದರಿಂದಲೂ, ನಿರವಧಿಯಾದ ಶೋಕದಿಂದಲೂ, ಕೃಶಳಾಗಿ ವಿರೂಪವನ್ನೈದಿ, ಚಂಡಾಲಸ್ತ್ರೀಯೋಪಾದಿಯಲ್ಲಿ ಸಂಚಾರಮಾಡುತ್ತ, ದೈವಾನುಗ್ರಹದಿಂದ ಮಿಥಿಲಾಪುರಕೆಬಂದು, ಪ್ರಾಕಾರಪ್ರವೇಶವಂ ಮಾಡಿ, ಬೀದಿ ಬೀದಿಯೊಳು ಬರುತ, ನಗರವೈಭವವಂ ನೋಡಿ ವಿಸ್ಮಿತಳಾಗಿ, ಮಧ್ಯಾಹ್ನದಾತಪದಿಂದ ಶ್ರಾಂತಳಾಗಿ, ನೆರಳಿದ್ದೆಡೆಗೆ ಪೋಗುವೆನೆಂದಡೆ; ನಾಗರಿಕರೀಕೆಯಂಚಂಡಾಲಿಯಂದುಘರ್ಜಿಸುತ್ತಿರಲು ಅಳುತ ಪಣ್ಯವೀಥಿಯೊಳು ಬರುತಲಿರಲು, ವೈಶ್ಯವೃದ್ಧ ಮಾನಿನಿಯು ಬಹು ವ್ಯಸನಯುಕ್ತಳಾಗಿ, ಗೃಹಾದ್ಬಹಿರ್ಭಾಗದಲ್ಲಿರುವ ವೇದಿಕೆಯಲ್ಲಿ ಕುಳಿತಿರುವಳೀರೋದನವ ಮಾಡುತ್ತ ಬರುತಿರುವ ಮಾತಂಗಿಯಂಕಂಡು ದಯೆವುಳ್ಳವಳಾಗಿ, ಮಾತಂಗಿಯಂ ಕುರಿತು,-ಎಲೈಮಾನಿನಿಯೆ, ನೀನ್ಯಾರು, ಎಲ್ಲಿಂದಬಂದೆ, ಏತಕೆ ರೋದನವಮಾಡುವೆ, ಈ ನಗರದೊಳು ರೋದನ ಧ್ವನಿಯಂಕೇಳಿ ಬಹುಕಾಲವಾದುದು. ಈ ನಗರಕ್ಕರಸಾದ ಸಹಸ್ರಾಯುವು ರೋದನವಂಕೇಳಿ ಸಹಿಸುವವನಲ್ಲ, ಬಹು ಶ್ರಾಂತಳಾಗಿರುವೆ, ಮೇಲೆ ನೆರಳಿಗೆಬಂದು ಕುಳಿತು, ಗತಶ್ರಾಂತಿಯುಳ್ಳವಳಾಗಿ, ವೃತ್ತಾಂತವಂ ಪೇಳಬೇಕೆಂದೆನಲು; ಮಾತಂಗಿಯು,-ವೃದ್ಧವೈಶ್ಯಳು ಆದರದಿಂದ ಮಾತಾಡಲು, ಛಾಯಾಶೀತಳಿತವೇದಿಕಾಂತರದೊಳು ಕುಳಿತು, ಗತಶ್ರಾಂತಳಾಗಿ, ವೃದ್ಧವೈಶ್ಯಮಾನಿನೀ ಮುಖದಿಂದ ಸಹಸ್ರಾಯುವೆಂಬ ಚತುರಕ್ಷರಮಂಕೇಳಿ, ಪುರುಷಾರ್ಥ ಚತುಷ್ಟಯಮಂ ಪಡದವಳಂತೆ ಹರ್ಷಾಬ್ಧಿಯೊಳ್ಮುಳುಗಿ, ವೃದ್ಧಳಂ ಕುರಿತು-ಎಲೈ ತಾಯೆ, ನಿನ್ನ ಉಪುಣ್ಯಕ್ಕೆಣೆಗಾಣೆನು. ಆರ್ತಳಾದೆನಗೆ

ಆದರದಿಂದ ಕರೆದೆಯಾದಕಾರಣ, ಗತಶ್ರಾಂತಿಯುಳ್ಳವಳಾದೆನು. ಈ ನಗರಕ್ಕರಸಾದವನ ಪೆಸರೇನೆಂದು ಕೇಳಲು; ವೈಶ್ಯಳು ಸಹಸ್ರಾಯುವೆಂದುಪೇಳಲು, ಮಹತ್ಸಂಶಯವುಳ್ಳವಳಾಗಿ, ಈಮಹಾರಾಯನತಂದೆಯ ಪೆಸರೇನೆಂದುಕೇಳಲು, ವೈಶ್ಯಜರತೆಯು ತಂದೆ ಯಾರೋ ತನಗೆತಿಳಿಯದೆನಲು; ಮತ್ತು ಸಂಶಯಾವಿಷ್ಟಳಾಗಿ, ಮತಂಗಿಯು-ಈ ನಗರವಾಸಿಗಳಾದ ನಿಮಗೆ, ಈತನ ಜನಕನ ನಾಮವೇನುಕಾರಣವಿದಿತವಿಲ್ಲೆಂದು ಕೇಳಲು ; ಆ ವೈಶ್ಯಳು-ಈ ಪುರದಅರಸುವೀರವರ್ಮರಾಯನು, ಆತಂಗೆ ಔರಸ ಪುತ್ರರಿಲ್ಲದುಕಾರಣ, ಚಿರಕಾಲವು ಈಶ್ವರಾರಾಧನೆಯಂಮಾಡಿ, ತದನುಗ್ರಹದಿಂದ ಲೋಕೋತ್ತಮಳಾದ ಕನ್ಯಾರತ್ನಮಂ ಪಡೆದು ಸಲಹುತ್ತಿರಲು, ಕದಾಚಿದೋರ್ವರಾಜಕುಮಾರನು, ಮಾರ್ಗವಶದಿಂದ ಈ ನಗರಿಗೈತರಲು, ಆತನಿಂಗೆ ಕನ್ಯಾರತ್ನಮನ್ನಿತ್ತು, ಅಪುತ್ರನಾದುದರಿಂದ, ರಾಜ್ಯಲಕ್ಷ್ಮಿಯಂ ತದಧೀನಮಂಮಾಡಿ, ಪಟ್ಟಾಭಿಷೇಕಮಂಮಾಡಿ,ತಪೋಭೂಮಿಗೈದಲು; ಆ ರಾಜಕುಮಾರನು ರಾಜ್ಯಮಂಪೊರೆಯುತ್ತಿರುವನು, ಆತನ ಚರಿತ್ರೆಯಂವರ್ಣಿಸಲ್ಕಳವಲ್ಲ ಮನುಜರ್ಗೆ; ಅದರಿಂದಲೀ ರಾಜಕುಮಾರನ ಜನನೀ ಜನಕರಾರೋ; ತನಗೆ ತಿಳಿಯದಿಲ್ಲವೆನಲು; ಮತಂಗಿಯು-ಎಲೈ ತಾಯೆ, ಪರಮ ದಯಾಳುವಾದ ನೀನು, ಮಹಚ್ಚಿಂತಾಗ್ರಸ್ತಳಾಗಿರುವದಕ್ಕೆ ಕಾರಣವೇನೆಂದು ಕೇಳಲು; ಆ ವೈಶ್ಯಳು-ತನಗೋರ್ವ ಕುಮಾರನುಂಟು, ಪತಿಯ ವಿಯೋಗವಮಾದಂದಿನಾರಭ್ಯ, ಅನಾಥಳಾಗಿ, ಬಹುವಿಧಕಾಯಕ್ಲೇಶದಿಂಪುತ್ರನಂಸಲಹಿ, ಬಹು ಪ್ರಯಾಸದಿಂ ವಿವಾಹಮಂಮಾಡಿದೆನು. ಎಲೈ ತಾಯೆ, ನಿಷೇಕವಾದನಂತರದೊಳು, ಆಕೆಯಧೀನನಾಗಿ, ತನ್ನಂ ನಾನಾವಿಧ ದುರುಕ್ತಿಗಳಾಡಿ, ಅನ್ನೋದಕಾದಿಗಳಿಗೂ ಮಾರ್ಗ ವಿಲ್ಲದಂತೆ ನಿಗ್ರಹಿಸಿ, ಶ್ರಮಪಡಿಸುತ್ತಿರುವನು. ಇಂತು ಪುತ್ರಸುಖಾನುಭವಮಂಪಡುವೆನು. ಅದರಿಂದ ವೃದ್ಧರಾದವರಿಗೆಲ್ಲ, ಇದೆ ಅನುಭವವೆಂದು ನೀನು ರೋದನವಮಾಡುತ್ತ ಬರುವುದಂ ಕಂಡು, ತನ್ನಂತೆ ನೀ

ನು ದುಃಖಿಸುವೆಯೆಂದು ತಿಳಿದು, ನಿನ್ನಂ ಕರಪೆನೆಂದುಪೇಳಲು; ಮಾತಂಗಿಯಾವೃದ್ಧಳಂ ಕುರಿತು-ಎಲೈ ತಾಯೆ, ಕೇಳು, ನೀನಾಡಿದ ನುಡಿ ಸತ್ಯವೇಸರಿ, ಅದೇನೆಂದೊಡೆ, ಓರ್ವ ರಾಜಪತ್ನಿಯು ತನ್ನಸ್ತನಂಧಯನಂ ಎನ್ನಧೀನವಂಮಾಡಿ ಸಲಹೆಂದೀಯ್ಯಲು, ತಾನು ಚಿರಕಾಲ ಕಾಯಕ್ಲೇಶದಿಂದ ಸಲಹುತ್ತಿದ್ದೆನು. ಇಂತು ದ್ವಾದಶವತ್ಸರವಾಗಲು, ಒಂದುದಿನ ತನ್ನೊಡನೆ ಪೇಳದೇ ಪೋದನದರಿಂದ ಬಹುಕಾಲ ಸಂರಕ್ಷಿಸಿದ ಮಮತೆಯಿಂದ ರಾಜಪತ್ನಿಯ ಭಯದಿಂದಂದು ಮೊದಲಾಗಿ ಸಂವತ್ಸರತ್ರಯದಿಂದ ಆ ಕುಮಾರನಂ ಅರಸುತ್ತ ಸಮಸ್ತ ಭೂಮಂಡಲಮಂ ತಿರುಗಿ ತಾನೀರೀತಿಯಾದೆನು. ಅವಶೇಷಿತವಾದ ಮಾನುಷ ಸಂಚಾರಯೋಗ್ಯವಾದಿಳೆಯಂ ಅರಸಿ ಕಾಣದಿರೆ. ದೇಹಮಂ ಬಿಡುವೆನೆಂಬರ್ಥಮಂ ನಿಶ್ಚೈಸಿ ಮಾರ್ಗವಶದಿಂಬಂದೆ ನೀ ಪುರಕ್ಕೆನಲು; ಆ ವೈಶ್ಯಮಾನಿನಿಯು ಮಾತಂಗಿಯಂನೋಡಿ-ನೀನು ಪರಮ ಮುಗ್ಧಳಾದಕಾರಣ ಉಪಾಯಮಂ ತಿಳಿಯದೇ ವೃಥಾಕಾಯಕ್ಲೇಶದಿಂದೀರೀತಿಯಾದೆ; ಎನಲಾ- ಮಾತಂಗಿಯದೇನುಪಾಯಮೆಂದುಕೇಳಲು; ವೃದ್ಧಳು-ಎಲೈ ಪಥಿಕಳೇ ಕೇಳು ಪುಟಭೇದನವನಾಳುವ ಮಹೀಶನುಪರಮಧಾರ್ಮಿಕನು,ಸತ್ಯಸಂಧನು, ನಿರವಧಿಕಕರುಣಾಳುವು, ಪರಾಕ್ರಮದೊಳೀಡಿಲ್ಲ, ಶರಣಾಗತವತ್ಸಲನು, ಭುವನತ್ರಯದೊಳಾತಗೆ ಅಸಾಧ್ಯವಾದಕಾರ್ಯವೆಯಿಲ್ಲ. ಅದುಕಾರಣ ಶರಣಾಗತಳಾಗಿ ಈ ವಾರ್ತೆಯಂ ನೀನು ಬಿನ್ನಹಮಾಡಿಕೊಂಡೆಯಾದೊಡೆ ಸ್ವರ್ಗಮರ್ತ್ಯಪಾತಾಳಂಗಳಲ್ಲೆಲ್ಲಿರ್ದಡೆಯುಂತಂದೀವನದರಲ್ಲಿಸಂಶಯವಿಲ್ಲವೆಂದು ನುಡಿಯಲು. ಮಾತಂಗಿಯು-ತನಿಗಾಮಹಾರಾಜನಾಭಿಮುಖಮೆಂತಾಗುವದೆಂದು ರೋದನಮಾಡಲು. ಆ ವೈಶ್ಯಳು-ಎಲೈ ಮರುಳೆ ಕೇಳು-ಮಹಾ ರಾಜಾಧಿರಾಜರೆಲ್ಲರು ಅರಮನೆಯ ಬಾಗಿಲೊಳವಸರವನರಸುತ್ತ ಕಾದಿರುವರು. ಆ ದೊಡೆಯು ದೀನರಿಂಗತಿ ಸುಲಭನು, ಇನ್ನೊಂದುಘಟಿಕಾಮಾತ್ರವಿಲ್ಲಿನೀನಿದ್ದಡೀಗಲೇ ಬರುವನು, ಮೃಗಯಾರ್ಥವಾಗಿ ಪೋಗಲುನೀನಂಜದೇ ವಂದನೆಯಮಾಡಿ

ಬಿಂನಹಮಾಡೆ. ನೀನಿಂತಲ್ಲಿ ನಿಂತು ವಿಚಾರಿಸುವನನನವನು ಶರಣಾಗತಪ್ರೀತರು ನೀನರಿಯೇ ನೋಡು. ಇಂಥಾ ಮದನಸುಂದರನನೆನು ತಾಡಿಪೋಗಲು, ಮಾತಂಗಿಯು-ಇವನೇ ತನ್ನಣುಗನೆಂದು ನಿಶ್ಚಯ ಮಾಡಿ ತದಾಗಮನಮಂ ನಿರೀಕ್ಷಣೆ ಮಾಡುತ್ತಿದ್ದಳು.

ಸಹಸ್ರಾಯುವು ಯಾಮತ್ರಯಾನಂತರದೊಳು ಮೃಗಯಾತ್ರಾರ್ಥವಾಗಿ ಮಹಾ ವೈಭವದಿಂದ ಪೊರಡಲು. ಆ ಮಾತಂಗಿಯು ತದವಲೋಕನಾಸಕ್ತಮನಸ್ಕಳಾಗಿ ನಡು ನಡುಗುತ್ತ ನೋಡುತ್ತಿರಲು, ತತ್ಪುರೋಭಾಗದೊಳು ಅನೇಕ ಕರಿ ತುರಗ ರಥ ಪದಾತಿ ಮಾಗಧ ಸೂತ ವೇತ್ರಿಗಳು ಪಙ್ತಿ ಪಙ್ತಿಗಳಾಗಿ ಕ್ರೋಶಮಾತ್ರ ಪರ್ಯಂತರವು ನಡೆಯುತ್ತಿರಲು, ಗಜತುರಗರಥ ಚತುರಂಗಯಾನವೇ ಮೊದಲಾದ ವಾಹನಗಳಿಂದೊಪ್ಪುವ ಅನೇಕ ಮಂಡಲಾಧಿಪತಿಗಳಿಂದಲೂ, ಉಪಾಸ್ಯಮಾನನಾಗಿ ದಿಗ್ಗಜಮಂಧಿಕ್ಕರಿಸುವ ಮತ್ತಗಜಸ್ಕಂದಮನೇರಿ ಚಂದ್ರಮಂಡಲದಂತೆ ಲೋಚನ ಸೇಚಕವಾದ ಅಭಿತಃ ಪ್ರಲಂಬಮಾನಮುಕ್ತಾಸರದಿಂ, ತ್ರಿಭಂಗಿ ಸುವರ್ಣದಂಡಘಟಿತಶ್ವೇತಾತಪತ್ರದಿಂ ಅಖಿಲರತ್ನಖಚಿತಕವಚದಿಂಕನಚಿತ ಸರ್ವಾಂಗಮುಳ್ಳ ಸಹಸ್ರಾಯುವಂ ಕಂಡು ಮನದೊಳತ್ಯಂತಸಂಶಯಾವಿಷ್ಟಳಾಗಿ ಈತನೇ ತನ್ನಣುಗನೆಂದು ನಿಶ್ಚಯಮಾಡಲಳವಲ್ಲದೇ ಮೆಲ್ಲಮೆಲ್ಲನೆ ತತ್ಸಮೀಪಮನೈದಿ ನಾತಿದೂರದೊಳು ದಂಡದಂತೆ ವಂದನೆಯಂಮಾಡಿ ಯೇಳುತಂಜಲಿಬದ್ಧಳಾಗಿ-ಮಹಾರಾಜ, ತನ್ನ ಮೊರೆಯನವಧರಿಸಬೇಕೆಂದುಕೂಗಲು, ವೇತ್ರಿಗಳು ಕೈವಾರಿಸಲು, ಪರಮದಯಾಳುವಾದ ರಾಜ ಕುಮಾರನು ಅಪಾಂಗದಿಂದ ಮಾತಂಗಿಯಂ ನೋಡಿ ಮತ್ತಗಜವನ್ನಿಲ್ಲಿಸಿ ಮಾತಂಗಿಯ ವೃತ್ತಾಂತಮಂ ಸಾವಧಾನದೊಳವಧರಿಸಿ, ಇವಳೇ ಮಾತಂಗಿಯೆಂದು ನಿಶ್ಚೈಸಿ, ತತ್ಕಾಲದೊಳುದ್ಬುದ್ಧಮಾದ ವಿಷಾದಮನ್ನಾಕಾರಗೋಪನಮಾಡಿ, ಪಿಂದೆ ಬರುತಲಿರುತ್ತಿರುವ ಚತುರಂಗಯಾನದೊಳೀಕೆಯಂಕುಳ್ಳಿರಿಸಿ, ಅರಮನೆಯ ದ್ವಾರದೊಳಿರಿಸಿಕೊಂಡಿರುವಂತೆ ಕಟ್ಟಲೆಯಂಮಾಡಿ, ಅಲ್ಲಿಂದ ಪಿಂತಿರುಗ

ಬೇರವೆಂದುಮುಂದೆತೆರಳಿ ಕ್ಷಣಕಾಲ ಮೃಗಯಾವಿನೋದಸಮಾಸಕ್ತ ಚಿತ್ತವೃತ್ತಿಯುಳ್ಳವನಾಗಿ ಛಾಯಾಪತಿಯುಸ್ತಾಚಲವನಾಶ್ರಯಿಸುತ್ತಿರಲು ಧರಿತ್ರೀಪತಿಯಾದ ರಾಜಕುಮಾರನು-ನಿಜಧಾತ್ರೀದಶಾಪರಿಪಾಕನಿರೀಕ್ಷಣದಿಂದುತ್ಪನ್ನವಾದ ವಿಷಾದದಿಂ ಕಲುಷಿತಾಂತಃಕರಣಮುಳ್ಳವನಾಗಿ, ಜವದಿಂದ ನಗರಾಭಿಮುಖನಾಗಿ ಬಂದು, ನಿಜಾಲಯದ್ವಾರದೊಳು ಪರಮವಿಸ್ಮಿತಳಾಗಿ ನಿಂದಿರುವ ಮತಂಗಿಯಂ ತನ್ನ ಕರದಿಂ ಪಿಡಿದು, ಮಹಾಪತಿಪುತ್ರಿಯಾದ ಧಾನ್ಯಮಾಲಿನಿಯ ಅಂತಃಪುರಕ್ಕೆ ಕರಕೊಂಡುಪೋಗಿ, ಸಾಕ್ಷಾತ್ತಮ್ಮ ಜನನಿಯಂ ನೀನೆಂತು ಸೇವಿಸುವೆಯೋ ಆರೀತಿಯಿಂದೀಕೆಯಂ ನೋಡಿ ಕಾಪಾಡೆಂದು ಮತಂಗಿಯರಿಯದಂತೆ ರಹಸ್ಯವಾಗಿ ಪೇಳಿ, ಪತ್ನಿಯಕರದೊಳಿತ್ತು, ತಾನಾಕೆಯೊಡನೆ ಮಾತಾಡದಲ್ಲಿಂದ ಪೊರಮಟ್ಟು, ಸ್ನಾನಮಂ ಮಾಡಿ ಸಾಯಾನ್ಹಕೃತ್ಯಮಂ ನೆರವೇರಿಸಿ, ಸ್ವಕೀಯ್ಯಮಾದ ವ್ಯಾಪಾರದಲ್ಲಿರುತ್ತಿರಲು; ಸಾಕ್ಷಾದರುಂಧತೀಪತಿಯಂತೆ ಪ್ರಕಾಶಮಾನಳಾಗಿರುವ ಧಾನ್ಯಮಾಲಿನಿಯು-ಪತಿವಾಕ್ಯಮಂ ಕೇಳಿ, ಮತಂಗಿಯಡಿಗೆ ಸಾಷ್ಟಾಂಗದಿಂ ನಮಿಸಿ, ಅನೇಕ ದೂತಿಯರಂ ಕರೆದು-ದಿವ್ಯತೈಲಂಗಳಿಂದ ಮತಂಗಿಯಸರ್ವಾಂಗಮಂನೊತ್ತಿಸಿ, ತಪ್ತನಿರ್ಮಲೋದಕದಿಂದ ಮಜ್ಜನಮಂ ಮಾಡಿಸಿ, ದಿವ್ಯದುಕೂಲಮನುಡಿಸಿ, ಸರ್ವಾಭರಣದಿಂದಲಂಕಾರಮಂಮಾಡಿಸಿ, ಷಡ್ರಸೋಪೇತಮಾದ ಭೋಜನಮಂ ಮಾಡಿಸಿ, ತಾಂಬೂಲಪರಿಮಳಗಂಧಪುಷ್ಪಾದಿಗಳನಿತ್ತು, ಜಾಂಬೂನದಮಯಮಂಚದೊಳ್ಕುಳ್ಳಿರಿಸಿ, ತನ್ನಸುಕುಮಾರಪಾಣಿಪಲ್ಲವದಿಂದ ಮತಂಗಿಯ ಚರಣಗಳನೊತ್ತಿ, ಮತ್ತಾಕೆಯ ಸೇವಾರ್ಥವಾಗಿ ಅನೇಕ ದೂತಿಯರಂಕರೆದು ಕಟ್ಟಲೆಮಾಡಿ, ಪ್ರತಿಕ್ಷಣದಲ್ಲಿಯೂ ತಾನು ವಿಚಾರಿಸಿಕೊಳ್ಳುತ್ತಲಿರುತಿರಲು;—

ಮತಂಗಿಯು-ಮಹದ್ದುರ್ದಶಾಪನ್ನಳಾದ ತನಿಗೆ ಈ ಮಹಾರಾಜನಾದರಣೆಮಾಡಿ, ಅಂತಃಪುರಕೆ ಕರತಂದು ಈ ದಿವ್ಯಕನ್ನೆಯಧೀನಮಂಮಾಡಲು, ಈಧಾನ್ಯಮಾಲಿನಿಯು ಅತ್ಯಂತಭಯಭಕ್ತಿಯಿಂದಾರೈಪುದಂ ನೋಡಿ ಯಥಾವಸ್ಥಿತಾವಸ್ತೆಯನ್ನೈದಿ, ಇವನೇಸಹಸ್ರಾ

ಯುವೆಂಬು ನಿಶ್ಚಯಮಾಡಿ, ಸ್ವತಂತ್ರದಿಂ ಮಾತಾಡಲಂಜಿ ಆಲೋ
ಚಿಸುತ್ತೊಂದುದಿನ, ಸಮೀಪದಲ್ಲಿ ಕುಳಿತಿರುವ ಧಾನ್ಯಮಾಲಿನಿಯಂ
ಕುರಿತು, ಎಲೈ ಸತ್ಯೆ, ನೀನ್ಯಾರು, ನಿನ್ನ ಕರದೊಳಗೆನ್ನ ತಂದಿತ್ತ ರಾ
ಜಕುಮಾರನಾವನು, ಯಃಕಶ್ಚನಳಾದ ತನಗಿಂತು ಉಪಚಾರಮಂ
ಮಾಡೆ ಕಾರಣವೇನು, ಪೇಳಬೇಕೆಂದು ಕೇಳಲು, ಧಾನ್ಯಮಾಲಿನಿ
ಯು, ಪತಿಯಾಜ್ಞೆಯಲ್ಲದಿನ್ನೊಂದು ಕಾರಣಮಂ ಕಾಣೆ, ಎಲೆ ತಾ
ಯೆ, ನಿಮ್ಮ ವೃತ್ತಾಂತಮಂ ತನ್ನೊಳನುರಾಗದಿಂ ಪೇಳಬೇಕೆಂದೆನ
ಲು, ಮಾತಂಗಿಯು ತನ್ನ ವೃತ್ತಾಂತಮಂ ಸಂಕ್ಷೇಪದಿಂದೊರೆದು ಕಂ
ಬನಿದುಂಬಲು; ಆ ಧಾನ್ಯಮಾಲಿನಿಯು ಸಾಂತ್ವವಚನಗಳಿಂದ ಸಮಾ
ಶ್ವಾಸಮಂ ಮಾಡಿ, ಪತಿಯಂ ನಿಮ್ಮೆಡೆಗೆ ಕರೆತರುವೆ, ಚಿಂತೆಯಂ
ಮಾಡಬೇಡೆಂಬಭಯಮನಿತ್ತು, ಆ ದಿವಸ ಯಾಮಿನಿಯೊಳಾ ರಾಜ
ಕುಮಾರನೊಡವೆರದು, ಸಂತುಷ್ಟನಾಗಿರುವ ಪತಿಯಡಿಗೆ ಮಣಿದು,
ಕರಮುಗಿದು, ಮಿಡುಕುತಲಿರುತಿರುವ ಮಾತಂಗಿಯಾಶಯಮ ಬಿನ್ನೈಸ
ಲು, ಸಹಸ್ರಾಯುವು ಖಿನ್ನನಾಗಿ, ಪತ್ನಿಯೊಡನೆ ನಿಖಿಲವೃತ್ತಾಂತ
ಮಂ ವಿಸ್ತರಿಸಿ ಪೇಳುತಿರಲು; ಧಾನ್ಯಮಾಲಿನಿಯು ಕೇಳಿ ವಿಸ್ಮಿತಳಾ
ಗಿ, ಪತಿಯೊಡನೆ ಸುಖನಿದ್ರೆಯಂ ಮಾಡೆ, ನಿಶಾವಸಾನದೊಳು ಸಹ
ಸ್ರಾಯುವೆದ್ದು ಮಜ್ಜನಮಾಡಿ ನಿತ್ಯಕರ್ಮಗಳಂ ಮಾಡಿ ಮಾತಂ
ಗಿಯಿದ್ದೆಡೆಗೆ ಬಂದು ವಂದನೆಯಂ ಮಾಡಿ ನಿಂದಿರಲು; ಮಾತಂಗಿಯು
ಹರ್ಷಪರವಶಳಾಗಿ ಸಹಸ್ರಾಯುವಂ ತನ್ನ ಬಾಹುಗಳಿಂದ ತಕ್ಕೈಸಿ
ತೊಡೆಯಮೇಲಿರಿಸಿ ಮುದ್ದಾಡಿ ಶಿರವನಾಘ್ರಾಣಿಸಿ ಆನಂದಬಾಷ್ಪ
ದಿಂ ಗದ್ಗದಸ್ವರದಿಂ ವತ್ಸ, ನೀನಿಂತು ಯನ್ನನನಾಥಳಂಮಾಡಿಪೇಳ
ದುಚಿತವೆ ಬಂಗುವೆಂದು ತನ್ನ ಖಿಳವೃತ್ತಾಂತಮಂ ವಿವರಿಸಲು; ಸಹ
ಸ್ರಾಯುವು ತಲೆವಾಗಿ ಜನನಿ, ಕೇಳೆನ್ನ ಬಿನ್ನಹವ, ಎನಗೋಸುಗಮು
ಹತ್ತಾದ ನಾನಾವಿಧ ದುಃಖಮಂ ನೀನು ಅನುಭವಿಸಿ ತನ್ನ ಸಂರಕ್ಷ
ಣೆಯ ಮಾಡಿದೆ, ನಿನ್ನ ಋಣದಿಂ ಮುಕ್ತನಾಗಲೆನ್ನಳವಲ್ಲ, ನಿನ್ನೊಡ
ನೆ ಪೇಳದೆ ತಾನು ಬಂದುದು ಪ್ರಮಾದವೇ ಸರಿ, ಇದರಲ್ಲಿ ಸಂಶಯ

ವಿಲ್ಲ ನಿನ್ನಡಿಯನಗಲಿದಾರಭ್ಯವು ಅನಿವಾರ್ಯವಾದ ಅತ್ಯಂತಾವಶ್ಯಕ
ಮಾದ ಕಾರ್ಯಪರಂಪರಾಗೌರವದಿಂದ ಕೃತಘ್ನನಂತೆ ನಿನ್ನಂ ಮರೆ
ದು ಉಪೇಕ್ಷೆಯಿಂದಿದ್ದ ಬಾಲಕನ ಅಕ್ರಮಮಂ ತಾಯೇ,ಚಿತ್ತದೊಳಿ
ರಿಸಲಾಗದೆಂದು ಕೈಮುಗಿದು ತನ್ನ ವೃತ್ತಾಂತಮಂ ಸಂಕ್ಷೇಪದಿಂತಿಳಿ
ಸಿ ಸಮಾಧಾನಮಂ ಮಾಡಿ, ಆ ಮಾತಂಗಿಯ ಅಪ್ಪಣೆಗೊಂಡು ಪೊರ
ಮಡಲು; ಮಾತಂಗಿಯು ಸಹಸ್ರಾಯುವಿನ ವೃತ್ತಾಂತಮಂ ತನ್ನ ಮುಖ
ದಿಂದಲೇ ಕೇಳಿ, ವಿಸ್ಮಿತಳಾಗಿ ಅಡಿಗಡಿಗೆ ನೆನೆನೆನೆದುಹಿಗ್ಗುತ್ತ, ಹಿಟ್ಟ
ಭನ ವಾಕ್ಯಮಂ ಸ್ಮರಿಸಿ, ಕುಮಾರನಂ ಸರ್ವಮಂಗಳಾಚರಣಾಕಮ
ಲಾನುಗ್ರಹದಿಂ ಜೀವಿಸಿದನೆಂದು ಪರಮಸಂತೋಷದಿಂದ ಮಿಂದು ಮ
ಡಿಯುಟ್ಟು ಭೋಜನಮಾಡಿ ದಿವ್ಯಪರ್ಯಂಕದೊಳು ಕುಳಿತು, ದೇವಿ
ಯು ಅವಸ್ಥೆಯೇನಾಗಿರುವುದೋ ತಿಳಿಯದು, ಆ ಮಹಾನುಭಾವಳಾ
ದ ಮಾತೃವಿನ ವೃತ್ತಾಂತಮಂ ಮರದಿರುವನೀಕುಮರ, ಅದುಕಾರಣ
ಇನ್ನು ಕಾಲವಿಳಂಬಮಂ ಮಾಡಬಾರದು, ಸಮಯಮಂ ನೋಡಿ ಜ
ನನಿಯನು ತಾಪಮಂ ತಿಳಿಸಿ ಕರದೊಯ್ಯಬೇಕೆಂದು ಮನದೊಳಾ
ಳೋಚನೆ ಮಾಡಿ, ಸಹಸ್ರಾಯುವಿನ ಅವಸರಪ್ರತೀಕ್ಷೆಯಂ ಮಾಡು
ತ್ತಲಿದ್ದಳು.

ಹೀಗಿರಲು; ಒಂದುದಿನ ಸಹಸ್ರಾಯುವು ಯದೃಚ್ಛೆಯಿಂದ ಮಾ
ತಂಗಿಯಿದ್ದೆಡೆಗೆ ಬಂದು ಪತ್ನಿಯಿಂದ ಸೇವ್ಯಳಾಗಿ ಅನೇಕ ದೂತಿಯ
ರು ಛತ್ರಚಾಮರ ವ್ಯಜನದಿಂ ಸೇವಿಸುತ್ತಿರಲು,ಜಾಂಬೂನದ ಮಂಚ
ದೊಳು ಕುಳ್ಳಿರುವ ಮಾತಂಗಿಯಂ ನೋಡಿ ಬಂದು ನಮಿಸಿ ನಿಂದಿರುವ
ನಿತರೊಳು ಅಶೇಷದೂತೀಜನರಿಂದೊಡಗೂಡಿ ಧಾನ್ಯಮಾಲಿನಿಯು ತ
ನ್ನಂತಃಪುರಪ್ರವೇಶಮಂ ಮಾಡಲು ಮಾತಂಗಿಯು ಹರಸುತ್ತ ವತ್ಸ,
ಬಾರೆಂದು ಮಂಚದೊಳುಕುಳ್ಳಿರಿಸಿ-ಎಲೈ ಕುಮಾರನೆ ಕೇಳು ದೇವಿ
ಯುರೇನಾಗಿರುವರೋ?ಲೋಕದಲ್ಲಿ ಜನನೀಸಮಾನ ವಸ್ತುವೇಯಿಲ್ಲ,
ತಥಾಪಿ ನಿನ್ನ ಜನನಿಗೆ ಸಮಾನವಾದ ವಸ್ತುವುಂಟೇ ಲೋಕತ್ರ
ಯದೊಳು, ಸಪತ್ನಿಯಿಂದಪಮಾನಿತಳಾಗಿ ನಿನ್ನಭ್ಯುದಯ ಪ್ರತೀ

ಷ್ಠೆಯಂ ಮಾಡುತ್ತ ದಾಕ್ಷಾಯಿಣೀ ಚರಣಕಮಲಯುಗಳದಲ್ಲಿ ನಿರಂತರ ಧ್ಯಾನದಿಂದಿರುತಿರುವಳು, ಅದರಿಂದ ನಿನಿಗೆ ಸಕಲಾಪತ್ಪರಂಪರಾಪರಿಹಾರವು, ಈ ದೃಶಾಭ್ಯುದಯವು ಲಬ್ಧವಾದುದು. ನೀನಿಂತು ಪರವಿರುವದುಚಿತವಲ್ಲೆಂದು ಪೇಳಲು; ಸಹಸ್ರಾಯುಧನದಂ ಕೇಳಿ ಕ್ಲೇಶಪರವಶನಾಗಿ, ಬಹುಪ್ರಕಾರದಿಂದ ತನ್ನಂತಾನು ಧಿಕ್ಕರಿಸಿ, ಮತಂಗಿಯಂ ಕುರಿತು-ನೀನು ಆಡಿದ ನುಡಿಯು ಯಥಾರ್ಥವೇ ಸರಿ, ಶುಭದಿವಸದೊಳ್ ಪ್ರಯಾಣವಂ ಮಾಡುವೆನು ಎಂದು ಪೇಳಿ, ಸಭಾಸ್ಥಾನಮನೈದಿ ದಿವ್ಯಸಿಂಹಾಸನದಿ ಕುಳಿತು, ಅಮಾತ್ಯರೇ ಮೊದಲಾದ ಅಧಿಕಾರಿಗಳಂ ನೋಡಿ ಮಾತಾಪಿತೃ ಚರಣಸಂದರ್ಶನಾರ್ಥವಾಗಿ ಮಾಹೀಷ್ಮತೀನಗರಿಗೈದುವೆನು, ರಾಜ್ಯತಂತ್ರವಂ ಯಥಾಪೂರ್ವವಾಗಿ ನೋಡುತ್ತ ಪ್ರಜೆಗಳಿಗೆ ನೋವಿಲ್ಲದಂತೆ, ಶತ್ರುಗಳಿಗೆ ರಂಧ್ರದೊರೆಯದಂತೆ, ಮರ್ಯಾದೆಗಳತಿಕ್ರಮಿಸದಂತೆ, ವರ್ಣಾಶ್ರಮಧರ್ಮಂಗಳಿಗೆ ಈಷನ್ಯೂನಾತಿರೇಕಬಾರದಂತೆ, ದ್ವಿಜರಿಂಗೆ ಮನೋವಿಷಾದಪುಟ್ಟದಂತೆಜಾಗರೂಕರಾಗಿರುವುದು, ಶಾಸ್ತ್ರಾಭ್ಯಾಸದ್ಯೂತಾಸಕ್ರೀಡಾದಿಗಳಲ್ಲಿ ತತ್ಪರರಾಗಿ ಇರಲಾಗದು, ದೀನಾರ್ಥವ್ಯವಹಾರಿಗಳ ಮೊರೆಯಂ ತತ್ತತ್ಕಾಲದಲ್ಲಿ ಕೇಳಿ ಧರ್ಮಾತಿಕ್ರಮವಾಗದಂತೆ ತನ್ಮನೋರಥಪೂರ್ತಿಯಂ ಮಾಡಿ ಕಳುಹುವುದು. ಪ್ರಜಾಕೋಶಸೇನಾಭಿವೃದ್ಧಿಯಲ್ಲಿ ನಿರಂತರಾಸಕ್ತರಾಗಿರುವುದೆಂದು ಬುದ್ಧಿಯಂ ಹೇಳಿ, ಪ್ರತಾಪಸೇನನೆಂಬ ಮುಖ್ಯಪ್ರಧಾನನಂ ಕರೆದು,-ಶೀಬೀಸರಮನಿತ್ತು, ಸರ್ವಪ್ರಕೃತಿಗಳು ತದಾಜ್ಞಾನುಸಾರವಾಗಿರುವಂತೆ ಕಟ್ಟಲೆಯಂ ಮಾಡಿ, ದೈವಜ್ಞರಿಂದ ನಿಶ್ಚಿತವಾದ ಶುಭದಿವಸದೊಳು, ಮಿಂದು ಭೋಜನ ಮಾಡಿ, ಪರಿಮಿತಸಖೀಜನರಿಂದ ಧಾನ್ಯಮಾಲಿನಿಯಂ ವಿಮಾನದೊಳು ಕುಳ್ಳಿರಿಸಿ, ಧೇನುಮುನಿಯಿಂದಲೂ, ಮಾತಂಗಿಯಿಂದಲೂ, ಗುರುಪುತ್ರನಿಂದಲೂ, ಸಹಿತನಾಗಿ ಧನುರ್ನಿಷಂಗಾದಿಗಳಿಂದುಪೇತನಾಗಿ ಸಹಸ್ರಾಯುವು ವಿಮಾನವನ್ನೇರಿ, ನಿಜವಿಯೋಗದಿಂ ವಿಮನಸ್ಕರಾಗಿರುವ ನಾಗರಿಕರಂ ನೋಡಿ, ವಿಸ್ಮಿತಾವಲೋಕನಯುಕ್ತವಾದ ಸತ್ವರ ಪುನರಾಗ

ಮನರೂಪ ಮಧುರೋಕ್ತಿಯಿಂದಾಶ್ವಾಸಪಡಿಸಿ, ತರುವಾಯ, ಹೇ ವಿಮಾನರಾಜ, ಮಾಹಿಷ್ಮತೀನಗರಿಗೈದುವೆನೆಂದು ರಾಜಕುಮಾರನಾಜ್ಞಾಪಿಸಲು; ಅಂತರಿಕ್ಷದೊಳೊಂದು ಬಿಂಬದಂತೆ ಅತಿವೇಗಯುಕ್ತವಾಗಿ, ವಿಮಾನವು ನಡೆದುದು, ಅಷ್ಟಾಶೀತಿಯೋಜನಾಯಾಮಮಾರ್ಗಮಂ ದಾಂಟಿ, ರವಿಯಸ್ತಮಯಸಮಯದೊಳಾ ಮಾಹಿಷ್ಮತೀನಗರವನ್ನೈದಿ, ಆ ಪುಟಭೇದನೋದ್ಯಾನ ಪ್ರದೇಶದೊಳಿಳಿದು, ಸಹಸ್ರಾಯುವು ತಮ್ಮ ಜನನಿಯಿಂದ ಪರಿರಕ್ಷಿತವಾಗಿರುವುದದರಿಂದ ಸಕಲಸಂಪತ್ಸಮೃದ್ಧವಾದ ಪುರಲಕ್ಷ್ಮಿಯಂ ನೋಡಿ, ತಲೆದೂಗಿ ವಿಮಾನದಿಂದಿಳಿದು, ಸಾಯಾಹ್ನಕರ್ಮಮಂ ಯಥಾವಿಧಿಯಾಚರಿಸಿ, ಧೇನುಪ್ರಭಾವದಿಂ ಭೋಜನಾದಿಗಳಮಾಡಿ, ಆರಾತ್ರಿ ಸುಖದಿಂದಿದ್ದು, ಅರುಣೋದಯದೊಳೆದ್ದು, ನಿರ್ಮಲೋದಕದಲ್ಲಿ ಮಜ್ಜನವಮಾಡಿ, ನಿತ್ಯನಿಯಮಂಗಳಂ ಮಾಡುತಿರಲು ; ಆ ವನಪಾಲಕರು ದಿವ್ಯವಿಮಾನವಿಶಿಷ್ಟನಾದ ಮಹಾಪುರುಷನಂ ನೋಡಿ ಪರಮವಿಸ್ಮಿತರಾಗಿ, ಜವದಿಂದ ಪುರಮಂಪೊಕ್ಕು, ಕಾಂತಿಮಾಲಿನಿಯಡಿಗೆ ವಿಜ್ಞಾಪನೆಯಂ ಮಾಡಲು ; ಆ ಕ್ಷಣದಲ್ಲಿ ಧರ್ಮಗುಪ್ತನಂ ಕರೆಸಿ, ರೂಪಾಂತರದಿಂದ ನೀನೆ ಪೋಗಿ ತಿಳಿದುಬಾರೆಂದು ಪೇಳಲು, ಧರ್ಮಗುಪ್ತನು ಕೈಮುಗಿದು ದ್ವಿಜರೂಪಮಂ ಧರಿಸಿ, ಉದ್ಯಾನವನಕ್ಕೆ ಬಂದು ತೇಜೋಮಯವಾದ ದಿವ್ಯವಿಮಾನವಂ ನೋಡಿ, ಮಾನುಷರಿಂಗೆ ವಿಮಾನವೆತ್ತಣದು, ದಿವಿಜರು ಪಡೆ ಇಲ್ಲಿಗೈದುವುದಕ್ಕೆ ಕಾರಣಮಂ ಕಾಣೆ, ಇದೇನಚ್ಚರಿಯೆಂದು ವಿಸ್ಮಿತನಾಗಿ, ವನದೊಳುಪೊಕ್ಕು ನೋಡುತ್ತಾ ಬರುತಿರಲು ; ಆ ವಿಮಾನಕ್ಕೆ ನಾತಿದೂರದಲ್ಲಿರುವ ಕಾಸಾರದೊಳು, ಸರ್ವಲೋಕಾಭ್ಯುದಯಮೇ ಮೂರ್ತೀಭವಿಸಿನಿಂದಿರುವಂತೆ, ಸರ್ವಮಂಗಳಾಚರಣನಳಿನಯುಗಳ ಧ್ಯಾನವಂ ಮಾಡುತ್ತಿರುವ ಸಹಸ್ರಾಯುವಂ ನೋಡಿ, ಲೋಕಾತಿಶಯಪುರುಷನಿರೀಕ್ಷಣಜನಿತಾನಂದಾತಿರೇಕದಿಂ ಮೈಮರೆಚ್ಚಿತ್ತು, ತತ್ಸಮೀಪದಲ್ಲಿ ದಿವ್ಯರತ್ನಖಚಿತಾಭರಣನಿರತದಿಂದಲಂಕೃತನಾದ ಸುರಭಿಯಂ ಕಂಡು, ಪರಮಾದ್ಭುತಮಿದೇನೆಂದು ನಿಶ್ಚಯಮಾಡಲಳವಲ್ಲದೇ, ಅಲ್ಲಿ ಸಂಚಾರಮಾಡುತ್ತಾ ಬರುತ್ತಿರಲು ; ಆ ಸರೋವರಸಮೀಪದಲ್ಲಿರುವ ಅಭಿನವಕಿಸಲಯ

ಕುಸುಮಫಲಭರಿತರಮಣೀಯ ಸಹಕಾರತರುಚ್ಛಾಯದೊಳು, ಸ್ಫಟಿಕಮಯವೇದಿಕಾಂತರದಲ್ಲಿ, ಪರಿವೃತಸಖೀಜನರಿಂದುಪಾಸ್ಯಮಾನಳಾಗಿ, ಸಾಕ್ಷಾತ್ಶಚಿಯಂತೆ, ಶಂಪಾಸಮಾಹಸಾಕಾರವಾಗಿ ಸ್ಥಾಯಿಯಾಗಿರುವಂತೆ ಕುಳ್ಳಿರುವ ಧಾನ್ಯಮಾಲಿನಿಯಂ ಕಂಡು, ಅಚೇತನಪ್ರಾಯನಾಗಿ, ಬಂದೂ ತೋರದೆ, ಅಲ್ಲಿಂದ ಮುಂದೆನಡೆಯಲು ; ಸಕಲಾಭರಣಭೂಷಿತಳಾಗಿ, ಪುಷ್ಪಿತ ಪುನ್ನಾಗದ್ರುಮದಡಿಯಲ್ಲಿ, ವನದ ಸೌಭಾಗ್ಯಮಂ ನೋಡುತ್ತಾ, ಏಕಾಕಿನಿಯಾಗಿ ಕುಳ್ಳಿರುವಮತಂಗಿಯಂಕಂಡು, ಆಶ್ಚರ್ಯಭರಿತನಾಗಿ, ಕಾಂತಿಮಾಲಿನೀದೇವಿಯ ಪ್ರಿಯಸಖಿಯಾದ ಮತಂಗಿಯುಮಹಾವೈಭವದಿಂದ ಇಲ್ಲಿರುವಳೇನುಕಾರಣವೋ ಎಂದು, ಮತಂಗಿಯಂ ಶಿಶುವನ್ನಿತ್ತು ಕಳುಹಿರುವೆನೆಂದು, ದೇವಿಯಾಡಿದ್ದಳಾಚಿತ್ರಗತರೂಪಾನುಕಾರಿಯಾಗಿರುವುದೀ ಮಹಾಪುರುಷನಾಕಾರ, ಈತನೆ ಕಾಂತಿಮಾಲಿನೀ ಪುತ್ರನಾದೊಡೆ, ತಮ್ಮ ಸುಕೃತಕ್ಕೆಣೆಯುಂಟೆ ಎಂದು, ಮನದೊಳಾಲೋಚಿಸುತ್ತ, ಮೆಲ್ಲಮೆಲ್ಲನೆ ತತ್ಸಮೀಪಕ್ಕೆ ಬರುತಿರಲು, ಮತಂಗಿಯಾದ್ವಿಜರೂಪಧಾರಿಯಾದ ಧರ್ಮಗುಪ್ತನಂ ಕಂಡು, ದ್ವಿಜನೆಂದು ತಿಳಿದು, ಎಲೈ ಬ್ರಾಹ್ಮಣನೆ, ಈ ನಗರವಂ ಆಳುವ ಮಹೀಶನ ಪೆಸರೇನೆಂದು ಕೇಳಲು, ದ್ವಿಜರೂಪಿಯಾದ ಧರ್ಮಗುಪ್ತನು, ಸುಶರ್ಮನೆಂಬ ಮಹಾರಾಜನೆಂದೆನಲು, ಮತಂಗಿಯು ಮಹೀಶಸಧರ್ಮಾಂಗಿಯಾದ ಕಾಂತಿಮಾಲಿನೀದೇವಿಯೆಂತಿರುವಳೆಂದು ಕೇಳಲು ಅಮಾತ್ಯನತ್ಯಂತಸಂತೋಷಚಿತ್ತನಾಗಿ, ತನ್ನ ನಿಜರೂಪದಿಂದೆದುರ್ಗೆ ನಿಲ್ಲಲು, ಮತಂಗಿಯಾತನಂ ನೋಡಿ, ರಾಜಾಮಾತ್ಯನಾದ ಧರ್ಮಗುಪ್ತನೆಂದು ಪ್ರತ್ಯುತ್ಥಾನಮಂ ಮಾಡಿ, ಕೈಮುಗಿದುಕುಳ್ಳಿರಿಸಿಕೊಂಡು, ಯಾವದ್ವೃತ್ತಾಂತವಂ ಕೇಳಿ, ಕಾಂತಿಮಾಲಿನೀದೇವಿಯೇರಾಜ್ಯಭಾರವಂ ವಹಿಸಿರುವ ವಾರ್ತೆಯಂ ಕೇಳಿ, ಪರಮಸಂತೋಷಯುಕ್ತಳಾಗಲು ; ಧರ್ಮಗುಪ್ತನು ಮತಂಗಿಯಂಕುರಿತು, ನಿನ್ನ ವೃತ್ತಾಂತವೇನು, ಈ ವಿಮಾನದಾರದು, ಈ ಮಹಾಪುರುಷನ್ಯಾರು, ಈ ದಿವ್ಯಾಂಗನೆಯದಾರು, ಆತನ ಸಮೀಪದಲ್ಲಿರುವ ಧೇನುವಿನ ವೃತ್ತಾಂತವೇನದಂ ವಿಸ್ತಾರವಾಗಿ ಪೇಳಬೇಕೆಂದೆನಲು, ಮತಂಗಿಯು, ಸಂಕ್ಷೇಪವಾಗಿ ಸಕಲ ವೃತ್ತಾಂತವಂ ವಿವರಿಸ

ಲವಂ ಕೇಳಿ, ಅಡಿಗಡಿಗೆ ವಿಸ್ಮಿತನಾಗಿ, ತಮ್ಮ ಪುಣ್ಯಕ್ಕೆಣೆಯಿಲ್ಲವೆಂದು, ತನ್ನಂ ಕಳುಹಿದ ವರ್ತಮಾನಮಂ ಮತಂಗಿಗರುಹಿ, ಜವದಿಂದ ಪೋಗಿ ದೇವಿಯಡಿದಾವರೆಗೆ ಬಿನ್ನೈಸುವೆನೆಂದು ಪೇಳಿ, ಮತಂಗಿಯಪ್ಪಣೆಗೊಂಡು, ನೆಲೆಗಾಣದ ಹರ್ಷದಿಂ ಮೈಯುಬ್ಬಿ ಪವನನಂತೆ ಅತ್ಯಂತವೇಗದಿಂ ನಗರಿಯಂ ಪೊಕ್ಕು, ದೇವಿಯಡಿಗಳಿಗೆ ವಂದನೆಯಂಮಾಡಿ, ಜನನಿ, ಲೋಕಾತಿಶಯನಾದ ನಿನ್ನಯ ಕುಮಾರಬಂದಿರುವನೇನೆಂಬೆನಾಕುಮಾರನ ಸೌಂದರ್ಯ, ಗಾಂಭೀರ್ಯ, ಕಾಂತಿಸೌಷ್ಟವಾದಿಗಳ್, ಸಾಕ್ಷಾತ್ಸಚೀದೇವಿಯಂತಿರುವ ಧಾನ್ಯಮಾಲಿನಿ ಎಂಬಜ್ಯೇಷ್ಟಪತ್ನಿಯಿಂದೊಡಗೂಡಿ, ಗುರುಪುತ್ರಸಹಿತನಾಗಿ, ಕಾಮದುಘಾ ಎಂಬ ಸುರಭಿಯಿಂ ಸಹಿತನಾಗಿ ದಿವ್ಯಮಣಿಮಯವಿಮಾನಾರೂಢನಾಗಿ ಬಂದಿರುವನೆಂದುಬಿನ್ನಹಮಾಡಲು; ದೇವಿಯರದಂ ಕೇಳಿ, ಮಿಥ್ಯಾವಾದವೆಂಬನಲು, ಧರ್ಮಗುಪ್ತನು, ಮತಂಗಿಯ ಮುಖದಿಂದ ತಿಳಿದುಬಂದಿರುವೆನಖಿಲ ವೃತ್ತಾಂತಮನೆಂದು ವಿವರಿಸಲು, ಅದಂ ಕೇಳಿ ಕಾಂತಿಮಾಲಿನಿಯು, ಹಾಗಾದಡೆ ಯಥಾರ್ಥವೆಂದುತಿಳಿದು,ಈ ಕ್ಷಣದಿ ಪುರಾಲಂಕಾರಮಂ ಮಾಡುವಂತೆ ಕಟ್ಟಲೆಯಂ ಮಾಡಿ, ದೈವಜ್ಞರಂಕರೆಸಿ, ಅವರಿಂದ ನಿಶ್ಚಿತಮಾದ ಸುಮುಹೂರ್ತದಲ್ಲಿ ಸಮಸ್ತ ವೈಭವದಿಂದ ಕರತರುವುದೆಂದು ಧರ್ಮಗುಪ್ತಂಗೆಆಜ್ಞಾಪಿಸಲು; ಶಿಲ್ಪಿಗಳು ಪುರಮಂಸತ್ವರದಿ ಶೃಂಗಾರಮಂ ಮಾಡಲು, ಅಮಾತ್ಯನಾದ ಧರ್ಮಗುಪ್ತನು-ಕರಿ, ತುರಗ, ರಥ, ಪದಾತಿ, ವೇತ್ರಿ, ಮಾಗಧ, ಗಣಿಕಾದಿಸಮಸ್ತವೈಭವದಿಂದ, ಕೋಶ ಸೇನಾಧಿಪತಿಗಳೇ ಮೊದಲಾದ ಸಮಸ್ತಪ್ರಕೃತಿಗಳಿಂದೊಡಗೂಡಿ, ಪುರೋದ್ಯಾನಾಭಿಮುಖನಾಗಿ, ಸಮಸ್ತ ಮಂಗಳವಾದ್ಯನಿಚಯನಿನಾದರಭಸದಿಂ ಬರುತಿರಲು, ಸಹಸ್ರಾಯುವವರಂ ನೋಡಿ, ಮತಂಗಿಯಂ ಕರೆದು, ಬರುವನ್ಯಾರಿವನೆಂದು ಕೇಳಲು, ಮತಂಗಿಯು ಧರ್ಮಗುಪ್ತನು ಬಂದುಪೋದವೃತ್ತಾಂತಮಂ ಪೇಳಿ, ನಿನ್ನೆಡೆಗೆ ದೇವಿಯಾಜ್ಞೆಯಿಂ ಬರುವಂತೆ ತೋರುತಿದೆ ಎಂದು ಪೇಳಲು, ಮುಖ್ಯಾಮಾತ್ಯನಾಗಮನಮಂ ನೋಡುತ್ತ, ಕುಸುಮಿತಾಶೋಕತರುವಿನಡಿಯಲ್ಲಿ ಧೇನುವಿನ ಸಮೀಪದೊಳು ಸುತೀಕ್ಷ್ಣನೊಡನೆ ಮಾತಾಡುತ್ತನಿಂತಿ

ರಲು, ಧರ್ಮಗುಪ್ತನು ಸಮಸ್ತ ಪೌರಜನರಿಂದೊಡಗೂಡಿ ದೂರದಲ್ಲಿ
ಯಾನವನ್ನಿಳಿದು, ಕೈಗಾಣಿಕೆಯಿಂ ಕರಜೋಳ್ಪಿಡಿದು, ಅಪರ ಶರಜನ್ಮನಂ
ತೆ ಪ್ರಕಾಶಮಾನನಾಗಿರುವ ಸಹಸ್ರಾಯುವಿನ ಸಮೀಪಕ್ಕೆ ಬರಲು; ವೃ
ದ್ಧನಾದ ಧರ್ಮಗುಪ್ತನಿಂಗೆ ಸಹಸ್ರಾಯುವು ವಂದನೆಯಂ ಮಾಡಲು; ಧರ್ಮ
ಗುಪ್ತನು ಹರಸಿ ಕೈಗಾಣಿಕೆಗಳನ್ನಿತ್ತು, ತಾನು ಸಮೀಪದಲ್ಲಿ ನಿಂದು,
ಮಿಗಿಲಾದ ಸಮಸ್ತರನ್ನು, ಓರೋರ್ವರಾಗಿ ಕರೆದು ಸಂದರ್ಶನವಂ ಮಾ
ಡಿಸಲು, ಸಹಸ್ರಾಯುವು ಯಥೋಚಿತಾಲಿಂಗನಗಳಿಂದ ಸನ್ಮಾನವಂ ಮಾ
ಡಿ, ಕುಶಲಪ್ರಶ್ನೆಯಂ ಮಾಡಿ, ಧರ್ಮಗುಪ್ತನಂ ಕರೆದು, ನಗರವೃತ್ತಾಂತ
ವಂ ಮಾತಾಡುತ್ತ, ಸೂರ್ಯನು ಗಗನವನ್ನಾರೋಹಣಮಾಡಲು, ಸಹಸ್ರಾಯು
ವು ಧರ್ಮಗುಪ್ತನಂ ಕುರಿತು-ಇಲ್ಲಿ ಸರ್ವರೂ ಭೋಜನವಂ ಮಾಡಿ ನಗ
ರಪ್ರವೇಶವಂ ಮಾಡುವುದೆಂದು ಪೇಳಲು; ಸಮಸ್ತಜನರಿಗೂ ಧರ್ಮಗು
ಪ್ತನು ಸ್ನಾನನಿಯಮಾದಿಗಳ ಮಾಡಿಕೊಂಬಂತೆ ಪೇಳಲು; ಸಮಸ್ತ ಜನ
ಗಳಿಗೂ ಭೋಜನಾದಿಗಳ ಮಾಡಿಸಲು ತತ್ಸಾಧನಾದಿಗಳನೊಂದಂ ಕಾಣೆ
ವೆಂದೆಲ್ಲರಾಲೋಚನೆಯ ಮಾಡುತ್ತಿರಲು; ಸಹಸ್ರಾಯುವು ಅಲ್ಲಿಂದಮಾ
ಧ್ಯಾಹ್ನಿಕನಿಯಮಾರ್ಥವಾಗಿ, ಸುತೀಕ್ಷ್ಣನಿಂಜೊಡಗೂಡಿ ಸರೋವರವನ್ನೈ
ದಿ ಸ್ನಾನನಿಯಮಾದಿಗಳನಾಚರಿಸುತ್ತಿರುವನಿತರೊಳು, ಸರ್ವರೂ ಸತ್ವ
ರದಿಂದ ಸ್ನಾನನಿಯಮಾದಿಗಳಮಾಡಿಕೊಳುತಿರಲು; ಸಹಸ್ರಾಯುವು ಧೇ
ನುವಿನ ಮಹಾತ್ಮ್ಯಯಂ ಪ್ರದರ್ಶನವಂ ಮಾಡಬೇಕೆಂದು, ಸುರಭಿಯಂ
ಪೂಜಿಸಿ ಪ್ರಾರ್ಥನೆಯಂ ಮಾಡಲು, ದಿವ್ಯಾಲಯ ನಿರ್ಮಾಣವಾಯಿತು,
ಧರ್ಮಗುಪ್ತನು ಸಮಸ್ತ ಪಾಂಗ್ತಿಯರಾದ ಜನರಿಂದೊಡಗೂಡಿ, ತತ್ಕಾಲ
ನಿರ್ಮಿತಜಾಂಬೂನದಮಯವಿಚಿತ್ರಾಲಯಮಂ ಪ್ರವೇಶಮಾಡಿ, ಪಜ್ತಿ
ಪಜ್ತಿಯಾಗಿ ತಾರತಮ್ಯಾನುಗುಣವಾಗಿ ಕುಳ್ಳಿರಲು; ಧೇನುವಿನಮುಖ
ದಿಂದ ದಿವ್ಯಾಭರಣಭೂಷಿತರಾಗಿ, ಯೌವನಸೌಂದರ್ಯಾದಿಗಳಿಂದ ಜಗನ್ಮೋ
ಹಿನಿಯರಾದ ಅಪ್ಸರಸ್ತ್ರೀಯರು ಅನೇಕಜನರುದ್ಭವಿಸಿ, ದಿವ್ಯಸುವರ್ಣ
ಮಯಪಾತ್ರಗಳೊಳು ಷಡ್ರಸೋಪೇತಭೋಜನವಂ ಮಾಡಿಸಲು, ಸಮ
ಸ್ತಜನರು ಯಾವದಪೇಕ್ಷಿತಾಶೇಷಪದಾರ್ಥಗಳ ಭೋಜನವಂಮಾಡಿಸಂತು

ಷ್ಟರಾಗಲು, ಬಹಿಸ್ಥಿತರಾದನಾದಜಾದಿಗಳು ಯಥೇಚ್ಛ ಭಕ್ಷಣೆಯಂ ಮಾಡಿ ಸಂತುಷ್ಟರಾಗಿ ಧೇನುವಿನ ಪ್ರಭಾವವಂ ನೋಡಿ ವಿಸ್ಮಿತರಾಗಿ ಕೊಂಡಾಡುತ್ತಿರಲು, ಅಪ್ಸರಸ್ತ್ರೀಯರು ಧೇನುವಿನ ಮುಖದಲ್ಲಿ ಲೀನವಾಗೆ, ಸಹಸ್ರಾಯುವು ಮಾತಂಗಿಯಡೆಗೆ ಬಂದು ಧಾನ್ಯಮಾಲಿನಿಯಿಂದೊಡಗೂಡಿ, ನೀನು ಮುಂದೆಪೋಗುವುದೆಂದು ಪೇಳಿ, ಸಮಸ್ತ ವೈಭವದಿಂದ ಧರ್ಮಗುಪ್ತನೊಡನೆ ಕಳುಹಿ, ತಾನು ಸುಮುಹೂರ್ತವಂ ನಿರೀಕ್ಷಿಸುತ್ತಿರಲು; ಮಾತಂಗಿಯು ಧಾನ್ಯಮಾಲಿನಿಯಂ ಸಮಸ್ತದೂತಿಯರಿಂದ ಸಹಿತವಾಗಿ, ನಿಖಿಲ ವೈಭವದಿಂದ ಪುರಪ್ರವೇಶವಂ ಮಾಡಿ, ರಾಜಾಲಯಮಂಪೊಕ್ಕು, ಕಾಂತಿಮಾಲಿನೀದೇವಿಯಂ ಕಂಡು ಸಾಷ್ಟಾಂಗದಿಂ ವಂದನೆಯಂಮಾಡಿ,ದಿವ್ಯರತ್ನಗಳಿಂದ ಪಾದಾರವಿಂದಗಳಿಗಭಿಷೇಕವಂ ಮಾಡೆ, ಧಾನ್ಯಮಾಲಿನಿಯು ಕರಮಂ ಪಿಡಿದು ಕಾಣಿಸಲು, ಕಾಂತಿಮಾಲಿನೀದೇವಿಯು ಮಾತಂಗಿಯನಾಲಿಂಗನವಂ ಮಾಡಿ ಸಮೀಪದಲ್ಲಿ ಕುಳ್ಳಿರಿಸಿಕೊಳ್ಳಲು, ಮಾತಂಗಿಯು ದೇವಿಯಂ ಕುರಿತು-ತಾಯೆ, ನಿನ್ನ ದಾಸಿಯಾದೆನಗೆ ಕೈಗಟ್ಟಿನಿಂದಿರುವ ಯೋಗ್ಯತೆಯಲ್ಲದೆ,ಸಮೀಪದಲ್ಲಿಕುಳಿತಿರುವಯೋಗ್ಯತೆಯುಂಟೇ ಎಂದು ನಿಂದಿರಲು, ಧಾನ್ಯಮಾಲಿನಿಯಂ ತಕ್ಕೈಸಿ-ವತ್ಸೆ, ಬಾರೆಂದು ತೊಡೆಯಮೇಲೆ ಕುಳ್ಳಿರಿಸಿಕೊಂಡು, ಸೌಂದರ್ಯಾದಿಗಳಂ ನೋಡಿ ಪರವಶಳಾಗಿ, ಮುದ್ದಾಡಿ, ಹಿಗ್ಗುತ್ತ, ಮಾತಾಡಿಸುತ್ತ ಕುಳಿತು, ಅನಂತರದಲ್ಲಿ ಸಹಸ್ರಾಯುವಿನ ಆಗಮನಕಾಲಮಂ ತಿಳಿದು, ಬಹುಮಂದಿ ಸಖೀಜನರಿಂಗೆ ದಿವ್ಯಾಭರಣಗಳಿಂದಲಂಕಾರವಮಾಡಿ, ಅಗ್ರಪ್ರದೇಶದಲ್ಲಿ ಅವರುಗಳ ಕೂಡಿಸಿ, ತಾನು ಸಾಧಾರಣಳಾಗಿ ಅನೇಕಪ್ರಮದಾಸಮೂಹದೊಳು, ಯಃಕಶ್ಚನಳಾಗಿ ಕುಳ್ಳಿರಲು.

ಇತ್ತಲಾ ಸಹಸ್ರಾಯುವು ಧೇನುವಿನಿಂದಲು ಸುತೀಕ್ಷ್ಣನಿಂದೊಡಗೂಡಿ ದಿವ್ಯಕಿರೀಟಕುಂಡಲಕವಚಗಳಂ ಧರಿಸಿ, ವಿಮಾನಾರೂಢನಾಗಿ ನಗರಮಂಪೊಕ್ಕು, ರಾಜಬೀದಿಯೊಳು ಬರುತ್ತಿರಲು, ಸಮಸ್ತಪುರಜನರು ಸಹಸ್ರಾಯುವಂ ನೋಡಿ ವಿಸ್ಮಿತರಾಗಿ, ನಿರ್ಧನರಿಂಗೆ ನಿಧಿಯು ದೊರತಂತೆ, ಸಾಕ್ಷಾತ್ಸಹಸ್ರಾಕ್ಷನಂತೆ ಪ್ರಕಾಶಮಾನನಾಗಿರುವ ಸಹಸ್ರಾಯುವಂ ಕಂಡು, ತಮ್ಮ ಪುಣ್ಯಕ್ಕೆಣೆಯಿಲ್ಲವೆಂದು ಸಂತೋಷವಾರಿಧಿಯಲ್ಲಿ ಮುಳುಗಿ

ನೋಡುತ್ತಲಿರಲು; ಸಹಸ್ರಾಯುವು ರಾಜಭವನದ್ವಾರದೊಳು ವಿಮಾನದಿಂ ದಿಳದು, ಅಂತಃಪುರಮಂಪೊಕ್ಕು, ದಿವ್ಯಾನರ್ಘ್ಯಾಭರಣವಸ್ತ್ರಗಳಿಂದಲಂ ಕೃತರಾಗಿ, ಸಾಕ್ಷಾದಪ್ಸರಸ್ತ್ರೀಯರಂತೆ ಪ್ರಕಾಶಮಾನರಾಗಿ, ಸ್ವಸಮಾ ನವಯೋರೂಪಾದಿಗಳಿಂದ ಶೋಭಿಸುತ್ತಿರುವ ಅನೇಕಸಖೀಜನರಸಮೂ ಹದೊಳು ಯುಕ್ತಳಾಗಿ ಬಂದೆಡೆಯಲ್ಲಿ ಕುಳ್ಳಿರುವ ಜನನಿಯಿದ್ದೆಡೆಗೆ, ಅಂತಃಕರಣಪ್ರೇರಕನಾದ ಸರ್ವಾಂತರ್ಯಾಮಿಯಾದ ಪರಮೇಶ್ವರನಿಂದ ಪ್ರೇರಿತನಾಗಿ, ಬಂದು ಸಾಷ್ಟಾಂಗದಿಂ ವಂದನೆಯುಂಮಾಡಿ ನಿಂದಿರಲು, ಕಾಂ ತಿಮಾಲಿನಿಯು, ಸಾಕ್ಷಾತ್ ಷಣ್ಮಾತುರನಂತೆ, ಮದನನಂ ಧಿಕ್ಕರಿಪ, ಸೌಂ ದರ್ಯದಿಂದ ಚಂದ್ರಬಿಂಬದಂತೆ ಪೊಳೆಯುತ್ತಿರುವ ಪುತ್ರನಂ ನೋಡಿ, ಹ ರ್ಷಪರವಶಳಾಗಿ, ಪುತ್ರಸ್ನೇಹದಿಂ ವಕ್ಷೋಜನಿಂ ಸ್ತನ್ಯತಾನೇ ಉಬ್ಬಿ ಸುರಿಯುತ್ತಿರಲು, ದೇವಿಯು ತನ್ನ ಬಾಹುಗಳಿಂದ, ಸಹಸ್ರಾಯುವಂ ತೆ ಕ್ಕೈಸಿ, ತೊಡೆಯಮೇಲೆಕುಳ್ಳಿರಿಸಿಮುದ್ದಾಡಿ ಶಿರವನಾಘ್ರಾಣಿಸಿ, ಆನಂದ ಬಾಷ್ಪ ಸುರಿಯುತ್ತಿರುವ ಕಾಂತಿಮಾಲಿನೀದೇವಿಯು ವಕ್ಷೋಜದಿಂದು ಬ್ಬಿ ಸಹಸ್ರಾಯುವಿಂಗೆ ಅಭಿಷೇಕವಾಗಲು, ಪುತ್ರನಂ ಕುರಿತು-ವತ್ಸ, ಇ ನಿತುದಿನ ತನ್ನಂ ಮರೆದಿರುವುದುಚಿತವೇ ಎಂದು ಕೇಳಲು, ಸಹಸ್ರಾಯು ವು ಕೈಮುಗಿದು-ಜನನಿ, ಬಾಲಕನ ಅಕ್ರಮವ ಮರೆಯಬೇಕೆಂದು ವಿಜ್ಞಾ ಪನೆಮಾಡಲು, ಮತಂಗಿಯು ಕೈಮುಗಿದು ಸರ್ವವೂ ಭವದುಪಾಸ್ಯಮಾನ ಳಾದ ಪಾರ್ವತೀ ಚರಣಕಮಲಾನುಗ್ರಹದಿಂದ ಸಮಂಜಸವಾದುದೆಂದು ಬಿ ನ್ನಹ ಮಾಡಲು, ಕಾಂತಿಮಾಲಿನೀದೇವಿಯು ಮತಂಗಿಯಂನಾಲಿಂಗನಮಾ ಡಿ ಧನಕನಕವಸ್ತ್ರಭೂಷಣಾದಿಗಳನಪರಿಮಿತವಾಗಿತ್ತು, ಸಮಸ್ತ ಪೌರ ಜನರು ಕೇಳುತ್ತಿರಲು, ಮತಂಗಿಯಂ ಬಹುಪ್ರಕಾರದಿಂ ಶ್ಲಾಘನೆಮಾಡಿ, ಎನಗೆ ಪುತ್ರಪ್ರದಾನವಂ ಮಾಡಿದಾಕೆಗೌರೀದೇವಿಯರಲ್ಲ, ನೀನೆಂದು ಬಹು ಸ್ತೋತ್ರವಂ ಮಾಡಿ, ಸಮಸ್ತ ಪೌರಜನರಿಂಗೆ ಬಹುಮಾನಮಂ ಮಾಡಿ, ವಸ್ತ್ರಾಭರಣಗಳನ್ನಿತ್ತು, ಭೂಸುರರಿಂಗೆ ದ್ರವ್ಯ,ಧೇನು,ಭೂಮಿ,ಭೂಷ ಣ ವಸ್ತ್ರಾದಿಗಳನಪರಿಮಿತವಾಗಿತ್ತು, ಧರ್ಮಗುಪ್ತನೇ ಮೊದಲಾದಸಮ ಸ್ತವ್ಯವಹಾರಿಗಳಿಗೆ ಬಹುಮಾನವಂ ಮಾಡಿ, ಗುರುಪುತ್ರನಿಂಗೆ ಸನ್ಮಾ

ಸವಮಂ ಮಾಡಿ, ದಿವ್ಯಾಲಯಮಿರುವದಕ್ಕೆ ಬಿಡದಿಯಂ ಮಾಡಿ, ಸೇವಾರ್ಥವಾಗಿ ಅನೇಕ ಪರಿಚಾರಕ, ದಾಸಿ, ದಾಸ, ದೂತರನ್ನಿತ್ತು, ವಿಮಾನಮಂನಿರಿಸುವದಕ್ಕೆ ತಾಣಮಂನೋಡಿ, ಸಹಸ್ರಸಂಖ್ಯಾತಶಸ್ತ್ರಾಸ್ತ್ರಪಾಣಿಗಳಕಾವಲಸಿರಿಸಿ, ಧೇನುಸಹಿತವಾಗಿ ಅಂತಃಪುರಮಂಪೊಕ್ಕು, ಗೋವಿಂಗೆ ದಿವ್ಯಾಲಯಪರ್ಯಂಕ ಸೇವಾಜನಾದಿಗಳ ನಿಷ್ಕರ್ಷೆಯಂ ಮಾಡಿ ಸುಖದಿಂದಿರಲು; ಕಾಂತಿಮಾಲಿನೀದೇವಿಯು, ಮತಂಗಿಯಿಂದೊಡಗೂಡಿ ಸರ್ವವೃತ್ತಾಂತವಮಂ ರಹಸ್ಯದಲ್ಲಿ ಕುಳಿತು ವಿಸ್ತಾರವಾಗಿ ವರ್ಣಿಸಲು, ಕೇಳಿ ಕಾಂತಿಮಾಲಿನಿಯು ವಿಸ್ಮಿತಳಾಗಿ ತನ್ನ ಪುಣ್ಯಕ್ಕೆಣೆಯಿಲ್ಲವೆಂಬ ಸಂತೋಷದಿಂ ಪುತ್ರನಭ್ಯುದಯಮಂ ನೋಡಿ ಹಿಗ್ಗುತ್ತ, ತನ್ನ ವೃತ್ತಾಂತವಮಂ ಮತಂಗಿಯೊಡನೆ ಪೇಳುವವಸರದೊಳು, ಆ ಸುಶರ್ಮರಾಯನು ಪುತ್ರಪತ್ನೀಸಹಿತನಾಗಿ ತರುರೂಪಾಗಿರುವ ಸುದ್ದಿಯಂ ಕೇಳಿ ಮತಂಗಿಯು ಮೂರ್ಛಿತಳಾಗಿ ಹಂಬಲಿಸಿ, ಸಮಯಮಂ ಸಹಸ್ರಾಯುವಿಂಗೆ ವಿದಿತಮಾಡಬೇಕೆಂದು ಇರುತಿರಲು;

ಒಂದು ದಿನ ಸಹಸ್ರಾಯುವು ಜನನಿಯಡೆಗೈತಂದು ವಂದನೆಯಂ ಮಾಡಿ, ಜನನಿ-ಎನ್ನ ತಾತನೆಲ್ಲಿಗೈದಿರುವನೆಂದು ಕೇಳಲು; ಕಾಂತಿಮಾಲಿನಿಯು- ಪತಿಯ ವೃತ್ತಾಂತವಂ ಪೇಳಿ ಕಂಬನಿದುಂಬಲು;ಸಹಸ್ರಾಯುವು ಕೇಳಿ ಕ್ರೋಧಮೂರ್ಛಿತನಾಗಿ, ಕ್ಲೇಶಪಾರವಶ್ಯದಿಂ ಪೂರ್ವಕಥೆಗಳಂ ಸ್ಮೃತಿಗೆ ತಂದು, ದೇವಕನ್ಯಾವ್ಯಾಪಾರವಮಂ ತಿಳಿದು, ಜನನಿಯಂ ಕುರಿತು-ತಾಯೆ, ನೀನಳಬೇಡ, ಜನಕನು ಜ್ಜೀವನಮಂ ಮಾಡುವೆನು ಭಯಬೇಡವೆಂದು ಜನನಿಯಂ ಸಮಾಧಾನವ ಮಾಡಿ ಸಭಾಸ್ಥಾನಕ್ಕೈತಂದು ದಿವ್ಯಸಿಂಹಾಸನದಿ ಕುಳಿತು ಧರ್ಮಗುಪ್ತನಂ ಕರೆದು ಜನಕನಂ ಕರತರಲು ನೇತ್ರಾವತೀತೀರಕ್ಕೆ ಪೋಗುವೆನು; ಸರ್ವಸನ್ನಾಹಮಂ ಸತ್ವರದಿ ಮಾಡುವುದು, ಶಿಲ್ಪಿಗಳ ಕರೆಸಿ ಬಹುಮಾನವನ್ನಿತ್ತು ನಾಲ್ಕು ಶಿವಾಲಯಗಳ ಏಕಕಾಲದೊಳ್ಪ್ರತಿಷ್ಟೆಯಂ ಮಾಡಲೋಸುಗ ಅತಿವಿಶಾಲವಾದ ವಿಚಿತ್ರತರಶಿಲಾಮಯದೇವಾಲಯ ಚತುಷ್ಟಯ ಸಾಮಗ್ರಿಯಂ ಸ್ತಂಭ, ದೂಲ, ಬೋದಿಗೆ, ವಿಟಂಕ, ಶಿಲಾಫಲಕ ಮೊದಲಾದ ಸರ್ವಸಾಮ

ಗ್ರಿಯುಂ ಕಡೆಯಮಾಡಿ, ಸಹಸ್ರಸಂಖ್ಯಾತಶಕಟಗಳಮೇಲೆ ಹೇರಿ ಸಿದ್ಧಮಾಡುವುದು ಮೂರುದಿನದೊಳೆಂದು ಕಟ್ಟಲೆಯಂ ಮಾಡಿ, ಸೇನಾಪತಿಯಂ ಕರೆದು ಸರ್ವಸೈನ್ಯದಿಂ ಹೊರಟು ನೇತ್ರಾವತೀತೀರಕ್ಕೈದುವನೆಂದು ಕಟ್ಟಲೆಯಂ ಮಾಡಿ, ಕೋಶಾಧಿಕಾರಿಯಂ ಕರೆದು ವೇತನಾದಿಗಳನೀಕ್ಷಣವೆ ಸರ್ವರಿಗೂ ಕೊಡುವುದು ಪ್ರಯಾಣಸನ್ನಾಹಮಂ ಮಾಡುವುದೆಂದು ಕಟ್ಟಲೆಯಂ ಮಾಡಿ, ಸುತೀಕ್ಷ್ಣನಿಂದೊಡಗೂಡಿ ಅಂತಃಪುರ ಪ್ರವೇಶಮಂ ಮಾಡಿ ಧಾನ್ಯಮಾಲಿನಿಯೊಡನೆ ಕ್ರೀಡಿಸುತ್ತಿರಲು.

ವಿವೇಕಿಜನಶಿಖಾಮಣಿಯಾದ ಧರ್ಮಗುಪ್ತನು ಸಹಸ್ರಾಯುವಿನ ಪ್ರಭಾವಮಂ ಸುತೀಕ್ಷ್ಣನಮುಖದಿಂದ ಪ್ರತ್ಯಹವಲ್ಲಿಯೂ ಕೇಳುತ್ತ ವಿಸ್ಮಿತನಾಗಿ ತಮ್ಮ ಪುಣ್ಯಕ್ಕೆಣೆಯಿಲ್ಲವೆಂದು ಸಂತೋಷದಿಂ ಯುಕ್ತನಾಗಿ ಸಮಸ್ತ ಶಿಲ್ಪಿಗಳಂ ಕರೆಸಿ ದೇವಾಲಯಚತುಷ್ಟಯಸಾಮಗ್ರಿಯಂ ಅನೇಕಾಯಸಮಯಶಕಟಗಳಮೇಲೆ ತುಂಬಿಸಿ ಸಿದ್ಧಮಾಡಿ ಸಹಸ್ರಾಯುವಿಂಗೆ ಬಂದು ವಿಜ್ಞಾಪನವಮಾಡಲು; ಸೇನಾಪತಿಯಂಕರೆಸಿ ಸಮಸ್ತಸೈನ್ಯದಿಂದೊಡಗೂಡಿ, ಈ ದೇವಾಲಯಸಾಮಗ್ರಿಯಂ, ಲಿಂಗಚತುಷ್ಟಯಮಂ, ಸರ್ವಶಿಲ್ಪಿಗಳಂ ಸಂಗಡಕರದೊಯ್ದು ದಿಂಬಿನದಿನವೇ ಪ್ರಯಾಣಮಾಡುವದೆಂದು ಪೇಳುತಪ್ಪಣೆಯಂನಿತ್ತು, ಸರ್ವಾಧಿಕಾರಮಂಸುತೀಕ್ಷ್ಣನಧೀನಮಾಡಿ, ಸೇನಾಪತಿಯಿಂದೊಡಗೂಡಿ ನೇತ್ರಾವತೀತೀರಮಂ ಸತ್ವರದೊಳೈದುವುದೆಂದು ಕಟ್ಟಲೆಯಂಮಾಡಿ ಕಳುಹಿ, ತದನಂತರದೊಳಂತಃಪುರಮಂಪೊಕ್ಕು, ನಿತ್ಯನಿಯಮಾದಿಗಳಮಾಡಿ ಸುಖದಿಂದಿದ್ದು ಸುಮುಹೂರ್ತದೊಳ್ಪ್ರಯಾಣೋದ್ಯುಕ್ತನಾದ ಧರ್ಮಗುಪ್ತನು ಮಿತ್ರವಿಂದ ವೃತ್ತಾಂತಮಂ ವಿಸ್ತಾರದಿಂಪೇಳಲು; ಸಹಸ್ರಾಯುವದಂ ಕೇಳಿ ಮಿತ್ರವಿಂದೆಯಂ ಕರೆತರುವದೆಂದು ಪೇಳಲು; ಧರ್ಮಗುಪ್ತನು ಮಿತ್ರವಿಂದೆಯಂ ರಾಜಕುಮಾರನೆಡೆಗೆ ಕರೆತರಲು, ಮಿತ್ರವಿಂದೆಯು ಸಹಸ್ರಾಯುವಂನೋಡಿ ವಿಸ್ಮಿತಳಾಗಿ ಬಂದು ವಂದನೆಯಂ ಮಾಡಿ ತಲೆವಾಗಿ ಮುಂದೆ ನಿಂದಿರಲು; ಸಹಸ್ರಾಯುವಾಕೆಯಂ ನೋಡಿ ತನ್ನಸಂಗಡ ಬರುವುದೆಂದು ಕಟ್ಟಲೆಯಂ ಮಾಡಿ, ಧಾನ್ಯಮಾಲಿನಿಯಂ ಮಾಹಿಷ್ಮತಿಯಲ್ಲಿರಿಸಿ, ರಾಜ್ಯ

ಭಾರಮಂ ಧರ್ಮಗುಪ್ತನಧೀನಮಾಡಿ, ಕಾಂತಿಮಾಲಿನೀದೇವಿಯುಂ, ಮತಂಗಿಯುಂ, ಮಿತ್ರವಿಂದೆಯುಂ, ಧೇನುವಂ, ವಿಮಾನಮನೇರಿಸಿ, ತರುವಾಯ ಧನುರ್ನಿಷಂಗಾಸಿಗಳಧರಿಸಿ, ಕಿರೀಟಕುಂಡಲಕವಚಹಾರಾದಿಗಳಿಂದ ಪ್ರಕಾಶಮಾನನಾಗಿ, ವಿಮಾನಾರೋಹಣಮಂ ಮಾಡಿ, ಭೋ, ವಿಮಾನರಾಜ, ನೇತ್ರಾವತೀತೀರಮಂ ಸೈದಬೇಕೆಂದು ಆಜ್ಞಾಪಿಸಲು; ವಿಮಾನಮತ್ಯಂತಜವದಿಂ ತಾರಾಪಥದಿ ನಡೆತಂದು ರವಿಯು ಚರಮಾಚಲವನವಲಂಬಿಸುವನಿತರೊಳು ನೇತ್ರಾವತೀತೀರಮನೈದಿತೆಂಬಲ್ಲಿಗೆ॥ * ॥ ಇಂತು ಕರ್ನಾಟಕ ಭಾಷಾವಿರಚಿತಮಾದ ಶ್ರೀಮತ್ಸಮಸ್ತಭೂಮಂಡಲಮಂಡನಾಯಮಾನನಿಖಿಲ ದೇಶಾವತಂಸ ಕರ್ನಾಟಕ ಜನಪದಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನಮಧ್ಯ ದೇದೀಪ್ಯಮಾನಾವಿಕಲಕಲಾನಿಧಿಕುಲ ಕ್ರಮಾಗತರಾಜಕ್ಷಿತಿಪಾಲ ಪ್ರಮುಖ ನಿಖಿಲ ನಿಜರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ಪರಮೇಶ್ವರಪ್ರೌಢಪ್ರತಾಪಾಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕಬಿರುದಾಂಕಿತ ಶ್ರೀಚಾಮರಾಜಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಆತ್ರೇಯಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹೀಶೂರಪುರವರಾಧೀಶ ಶ್ರೀಕೃಷ್ಣರಾಜವಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀ ಕೃಷ್ಣರಾಜವಾಣೀವಿಲಾಸವೆಂಬಾಂಕಿತದಿಂದ ಕರ್ಣಾಟಕಭಾಷಾ ವ್ಯಾಖ್ಯಾನರೂಪಕವಾಗಿ ರಚಿಸಿರುವ ಶ್ರೀಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ಚತುರ್ದಶೋಧ್ಯಾಯಕ್ಕೆ ‡ ಮಂಗಳಮಹಾ ॥ * * *

ಹದಿನಾಲ್ಕನೇ ಅಧ್ಯಾಯ ಸಂಪೂರ್ಣವು.

# ಹದಿನೈದನೇ ಅಧ್ಯಾಯ.

ಅನಂತರ-ನೇತ್ರಾವತೀನದಿಯ ಸಮೀಪದಲ್ಲಿರುವ ವಿಪಿನಪ್ರಾಂತ್ಯದೊಳು ಇಳಿದಿರುವ ನಿಜಸೈನ್ಯಮಂ ಕಂಡು ಸೇನಾಮಧ್ಯದೊಳು ವಿಮಾನವಿಳಿಯಲು, ಸಹಸ್ರಮುಖನಾವಿಮಾನದಿಂದಿಳೆಗಿಳಿದು, ಮತಂಗಿ, ಮಿತ್ರವಿಂದೆಯರಿಂ ಸಹಿತಳಾದ ಜನನಿಯನಿಳಿಸಿ, ನಾನಾವಿಚಿತ್ರ ಪರಮಾದ್ಭುತವಿಶಾಲಪಟಾಲಯಮಂ ಪ್ರವೇಶಮಾಡಿ ಸಾಯಾಹ್ನನಿಯಮಂಗಳನಾಚರಿಸಿ, ಆರೋಗಣೆ ಮಾಡಿ, ರಾತ್ರಿಯಾಮಾನಂತರದೊಳಾದಿವ್ಯವಿಮಾನದೊಳು ಮಿತ್ರವಿಂದೆಯು ಸುತೀಕ್ಷ್ಣನಂ ಸಂಗಡಕರದುಕೊಂಡು ಕುಳಿತು, ಸುಪ್ರಭೆಯ ನಗರಮಂ ನೋಡಿ ವಿಸ್ಮಿತನಾಗಿ, ಆ ಪುರದವಿಸ್ತಾರಮಂ ಕಂಡು, ವಿಮಾನದಿಂದಿಳಿದು, ಪೂರ್ವಪಶ್ಚಿಮ ದಕ್ಷಿಣೋತ್ತರದಿಶಾವಿಭಾಗ ವಿಜ್ಞಾನಾರ್ಥವಾಗಿ, ಶಂಕುಸ್ಥಾಪನಮಂಮಾಡಿ, ಗಲಗಾಗದಂತೆ ಅಲ್ಲಿಂದ ಸೈನ್ಯಮಿದ್ದೆಡೆಗೆ ಬಂದು, ದಿವ್ಯರತ್ನಮಯ ಪರ್ಯಂಕದೊಳು ಶಯನಮಂಮಾಡಿ, ನಿದ್ರಾಂಗನಾಲಿಂಗನ ಸುಖಾತಿಶಯಮುಕುಳಿತ ವಿಶಾಲನಯನಾರವಿಂದನಾಗಿದ್ದು, ಇನನುದಯದೊಳಗೆದ್ದು, ಸರ್ವಶಿಲ್ಪಿಗಳಿಂದಲೊಡಗೂಡಿ ರಾತ್ರಿನೋಡಿದ್ದ ನಗರವದೃಶ್ಯಮಾಗಿರಲು; ಶಂಕುವಿನ ಗುರುತಿನಿಂ ದಿಗ್ಭಾಗಮಂ ನಿಶ್ಚೈಶಿ, ದೇವಾಲಯನಿರ್ಮಾಣಮಂ ಮಾಡುವದಕ್ಕೆ ಸ್ಥಾನಮಂನೋಡಿ, ಅಸ್ತಮಯವಾಗುವನಿತರೊಳು, ಚತುರ್ದಿಕ್ಕಿನೊಳು ಭೂಶೋಧನೆಯಂಮಾಡಿ, ಅಸ್ತಮಯಕಾಲದೊಳು ಶಿಬಿರಕ್ಕೈತಂದು, ರಾತ್ರಿಯಾಮಾನಂತರದೊಳೆಯುತ ಶಿಲ್ಪಿಗಳಿಂದ, ನಾಲ್ಕುದಿಕ್ಕುಗಳಲ್ಲಿ ಶಿವಾಲಯಚತುಷ್ಟಯಮಂ ಏಕಕಾಲದಲ್ಲಿ ನಿರ್ಮಾಣಮಂಮಾಡಿ, ದೇವಾಲಯಗಳಲ್ಲಿ ಅನೇಕಶಸ್ತ್ರಪಾಣಿಗಳನಿರಿಸಿ, ಶಿಬಿರಕ್ಕೆಬರುವನಿತರೊಳು, ಅರುಣೋದಯವಾಗಲು; ನೇತ್ರಾವತೀ ಪ್ರವಾಹದೊಳು ಸ್ನಾನಾದಿಗಳ ಮಾಡಿ, ಪೂರ್ವದಿನ ನಿರಾಹಾರಿಯಾದುದರಿಂದ ಜವದಿಂದಾರೋಗಣೆಮಾಡಿ, ಶಯನಮಂ ಮಾಡಿ, ಯಾಮತ್ರಯಾನಂತರದೊಳೆದ್ದು, ಮಿತ್ರವಿಂದೆಯಿಂದೊಡಗೂಡಿ, ಜನನೀಜನಕಭ್ರಾತೃ ಮೊದಲಾದ ನಾನಾದೇಶದರಸುಗಳು, ವೃಕ್ಷವಾಗಿರುವ ತಾಣಮಂ

ನೋಡಿ ಬಹುದುಃಖಿತನಾಗಿ, ಸೈನ್ಯವಿದ್ದೆಡೆಗೆ ಬಂದು, ಸಾಯಾಹ್ನವ್ಯಾಪಾರಗಳಂಮಾಡಿ, ಜವನಿಂದ ಭೋಜನಾದಿಗಳಮಾಡಿ, ಶಯನಮಂಮಾಡಿದನು.

ಇತ್ತಲಾ ಸುಗಂಧಿನಿಯು ವಿಮಾನಾರೂಢಳಾಗಿ ಬರುತ ನಗರವದೃಶ್ಯವಾಗದೇ ಸ್ಥಿರವಾಗಿರುವುದಂ ನೋಡಿ ವಿಸ್ಮಿತಳಾಗಿ, ನಗರಮಂಪ್ರೊಕ್ಕು ಪೂರ್ವದಲ್ಲಿ ಬಿಸುಟಿದ್ದ ಪರ್ಯುಷಿತಪದಾರ್ಥಗಳಂ ಕಂಡು, ಇದೇನಚ್ಚರಿಯೆಂದು ಸಂಶಯಮಂನೈದಿ, ಈ ವಿಮಾನಪರೀಕ್ಷೆಯಂಮಾಡುವೆನೆಂದು ಆರಾತ್ರಿಯಿದ್ದು ಅರುಣೋದಯವಾಗಲಿದ್ದು, ಸರ್ವರಿಂದೊಡಗೂಡಿ ವಿಮಾನಾರೂಢಳಾಗಿ ಗಗನಮಂ ನೇರಲು; ಸಹಸ್ರಾಯುವಿನಿಂದ ಆಜ್ಞಪ್ತರಾದ ಗೂಢಚಾರರು, ಜವದಿಂ ಬಂದು ದೇವಕನ್ಯೆಯು ವಿಮಾನಾರೂಢಳಾಗಿ ಪೋದಳೆಂದು ಬಿನ್ನಹಮಾಡಲು; ಕಾಂತಿಮಾಲಿನೀತನಯನಾಲೋಚನೆಯಂ ಮಾಡಿ ನಗರವದೃಶ್ಯವಾಗುವನಿದರ್ಶನಮಾದುದು, ಪೌಂಡವೀಗಮನಾಗಮನನಿರೋಧಮನೆಂತುಮಾಡುವೆನೆಂದು ಚಿಂತಿಸಿ, ಬ್ರಹ್ಮರಾಕ್ಷಸನ ನುಡಿಯಂ ನೆನೆದು, ಈ ನಗರದ ದಕ್ಷಿಣಭಾಗದಲ್ಲಿರುವ ಶಾಲ್ಮಲೀವೃಕ್ಷಮನರಸಿ ನೋಡಿ, ನಿದರ್ಶನಮಂ ಮಾಡುವೆನೆಂದು ಗುರುಪುತ್ರನೊಡಗೂಡಿ ಅರಸುತಾ ಶಾಲ್ಮಲೀವೃಕ್ಷಮಂ ಕಂಡು, ಸುತೀಕ್ಷ್ಣನಂಕರೆದು, ಈ ವೃಕ್ಷದೊಳು ತಿಲೋತ್ತಮೆಯು ಶಾಪದಿಂ ಬಂದ ಮಾನುಷಶರೀರಮಂ ಇರಿಸಿರುವಳಂತೆ? ಮರವನ್ನೇರಿ ನೋಡುವುದೆಂದು ಪೇಳಲು; ಸುತೀಕ್ಷ್ಣನಾಪಾದಪವನ್ನೇರಿ ಶಾಖೋಪಶಾಖೆಗಳನರಸಿ ಕಾಣದೆ, ಮರದಿಂದಿಳಿದು-ಮಹಾರಾಜ, ಶಾಖೋಪಶಾಖೆಗಳನರಸಿದೆನು, ಕುಣಪಮಂ ಕಾಣೆನೆಂದೆನಲು; ಸಹಸ್ರಾಯುವು ಕೇಳಿ ತಿಲೋತ್ತಮೆಯ ವಾಕ್ಯಮಂ ನೆನೆದು, ತಾನೆ ಮರವನೇರಿ ಶವಮಂಕಂಡು, ದೇವತಾವಾಕ್ಯವನೃತವಾಗುವುದೇ ಎಂದು ಸಂತೋಷದಿಂ ವೃಕ್ಷದಿಂದಿಳಿದು, ಈಗಲೇ ದೇಹಸಂಸ್ಕಾರಮಂ ಮಾಡಕೂಡದೆಂದು, ಸಿಬಿರಕ್ಕೆ ಬಂದು ಮಂತ್ರಿಯಂ ಕರೆಸಿ, ಈ ಕಾಂತಾರದೊಳಗಿರುವ ಶುಷ್ಕಚಂದನ ತರುಗಳಂ ಕಡಿಸಿ ಈರೈದು ಶಕಟಗಳಮೇಲೆ ತುಂಬಿಶಿ, ಸಿದ್ಧಮಾಡಿರುವುದೆಂದು ಕಟ್ಟಲೆಯಂ ಮಾಡಲು, ತರುವಾಯ ಸುಗಂಧಿನಿಯು ಹೇಮಮಾಲಿನಿಯಿಂದಲೂ, ತಿರಸ್ಕರಿಣೀಯಿಂದಲೂ, ಕೂಡಿ ಸಪರಿವಾರದಿಂ ವಿಮಾ

ನಗಳನೇರಿಬಂದು ನಗರವೊಂದಿನಂತೆ ಉದಯವಾಗದೇ ಸ್ಥಿರವಾಗಿರುವಂತೆ
ಕಾಣಿಸಲಿದೇನಾಶ್ಚರ್ಯವೆಂದು ಚಿಂತಾಕ್ರಾಂತಳಾಗಿ, ನಾನಾವಿಧವಿಕಲ್ಪ
ಮಾಡಿ, ಕಾರಣಮಂ ಕಾಣದೇ ಸುಗಂಧಿನಿಯು ನಗರಕ್ಕೆ ಪಿತನಿತ್ತ ಪಾಟ
ವವು ಶಿಥಿಲವಾದುದು, ಬಹುಕಾಲವಾದುದರಿಂದ ದೃಶ್ಯಾವಸ್ಥೆಯೇ ಸ್ಥಿರ
ವಾದುದಿನ್ನೇನು ಮಾಡುವೆನೆಂದು ಚಿಂತಿಸುತ್ತಿದ್ದಳು.

ಇತ್ತಲಾ ಗೂಢಚಾರರು ಬಂದು ಕನ್ಯಾಗಮನವಾರ್ತೆಯಂ ಪೇಳ
ಲು; ಸಹಸ್ರಾಯು ಸುತೀಕ್ಷ್ಣನಿಂದೊಡಗೂಡಿ, ಚಂದನೇಂಧನಗಳಿಂಪೂರಿ
ತವಾದ ಶಕಟಗಳಂ ದೂತರಿಂ ತೆಗಸಿಕೊಂಡು ಶಾಲ್ಮಲೀವೃಕ್ಷದೆಡೆಗೆ ರಹ
ಸ್ಯವಾಗಿ ಪೋಗಿ, ಚಂದನೇಂಧನಗಳಿಂದಚಿತಿಯಂರಚಿಸಿ, ತಾನೇ ಮರವ
ನೇರಿ ತಿಲೋತ್ತಮೆಯ ಕಳೇಬರಮಂ ತೆಗದು, ಅಗ್ನಿಸಂಸ್ಕಾರಮಂ ಮಾ
ಡಿ, ತದಸ್ಥಿಭಸ್ಮವಂ ನದಿಯೊಳಗೆ ಕದಡಿ, ತಾನುಸ್ನಾನಮಂ ಮಾಡಿ ಶಿಬಿರಕ್ಕೆ
ಬಂದು, ಗೋಭೂದಾನಾದಿಗಳ ಮಾಡಿ ಶಯನಮಾಡಲು; ಸುತೀಕ್ಷ್ಣನಿದ
ರಮೂಲಮುಮಂ ನರಿಯದೇ, ಕೇಳಲಂಜಿ, ತನ್ನೊಳುತಾನೇ ವಿಸ್ಮಿತನಾಗಿ, ತ
ನ್ನಪಟಾಲಯಮಂ ಪೊಕ್ಕು, ಸಹಸ್ರಾಯುವಂ ಕೊಂಡಾಡುತ್ತಿದ್ದನು.

ಇತ್ತಲಾ ಸುಗಂಧಿನಿಯು ರವಿಯುದಯವಾಗಲು, ಸರ್ವರಿಂದೊಡ
ಗೂಡಿ ಪ್ರಯಾಣಮಂ ಮಾಡಿ, ವಿಮಾನಗಳಕಾಣದೆ ಮಾತೃಶರೀರ ದಹನ
ಮಾಡಿದುತ್ತರಕ್ಷಣದಲ್ಲಿ ವಿಮಾನಗಳದೃಶ್ಯವಾಗಿ ಪೋದಕಾರಣಮಂ ತಿಳಿ
ಯದೆ ಹಾರಪ್ರಭಾವದಿಂ ಮಾತೃವಾಕ್ಯಮಂ ಮರೆದು, ತ್ರಸ್ತಹೃದಯ
ಳಾಗಿ, ನಾನಾವಿಧಚಿಂತೆಯಿಂ ಪಾರಗಾಣದೆ, ಇದೇನಚ್ಚರಿಯೋ, ನಗರವು
ಸ್ಥಿರಾಪರೋಕ್ಷಮಂ ನೈದಿದುದು, ವಿಮಾನಂಗಳನ್ನಾರೋ ಅಪಹರಿಸಿದರೆಂ
ದು ನಿಶ್ಚಯಮಾಡಿ, ವಿದಗ್ಧೆಯರಾದ ದೂತಿಯರಂ ಕರೆದು ಪುರುಷರಾಕಾರ
ಮಂ ಧರಿಸಿ, ಈ ನಗರಕ್ಕೆ ಸುತ್ತಲೂ ದ್ವಾದಶಯೋಜನಾವಧಿಪ್ರದೇಶವ
ನ್ನು ಎಳ್ಳನಿತು ಬಿಡದಂತ ನೋಡಿ, ಏನಾದಡೆಯು ವಿಶೇಷಮಿದ್ದಡೆ ತಿಳಿ
ದುಬಂದೊರೆವುದೆಂದಪ್ಪಣೆಗೊಟ್ಟು ತಿರಸ್ಕರಣಿ, ಹೇಮಮಾಲಿನಿಯರಿಂದೊ
ಡಗೂಡಿ ಅಂತಃಪುರಮಂಪೊಕ್ಕು, ಮಂತ್ರಾಲೋಚನೆಯಮಾಡುತ್ತಿರಲು;

ಇತ್ತಲಾ ದೂತಿಯರು ಪುರುಷರಾಕಾರವಂ ತಾಳಿ ಪೋಗುತ್ತ ಅ

ಸ್ತ್ರೀಯುಸಮುಚ್ಚಯದೊಳು ಸುಗಂಧಿನಿಯೆಡೆಗೆ ಬಂದು-ತಾಯೆ, ಕೇಳೀನಗರದ ಚತುರ್ದಿಕ್ಕಿನೊಳು, ಮಹಾದೇವನಾಲಯವು ಅತಿವಿಶಾಲ ಶಿಲಾಮಯವು, ಸಮವಾಗಿ ನಿರ್ಮಾಣವಾಗಿರುವುದು, ಒಂದೊಂದು ದೇವಾಲಯದ ಸುತ್ತಲೂ, ಸಹಸ್ರಸಂಖ್ಯಾತ ಶಸ್ತ್ರಪಾಣಿಗಳು ಕಾದಿಹರು, ಅನೇಕ ಮಂಗಳವಾದ್ಯ ಧ್ವನಿಯಿಂದ ಸ್ಥಾನೀಕ, ಅರ್ಚಕ, ಪರಿಚಾರಕ, ಗಣಿಕಾದಿಗಳು ನಿತ್ಯೋತ್ಸವದಿಂದ ಪೂಜಿಸುತ್ತಿಹರು. ಈ ನಾಲ್ಕು ದೇವಾಲಯದ ಪ್ರಾಕಾರಾಂತರಾಳ ಪ್ರದೇಶದಲ್ಲಿ, ಸ್ಫಟಿಕಶಿಲಾಸೋಪಾನ ಪರಿಶೋಭಿತ ಜಲಾಶಯಗಳತಿಮನೋಹರವಾಗಿರುವುದು. ಅಂತುಮಲ್ಲದೆ ಈ ಪುಟಭೇದನಕ್ಕೆ ಯೋಜನದೂರದಲ್ಲಿ ಯೋಜನತ್ರಯವಿಶಾಲವಾದ, ಕರಿ ತುರಗ ರಥ ಪದಾತಿಗಳೇ ಮೊದಲಾದ ಅನೇಕ ಸೈನ್ಯವು ಸಮುದ್ರದಂತೆ ಇಳಿದಿರುವುದು. ಆ ಸೇನಾಮಧ್ಯದಲ್ಲಿ ಅನೇಕ ಜಾಂಬೂನದಕಲಶಗಳಿಂದ ಪ್ರಕಾಶಮಾನವಾದ, ನಾನಾವರ್ಣವಿಚಿತ್ರಪಟಾಲಯಗಳನೇಕವಿಹವು, ಆ ಸೇನೆಯೊಳಿರುವ ಯೂಥಪತಿಗಳಂ ನೋಡಲಳವಲ್ಲ. ವಾಯುವಲ್ಲಾಡಲಂಜುವನು. ಆ ಸೈನ್ಯವಂ ಪ್ರವೇಶಮಂಮಾಡಲು ಮಿಗಿಲಾದವರ ಪಾಡೇನು. ಇದೆರಡದ್ಭುತವ ನೋಡಿ ಬಂದೆವು. ಇನ್ನೆಲ್ಲಿಯೂ ಏನು ವಿಶೇಷಮಂ ಕಾಣಲಿಲ್ಲವೆಂದು ಬಿನ್ನಹಮಾಡಲು ; ಸುಗಂಧಿನಿಯು ಕೇಳಿ ತ್ರಸ್ತಹೃದಯಳಾಗಿ, ಮಹತ್ತಾದ ರೋಷಾವೇಶದಿಂದ ಪರವಶಳಾಗಿ, ಈಗ ಬಂದಿರುವನಿಂದಲೇ ನಡದಿರುವದಿನಿತು ಕಾರ್ಯಗಳೆಲ್ಲ, ಇವನದಾರೋ ಕಾಣೆ, ಈ ವಿಮಾನಗಳನಪಹರಿಸಿಕೊಂಡು ಪೋಗಿರುವನಿವನೇಸರಿಯೆಂದು ನಿಶ್ಚಯಮಾಡಿ, ಹಾರಮಾಹಾತ್ಮೆ ಮೊದಲಾದುದಂ ಮರೆದು ಯುದ್ಧಮಂಮಾಡುವೆನೆಂದು ನಿಶ್ಚೈಸಿ, ಸ್ತ್ರೀಸೈನ್ಯವಂ ಕರೆದು- ನಾಳೆಯುದಯದೊಳು ಸೇನಾಸಹಿತನಾಗಿ ಬಂದಿರುವನೊಡನೆ ಯುದ್ಧವಂಮಾಡುವೆನು, ಸರ್ವಸನ್ನಾಹದಿಂ ಸಿದ್ಧವಾಗುವದೆಂದು ಕಟ್ಟಳೆಯಂಮಾಡಿ, ತಿರಸ್ಕರಣಿಯೆಂಬ ದೇವತೆಗೆ ಸೇನಾಧಿಪತ್ಯಮಂನಿತ್ತು, ಬಹುಮಾನವಂಮಾಡಿ, ಯುದ್ಧಸೂಚಕವಾದ ಭೇರೀತಾಡನಾದಿಗಳನ್ನು ಮಾಡಿಸಿ, ಅರುಣೋದಯವಾಗುವುದುಂ ನಾನಾವಿಧವಾದ ಶಸ್ತ್ರಗಳಪಿಡಿದು ವೀರಪಾನವಮಾಡಿ ಅಚಲಾಬಲವು ಸುಗಂ

ಧಿಸಿಯ ಅಪ್ಪಣೆಗೊಂಡು ಪೊರಮಡಲು; ಗೂಢಚಾರರದಂ ಕಂಡು ಜವದೊಳ್ಳೈತಂದು ರಾಜಕುಮಾರನೊಡನೆ ಯುದ್ಧಸನ್ನದ್ಧರಾಗಿ ಶಸ್ತ್ರಪಾಣಿಗಳಾದ ಅನೇಕ ಪ್ರಮದಾಬಲವು ನಗರಿಯಿಂ ಪೊರಮಟ್ಟು ನಮ್ಮ ಸೈನ್ಯಕಭಿಮುಖವಾಗಿ ಬರುತ್ತಲಿಧೆ ಎಂದು ಬಿನ್ನೈಸಲು ; ಸಹಸ್ರಾಯುವತ್ಯಂತಚಿಂತಾಕ್ರಾಂತನಾಗಿ, ಇದೇನಿದು ವಿಪರ್ಯಾಸವಿನ್ನೇನೆಮಾಡಬೇಕೆಂದು ಯೋಚಿಸಿ, ಎಲ್ಲಾನುಡಿಗಳು ನಿದರ್ಶನಕ್ಕೆಬಂದುದು, ಈ ಕನ್ನೆತನ್ನೊಳು ಅನುರಕ್ತೆಯಾಗಲಿಲ್ಲೇನುಕಾರಣವೋ ತಿಳಿಯಲಿಲ್ಲ, ಅಬಲಾಜನರೊಡನೆ ಯುದ್ಧಮಾಡುವುದೆಂತು, ಜಯಿಸಿದಡೆಯುಂ ಅಪಕೀರ್ತಿ, ಸೋತಡೆಯುಂ ಅಪಕೀರ್ತಿ, ಕಾರ್ಯಹಾನಿಯು, ಇಂತನರ್ಥಪರಂಪರೆಗಳೇ ಪ್ರಾಪ್ತವಾದುದು. ಮುಂದೇನಮಾಡುವೆನೆಂದು ನಾನಾವಿಧದಿ ಚಿಂತಿಸುತ, ಅಂತಃಪುರದಿಂದ ಬಹಿರಾಸ್ಥಾನಮಂಟಪಕ್ಕೈತಂದು, ಸೇನಾಪತಿಯಂ ಕರೆಸಿ, ನೀನು ಪರಿಮಿತಸೇನೆಯಿಂಸಹಿತನಾಗಿ, ಯುದ್ಧಾರ್ಥವಾಗಿ ಬರುತಿರುವ ಅಬಲಾಬಲಕ್ಕಿದಿರಾಗಿ ಪೋಗಿ ತಡದು, ಏಕೆ ಬಂದಿರುವರವರಭಿಪ್ರಾಯಮಂ ತಿಳಿದು ಚಾರಮುಖದಿಂದ ತನಗೆ ತಿಳಿಸುವುದು. ಅವರು ದುಡುಕಿ ಬಂದಡೆಯುಂ ನೀವು ಕೈಮಾಡದಿರಿ ಎಂದು ಸೇನಾಪತಿಗಪ್ಪಣೆ ಇತ್ತು ಕಳುಹಿ, ಪರಮಚಿಂತಾಂಗಸಮ್ಮೇಳದಿಂದ ದಿವ್ಯ ಮಂಚದೊಳು ಕುಳ್ಳಿರುವ ಸಹಸ್ರಾಯುವಂ ಮುಂಡರ್ಷಿಶಾಪದಿಂ ವಿವರ್ಣರಾಗಿ, ಅಚೇತನಪ್ರಾಯರಾಗಿರುವ ಹಂಸಮಿಥುನಂಗಳು ನೋಡಿ, ತದವಲೋಕನಮಾತ್ರದಿಂ ಶಾಪನಿಮಿತ್ತಕಮಾದ ನೀಲವರ್ಣವು ನಿವೃತ್ತಿಯಾಗಿ ಪೂರ್ವಕ್ಕಿಂತಧಿಕ ಕಾಂತಿಯಿಂದತ್ಯಂತ ಮನೋಹರಾಕಾರಮುಳ್ಳವರಾಗಿ, ಈತನೇ ದಾಕ್ಷಾಯಿಣೀ ಕಟಾಕ್ಷದಿಂ ಪೂರ್ಣನಾಗಿರುವಾತನಲ್ಲದಡೆ, ಈರೂಪವೀಕಾಂತಿ, ಈ ಮಹಿಮೆ, ಧೈರ್ಯಚಾತುರ್ಯಗಳು ಮಾನುಷರಿಂಗೆಲ್ಲಿಹುದು, ಅಮರರಿಂಗರಿದು, "ಯತ್ರರೂಪಸ್ತತ್ರಗುಣಾ"ಎಂಬ ನಿಯಮಂಗಳ ವ್ಯಭಿಚರಿತವಾಗಿರುವುದೀ ಮಹಾಪುರುಷನೊಳೆಂದು ಪರಮಸಂತೋಷದಿಂ ತಮಿಗೆ ಶಾಪಾಂತಕಾಲ ಬಂದೊದಗಿದುದೆಂದು ಅರಿದು, ಮೆಲ್ಲ ಮೆಲ್ಲನೆ ಸಹಸ್ರಾಯುವಿನ ಸಮೀಪಕ್ಕೆ ಬಂದು ವಂದನೆಯಂ ಮಾಡಲು; ರಾಜಕುಮಾರನು-ಹಂಸಮಿಥುನಂಗಳಂ ನೋಡಿ,ವಿಸ್ಮ

ತನಾಗಿ, ನೀವುಯಾರು ಎನ್ನೆಡೆಗೆ ಬಂದು ವಂದನೆಯಂ ಮಾಡಲು ಕಾರಣವೇನು, ನಿಮಗೆ ತನ್ನಿಂದಾಗುವ ಕಾರ್ಯವೇನೆಂದು ಕೇಳಲು; ಹಂಸಮಿಥುನಂಗಳು ಋಷಿಶಾಪದಿಂ ಬಂದ ವೃತ್ತಾಂತವಂ ವಿಜ್ಞಾಪನೆ ಮಾಡಿ, ಆ ಮುಂಡಮಹರ್ಷಿಯು ತಪಸ್ಸಿಂಗೆ ಪೋಗಲುದ್ಯುಕ್ತನಾಗಲು ತಾವಾತ್ರನಡಿಗೆರಗಿ ಮುಂದೆ ತಮಗೇನುಗತಿಯೆಂದು ದೈನ್ಯದಿಂ ಬೇಡಲು, ಆ ಋಷಿಯು ಶಾಪಮುಕ್ತಿಪ್ರಕಾರಮಂ ಪೇಳಿ, ತದುಪಾಯಮಂ ರಹಸ್ಯದಿಂದುಪದೇಶಮಾಡಿ ಪೋದನು. ಅಂದಿನಾರಭ್ಯ ಭವದಾಗಮನಮಂ ಪ್ರತೀಕ್ಷಿಸುತ್ತಿದ್ದೆವು. ಇಂದು ಯುಷ್ಮಚ್ಚರಣದರ್ಶನವು ತಮಗಾದುದೀಶ್ವರನಕರುಣದಿಂದೆನಲು; ಕರುಣಾಳುವಾದ ರಾಜಕುಮಾರನದಂ ಕೇಳಿ ನಸುನಗುತ ಹಂಸಮಿಥುನಂಗಳೊಡಗೂಡಿ ಅಂತಃಪುರಕೆ ಪೋಗಿ ಏಕಾಂತದಲ್ಲಿ ಕುಳಿತು, ಹಂಸಮಿಥುನಂಗಳಂ ಕುರಿತು-ವೃತ್ತಾಂತವೇನೆಂದು ಕೇಳಲು; ಹಂಸಮಿಥುನಂಗಳು-ಎಲೈ ರಾಜಕುಮಾರನೆ, ಕೇಳು, ಋಷಿಯು ರಹಸ್ಯವಾಗಿ ಪೇಳಿದರ್ಥವೇನೆಂದೊಡೆ, ಮುಂದೆ ಕಾಲಾಂತರದೊಳಂಬಿಕಾಚರಣಾನುಗ್ರಹದಿಂ ಪರಿಪೂರ್ಣನಾಗಿರುವನೊರ್ವ ರಾಜಕುಮಾರನು ಈ ನಗರಿಗೆ ನಾಲ್ಕುದಿಕ್ಕುಗಳಲ್ಲಿಯು ಬಂದೇಮುಹೂರ್ತದೊಳು ಶಿವಾಲಯ ಲಿಂಗಪ್ರತಿಷ್ಠೆ ಮೊದಲಾದಸಕಲೋತ್ಸವಗಳ ಮಾಡಿ, ನಗರದದೃಶ್ಯತಾವಸ್ಥೆಯಂ ಬಿಡಿಸಿ, ಶಾಲ್ಮಲೀವೃಕ್ಷದಲ್ಲಿರುವ ತಿಲೋತ್ತಮೆಯ ಮಾನುಷಕಳೇಬರವತೆಗೆದು ಅಗ್ನಿಸಂಸ್ಕಾರಮಾಡಿ, ನಗರಕ್ಕೆ ದಿನದಲ್ಲಿದ್ದವಸ್ಥೆಯಂ ವಿಮಾನಗಳಿಗಿತ್ತು, ಇನಿತು ಸಾಹಸಂಗಳಂ ಮಾಡಿದಡೆಯುಂ ಸುಗಂಧಿನಿಯು ತನ್ನೊಳನುರಕ್ತಳಾಗದಿರಲು; ಪರಮಚಿಂತಾಕ್ರಾಂತನಾಗಿರುವನಾರಾಜಕುಮಾರನು, ನೀವು ಆಕಾಲಮಂ ಪ್ರತೀಕ್ಷಿಸಿ ಆ ಮಹಾತ್ಮನೆಡೆಗೆ ಪೋಗಿ ಸುಗಂಧಿನಿಯು ಅನುರಕ್ತಳಾಗಲು ಉಪಾಯಮಂ ಪೇಳಲು ಕರುಣದಿಂದಾಕುಮಾರನು ನಿಮ್ಮನ್ನು ಕರದಿಂದೆತ್ತಿ ಮೈದಡವಿ ಲಾಲಿಸುವನು. ಆತನ ಕರಸ್ಪರ್ಶಪ್ರಭಾವದಿಂದ ಅಸ್ಮಚ್ಛಾಪದಿಂ ಮುಕ್ತರಾಗುವಿರಿ, ಪೂರ್ವಾಪೇಕ್ಷೆಯಿಂದಧಿಕವಾದ ಕಾಂತಿಸತ್ವಾದಿಗಳಿಂದ ಪ್ರಶಸ್ತವಾಗಿ ಸುಖದಿಂದಿರುವಿರಿ ಪೋಗೆಂದಪ್ಪಣೆಯಿತ್ತು, ತಪೋಭೂಮಿಗೆ ಪೋದನೆಂದು ಪೇಳಲು; ಸಹಸ್ರಾಯುವು ಉಪಾಯವೇನೆಂದು ಕೇಳಲು; ಎಲೈ ರಾಜಕುಮಾರನೆ ಕೇಳು, ಈ ಸುಗಂಧಿನಿಯ ಜನನಿಯಾ

ದ ತಿಲೋತ್ತಮೆಯು ಶಾಪಾಂತ್ರಕಾಲ ಬರಲು ಪುತ್ರಿಗೆ ಪತಿಯಿಂದೊಡಗೂಡಿ ವಿಮಾನ ನಗರವೇ ಮೊದಲಾದ ಸಾಧನಸಾಮಗ್ರಿಯಂ ಮಾಡಿ ಇತ್ತು, ಆ ಕನ್ಯೆಯು ಲೋಕೋತ್ತಮವಾದ ಗುಣಗಳಿಂದ ಮಾನ್ಯಳಾಗಿರುವಳು, ಅವರಿಂದ ಎಲ್ಲಾದಡೆಯು ಅಸದೃಶಪುರುಷನೊಳನುರಕ್ತಳಾದಡೆ ವ್ಯರ್ಥವಾಗುವುದೆಂದು ಆಲೋಚನೆಮಾಡಿ ದಿವ್ಯವಾದ ಮುಕ್ತಾಹಾರವಂ ಸೃಷ್ಟಿಮಾಡಿ ಸುಗಂಧಿನಿಯು ಕೊರಳೊಳಿಟ್ಟು ಈ ಹಾರ ಕಂಠದಲ್ಲಿರುವಲ್ಲಿ ಪುರುಷಮಾತ್ರರಲ್ಲಿ ಈ ಕನ್ಯೆಗನುರಾಗಪುಟ್ಟದೇ ಪೋಗಲೆಂದು ಸಂಕಲ್ಪಮಾಡಿರುವಳಾದಕಾರಣ ಜನನಿಯಿತ್ತ ಕಂಠಹಾರವಂ ಉಪಾಯದಿಂ ತರಿಸಿದಡೆ ನಿನ್ನೊಳನುರಕ್ತಳಾಗುವಳು, ಆಕ್ಷಣವೇ ಅದರಿಂದಲೇ ಉಪಾಯವಂ ಪೇಳುವುದೆಂದು ಋಷಿಯಾಜ್ಞೆ ಎನಲು, ಅದಂ ಕೇಳಿ, ಸಹಸ್ರಾಯುವು ವಿಸ್ಮಿತನಾಗಿ ಹಂಸಗಳ ದಿವ್ಯಸಂಸ್ಕೃತವಾಣಿಯಂ ಕೇಳಿ ಪರಮಸಂತೋಷಯುಕ್ತನಾಗಿ, ತನ್ನೆರಡು ಕರಗಳಿಂದ ಮರಾಳಮಿಥುನವಂ ನೆತ್ತಿ ಮೈದಡವಿ, ದಿವ್ಯಫಲ ಕಿಸಲಯಾದಿಗಳನಿತ್ತು ಮನ್ನಿಸಿ ಅಪ್ಪಣೆಯಿತ್ತು, ಮಲ್ಲಿಕಾಕ್ಷಮಿಥುನವು ಪೂರ್ವಪರ್ವ ಪೋಗಿ ಸತ್ವಕಾಂತಿಗಳು ಪೂರ್ವಾಪೇಕ್ಷೆಯಿಂದಧಿಕವಾಗಿ ರಾಜಕುಮಾರನಂ ಬಹುವಿಧ ಸ್ತೋತ್ರವ ಮಾಡಿ ನಿಜಸ್ಥಾನವಂ ಕುರಿತು ತೆರಳಿದವು

ಸಹಸ್ರಾಯುವು ಸುಗಂಧಿನೀಕಂಠದೊಳಿರುವ ಹಾರಮನೆಂತು ತರಿಸುವೆನೆಂದು ಚಿಂತೆಯಂ ಮಾಡುತ್ತ, ಮಿತ್ರವಿಂದೆಯು ನೆನೆದು ಕರೆಸುತವಳೊಡನೆ ಹಂಸಮಿಥುನಪೇಳದರ್ಥವಂ ವಿವರಿಸಿ, ಹೇಮಮಾಲಿನೀ ಮುಖದಿಂದ ಹಾರವನ್ನುಪಾಯದಿಂದ ತರಬೇಕೆನಲು; ಮಿತ್ರವಿಂದೆಯು ಹೇಮಮಾಲಿನಿಯು ಪಾಣಿಗ್ರಹಣವಂ ಮಾಡುವೆನೆಂದಭಯವಂ ನಿತ್ತಡೆ ಪೋಗುವೆನೆಂದು ಬೇಡಲು; ಸಹಸ್ರಾಯುವು ನಸುನಗುತೊಡಂಬಟ್ಟು ಪೋಗೆಂದಪ್ಪಣೆಯನೀಯಲು; ಆ ಮಿತ್ರವಿಂದೆಯು ಹೇಮಮಾಲಿನಿಯು ಭರವಸದಿಂದ ಹಾರವಂ ತರುವೆನೆಂದು ಪ್ರತಿಜ್ಞೆಯಂ ಮಾಡಿ, ಸಹಸ್ರಾಯುವಿನ ಭಾವಚಿತ್ರವಂ ಪಟದೊಳ್ಬರೆದು ಮೂರ್ಛಿತಳಾಗಿ ಎಚ್ಚತ್ತು, ಸುಗಂಧಿನೀಪುರಕಭಿಮುಖಳಾಗಿ ಪೋಗಲು, ಸಹಸ್ರಾಯುವು ಸ್ನಾನವಂ ಮಾಡಿ ನಿತ್ಯನಿಯಮಾದಿಗಳ ನಾಚರಿಸುತ್ತಿದ್ದನು.

ಇತ್ತಲಾ ಸೇನಾಪತಿಯಿಂದ ಪ್ರೇಷಿತನಾದ ದೂತನು ಜವದೊಳೈತಂದು ದೌವ್ವಾರಿಕರಿಂಗೊರೆಯೆ, ವೇತ್ರಿಗಳು ಒಳಪೊಕ್ಕು ದೂತನಾಗಮನವಂ ಬಿನ್ನೈಸಲು; ತತ್ಕ್ಷಣದಿ ಕರಸುತನೆಲವೋ ವೃತ್ತಾಂತಮೇನೆಂದು ಕೇಳಲು; ಜೀಯ್ಯ, ಮಾನಿನೀಸೈನ್ಯವು ಕೈದುಡುಕಿಬರುತಲಿಧೆ, ಇದಕೆಮುಂದೇನುಪಾಯವೆಂದು ಬಿನ್ನೈಸಲು; ಸಹಸ್ರಾಯುವು ನಸುನಗುತ ಬರುವೆನ್ನೊಂದೆ ನಿಮಿಷತಡೆಯಿರಿ ಕೈಮಾಡಬೇಡಿ, ಮೇಣವರು ಕೈಮಾಡಿದಡೆಯು ತಪ್ಪಿಸಿಕೊಂಡು ಮುಂದಕ್ಕಡಿಯಿಡಿಸದಿರುವುದೆಂದೆನುತ ಸೇನಾಪತಿಗೆ ಪೇಳು, ಜವದಿಂದ ಬರುವೆನೆಂದು ಪೇಳಿ ಚಾರನಂ ಕಳುಹಿ, ತಾನು ಜವದಿಂದಾರೋಗಣೆಯಂ ಮಾಡಿ, ಕಿರೀಟಕುಂಡಲಕವಚಗಳಧರಿಸಿ,ದಿವ್ಯಶರಾಸನನಿಷಂಗಾಸಿಗಳ ಧರಿಸಿ ಸ್ಯಂದನವನೇರಿದನು, ವಂದಿಕೈವಾರಿಸಲು, ಸಾರಥಿಯು ತರುಬಿದನು. ದಿವ್ಯಸೈಂಧವಗಳಂ ವಾಯುಜವದಿಂಬಂದನಬಲಾಸೈನ್ಯಜೆದುರಾಗಿ ನೋಡಿದರು ಸುಭಗನಂ, ಪೂಡಿದರುಧನುವಿನೊಳುಬಾಣಮಂಕುಸುಮಶರಮಾನಿನಿಯುರೆದೆವಡೆಯಿತೆಗಡೆಚ್ಚನು. ಅನಿತರೊಳು ಅತಿಸಮೀಪಕ್ಕೆಬಂದ ನರಪತಿಯುನೋಡುತ ಅಬಲಾಸೈನ್ಯವಂ ನಗುಣಬಾಣವಂ ಕರದಿತಿರುಹುತ್ತಿರುವ ಲೋಕಸುಂದರನ ಲಾವಣ್ಯವಂ ನೋಡಿ ಜಗುಳಿದವು ನೀವಿಗಳು, ಯುದ್ಧದರ್ಪಗಳೆಲ್ಲ ಕಂದರ್ಪನಾರ್ಭಟೆಯೊಳಣಗಿದವು, ಮೈಮುಲಿದು ಜಗುಳಿದವು ಕೈಯೊಳಿದ್ದಾಯುಧ ಗ್ರಾಮಂಗಳು, ನಾರಿಯರು ಇಂತವನ ನೋಡಿ ಮರುಳಾದರು. ಅಖಿಳಧರಣೀಪಾಲತಿಲಕ; ತಿರಿಸ್ಕರಣಿಯೆಂಬ ಸೇನಾಪತಿಯು ಸಹಸ್ರಾಯುವಂ ಕಂಡು ಶಿವಶಿವಾ ಈತನಂ ಚಿತ್ತಕನ್ನೆಯಾದಾವಳೋ, ಈ ಸುಕುಮಾರನೊಡನೆ ಸೆಣಸುವಜೀತು, ಬಾಣಂಗಳನೀದಿವ್ಯದೇಹದಮೇಲೆ ಪ್ರಯೋಗಿಸುವುದೆಂತು, ಕಟಕಟಾ? ತಮ್ಮಿಂದ ತೀರದು. ಈಗಲೇ ಸುಗಂಧಿನಿಯುಕೋಪಿಸಿ ತನ್ನ ಪುರಸ್ಕಾರವಿಲ್ಲದಂತೆ ಆಯಿತು. ಅಥವಾ ಚತುರ್ದಶಭುವನದೊಳಗೀತನಂ ಜಯಿಸುವ ಪಟುಭಟರುಂಟೇ ಎಂದು ನೋಡುತ್ತ ಪರವಶಳಾಗಿ ನಿಂದಿರಲು; ಕೋಸಲಾಧಿಪನವರಂ ನೋಡಿ ನಸುನಗುತ ಮಾತಾಡಬೇ ಇಂದುಮುಖಿ

ಯರಿಗೆ ಮೋಹನಾಸ್ತ್ರವಂ ಬೀರಿ ಸ್ತಬ್ಧರಂಮಾಡಿ, ಸೇನೆಯಿಂದೊಡ ಗೂಡಿ ಶಿಬಿರಕ್ಕೈತರಲು;

ಇತ್ತಲಾ ಮಿತ್ರವಿಂದೆಯು ಸುಗಂಧಿನಿಯುನಗರವಂ ನಿರ್ಭಯ ದಿಂದ ಪೊಕ್ಕು, ಸುಗಂಧಿನಿಯು ಅರಮನೆಯೊಳು ಪ್ರವೇಶವಂ ಮಾಡಿಬ ರುತಿರಲು; ಆ ಋಷಿಪುತ್ರಿಯು ಸಮೀಪದಲ್ಲಿ ಕುಳಿತಿರುವ ಹೇಮಮಾ ಲಿನಿಯು ತನ್ನ ಪ್ರಿಯಸಖಿಯಾದ ಮಿತ್ರವಿಂದೆಯಂ ಕಂಡು ವಿಸ್ಮಿತ ಳಾಗಿ ಬಹುಕಾಲತದ್ವಿಯೋಗದುಃಖ್ಖದಿಂದಿರುವಳಾದಕಾರಣವರವುಸಂ ತೋಷದಿಂ ಪೇಳಲು; ಸುಗಂಧಿನಿಯು ಹೇಮಮಾಲಿನಿಯಂ ಕುರಿತು-ಎ ಲ್ಲಿಗೆ ಪೋಗುವೆ ಎಂದು ಕೇಳಲು, ಆಗ ಹೇಮಮಾಲಿನಿಯು ದೂರದೊ ಳು ಬರುತಿರುವ ಮಿತ್ರವಿಂದೆಯಂ ತೋರಿ, ಈಕೆ ತನ್ನ ಪ್ರಿಯಸಖಿ ಯು, ಇಲ್ಲಿಗೆ ತಾನು ಬರುವಾಗ ತನ್ನೊಡನೆ ಬಂದಳಿವಳೆನ್ನ ನೀತಡೆಯೆ ಇವಳತ್ಯಂತ ಭಯದಿಂದ ಎಲ್ಲಿಯೋ ಪೋಗಿದ್ದಳಿಂದಿವಳಕಂಡೆನೇನಾಶ್ಚ ರ್ಯವೋ ಎಂದು ಪೇಳಲು; ಸುಗಂಧಿನಿಯು-ಹಾಗಾದಡೆ ಕಾರ್ಯಗೌರ ವದಿಂದ ಬಂದಿರುವಳಾಗಿ ತೋರುತಿಧೆಯಾದರಿಂದ ಜವದಿಂ ಪೋಗಿ ಈ ಗ ಬಂದಿರುವ ರಾಜಕುಮಾರನ ವಿಚಾರಂಗಳೇಕೆಗೇನಾದಡೆಯು ವಿದಿತ ಮಾಗಿರುವುದೋ ಏನೋ ವಿಚಾರಿಸುತ್ತ ಅವಳನ್ನು ಸಂಗಡಕರಕೊಂ ಡು ಸತ್ವರದಿ ಬಾರೆಂದು ಪೇಳಲು; ಹೇಮಮಾಲಿನಿಯು-ಮಿತ್ರವಿಂದೆ ಯಡೆಗೈತಂದು ಪ್ರೇಮಾಲಿಂಗನನಂ ಮಾಡಿ.ಆಕೆಯಂ ಕೈವಿಡಿದು ಏ ಕಾಂತ ಪ್ರದೇಶದಲ್ಲಿ ಕುಳಿತು ಪರಸ್ಪರ ಕುಶಲಪ್ರಶ್ನೆಯಂ ಮಾಡಿ, ದೀ ರ್ಘಕಾಲೀನವಿಯೋಗದುಃಖಮನ್ನನುಭಾವನೆಮಾಡುತೀರ್ವರೂ ಅ ನ್ಯೋನ್ಯವಾಗಿ ಸಮಾಶ್ವಾಸವಂ ಮಾಡಿ, ಮಿತ್ರವಿಂದೆಯು ರಾಜಕು ಮಾರನ ಮಹಾಪ್ರಭಾವಮಂ ವಿಸ್ತಾರವಾಗಿ ವಿವರಿಸಲು, ಅದಂ ಕೇಳಿ ಹೇಮಮಾಲಿನಿಯು ವಿಸ್ಮಿತಳಾಗಿ-ಎಲೈ ಮಿತ್ರವಿಂದೆಯೆ; ಕೇಳು, ಇಂತ ಸ್ಯ ಮಹಾಪ್ರಭಾವಶಾಲಿಯಾದ ರಾಜಕುಮಾರನ ಜನನೀಜನಕಸಹೋ ದರರಂಬಹುಕಾಲದಿಂ ವೃಕ್ಷರೂಪಮಂಮಾಡಿರುವ ಸುಗಂಧಿನಿಗೆ ಕ್ಷೇಮ ಮೆಂತಾಗುವದೆಂದು ಚಿಂತಿಸಲು; ಮಿತ್ರವಿಂದೆಯು ನೋಡಿ-ಎಲೈ ಪ್ರಿ

ಯ ಸಖಿಯೆ; ಕೇಳು, ಆ ಸುಗಂಧಿನಿಯು ಕಂಠದಲ್ಲಿರುವತಿಲೋತ್ತಮೆ ಯಿಂದದತ್ತವಾದ ದಿವ್ಯಹಾರವನ್ನು ಮಾಯದಿಂ ತೆಗದು ತಂದಿತ್ತೆಯಾ ದೊಡೆ, ಆ ರಾಜಕುಮಾರನು ನಿನ್ನ ಪಾಣಿಗ್ರಹಣವುಂ ಅಂಗೀಕಾರ ಮಾಡುವಂತೆಯುಂ, ಸುಗಂಧಿನಿಯು ಮಾಡಿದಪರಾಧವಂ ಮರೆದು ಅ ನುರಕ್ತನಾಗುವಂತೆಯುಂ, ಘಟನೆಮಾಡುವೆನು. ಎನ್ನ ಸಾಹಸವ ನೋ ಡೆಂದುನುಡಿದಾಕೆಯುಂ ನೋಡಿ ಹಸ್ತದೊಳ್ಪಿಡಿದಿರುವ ಚಿತ್ರಪಟವುಂ ತನ್ನ ಕರದೊಳು ತೆಗದು ನೋಡಿ ಮೂರ್ಛಿತಳಾಗಿ ಧರಣಿಯನ್ನೈದ ಲು; ಮಿತ್ರವಿಂದೆಯು ಶೈತ್ಯೋಪಚಾರವಂ ಮಾಡಲು, ಮೂರ್ಛೆ ತಿಳಿದಿದ್ದು ಪ್ರಿಯಸಖಿಯ ಚರಣವಂ ಪಿಡಿದು ಕನಸಿನೊಳಗೆನ್ನೊಡನೆ ರಮಿಸಿದ ಸುಕುಮಾರನೀತನೆ. ಈ ರಾಜಕಂಠೀರವನುಯನ್ನ ಪಾಣಿಗ್ರ ಹಣವುಂ ಮಾಡುವಂತೆ ಘಟನೆಯುಂ ಮಾಡಿದೊಡೆ, ನಿನ್ನ ಪಾದದಾಸಿ ಯಾಗಿರುವೆನೆಂದು ನಾನಾವಿಧ ಪ್ರಾರ್ಥನೆಯುಂ ಮಾಡಲು; ಮಿತ್ರವಿಂ ದೆಯಾಪ್ರಿಯಸಖಿಯ ಚಾಪಲ್ಯವುಂ ನೋಡಿ ನಸುನಗುತ ಭಯಬ್ಯಾ ಡ. ಘಟನೆಯುಂ ಮಾಡುವೆನು, ಮಾಲಿಕೆಯತಂದು ನೀನಿತ್ತೆಯಾದೊಡೆ ಸರ್ವವೂ ಸಮಂಜಸವಾಗುವದು ಎಂದು ನುಡಿದಾಕೆಯುಂ ನೋಡಿ ತಂ ದೀವೆನೆಂದು ಪ್ರತಿಜ್ಞೆಯುಂ ಮಾಡುತ್ತ, ಮತ್ತಾ ಕೆಯೊಡಗೂಡಿ ಸು ಗಂಧಿನಿಯು ಕುಳ್ಳಿರುವ ಸಭಾಮಂಟಪಕ್ಕೈತಂದು ತನ್ನಿಂದ ಪ್ರೇಷಿ ತವಾದ ಸೈನ್ಯದ ವಿಚಾರವಂ ಚಾರಮುಖದಿಂ ಕೇಳುತಿರುವ ಸುಗಂಧಿ ನಿಯಡೆಗೆ ಬಂದು ಆಕೆಯಿಂ ಸಹಿತವಾಗಿ ಅಂತಃಪುರಕ್ಕೈದಿಸಿ ರಾಜ ಕಂಠೀರವನ ವೃತ್ತಾಂತವಂ ಏಕಾಂತದಲ್ಲಿ ವಿಸ್ತರಿಸಲು; ಸುಗಂಧಿನಿ ಯದಂ ಕೇಳಿ ಕ್ರೋಧಮೂರ್ಛಿತಳಾಗಿ, ಮುಂದೇನುಗತಿಯೆಂದು ಚಿಂ ತಿಸುತ್ತಿರುವಳಂನೋಡಿ ಸಹಸ್ರಾಯುವಿನ ಚಿತ್ರಪಟವುಂ ತೆಗದು ತೋರಿಸಲು; ಸುಗಂಧಿನಿಯದಂ ನೋಡಿ ವಿಸ್ಮಿತಳಾಗಿ ಮುಂದೇನುಮಾ ಡುವೆನೆಂದು ಹೇಮಮಾಲಿನಿಯುಂ ಕುರಿತು ಕೇಳಲು; ಜನಾಂತಿಕದಿಂದ ಹೇಮಮಾಲಿನಿಯು ಸುಗಂಧಿನಿಯುಂ ಕುರಿತು-ಎಲೈ ಪ್ರಿಯಸಖಿಯೆ;ಕೇ ಳು, ಬಂದಿರುವರಾಜಕುಮಾರನ ಸತ್ವ, ಸಾಹಸ ರೂಪು, ಪರಿವಾರ,ಸೇ

ನಾದಿಗಳ ನೋಡಿ ಪರೀಕ್ಷೆಯಂ ಮಾಡದೆ ಸೇಣಸಲಾಗದು. ಅದರಿಂದ ರೂಪಾಂತರಮಂ ಧರಿಸಿ, ಆ ರಾಜಕುಮಾರನ ಸೇನೆಯಂ ಪೊಕ್ಕು ನೋಡಿ, ಬಳಿಕಲ್ಲಿಂದ ಮುಂದಿನಾಲೋಚನೆಯ ಮಾಡಬಹುದೆಂದೆನಲು; ಸುಗಂಧಿನಿಯಾಪಂ ಕೇಳಿ, ಕಿಂಚಿದಾಲೋಚನೆಯ ಮಾಡಿ, ರೂಪಾಂತರಮಂ ಧರಿಸಿದಡೆಯುಂ, ಪರರಾಯಸೈನ್ಯಮಂ ಪೊಕ್ಕಡೇನಾದಡೆಯುಂ ಅಪಾಯ ಮಾಪೊಡೆ, ತಾವು ಮಾಡುವುದೇನು? ಎನಲು; ಹೇಮಮಾಲಿನಿಯು-ಅದಕೆ ಚಿಂತಿಸಬ್ಯಾಡ ಸೈನ್ಯಮಂ ಪೊಕ್ಕು ಕಂಡಲ್ಲಿ ತಿರುತಿರುಗಿ, ಕಡೆಗೆ ರಾಜಕುಮಾರಕಂಠೀರವನ ಕೋಮಲಾಂಗದಮೇಲೆ ಬಿದ್ದು ಪೊರಳ್ದಡೆಯು ತಿಳಿಯದಂತೆ ಎನ್ನೊಳೊಂದು ಸಾಧನಮುಂಟು, ಅದರಿಂದ ಪೋಗಿ ಆತನಬಿಳ ವೃತ್ತಾಂತಮಂ ನೋಡಿ ತಿಳಿದು ಮುಂದಿನಾಲೋಚನೆಯ ಮಾಡುವೆವು, ಬಾರೆಂದು ಪೇಳಲು; ಆ ಸುಗಂಧಿನಿಯೊಡಂಬಟ್ಟು ಈರ್ವರಂತಃಪುರಕ್ಕೈತಂದು ಪುರುಷಾಕಾರಮಂ ಧರಿಸಲೋಸುಗ ಧರಿಸಿದ್ದ ವಸ್ತ್ರಾಭರಣಗಳತೆಗೆದು ಹೇಮಮಾಲಿನಿಯ ಕರದೊಳು ಈಯಲು; ಅದಂ ತನ್ನ ಕರದೊಳು ತೆಗೆದು ಮಿತ್ರವಿಂದೆಯಂ ಕಳುಹಿ ಬರುವೆನು, ಅವಳಿದುರ್ಗೆ ನಾವು ಪೋಗಲಾಗದೆಂದು ಪೇಳಿ, ಬಹಿರ್ಕೈತಂದು ತಿಲೋತ್ತಮೆಯಿಂದಪತ್ತಮಾದ ದಿವ್ಯಾಮ್ಲಾನಕನಕ ಮಾಲಿಕೆಯಂ ಮಿತ್ರವಿಂದೆಯಕರದೊಳಿತ್ತು, ತಾವು ಈಗಲೇಬರುವೆವು ಶಿಬಿರಕ್ಕೆ ಸಂವಿಧಾನಮಿದೆಂದು ಸಂಗತಿಯಂ ತಿಳಿಸಿ ಪೋಗೆನಲು; ಮಿತ್ರವಿಂದೆಯು ಅಲ್ಲಿಂದಪೊರಮಟ್ಟು, ಅತ್ಯಂತಜವದಿಂದ ಶಿಬಿರಕ್ಕೈತಂದು, ರಾಜಕುಮಾರನಿಪ್ಪೆಡೆಗೆ ಬಂದು ವಂದನೆಯಂಮಾಡಲವಳಿಂದ ಸಹಿತನಾಗಿ ಅಂತಃಪುರಕೆ ಪೋಗಿ ಏನುವೃತ್ತಾಂತವೆಂದು ಕೇಳಲು; ಸಮಸ್ತ ವಿವರಗಳಂ ಸಂಕ್ಷೇಪದಿಂ ಶ್ರುತಮಾಡಿ ಮಾಲಿಕೆಯಂ ಈಯ್ಯಲು; ಸಹಸ್ರಾಯು ಮಾಲಿಕೆಯಂ ನೋಡಿ ವಿಸ್ಮಿತನಾಗಿ, ಅನರ್ಘ್ಯನುಕ್ತಾಹಾರವೇಮೊದಲಾದ ವಸ್ತ್ರಾಭರಣಗಳಂ ಮಿತ್ರವಿಂದೆಗೆ ತರಿಸಿ ಇತ್ತು ಬಹುಮಾನಮಂ ಮಾಡಿ ಮತ್ತೇನೆಂದುಪೇಳಲು; ಈಗಲವರೀರ್ವರೂ ಬರುವರು, ಅವರೆಲ್ಲಿಬಂದಡೆಯುಂ, ಏನುಮಾಡಿದಡೆಯುಂ ಸುಮ್ಮನಿರುತಿರುವಂತೆ

ಸೇನೆಯೊಳಿರುವ ಸಮಸ್ತಪ್ರಾಣಿಗಳಿಗು ಕಟ್ಟಲೆಯಂ ಮಾಡಬೇಕೆಂದು ವಿಜ್ಞಾಪನೆಯಂ ಮಾಡಲು; ಸಹಸ್ರಾಯುವಾಕ್ಷಣದಿ ಸೇನಾಪತಿಯಂ ಕರೆಸಿ, ಈ ರಾತ್ರಿಯೊಳು ರೂಪಾಂತರವಂ ಧರಿಸಿ ಎಮ್ಮ ಶಿಬಿರಕ್ಕೆ ಈರ್ವರೈದುವರು, ಅವರಿರುವಮುಖ್ಯಲಕ್ಷಣವಿದೆಂದು ವಿಸ್ತರಿಸಿ ಪೇಳಿ, ಅವರೆಲ್ಲಿಗೈದಿದಡೆಯುಂ, ಏನ ಮಾಡಿದಡೆಯುಂ, ಅವರನ್ನು ಏನೆಂದು ಕೇಳದೆ, ಯಾರೆಂದು ಪ್ರಶ್ನೆಯಂ ಮಾಡದೆ, ಕಾಣದವರಂತೆ ಎಮ್ಮ ಶಿಬಿರದಲ್ಲಿರುವ ನಿಖಿಲಜನರಿಗೂವಂತೆ ಕಟ್ಟಲೆಯಂ ಮಾಡಿ, ಜಾಗ್ರತರಾಗಿರುವಂತೆ ರಹಸ್ಯವಾಗಿ ಸರ್ವಜನರಿಗೂ ತಿಳುಹಿ, ಸಮಾಹಿತನಾಗಿರುವುದೆಂದು ಪೇಳಿ, ಸೇನಾಪತಿಯಂ ಕಳುಹಿ, ತಾನು ಸಾಯಾಹ್ನನಿಯಮಗಳ ಮಾಡಿ, ಸರ್ವಾಭರಣ ಭೂಷಿತನಾಗಿ ಸಭಾಸ್ಥಾನಮನೈದಿ, ಸಿಂಹಾಸನಾರೂಢನಾಗಿ, ಸಮಸ್ತ ಪ್ರಕೃತಿಗಳಿಂದ ಸಮೇತನಾಗಿ, ವಂದಿಮಾಗಧ ಸೂತನಿಕರ ಕೈವಾರಿಸುತ್ತಿರಲು? ಬಹುಮಂದಿದಿವ್ಯವಾನಿನಿಯರು ಛತ್ರ ಚಾಮರ ವ್ಯಜನ ದರ್ಪಣ ತಾಂಬೂಲ ವೀಟಿಕಾ ನಾನಾವಿಧೋಪಚಾರದ್ರವ್ಯಗಳಂ ಕರದೊಳು ಪಿಡಿದು ನಿಂದಿರಲು? ಮಿತ್ರನಿಂದೆಯು ಸಮೀಪದೊಳು ಅಂಜಲಿಬದ್ಧಳಾಗಿ ನಿಂದಿರಲು; ಮೃತ್ಯುವಂ ಮುರಿದು ನುಂಗುವ ಅಧಟರಾದ ಯೂಥಪತಿಗಳು ಅಸಂಖ್ಯಾತರಾಗಿ ಪಂಕ್ತಿ ಪಂಕ್ತಿಯಾಗಿ ಕುಳಿತು ವಾಲೈಸುತ್ತಿರಲು; ಅಷ್ಟಪ್ರಧಾನಿಗಳು ಕೈಗಟ್ಟಿನಿಂದಿರಲು; ದೇಶಿನವರೆಲ್ಲರೈತಂದು ಕಂಡು ಕೇಳದ ಸುದ್ದಿಗಳನೊಂದುಕಡೆಯೊಳು ಬಿನ್ನಹಮಾಡುತಿರಲು; ದೇಶದೇಶಗಳಿಂದ ಬಂದಿರುವ ಲೇಖನವಗಣಿಕರ್ಕೈತಂದು ಪಂಕ್ತಿ ಪಂಕ್ತಿಗಳಾಗಿ ನಿಂದು ವಾಚಿಸುತ್ತಿರಲು; ಕೋಶಸೇನಾಪತಿಗಳ್ಕೈತಂದು ಕೈಮುಗಿದು ಕುಳ್ಳಿರಲು? ಕಂದರ್ಪಕಲಾಕೋವಿದರಾದ ವಿದಗ್ಧೆಯರಾದ ಸಾಮಾನ್ಯವಾನಿನಿಯರು ಪುರೋಭಾಗದೊಳು ಸಹಸ್ರಾಯುವಿನ ಭುಜಪರಾಕ್ರಮಾದಿ ದಿವ್ಯಚಾರಿತ್ರಗಳ ಕಲಮಧುರಸ್ವರದಿಂದ ಗಾನವಮಾಡುತ್ತಿರಲು;ನಿಖಿಲಧರಣೀಪಾಲರೈತಂದುನಿಜಕಾರ್ಯಮಂ ವಿದಿತಮಾಡಲೋಸುಗ ಅವಸರಪ್ರತೀಕ್ಷೆಯಂ ಮಾಡುತ್ತ, ವಳಪ್ರೊಕ್ಕು ಕಾಣಿಕೆಯಂ ಇತ್ತು ಸಾಷ್ಟಾಂ

ಗದಿಂ ನಮಿಸಿ, ತಾವು ಬಂದಿರುವ ಹಡಗ ನೊಂದುಕಡೆಯಲ್ಲಿ ಬಿನ್ನಹ
ಮಾಡುತ್ತಿರಲು; ಇಂತನೇಕವೈಭವದಿಂದರಾಜಕುಮಾರನೊಡ್ಡೋಲಗದಿ
ಕುಳ್ಳಿರ್ದನು. ಆಸಭಾಸ್ಥಾನವೆಂತಿರ್ದಪುದೆನೆ;-ಅಂಬರದಂತೆ, ಕಮಲಿನೀ
ವನದಂತೆ, ರಾಜಹಂಸಪರಿಶೋಭಿತವು ಕಾಸಾರದಂತೆ, ಕವಿಗಣಾಲಂಕೃ
ತವು ವಿಪಿನದಂತೆ ಬಹುದ್ವಿಜಗಣಾಶ್ರಯವು ಇಂತುರಾರಾಜಿಸುತ್ತಿ
ರಲು;-

ಇತ್ತಲಾ ಹೇಮಮಾಲಿನಿಯರು ಪುರುಷರೂಪವಂ ಧರಿಸಿ ನಗರ
ದಿಂ ಪೊರಮಟ್ಟು ಶಿಬಿರವಂ ಪೊಕ್ಕು ಅಲ್ಲಲ್ಲಿನೋಡುತ್ತ ಬರುತಿರಲು;
ಸುಗಂಧಿನಿಯು ನೋಡಿ ವಿಸ್ಮಿತಳಾಗಿ ಕಂತಪೋಳಿದ್ದ ತಿಲೋತ್ತಮೆ
ಯಿಂದದತ್ತವಾದ ಮಾಲಿಕೆಯುಸಹಸ್ರಾಯುವಿನಹಸ್ತಗತವಾಗಲು,ಪೂ
ರ್ವದಲ್ಲಿ ಮಾತಾಪಿತೃಗಳು ಸಮಯಬಂಧವಂ ಮಾಡಿರುವುದಂ ಯ
ಳ್ಳಸ್ಮೃತಿವಿಷಯವಾಗಲು? ದೇವಾಲಯನಿರ್ಮಾಣದಿಂದ ನಗರವದೃಶ್ಯ
ತಾವಸ್ಥೆಯು ಗಳಿತವಾದುದು. ವಿಮಾನಗಳದೃಶ್ಯವಾದುದರಿಂದ ಮಾ
ತೃದೇಹಸಂಸ್ಕಾರವಂ ಮಾಡಿರುವನೆಂದು ನಿಶ್ಚಯವಾದುದೆಂದು ಚಿಂತಿ
ಸುತ ಸಹಸ್ರಾಯುವಿನ ದಿವ್ಯಾನೇಕ ಜಾಂಬೂನದಕಲಶ ಪಂಕ್ತಿ ಪರಿ
ಶೋಭಿತ ವಿಚಿತ್ರತರವಿಶಾಲ ನಾನಾವಿಧಾಂತರಾಳ ಘಟಿತಪಟಾಲಯ
ಸಮೀಪಕ್ಕೆ ಬಂದು, ಅನೇಕ ಶಸ್ತ್ರಪಾಣಿಗಳಿಂದ ಗುಪ್ತವಾಗಿರುವುದಂ
ನೋಡಿ ಆ ಶಿಬಿರದೊಳು ವಾಯುವಲ್ಲಾಡಲಂಜುತಿರೆ? ತಾವೀರ್ವರೂ
ಲ್ಲಲ್ಲಿ ಸಂಚಾರವಂ ಮಾಡಿದಡೆಯುಂ ಪೋರ್ವರಾದಡೆಯು ಮಾತಾಡಿಸ
ದೆ ಕಾಂದಂತಿಗಲು? ಹೇಮಮಾಲಿನಿಯ ವಿದ್ಯಾಪ್ರಭಾವವಂ ನೋಡಿ
ವಿಸ್ಮಿತಳಾಗಿ, ಸಹಸ್ರಾಯುವಿನ ಸಭಾಸ್ಥಾನವಂ ನಿರ್ಭಯದಿಂದ ಪೊ
ಕ್ಕು, ಅನೇಕವೈಭವದಿಂದ ಜಗನ್ಮೋಹನಾಕಾರದಿಂದ ಸಾಕ್ಷಾತ್ಚೇ
ತ್ರಿಯಂತೆ ದಿವ್ಯಸಿಂಹಾಸನದಿ ಕುಳ್ಳಿರುವ ಅಭಿನವಮನೋಭವನಂತೆ ಸ
ಕಲಚೇತನ ಮಾನೋನಯನಾಹ್ಲಾದಕರನಾದ ಸಹಸ್ರಾಯುವಂ ಕಂಡ
ವ್ಯಾಮರೆಮ, ಹರ್ಷಪಾರವಶ್ಯದಿಂದ ಅಚೇತನಪ್ರಾಯಳಾಗಿ, ಬುದ್ಧಿ
ಮವಧಾನದಿಂ ಕಿಂಚಿದ್ವಿವೇಕಮುಳ್ಳವಳಾಗಿ, ಹೇಮಮಾಲಿನಿಯು ಸ

ತಳಾಗಿ ಈ ಮಹಾನುಭಾವನಾದ ರಾಜಕುಮಾರನಂಗಸಂಗತನಗೆಂತು ದೊರೆಯುವುದಂತುಮಲ್ಲದೆಯು ತಾನು ಮಹಾಪರಾಧಿಯಾಗಿರುವೆನೆಂತು ಬದುಕುವೆನೆಂದು ನಾನಾವಿಧದಿ ಚಿಂತಿಸುತ ಸಹಸ್ರಮುಖನ ಸಮೀಪದೊಳು ನಿಂದಿರುವ ಮಿತ್ರವಿಂದೆಯಂ ಕಂಡು ವಿಸ್ಮಿತಳಾಗಿ ನೋಡುತ್ತ ನಿಂದಿದ್ದಳು. ಮಿತ್ರವಿಂದೆಯು ಇವರೀರ್ವರು ರೂಪಾಂತರದಿಂದ ಬಂದು ನಿಂದಿರುವುದಪಾಂಗದಿಂ ನೋಡಿ ಮಹಾರಾಜಂಗೆ ಸಂಜ್ಞೆಯಿಂ ಸೂಚನೆಮಾಡಲು; ಸಹಸ್ರಮುಖವರಂ ನೋಡಿ ಕಾಣದವನಂತೆ ರೂಪಾಂತರವಧರಿಸಿದವರಾರಾದಡೆಯುಮಾಗಲೆಂದು-ಅವರಲೋಕೋತ್ತಮಸೌಂದರ್ಯ, ಯೌವ್ವನ, ಸೌಕುಮಾರ, ಸೌಷ್ಟವಾದಿಗಳಿಗೆ ಸಂತುಷ್ಟಚಿತ್ತನಾಗಿ, ಸಿಂಹಾಸನದಿಂದ ಎದ್ದು ಅಂತಃಪುರ ಪ್ರವೇಶಮಂ ಮಾಡಲು, ಸುಗಂಧಿನಿ, ಹೇಮಮಾಲಿನಿಯರು ಅಕಿಂಚನ ಜನರಿಂಗೆನಿಧಿಪ್ರತ್ಯಕ್ಷಮಾಗಿ ತಿರೋಧಾನ ಮಾದಂತೆ, ರಾಜಕುಮಾರನೊಡ್ಡೋಲಗದಿಂದೆದ್ದು ಪೋಗಲು, ಈರ್ವರತ್ಯಂತ ಸಂತಾಪದಿಂದಿತಿಕರ್ತವ್ಯತಾಮೂಢರಾಗಿ, ಮೆಲ್ಲನಲ್ಲಿಂದ ಪೊರಮಟ್ಟು ನಿಜಾಲಯಕೆ ಬಂದು, ತದವಲೋಕನಜನಿತವಿರಹಸಂತಾಪದಿಂ ನಿಶಿಯೊಂದು ಯುಗಮಾಗಿ ನಿದ್ರಾನ್ನಪಾನಗಳತೊರೆದು ತಪಿಸುತ್ತಿದ್ದರು.

ಇತ್ತಲಾ ಮಾರ್ತಾಂಡನುದಯಾಚಲವನೈದೆ? ಸಹಸ್ರಮುಖೆದ್ದು ಸೇನಾಪತಿಯಂ ಕರೆಸಿ ಪರಿಮಿತಶಸ್ತ್ರಪಾಣಿಗಳಿಂದೊಡಗೂಡಿ ನಗರಪ್ರವೇಶಮಂ ಮಾಡಿ, ಶಸ್ತ್ರಪಾಣಿಗಳಾದ ಸುಭಟರಂ ಪ್ರಾಕಾರೋಪರಿಸುತ್ತಲು, ನಗರದ್ವಾರದೊಳು, ಬೀದಿ ಬೀದಿಯೊಳು, ಸುಗಂಧಿನಿಯ ಅರಮನೆಯಸುತ್ತಲು, ಪುರದಬಹಿರ್ಭಾಗದೊಳು ಶಸ್ತ್ರಪಾಣಿಗಳಾದ ಅನೇಕ ಪಟುಭಟರ ಕಾವಲನಿರಿಸಿ, ಸೈನ್ಯವು ನಗರದಸಮೀಪದೊಳು ಇಳಿಯುವಂತೆ ಕಟ್ಟಲೆಯಂ ಮಾಡಿ ಜವದಿಂದ ಪೋಗೆಂದು ಕಳುಹಿ, ಮಿತ್ರವಿಂದೆಯಂ ಕರೆಸಿ. ನಗರಮಂ ಪೊಕ್ಕು ವನಿತೆಯರವೃತ್ತಾಂತವಂ ತಿಳಿದು ಬಾರೆಂದು ಆಜ್ಞಾಪಿಸಿದನು. ಮಿತ್ರವಿಂದೆಯತ್ಯಂತ! ಸಂತೋಷದಿಂ ಮಿಂದು ದಿವ್ಯಾಂಬರನನುಟ್ಟು ಸರ್ವಾಭರಣಭೂಷಿತಳಾಗಿ ಚತುರಂತ

ಯಾನಮನೇರಿ ಜವದಿಂದ ನಗರಮಂ ಪೊಕ್ಕು, ರಾಜಕುಮಾರನವಲ
ಕನಜನಿತ ವಿರಹಸಂತಾಪ ವಿಹ್ವಲಚಿತ್ತರಾಗಿ ಜಡಪ್ರಾಯರಾಗಿರು
ಋಷಿರಾಜಪುತ್ರಿ ಪುರಂ ಕಂಡು ಕುಶಲಪ್ರಶ್ನೆಯಂ ಮಾಡಲು,-ಸು
ಧಿನಿಯು ಮಿತ್ರವಿಂದೆಯು ಮಹದಭ್ಯುದಯಮನೇರಿ, ಚರಣಕ್ಕೆ ಪ್ರ
ಮುಟ್ಟು ತನ್ನ ವೃತ್ತಾಂತಮಂ ವಿಸ್ತರಿಸಿ ತಿಳುಹಿ. ಎಂತಾದೊಡೆಯು
ಪೂರ್ವೋಪಾಯದಿಂದ ರಾಜಕುಮಾರನು ತನ್ನ ಪಾಣಿಗ್ರಹಣಮಂ ಮ
ಡುವಂತೆ ಸಂವಿಧಾನಮಂ ಮಾಡಬೇಕೆಂದು ವಂದನೆಯಂ ಮಾಡಿ, ತ
ಅಂಗದೊಳು ಧರಿಸಿದ್ದ ಸರ್ವಾಭರಣಗಳ ಮಿತ್ರವಿಂದೆಗೆ ಇತ್ತು ಬ
ಪ್ರಕಾರದಿಂ ಬೇಡಿಕೊಳ್ಳಲು; ಮಿತ್ರವಿಂದೆಯು ಸುಗಂಧಿನಿಯ ಕಾ
ಣ್ಯಮಂ ನೋಡಿ ಮನದೊಳತ್ಯಂತ ಕರುಣದಿಂ ಪರೀಕ್ಷೆಯಂ ಮಾಡ
ನೆಂದು-ಎಲೈ ಸುಗಂಧಿನಿಯೆ, ಚಿರಕಾಲದಿಂದೀ ಮಹಾನುಭಾವನ ಜನ
ಜನಕ, ಸಹೋದರರಂ ವೃಕ್ಷರೂಪಮಂ ಮಾಡಿ ಮಹಾಪಕಾರಿಣಿಯ
ಗಿರುವ ನಿನ್ನ ಪಾಣಿಗ್ರಹಣಮಂ ಮಾಡುವನದೆಂತು? ಮುಂದೆ ನಿ
ನೇನು ಮಾಡುವನೋ ಇಂತಿರಲು, ತಾನೆಂತು ಸಂವಿಧಾನಮಂ ಮಾಡ
ನೆಂದು ನುಡಿಯುತ್ತಿರಲು;-

ಅನಿತರೊಳು ಸೇನಾಪತಿಯು ಅನೇಕ ಪಟುಭಟರಿಂದೊಡಗೂ
ಅನೇಕ ಭಯಂಕರ ವಾದ್ಯರಭಸದಿಂ ನಗರಮಂ ಪೊಕ್ಕು, ರಾಜಕುಮ
ನಾಜ್ಞೆಯಂತೆ ಮಾಡಲು, ಸುಗಂಧಿನಿಯು ಸಹಚರಿಯರೈತಂದು ನ
ವೃತ್ತಾಂತಮಂ ಬಿನ್ನಹಮಾಡಲು, ಅನೇಕ ವಾದ್ಯಧ್ವನಿಗಳಿಂದಲು,
ಟುಭಟರ ಕೋಲಾಹಲಮಂ, ದೂತಿಯರ ನುಡಿಗಳಂ ಕೇಳಿ, ಅತ್ಯ
ತ್ರಸ್ತಹೃದಯಳಾಗಿ, ಮುಂದೇನು ಗತಿಯೆಂದು ಮಿತ್ರವಿಂದೆಯಡಿಗೆ
ಲು, ಮಿತ್ರವಿಂದೆಯು-ಆಕೆಯ ಅತ್ಯಂತ ದೈನ್ಯಮಂ ನೋಡಿ-ಕ
ದಿಂದೆತ್ತಿದಳೆಲೇ ವತ್ಸೆ, ಭಯಪಡಬ್ಯಾಡ, ಸರ್ವೋಪಾಯದಿಂ ರಾ
ಮಾರನು ನಿನ್ನೊಳನುರಕ್ತನಾಗುವಂತೆ ಘಟನೆಯಂ ಮಾಡುವೆನು,
ದಭಯಮಂ ನಿತ್ತು ಈರ್ವರಪ್ಪಣೆಗೊಂಡು, ಶಿಬಿರಮನೈದಿ, ಸಹ
ಯುವಿಂಗೆ ಪೊಡಮಟ್ಟು ನಡದವೃತ್ತಾಂತಮಂ ವಿಜ್ಞಾಪನೆಯ ಮಾ

ಲು; ಸಹಸ್ರಾಯುಧನು ಯಾವತ್ರಯಾನಂತರದೊಳು ಸಮಸ್ತವೈಭವದಿಂದ ನಗರಾಂತರಾಳಮಂ ಪ್ರೊಕ್ಕು ಪುರಾಲಂಕಾರಮಂ ನೋಡಿ ಹರ್ಷಮಾನಸನಾಗಿ, ಸಾಕ್ಷಾತ್ ಪೌಲೋಮೀಯಾಲಯದಂತೆ ಪ್ರಕಾಶಮಾನವಾಗಿರುವ ಸುಗಂಧಿನಿಯ ಅರಮನೆಗೆ ಬರುತ್ತಿರಲು, ಸುಗಂಧಿನಿಯು ಹೇಮಮಾಲಿನಿ, ತಿರಸ್ಕರಿಣಿಯರಿಂದೊಡಗೂಡಿ ಮಂತ್ರಾಲೋಚನೆ ಮಾಡಿ, ಸತ್ವರದಿ ಮಿಂದು ಮಡಿಯುಟ್ಟು ದಿವ್ಯಾಂಬರಾಭರಣಭೂಷಿತರಾಗಿ, ದಿವ್ಯರತ್ನಾದಿಗಳ ಕೈಕೊಳುತ್ತ, ಸಮಸ್ತ ವೈಭವದಿಂದ ಅನೇಕ ಅಪ್ಸರಸ್ತ್ರೀಯರಿಂದೊಡಗೂಡಿ ಸಹಸ್ರಾಯುಧನೆದುರ್ಗೆ ಬರಲು, ಸಹಸ್ರಾಯುಧನು ಅವರಂ ಕಂಡು ಪರಮ ಸಂತೋಷಯುಕ್ತನಾಗಿ ಗಜಸ್ಕಂಧದಿಂದಿಳಿದು ಆಲಯ ಪ್ರವೇಶಮಂ ಮಾಡಿ, ರತ್ನಖಚಿತವಾದ ದಿವ್ಯ ಸಭಾಸ್ಥಾನಮಂ ನೈದಿ, ಮಹರ್ಷಿಯ ತಪಃಪ್ರಭಾವಮಂ ಬಹುವಿಧದಿಂದ ಶ್ಲಾಘನೆ ಮಾಡಿ, ಸುತೀಕ್ಷ್ಣನೊಡನೆ ಮಾತಾಡುತ್ತ ಸಿಂಹಾಸನದಿ ಕುಳ್ಳಿರಲು; ಸುಗಂಧಿನೀ, ಹೇಮಮಾಲಿನಿಯರು ಲಜ್ಜಾಭಯ ಸ್ಖಲಿತರಾಗಿ ಪಾದವಿನ್ಯಾಸದಿಂ ಮೆಲ್ಲಮೆಲ್ಲನೆ ತಲೆಬಾಗಿ ಬಂದು ದಿವ್ಯರತ್ನಗಳಿಂದ ಸಹಸ್ರಾಯುಧನ ಅಡಿದಾವರೆಗೆ ಅಭಿಷೇಕಮಂ ಮಾಡಿ, ಸಾಷ್ಟಾಂಗದಿಂ ನಮಿಸಿ, ವಾಮದಕ್ಷಿಣ ಪಾರ್ಶ್ವದೊಳು ಈರ್ವರೂ ತಲೆವಾಗಿನಿಂದಿರಲು; ಸಹಸ್ರಾಯುಧನವರೀರ್ವರಂ ನೋಡಿ ವಿಸ್ಮಿತನಾಗಿ ತದಾಸಕ್ತನಾಗಿರುವ ಸಹಸ್ರಾಯುಧನ ಭಾವಮಂ ತಿಳಿದು, ಮಿತ್ರವಿಂದೆಯು ಕೈಮುಗಿದು ಜೀಯ! ಅಡಿದಾಸಿಯಾಗಿರುವ ಹೇಮಮಾಲಿನೀ ಸುಗಂಧಿನಿಯರ ಅಪರಾಧಮಂ ಮರೆದು ಪಾಣಿಗ್ರಹಣಮಂ ಮಾಡಬೇಕೆಂದು ಬಹುಪ್ರಕಾರ ಬಿನ್ನಹಮಾಡಲು; ಸಹಸ್ರಾಯುಧನದಂ ಕೇಳಿ ಕಿಂಚಿತ್ಕೋಪಭಾವಮಂ ತೋರಿ, ಪಾಣಿಗ್ರಹಣಮಾಡುವುದಂತಿರಲಿ, ಮಹಾರಾಜನ ಪತ್ನ್ಯಪತ್ನಿಯರಿಂದ ತತ್ಸ್ವಭಾವಮನ್ನೈದಿರುವನದರಿಂದ ತದ್ಭಾವಮಂ ನೀಗಿ ಕರೆತರುವುದೆಂದು ಆಜ್ಞಾಪಿಸಲು; ಸುಗಂಧಿನಿಯು ನಡನಡುಗಿ ತಿರಸ್ಕರಿಣಿಯಾನನವ ನಪಾಂಗದಿಂ ನೋಡಲು, ತಿರಸ್ಕರಿಣಿಯು ರಾಜಕುಮಾರನಂ ಕುರಿತು ವತ್ಸ! ಕೇಳ್ಳೈ ಮಹರ್ಷಿಯು ಮಾನುಷರಿಂಗೆ ತಮ್ಮಭಾವಬರುವಂತೆ ಮಾಡುವ ಉಪಾಯಮಂ

ತನಗೆ ಉಪದೇಶವುಂ ಮಾಡಿದನಲ್ಲದೆ? ತತ್ಪರಿಹಾರಮಂತಿಳಿಸಲಿಲ್ಲೆಂದು ವಿನಯದಿಂ ನುಡಿಯಲು; ಅದಂ ಕೇಳಿ ಸಹಸ್ರಾಯುವತ್ಯಂತ ಚಿಂತಾಕ್ರಾಂತನಾಗಿ ಮುಂದೇನು ಮಾಡುವೆನೆಂದು ವಿಸ್ಮೃತಿಕಂಠಮಣಿಯುಳ್ಳವನಾಗಿ ಯೋಚಿಸುತ್ತಿರಲು; ಸರ್ವಾಭರಣಭೂಷಿತಳಾಗಿ ಸಮೀಪದೊಳು ದಿವ್ಯ ಜಾಂಬೂನದ ರಚಿತಮಂಚದೊಳು ಮಲಗಿರುವಧೇನುವು ಸಹಸ್ರಾಯುವನ್ನೀಡಿ ವತ್ಸ! ಮಹರ್ಷಿಯಿಂದ ಪ್ರಾಪ್ತವಾಗಿರುವ ದಿವ್ಯ ಮುಕ್ತಾಹಾರಘಟಿತವಾಗಿರುವ ಮಹಾಮಣಿ ಪ್ರಭಾವವುಂ ಮರದೆಯೇಕೆಂದು ಬಿನ್ನಹಪ ಮಾಡಲು; ಸಹಸ್ರಾಯುವದಂಕೇಳಿ ಪರಮಹರ್ಷಯುಕ್ತನಾಗಿ, ಸಮಸ್ತ ಪರಿವಾರದಿಂದೊಡಗೂಡಿ, ತಿರಸ್ಕರಿಣೀ, ಸುಗಂಧಿನೀ, ಹೇಮಮಾಲಿನೀಯರಿಂ ಸಹಿತನಾಗಿ ಜನಕನು ತರುವಾಗಿರುವ ತಾಣಮನ್ನೈದಿ, ತಿರಸ್ಕರಿಣಿಯುಂಕರಿತು ನಿನ್ನಿಂದ ವೃಕ್ಷರೂಪಾಗಿರುವ ಮಹಾರಾಜನೇ ಮೊದಲಾದ ಸಮಸ್ತ ಪ್ರಾಣಿಗಳ ಕುರುಹನೊಂದೊಂದಾಗಿ ತೋರೆನಲು; ಆ ತಿರಸ್ಕರಿಣಿಯು ಪ್ರಥಮದಲ್ಲಿ ಜನನೀಜನಕ ಸಹೋದರರ ಕುರುಹಂ ತೋರಲು; ಸಹಸ್ರಾಯುವು ತನ್ನ ಕಂಠದೊಳಿರುವ ಹಾರಮಂ ಕರದೊಳಾಂತು ಮಣಿಸ್ಪರ್ಶವುಂ ಮಾಡಲು, ವೃಷಧ್ವಜ, ಕಲಾವತೀ, ಸುಶರ್ಮರ ಸುಪ್ತೋತ್ಥಿತರಂತೆ ನಿಜರೂಪಮನ್ನೈದಿ, ಸಾಕ್ಷಾತ್ಕರಜನ್ಮನಂತೆ ನಿಖಿಲಪರಿವಾರದಿಂದಿರುವ ಪುತ್ರನಂ ಕಂಡು, ಸುಶರ್ಮಮಹಾರಾಯನತ್ಯಂತ ವಿಸ್ಮಿತನಾಗಿ ನಿಂದಿರಲು; ಜವದಿಂದ ಸಹಸ್ರಾಯುವು ಜನನೀಜನಕರಿಗೆ ವಂದನೆಯುಂ ಮಾಡಿ ತಲೆವಾಗಿ ನಿಂದಿರಲು; ಸುಶರ್ಮಮಹಾರಾಯನು ಮಹದಾಪತ್ತಿನಿಂದಲುದ್ಧಾರವುಂ ಮಾಡಿ ವಂದನೆ ಮಾಡಿ ತಲೆವಾಗಿ ನಿಂದಿರುವ ಸಹಸ್ರಾಯುವಂ ನೋಡಿ ಇದೇನಾಶ್ಚರ್ಯಮೆಂದು ಬಾದೂರೋರದೆ ಮುಗ್ಧನಾಗಿರಲು; ಸುತೀಕ್ಷ್ಣ, ಕೋಶಸೇನಾಪತಿಗಳೆಲ್ಲರು ಕೈಮುಗಿದು ಜೀಯ್ಯಾ!-ನಿನ್ನಯುತ್ರನಯನಾದ ಕಾಂತಿಮಾಲಿನೀತನುಜಾತನಾದ ಸಹಸ್ರಾಯುವೆಂದು ವಿಜ್ಞಾಪನೆಮಾಡಲು; ಸುಶರ್ಮಮಹಾರಾಯನು ನಿರವಧಿಕ ಸಂತೋಷಕಡಲೊಳಗೆ ಮುಳುಗಿ ಪರವಶನಾಗಿ ವತ್ಸ! ಎನ್ನಯ ಕಲ್ಪತರುವೆ; ಬಾಲೆಂದೆನುತ ತೆಗದಪ್ಪಿ ಮುದ್ದಾಡಿ ತೊಡೆ

ಯಾನದೊಳೆ ಕುಳ್ಳಿರಿಸಿ ಶಿರವನಾಘ್ರಾಣಿಸುತ ತದಂಗಸಂಗ ಜನಿತಾನಂದ ಮ
ಸ್ನೀರಿನೊಳು ಮೈಮರೆಯಲು; ವೃಷಧ್ವಜನು ಎದ್ದು ಸಹಸ್ರಾಯುವಿನಡಿಗೆ
ವಂದನೆಯಂ ಮಾಡಲು; ಸಹಸ್ರಾಯುವವನಂ ತೆಗೆದಪ್ಪಿ ಮೈದಡವಿ ಲಾಲಿಸಿ
ವತ್ಸ; ಚಿರಕಾಲದಿಂದಸಹ್ಯವಾದ ಸಂತಾಪವಂ ಅನುಭವಿಸಿದೆಕಣಾ? ಎಂ
ದು ಲಾಲನೆಯಂಮಾಡಿ, ತದನಂತರದೊಳು ಸೇನಾಪತಿಯಾದ ಪುರಂಜಯನಂ
ಕರೆದು ದಿವ್ಯಯಾನದೊಳು ಮೂವ್ವರಂ ಕುಳ್ಳಿರಿಸಿ ಸಮಸ್ತವೈಭವದಿಂದ
ಶಿಬಿರಕ್ಕೆ ಕರೆಸೊಯ್ವುದೆಂದು ಕಟ್ಟಲೆಯಂ ಮಾಡಿ, ತಿರಸ್ಕರಿಣಿಯಿಂದೊಡ
ಗೂಡಿ ವೃಕ್ಷರೂಪವಾಗಿರುವಸರ್ವಪ್ರಾಣಿಗಳಂ ಮಣಿಪ್ರಭಾವದಿಂದುಜ್ಜೀ
ವನವಂ ಮಾಡಿ, ಸರ್ವರಿಂದೊಡಗೂಡಿ ನಿಜಸೇನಾಭಿಮುಖನಾಗಿ ಬರುತಿ
ರಲು; ಸರ್ವಪ್ರಾಣಿಗಳು ರಾಜಕುಮಾರನ ಮಹಾಪ್ರಭಾವವಂ ನೋಡಿ
ವಿಸ್ಮಿತರಾಗಿ ಬಹುವಿಧದಿಂದ ಕೊಂಡಾಡುತ್ತ, "ಜಯಜಯಮಹಾರಾಜ"
ಎಂದು ಪೊಗಳುತ್ತಿರಲು;-

ಇತ್ತಲಾ ಪುರಂಜಯನು ಸಹಸ್ರಾಯುವಿನಿಂದ ಆಜ್ಞಪ್ತನಾಗಿ, ದಿ
ವ್ಯಚತುರಂಗಯಾನಗಳೊಳು ಪ್ರತ್ಯೇಕವಾಗಿ ಮೂವ್ವರಂ ಕುಳ್ಳಿರಿಸಿ, ಸ
ಮಸ್ತವೈಭವದಿಂದ ಶಿಬಿರಕ್ಕೆ ಕರತಂದು ದಿವ್ಯಸಿಂಹಾಸನದಿ ಕುಳ್ಳಿರಿಸಿ,
ಸಮುಸ್ತೋಪಚಾರಗಳಂ ಮಾಡುತ್ತಲಿರಲು; ಕಾಂತಿಮಾಲಿನೀದೇವಿಯು
ನಿಮಿಷಮಾತ್ರದೊಳು ಮಹಾನುಭಾವನಾದ ಪುತ್ರನಿಂದ ಪತಿಯಾದ ಸುಶ
ರ್ಮ ಮಹಾರಾಜನು ಪತ್ನೀಪುತ್ರರಿಂಸಹಿತನಾಗಿ ತರುಭಾವವಂ ತೊರೆದು
ನಿಜರೂಪವನ್ನೈದಿ ಬಂದನೆಂಬ ವಾರ್ತೆಯಂಕೇಳಿ ಹರ್ಷಪರವಶಳಾಗಿ
ಮೈಮರೆದು ಮಗನ ಕೊಂಡಾಡುತ್ತ, ಮಾತಂಗಿಯಿಂದೊಡಗೂಡಿ ದಿ
ವ್ಯಾಂಬರಾಭರಣಭೂಷಿತಳಾಗಿ ಲಜ್ಜೆಯಿಂ ತಲೆವಾಗಿ ಪತಿಯಿದ್ದೆಡೆಗೆ ಮೆಲ್ಲ
ಮೆಲ್ಲನೆ ಬಂದು ವಂದನೆಮಾಡಿ ನಿಂದಿರಲು; ಸುಶರ್ಮ ಮಹಾರಾಯನು ಪ
ತ್ನಿಯಂ ನೋಡಿ ಪರಮಾಶ್ಚರ್ಯಭರಿತನಾಗಿ ತನ್ನ ಅರ್ಧಾಸನದಿ ಕುಳ್ಳಿ
ರಿಸಿ, ಸಾಷ್ಟಾಂಗದಿಂ ನಮಿಸಿ ಅಂಜಲೀಬದ್ಧಳಾಗಿ ನಿಂದಿರುವ ಮಾತಂಗಿ
ಯಂಕಂಡು ಪರಮಾದರಮಾಡಿ ಎಲೈ ಮಾತಂಗಿಯೆ; ವೃತ್ತಾಂತವೇನು,
ವಿಸ್ತಾರದಿಂ ತಥ್ಯವಾಗಿ ಪೇಳೆಂದೆನಲು; ಮಾತಂಗಿಯು ಕೈಮುಗಿದು

ಜೀಯೆಯ್ಯಾ; ಸಾವಧಾನದೊಳವಧರಿಪುದೆಂದುಪಕ್ರಮಿಸಿ, ಕಲಾವತೀವಿವಾಹಾರ್ಥವಾಗಿ ಪೊರಮಟ್ಟು ಪೋದುದೇ ಮೊದಲಾಗಿ ಟಿಪ್ಪಣಿವಾಕ್ಯವೇ ಮೊದಲಾದ ಸರ್ವವೃತ್ತಾಂತವಂ ಎಳ್ಳನಿತು ಬಿಡದಂತೆ, ಕಲಾವತೀ ಕೇಳುತಿರುವಂತೆ ವಿಸ್ತಾರವಾಗಿ ಬಿನ್ನಹಮಾಡಲು; ಸುಕರ್ಮಸಂಹಾರರಾಯನು ಕೇಳಿ ಪರಮಾಶ್ಚರ್ಯಯುಕ್ತನಾಗಿ, ಮತಂಗಿಯಂ ಬಹುವಿಧದಿಂದ ನುತಿಮಾಡಿ ನಿನ್ನಿಂದಪುತ್ರನು ಉಜ್ಜೀವಿಸಿದನೆಂದು ಬಹು ಶ್ಲಾಘನೆಮಾಡಲು; ಕಾಂತಿಮಾಲಿನೀದೇವಿಯು ತನ್ನಡಿಗೆ ವಂದನೆಮಾಡಿದ ಪೃಷಧ್ವಜನ ತೆಗದಪ್ಪಿ ವತ್ಸ; ಬಾರೆಂದೆನುತ ಅಂಕದೊಳು ಕುಳ್ಳಿರಿಸಿ ಶಿರವನಾಘ್ರಾಣಿಸಿ, ವತ್ಸ; ಬಹುಕಾಲದಿಂ ಶೀತೋಷ್ಣವಾತಾತಪಾದಿ ನಾನಾವಿಧ ಕ್ಲೇಶದಿಂ ಬಳಲಿದೆಯೆಂದು ಕಂಬನಿಗರೆದು ಲಾಲಿಸುತ್ತಿರಲು; ಕಲಾವತಿಯು ಬಂದು ಮಣಿಯಲು; ತನ್ನ ಬಾಹುಗಳಿಂದ ಆಲಿಂಗನವಮಾಡಿ-ವತ್ಸೆ; ಚಿರಕಾಲ ಪತಿಯೊಡನೆ ದುಃಖವನ್ನನುಭವಿಸಿ, ಗೌರಿ ದೇವಿಯರ ಚರಣಾನುಗ್ರಹದಿಂ ಜೀವಿಸಿ, ತನ್ನ ಸುಕೃತಕ್ಕೆ ಕಾರಣಳಾದೆಯೆಂದು ಪೇಳಿ, ಪತ್ನೀಪುತ್ರರಿಂ ಸಹಿತನಾದ ಪತಿಯನಂತಃಪುರಕ್ಕೆ ಕರೆದೊಯ್ದು ಮಜ್ಜನವ ಮಾಡಿಸಿ ದಿವ್ಯ ಪೀತಾಂಬರವನುಡಿಸಿ, ಜಾಂಬೂನದ ಹರಿವಾಣದೊಳು ಷಡ್ರಸೋಪೇತವಾದ ಭೋಜನವ ಮಾಡಿಸಿ, ದಿವ್ಯ ಪರ್ಯಂಕದೊಳು ಕುಳಿತು ಈರ್ವರೂ ವಿಯೋಗಾದಾರಭ್ಯತತ್ಕಾಲಪರ್ಯಂತರದಲ್ಲಿಯೂ ಅನುಭೂಯಮಾನ ನಾನಾವಿಧ ದುಃಖಾದಿಗಳನ್ನು ಪರಸ್ಪರ ಮಾತಾಡುತ್ತ ಕುಳಿತು ತಾಂಬೂಲ ಚರ್ವಣಾದಿ ನಾನಾವಿಧ ವಿನೋದದಿಂದಿರುತಿರಲು;

ಸಹಸ್ರಾಯುವಿನ ಆಜ್ಞೆಯಿಂ ಸೇನಾಪತಿಯಾದ ಪುರಂಜಯನು ಪ್ರತ್ಯೇಕವಾಗಿ ಸಹಸ್ರಾಯು ವಾಸಮಾಡುವದಕ್ಕೆ ಯೋಗ್ಯವಾದ ನಾನಾವಿಧವಿಚಿತ್ರವಿಶಾಲಜಾಂಬೂನದ ಕಲಶಶೋಭಿತ ಪಟಾಲಯಗಳಂ ನಿರ್ಮಾಣವಂ ಮಾಡಿ, ಅದರೊಳಂತಃಪುರ, ಮಜ್ಜನಶಯ್ಯಾಸನಾಟನಯೋಗ್ಯವಾದ ಸ್ಥಾನ ಸಭಾದಿಗಳನ್ನು ಅತ್ಯಂತ ವಿಶಾಲಗಳಾಗಿ ಬ್ಯಾರೆ ಬ್ಯಾರೆ ಮಾಡಿಸಿ, ಮುತ್ತಿನ ಸರದ ತೋರಣಗಳಿಂದಲಂಕಾರಮಂ ಮಾಡಿ, ನಾನಾವಿಧ ವಿಚಿತ್ರತರಕಕ್ಷ್ಯಗಳಿಂದ ಪ್ರಕಾಶನಾಗಿರುವ ರಾಜಾಲಯದ ಸು

ತ್ತಿಲು ಅನೇಕ ಶಸ್ತ್ರಪಾಣಿಗಳನ್ನು ಕಾವಲನ್ನಿರಿಸಿ, ಅಸಂಖ್ಯಾತ ವೃಷಭ ಸಂತತಿಗಳಿಂದೂಹ್ಯಮಾನಚರ್ಮಭಸ್ತ್ರಿಕಾಪ್ರಕರಪೂರಿತೋದಕಗಳಿಂದ ಭೂಪ್ರದೇಶಮಂ ನೆನೆಸಿ, ಆ ಸಭಾಸ್ಥಾನವಂ ನಾನಾವಿಧ ರತ್ನಗಳಿಂದಲಂಕರಿಸಿ, ಸಿಂಹಾಸನಾದಿಗಳಂ ತಂದಿರಿಸಿ, ದಿವ್ಯ ಕುಸುಮಮಾಲಿಕಾದಿಗಳಿಂದಲಂಕರಿಸಿ, ವೈಶ್ವಾನರದಂದಹ್ಯಮಾನ ನಾನಾವಿಧ ಸುಗಂಧದ್ರವ್ಯ ರಚಿತಶಲಾಕಾನಿಕರ ಸಮುತ್ಪನ್ನ ಧೂಮಸಂತಾನಮಂತರಿಕ್ಷಮಂ ವ್ಯಾಪಿಸುತ್ತಿರಲು; ಸಹಸ್ರಾಯುವು ಸಮಸ್ತ ಪರಿವಾರದಿಂದೊಡಗೂಡಿ ನಿಜ ಪಟ್ಟಾಲಯಮಂ ಪೊಕ್ಕು ದಿವ್ಯ ಸಭಾಸ್ಥಾನಮನ್ನೈದಿ ರತ್ನಖಚಿತಾಸನದಿ ಕುಳ್ಳಿರಲು; ಅನೇಕ ವಂದಿಮಾಗಧ ಸೂತನಿಕರ ಕೈವಾರಿಸುತ್ತಿರಲು; ಸಹಸ್ರಾಯುವು ಪುರಂಜಯನಂ ಕರೆದು_ಎಲೈ ಪುರಂಜಯನೆ; ಕೇಳು ಈ ವೃಕ್ಷರೂಪವಾಗಿದ್ದ ಸಮಸ್ತ ಧರಣೀಪತಿಗಳಿಗೆ ನಗರದೊಳು ಪ್ರತ್ಯೇಕವಾಗಿ ಬಿಡದಿಗಳನ್ನು ಮಾಡಿ ಸರ್ವಸೋಬಸ್ಕರ ಸಾಮಾಜನರುಗಳ ನೇಮಿಸಿ, ಸರ್ವೋಪಚಾರದಿಂ ಸತ್ಕರಿಸಿ ಬರುವುದೆಂದಪ್ಪಣೆಯನಿತ್ತು, ಧರ್ಮಗುಪ್ತನ ಪುತ್ರನಾದ ಚಂದ್ರಸೇನನಂ ಕರೆದು ನಿರಂತರದಲ್ಲಿಯೂ ಈ ದೇಶಾಧಿಪತಿಗಳಂ ವಿಚಾರಿಸಿಕೊಳ್ಳುವುದೆಂದು ಕಟ್ಟಲೆಯಂ ಮಾಡಿ, ಕೋಶಾಧಿಪತಿಯಾದ ಧನಂಜಯನಂ ಕರೆದು ವಿವಾಹಸಂಭಾರಮಂ ಸತ್ವರದಿ ಮಾಡುವುದೆಂದು ಆಜ್ಞಾಪಿಸಿ ನಗರಾಲಂಕಾರವಂ ಮಾಡುವಂತ ಪೇಳಿ, ಸಹಾಧ್ಯಾಯಿಗಳೇ ಮೊದಲಾದ ಸಮಸ್ತ ನರಪತಿಗಳಿಗೆ ಲಗ್ನಪತ್ರಿಕೆಗಳಂ ಬರಸಿ ಪಾಥೇಯಮಂನಿತ್ತು ದೂತರಂ ದೇಶದೇಶಕ್ಕೆ ಕಳುಹಿ, ದೈವಜ್ಞರಿಂದ ನಿಶ್ಚಿತ್ರವಾದ ಸುಮುಹೂರ್ತದಲ್ಲಿ ಪರಮ ವೈಭವದಿಂದ ಸುಗಂಧಿನೀ ಹೇಮಮಾಲಿನಿಯರ ಪಾಣಿಗ್ರಹಣವಂ ಮಾಡಿ, ಸುಗಂಧಿನಿಯ ಸಹಚರಿಯರಾಗಿದ್ದ ಅಪ್ಸರಸ್ತ್ರೀರುಗಳಂ ವೃಕ್ಷರೂಪವಾಗಿದ್ದ ನರಪತಿಗಳಿಗೆ ವಿವಾಹಮಂ ಮಾಡಿ, ಸಕಲ ಧರಣೀಶರಿಗೆ ದಿವ್ಯಾಂಬರಾಭರಣ ಧನಕನಕ ನಿಕರದಿಂ ಸನ್ಮಾನಮಂಮಾಡಿ ಧರ್ಮದಿಂ ರಾಜ್ಯಮಂ ಪರಿಪಾಲನೆಯಮಾಡುವುದೆಂದು ಅಪ್ಪಣೆಯಂ ನೀಯಲು; ದೇಶ ದೇಶಗಳಿಂದ ಬಂದವರು ತರುರೂಪವಾಗಿದ್ದ ಧರಣೀಪತಿಗಳು ಸಹಸ್ರಾಯುವಿ

ನತಿಗೆ ವಂದನೆಯಂ ಮಾಡಿ ತಂದೆಯೂ ಜನನಿಯೂ ನೀನೆ, ಯಿಷ್ಟದೇವ ತೆಯೂ ನೀನೆ, ಇನ್ನು ಹೇಳುವುದೇನು ಯೆಂದು ವಂಶಪಾರಂಪರ್ಯಪ್ರ ನಿನ್ನಡಿಯ ದಾಸರಾಗಿರುವೆವೆಂದು ಬಹುಪ್ರಕಾರದಿಂ ಸ್ತೋತ್ರವಂಮಾಡಿ ಅ ಡಿಗಡಿಗೆ ನಮಸ್ಕಾರವಂ ಮಾಡಿದು ತಾವು ತಂದಿದ್ದ ಕಪ್ಪಕಾಣಿಕೆಗಳನ್ನು ಚ ರಣಕರ್ಪಣವಂಮಾಡಿ ಅಪ್ಪಣೆಗೊಂಡು ಸ್ವದೇಶಗಳಂ ಕುರಿತು ನಡೆಯುತ್ತಿದ್ದ ರೆಂಬಲ್ಲಿಗೆ.

ಇಂತು ಕರ್ನಾಟಕ ಭಾಷಾವಿರಚಿತವಾದ ಶ್ರೀಮತ್ಸಮಸ್ತ ಭೂ ಮಂಡಲ ಮಂಡನಾಯಮಾನ ನಿಖಿಲದೇಶಾವತಂಸ ಕರ್ನಾಟಕಜನಪದಸಿಂ ಹಾಸನಾಧಿಷ್ಠಾನಭೂತ ಶ್ರೀಮನ್ಮಹಿಶೂರ ಮಹಾಸಂಸ್ಥಾನ ಮಧ್ಯ ದೇದೀಪ್ಯ ಮಾನಾವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಕ್ರಮಾ ನಿಖಿಲ ನಿಜರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜರಾಜ ಪರಮೇಶ್ವರ ಪ್ರೌ ಢಪ್ರತಾಪಾಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಲೋಕೈಕವೀ ರ ಯದುಕುಲಪಯಃಪಾರಾವಾರ ಕಳಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮ ದ್ಗರುಡ ಕಂಠೀರವಾದ್ಯನೇಕಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕ ರಾಯಮಾನ ಶ್ರೀ ಚಾಮುಂಡಿಕಾಂಬಾವರಪ್ರಸಾದೋದ್ಭವರಾದ ಆತ್ರೇ ಯಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮ ನ್ಮಹೀಶೂರ ಪುರವರಾಧೀಶ ಶ್ರೀಮತ್ಕೃಷ್ಣರಾಜಒಡೆಯರವರು ಲೋ ಕೋಪಕಾರಾರ್ಥವಾಗಿ ವಿರಚಿಸಿದ ಕೃಷ್ಣರಾಜವಾಣೀವಿಲಾಸವೆಂಬಾಂ ಕಿತದಿಂದ ಕರ್ನಾಟಕ ಭಾಷಾವ್ಯಾಖ್ಯಾನರೂಪಕವಾಗಿ ರಚಿಸಲ್ಪಟ್ಟ ಶ್ರೀ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದ ಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯ ಸಂವಾದದಲ್ಲಿ ಪಂಚದಶೋ ಧ್ಯಾಯಕ್ಕೆ ಮಂಗಳಮಹಾ. ಶ್ರೀ * ಶ್ರೀ

ಪದಿನೈದನೇ ಅಧ್ಯಾಯ ಸಂಪೂರ್ಣವು.

# ಹದಿನಾರನೇ ಅಧ್ಯಾಯವು.



ಇಂತು ಸುಶರ್ಮಮಹಾರಾಯನು ಕಾಂತಿಮಾಲಿನೀದೇವಿಯೊಂದೊಡಗೂಡಿ ಸಹಸ್ರಾಯುವಿಂಗೆ ವಿವಾಹವಂ ಮಾಡಿ, ಸರ್ವಲೋಕಂಗಳನ್ನು ಯೋಗ್ಯತಾನುಗುಣವಾಗಿ ಧನಕನಕವಸ್ತ್ರವಾಹನಗಳಿಂದ ಯಥಾಭಿಲಷಿತಮನೋರಥಪೂರ್ತಿಯಂ ಮಾಡಿ ಸಂತೋಷಪಡಿಸಿ, ನಿಖಿಲನರಪತಿನಿಕರದಿಂದಭಿವಂದಿತನಾಗಿ, ಮಹಾನುಭಾವನಾದ ಪುತ್ರನಿಂದ ಸಾರ್ವಭೌಮನೆಂಬ ಹೆಸರಂ ಪಡೆದು ಸಂತೋಷವಾರಿಧಿಯೊಳ್ಳಾಳ ಮುಳುಗುತ್ತ ರಾತ್ರಿಯಾ ಕಲಾವತಿಯು ಅಂತಃಪುರಮನ್ನೈದಿ ಸಮಸ್ತ ಚರಾಚರಪ್ರಾಣಿಗಳು ಪರಮ ಸಂತೋಷವಾಗಿರುವಕಾಲದೊಳು, ನಿರುತ್ಸಾಹದಿಂದಿರುವ ಕಲಾವತಿಯಂ ಕಂಡು ತದೀಯಮನೋವಿಷಾದ ಕಾರಣಮನರಿಯದೇ ತದ್ವಿಭ್ರಮಾಬ್ಧಿಹೃದಯನಾಗಿ-ಎಲೈ ಮಾನಿನಿಯೆ; ನಿನ್ನ ಮುಖಾಂಬುಜವು ಬಾಡಿರುವುದೇನು ಕಾರಣವು, ವತ್ಸನಭ್ಯುದಯದಿಂ ಚರಾಚರಪ್ರಾಣಿ ಸಮುದಾಯಗಳು ಸಂತೋಷಪಡುತ್ತಿರಲು ನಿನಗೆ ಮಾಗುಡವದ್ಯಾಕೆ? ತಥ್ಯವಾಗಿ ಹೇಳೆಂದೆನಲು, ಕಲಾವತಿಯು ನಿಸರ್ಗದಿಂದಸೂಯಾಪರಳಾದಕಾರಣ ಮಹೀಶನಂ ಕುರಿತು-ನಿರಸ್ತ ಸಮಸ್ತ ಖೇದಪರಂಪರಾಪ್ರತ್ಯಯಮುಳ್ಳ ತರುಭಾವಮಂನೀಗಿ, ಭೂಯಃಪೂರ್ವಾನುಭೂಯಮಾನಕ್ಲೇಶವನ್ನನುಭವಿಸಲಿಕೋಸುಗ ನಿಜಶರೀರಮನ್ನೈದಿಹೆನೆಂದು ಮಾಗುಡಮಲ್ಲದಿನ್ನೊಂದಿಲ್ಲವೆಂದುನುಡಿಯಲು; ಸುಶರ್ಮರಾಯನಾನುಡಿಯಂ ಕೇಳಿ ವಿಪರೀತವಾಕ್ಯವಿದೇನೆಂದು ವಿಸ್ಮಿತನಾಗಿ-ಎಲೈ ಕಲಾವತಿಯೆ; ಕೇಳು, ಪೂರ್ವಾನುಭೂತದುಃಖವಾವುದು, ಅದಂನೀನನುಭವಿಸುವುದೇನು, ಅದರಭಿಪ್ರಾಯಮಂ ಸ್ಫುಟವಾಗಿ ಹೇಳೆನಲು; ಕಲಾವತಿಯು ಸಕಲವೃತ್ತಾಂತವು ನಿನ್ನಡಿಗೆವಿದಿತವಾಗಿರುವಲ್ಲಿ ತಾನು ಹೇಳುವುದೇನು ಎಂದು ಕಂಬನಿದುಂಬಲು; ಸುಶರ್ಮನಾಪತ್ನಿಯಂಸಮಾಶ್ವಾಸಪಡಿಸಿ, ಕಾಂತೆ; ನಿನ್ನಭಿಪ್ರಾಯವು ಎನ್ನಸ್ಮೃತಿವಿಷಯವಾಗಲಿಲ್ಲವದರಿಂದ ತಥ್ಯವಾಗಿ ಹೇಳೆಂದೆನಲು; ಕಲಾವತಿಯು

ಎಲೈ ಕಾಂತನೆ ; ಸಾವಧಾನದೊಳವಧರಿಸು, ಪೂರ್ವದಲ್ಲಿ ಕಾಂತಿಮಾಲಿ
ನೀ ವಿಷಯವಾಗಿ ತಾನು ಪೇಳದರ್ಥಮಂ ಪರೀಕ್ಷೆಯಂ ಮಾಡಿ, ತಾನ
ನೃತವಾಡಿದೆನೆಂದು ತನ್ನಂ ಧಿಕ್ಕಾರಮಂ ಮಾಡಿ ನಿರಾಕರಿಸಿದರ್ಥಮೀಗಲಾದ
ಡಿಯು ನಿಮ್ಮಡಿಗಳ್ಗೆ ನಿದರ್ಶನವಾದುದೇ? ಎಂದು ಮಾದಲಿಸಲು; ಸುಶ
ರ್ಮಮಹಾರಾಯನು ಎಲೈ ಕಾಂತಿಮಾಲಿನಿಯೆ; ಕೇಳು, ದೈವಗತಿಯಿಂ
ದಾದ ಕಾರ್ಯಕ್ಕೆ ವಿಸ್ಮಯವೇನು, ಸಾಕ್ಷಾದಾದ್ಯಕಾಷ್ಟಯಣೀ ದೇವಿಯೇ
ಪ್ರವರ್ತಿಸಿದಬಳಿಕ ಆ ಕಾರ್ಯಮನ್ಯಥಾ ಆಗುವುದೇ? ಎಂದು ಭಾವಪರಿಶು
ದ್ಧಿಯಿಂ ನುಡಿದ ಪತಿಯಂ ನೋಡಿ ಕಲಾವತಿಯು ಕ್ರೋಧಮೂರ್ಛಿತ
ಳಾಗಿ, ಸಹಸ್ರಾಯುಮಾಡಿದುಪಕಾರಮಂ ಮರೆದು, ಕಾಂತ; ಕೇಳಿಂತು
ದೈವವ್ಯಾಪಾರಮಾದೊಡೆಯು ಪತಿಯಂಗಸಂಗವಿಲ್ಲದವರಿಂಗೆ ಗರ್ಭವು
ದಯಿಪುದುಂಟೆ? ದೈವಾನುಗ್ರಹದಿಂದ ಉತ್ಪನ್ನನಾದ ಶಿಶುವಂದೇಶಾಂತರ
ಕ್ಕೆ ಕಳುಹಿದವರುಂಟೆ? ಇಂತೀವಿಚಾರಗಳ ತಥ್ಯವೆಂದು ತಿಳಿದವರುಂಟೆ?
ಇದಂತಿರಲಿ, ಲೋಕದೊಳು ಮಾನಿನಿಯರಾದವರು ರಾಜ್ಯಮನಾಳುವು
ದುಂಟೆ? ಭುವನದೊಳು ಅಕಾರ್ಯದಲ್ಲಿ ಪಂಡಿತರಾದವರು ತದವಲಾಪಮಾ
ರ್ಗಮನರಸದಿರುವರೇ? ಕಾಂತ; ಪಿಂತೆಯಿನಿತಾದಡೆಯು ತೋಡೆರಿಲ್ಲದ
ರಲಿ, ಮುಂದೆ ಇನ್ನೇನಹುದೋ ಎಂದು ನುಡಿಯುತ್ತಿರುವ ಚಂದ್ರಮುಖಿ
ಯಂ ನೋಡಿ ಸುಶರ್ಮ ಮಹಾರಾಯನು ಮನದೊಳಾಲೋಚನೆಯ
ಮಾಡಿ-ಕಾಂತೆ; ಕೇಳದುವೆಅನೃತವಾದೊಡೆ ತಮ್ಮನೀ ಮಹದಾಪತ್ತಿ
ನಿಂದಲುದ್ಧಾರಮಾಡುವನೇ? ಮಾಡದಿರುಸಂಶಯವೆನೆಂದು ಸಂದೇಹಮಂಬ
ಟ್ಟು ನುಡಿಯಲು; ಅದಂ ಕೇಳಿ ಕಲಾವತಿಯು ಖೇದದಿಂ ನುಡಿದಳೆಲೆಕಾಂ
ತ; ಈಗ ಬಂದಿರುವ ಪುರುಷನೀಕಾಂತಿಮಾಲಿನಿಯು ತನುಜಾತನಲ್ಲ
ದುವೇತಥ್ಯ, ಮುಂದೆನಿನ್ನಡಿಗಳ್ಗೆ ನಿದರ್ಶನಮಾಗುವುದು, ತಮ್ಮನುಜ್ಜೀವನ
ವಮಾಡಿದುದಕ್ಕೆ ಕಾಂತಿಮಾಲಿನಿಗೆ ಕಾರ್ಯಮೇನೋ ಇರುವುದವರಿಂ
ಮುಂದೇನುಮಾಡುವರೋ ತಿಳಿಯದಿನ್ನೇಗೈವೆನೆಂದು ಕಂಬನಿದುಂಬ
ಲು; ಸುಶರ್ಮರಾಯನೀ ಕಲಾವತಿಯ ಕಪಟಮನ್ನರಿಯದೆ, ಸಂಶಯಿ
ತಚಿತ್ತನಾಗಿ, ಎಲೈ ಲಲಿತಾಂಗಿ, ಹಾಗಾದಡೀಗಮುಂದೇನು ಮಾಡಲಿ

ಕು ಪೇಳೆಂದು ಕೇಳಲು; ಅರಸ! ಕೇಳವಧರಿಸು, ವೃಥಾಕಾಂತಿಮಾಲಿನಿಯ ಕಪಟೋಪಾಯದೊಳು ಶಿಕ್ಕದಿರು, ಮುಂದಿನಾಲೋಚನೆಯ ಮಾಡಿ ನೋಡುವೆ, ತಥ್ಯವೆಂದೇತಿಳಿದು ಚಿರಕಾಲದಿಂದುಪಾರ್ಜಿತವಾದ ಕೀರ್ತಿಯಂ ಕಳೆಯದಿರು ಎಂದು ನುಡಿದಾಕೆಯಂ ನೋಡಿ ಸುಶರ್ಮನತ್ಯಂತ ಚಿಂತಾಕ್ರಾಂತನಾಗಿ, ಹಾಗಾದಡೆ ಏನುಮಾಡುವೆನೆಂದು ಪುನಶ್ಚ ಕಲಾವತಿಯನ್ನು ಕೇಳಲು; ಕಲಾವತಿಯು ಕಾಂತನಂ ಕುರಿತು ಸತ್ವರದೊಳಲ್ಲಿಂದ ಪೊರಮಟ್ಟು ಮಾಹಿಷ್ಮತೀನಗರಮನ್ನೈದಿ ರಾಜ್ಯಕೋಶಾದಿಗಳ ಸ್ವಾಧೀನಮಂ ಮಾಡಿಕೊಂಡು ಸುಖದಿಂದಿರುವುದೇ ಕಾರ್ಯವಲ್ಲದಿರಲನರ್ಥ ಪರಂಪರೆಗಳಾಗುವದರಲ್ಲಿ ಸಂಶಯವಿಲ್ಲ ನಲ್ಲ! ಕೇಳೆಂದೆನಲು; ಸುಶರ್ಮ ಮಹಾರಾಯನು ಕಲಾವತಿಯ ಭೇದೋಪಾಯಮನರಿಯದವನಾದಕಾರಣ ಪತ್ನಿಪೇಳಿದರ್ಥವನ್ನೇ ನಿಶ್ಚೈಸಿ, ಹಾಗಾದಡಿಲ್ಲಿಂದ ಎಂದು ಪ್ರಯಾಣಮಂ ಮಾಡುವುದೆಂದು ಕೇಳಲು; ನಗುತ ಕಲಾವತಿಯು ಪೋಗುವುದೇಯಥಾರ್ಥವಾದೊಡೆ ಇಂದೀನಿಶಿಯೊಳೋರ್ವರರಿಯದಂತೆ ಪೋಗಬೇಕೆಂದು ನುಡಿದು, ಅಂಗೀಕಾರಮಂ ಮಾಡಿದ ಪ್ರಿಯತಮನಿಂದೊಡಗೂಡಿ ಅಲ್ಲಿಂದ ಪೊರಮಟ್ಟು ವೃಷಧ್ವಜನ ಶಯ್ಯಾಲಯಮನ್ನೈದಿ ಗಾಢಾನಿದ್ರಾಂಗನಾಲಿಂಗನಜನಿತಸುಖಪಾರವಶ್ಯದಿಂ ಸುಷುಪ್ತಿಯನ್ನೈದಿರುವ ಪುತ್ರನನ್ನೆಬ್ಬಿಸಲು, ವೃಷಧ್ವಜನು ಎಚ್ಚೆತ್ತು ಜನನೀಜನಕರಂ ನೋಡಿ ಈ ಮಹಾನಿಶಿಯೊಳಗೆ ತನ್ನನ್ನೆಬ್ಬಿಸುವದಕ್ಕೆ ಕಾರಣವದೇನೆಂದು ಕೇಳಲು, ಕಲಾವತಿಯು-ವತ್ಸ! ಕೇಳನಿತು ವೃತ್ತಾಂತಮನ್ನೊರವೆ, ಸಂಗಡಬರುವುದೆಂದು ಪೇಳಲು; ವೃಷಧ್ವಜನು ಸಂಗತಿಯನೊಂದಂತಿಳಿಯದೇ, ಏನುಕಾರಣವೋ ಎಂದು ಅವರೊಡನೆ ಪೊರಮಡಲು; ಪುತ್ರನಿಂದೊಡಗೂಡಿ ರಾಜಮಿಥುನಂಗಳಾಮಹಾ ನಿಶಿಯೊಳಗೆ ಶಿಬಿರಮನುಳಿದು ಚೋರವೃತ್ತಿಯಿಂದರಣ್ಯಪ್ರವೇಶಮಂ ಮಾಡಿ ಜವದಿಂದ ನಡೆಯುತ್ತಿರಲು; ವೃಷಧ್ವಜನವರಂ ನೋಡಿ ಇದೇನಚ್ಚರಿ ಎಂದು ಜನನೀಜನಕರಂ ಕುರಿತು ಈ ಮಹಾ ನಿಶಿಯೊಳಗೆ ಈ ಮಹಾರಣ್ಯದೊಳು ಈರ್ವರೇ ತನ್ನಂ ಕರೆದುಕೊಂಡಿಲ್ಲಿಗೈದುವಿರಿ ? ಕಾರಣವೇನು, ತಥ್ಯವಾಗಿ ಪೇಳೆಂದೆನಲು; ಕಲಾವತಿಯು

ಪುತ್ರನಿಗೆ ತನ್ನಭಿಪ್ರಾಯಮಂ ವಿವರಿಸಿ ಪೇಳುತ್ತದರಿಂದ ತವ್ಮೊಡನೆ ಸುಷ್ಮನ್ನೈಶರವುದೆಂದು ನುಡಿದ ಜನನಿಯಂ ನೋಡಿ ರೋಷಾಮರ್ಷಯುಕ್ತನಾಗಿ, ಜನಕನಂ ಕುರಿತು-ತಾತ! ಕೇಳೆನ್ನಬಿನ್ನಹವನವಧರಿಸು, ಲೋಕದೊಳು ಮಾನಿನಿಯರೊಡನೆ ಮಂತ್ರಾಲೋಚನೆಯ ಮಾಡಿ ಬದುಕಿದವರುಂಟೆ? ಮಹಾನುಭಾವನಾದ ಸಹಸ್ರಾಯುವಿನ ವಿಷಯದಲ್ಲಿ ಅನ್ಯಥಾ ಬುದ್ಧಿಯಂ ಮಾಡುವರೆ? ಇಂತು ಪೋಗುವುದು ಸಾರ್ವಭೌಮನಾದ ನಿನಿಗೆ ಯುಕ್ತವಲ್ಲೆಂದು ಬಹುಪ್ರಕಾರವಾಗಿ ಪೇಳಿದಡೆಯುಂ ತಂದೆಯು ಕಲಾವತಿಯವಾಕ್ಯದಿಂ ವಿಭ್ರಂಸಿತಚಿತ್ತನಾಗಿ ಪುತ್ರನ ಸಾಧುಸಮ್ಮತ ವಾಕ್ಯಮಂ ಕೇಳಿ ಮನಕೆತಾರದೇ ತನ್ನೊಡನೆ ಬರುವುದೆಂದು ನಿಬಂಧಮಂ ಮಾಡಲು; ವೃಷಧ್ವಜನು ತಂದೆಯ ಅವಿವೇಕಮಂ ನೋಡಿ ಸುಶರ್ಮಮಹಾರಾಯನಂ ಕುರಿತು- "ಗುರೋರಪ್ಯವಲಿಪ್ತಸ್ಯಕಾರ್ಯಾಕಾರ್ಯಮಜಾನತಃ|ಉಮಾರ್ಗಪ್ರವೃತ್ತಸ್ಯನಕಾರ್ಯಂಬ್ರುವತೋವಚಃ" ಎಂದು ಸಾಕ್ಷಾತ್ ಮನುವಾಕ್ಯಪ್ರವರ್ತಕವಾಗಿಧೆಯಾಗಿ,ನೀನು ಸಾಕ್ಷಾಜ್ಜನಕನಾದಡೆಯುಂ ಕಾರ್ಯಾಕಾರ್ಯಮಂ ತಿಳಿಯದೆ ಅಕಾರ್ಯದಲ್ಲಿ ಪ್ರವೃತ್ತನಾದುದರಿಂದ ತಾನು ನಿನ್ನೊಡನೆ ಬರುವವನಲ್ಲ, ಮಹಾನುಭಾವನಾದ ಅಗ್ರಜನಡಿದಾವರೆಯ ನಂಬಿ ಬದುಕುವೆನೆಂದು ಜನನೀ ಜನಕರಂ ಧಿಕ್ಕಾರಮಂ ಮಾಡಿ ಹಿಂತಿರುಗಿದನು.

ಸುಶರ್ಮರಾಯನು ವಿಮನಸ್ಕನಾಗಿ ಕ್ಷಣಮಾಲೋಚನೆಯ ಮಾಡಿ ಭವಿತವ್ಯತಾವಿಲಾಸದಿಂದ ವಿಭ್ರಂಸಿತಚಿತ್ತನಾಗಿ, ಕಲಾವತಿಯೊಡನೆ ಮಾಹಿಷ್ಮತೀ ನಗರಮನ್ನೈದಿ ಧರ್ಮಗುಪ್ತನಂ ಕರಸಲು; ಅಮಾತ್ಯಶೇಖರನಾದ ಧರ್ಮಗುಪ್ತನು ಸುಶರ್ಮಮಹಾರಾಯನೂ ಕಲಾವತಿಯೂ ಮಹದಾಪತ್ತಿನಿಂದ ಉದ್ಧೃತರಾಗಿ ನಿಜಭಾವಮಂ ನೈದಿ ಬಂದಿರುವಡಂ ನೋಡಿ ಪರಮಾಶ್ಚರ್ಯಯುಕ್ತನಾಗಿ ಏಕದೇಶದಿಂ ಬಂದಿರುವದರಿಂದ ಇದೇನು ಕಾರಣವೋ ಎಂದು ಸಂಶಯಾವಿಷ್ಟನಾಗಿ ಸಮೀಪಕ್ಕೆಬಂದು ವಂದನೆಯಂಮಾಡಿ-ಜೀಯ್ಯ! ದೈವಾನುಗ್ರಹದಿಂದಪುನರುಜ್ಜೀವಿತನಾದ ನಿನ್ನಡಿಯಂ ತಾವು ಕಂಡೆವು, ತಮ್ಮ ಪುಣ್ಯಕ್ಕೆಣೆಯಿಲ್ಲವೆಂದು ಬಹುಪ್ರಕಾರದಿಂ ನುತಿಸೈದು

ಸಹಸ್ರಾಯುವೆಲ್ಲಿರುವನೆಂದು ಕೇಳಲು; ಸುಶರ್ಮರಾಯನು ಲಜ್ಜಿತನಾಗಿ ಯಥೋಚಿತವಾಗಿ ತಾನು ನಿಜರೂಪವನ್ನೈದಿಬಂದ ವೃತ್ತಾಂತವನ್ನೊರೆಯಲು; ಧರ್ಮಗುಪ್ತನದಂ ಕೇಳಿ ಆಃ! ಕಲಾವತಿಯ ದುರ್ಬೋಧನೆಯಿಂದ ಅಪಹೃತವಿವೇಕಮುಳ್ಳವನಾಗಿ, ಅಕಾರ್ಯವನಾಚರಿಸಿದೆನೆಂದು ಮನದಿ ನಿಶ್ಚಯಮಾಡಿ, ಅವಿವೇಕಜನಶಿಖಾಮಣಿಯಾದ ಮಹಾರಾಜಂಗೆ ಪತ್ನಿಯುದೆಸೆಯಿಂದ ಪ್ರಾಪ್ತವಾಗಿರುವ ಅವಿವೇಕವು ಪುತ್ರನದೆಸೆಯಿಂದ ಪ್ರಾಪ್ತವಾದ ತರುಭಾವವುಂ ದಯಾರ್ದ್ರಹೃದಯಳಾದ ದಾಕ್ಷಾಯಿಣೀದೇವಿಯೀನೀಗಿದಂತೆ ಪರಿಹಾರವಂ ಮಾಡಬೇಕಲ್ಲವೆ? ಅಸ್ಮದುಪಾಯಾದಿಗಳು ಕಾರ್ಯಕಾರಿಯಾಗಲರಿಯವೆಂದು ನಿಶ್ಚೈಸಿ ಚಿರಕಾಲದಿಂ ವಿಮುಕ್ತನಾಗಿದ್ದ ಮಹೀಪತಿಯು ಆಕಸ್ಮಿಕವಾಗ ಈಶ್ವರಾನುಗ್ರಹದಿಂದ ಸಹಸಮಂಗಳಕಳೇಬರ ರೂಪವಮಹದ್ವಿಪತ್ತಿನಿಂದುದ್ಧೃತನಾಗಿ ಬಂದವನಾದಡೆಯುಂ ಧರ್ಮಗುಪ್ತನು ವಿಷಾದದಿಂ ಪ್ರತ್ಯುತ್ತರವನಾಡದೆಯುಂ ಧರ್ಮಗುಪ್ತನು ಸುಮ್ಮನಿರಲು; ಸುಶರ್ಮನು ಕಲಾವತಿಯಿಂದ ಬೋಧಿತನಾಗಿ ಧರ್ಮಗುಪ್ತನಂ ಕರೆದು ಅಂತಃಪುರದೊಳಿರುವ ಧಾನ್ಯಮಾಲಿನಿಯು ಪುರೋದ್ಯಾನದಲ್ಲಿರುವ ಕಾಂತಿಮಾಲಿನಿಯಿದ್ದ ಕಾರಾಗೃಹದೊಳಿರಿಸಿ ಬಾರೆಂದು ಕಟ್ಟಳೆಯಂ ಮಾಡಲು; ಧರ್ಮಗುಪ್ತನು ಕಟ್ಟನೀಮಹೀಪಾಲನೆಂದು ಅಳಿದು ಪ್ರತ್ಯುತ್ತರವನಾಡದೆ ಧಾನ್ಯಮಾಲಿನಿ ಇರುವ ಠಾಣ್ಯಮನ್ನೈದಿ ಮಹೀಶನಕ್ರಮವನ್ನು ತಿಳಿಸಿ, ಈಶ್ವರಾನುಗ್ರಹದಿಂದ ಸರ್ವವೂ ಸಮಂಜಸವಾಗುವುದು ಚಿಂತಿಸಲಾಗದೆಂದು ಮಧುರವಚನದಿಂ ಸಮಾಶ್ವಾಸಪಡಿಸಿ, ದಿವ್ಯಚತುರಂತಯಾನದೊಳು ಕುಳ್ಳಿರಿಸಿ ಕರತಂದು ಪುರೋದ್ಯಾನದಲ್ಲಿರುವ ಕಾರಾಗೃಹದೊಳಟ್ಟು, ಬಹುಪ್ರಕಾರದಿಂ ಪರೀಕ್ಷಿತರಾದ ವೃದ್ಧದೂತಿಯರನ್ನು ಕರೆಸಿ ಸರ್ವಪ್ರಕಾರದಿಂದಲೂ ಚಿತ್ತಾನುಗುಣವಾಗಿ ಸೇವೆಯಂ ಮಾಡಿಕೊಂಡಿರುವುದೆಂದು ಆಜ್ಞಾಪಿಸುತ್ತಾಕೆಯ ಸವಿಾಪದಲ್ಲಿ ಯಿರಿಸಿ, ಅನೇಕ ಶಸ್ತ್ರಪಾಣಿಗಳನ್ನು ಕಾವಲಿರಿಸಿ, ಗೃಹಾದ್ಬಹಿರ್ಭಾಗಕ್ಕೆ ಬಂದು ನಗರಪ್ರವೇಶವಂ ಮಾಡಿ, ರಾಯನೆಡೆಗೈತಂದು ಮಾಡಿದ ಕಾರ್ಯಮಂ ವಿಜ್ಞಾಪನೆ ಮಾಡಿ ಅಪ್ಪಣೆಗೊಂಡು ತನ್ನಮನೆಗೈದಿದನು.

ಸುಶರ್ಮರಾಯನು ಕಲಾವತಿಯ ದುರ್ಬೋಧನೆಯಿಂದ ಮಹಾನುಭಾವಳಾದ ಪತ್ನಿಯಂ, ಲೋಕಾತಿಶಯರಾದ ಪುತ್ರರಂ ತೊರೆದು, ನಗರಮನ್ನೈದಿ, ಅವಿವೇಕಜನಶಿಖಾಮಣಿಯಾದುದರಿಂದ ವಿಮನಸ್ಕನಾಗಿ ದೈವವ್ಯಾಪಾರಮಂ ಅರಿಯದವನಾದಕಾರಣ ಸಹಸ್ರಾಯುವಿನ ಮಹಾಪ್ರಭಾವವು ತನ್ನಂತಃಕರಣಕ್ಕೆ ಅನುಭವಾರೂಢವಾಪೊಡೆಯುಂ, ನಿಜಾಂಗಸಂಗರಹಿತಳಾದ ಕಾಂತಿಮಾಲಿನಿಯಲ್ಲಿ ಸಹಸ್ರಾಯುಜನಿಸಿದರ್ಥದಲ್ಲಿ ಸಂಶಯಯುಕ್ತನಾಗಿ ವಿಷಾದದಿಂ ರಾಜ್ಯಭಾರಮಂ ಮಾಡುತ್ತಿರಲು;-

ಇತ್ತಲಾ ಸಹಸ್ರಾಯುವು ಅರುಣೋದಯದೊಳೆದ್ದು ಜನನೀಜನಕರಿಗೆ ವಂದನೆಯಮಾಡಲೋಸುಗ ಜನನಿಯಂತಃಪುರಕ್ಕೈತಂದು ಜನನಿಯಡಿದಾವರೆಗೆ ವಂದನೆಯ ಮಾಡಿ, ತಾತನೆಲ್ಲಿಹನೆಂದು ಕೇಳಲು; ವತ್ಸ! ಕಲಾವತಿಯ ಅರಮನೆಯೊಳಿರುವನೆಂದು ಪೇಳಲು; ಸಹಸ್ರಾಯುವಾಕಲಾವತಿಯ ಅಂತಃಪುರಕ್ಕೆ ಪೋಗಿ ಕಲಾವತಿಯ ನರಸಿ ಕಾಣದೆ, ತತ್ಪರಿಚಾರಕರಂ ಕರೆದು ಕಲಾವತೀಮಹೀಶರೆಲ್ಲಿಹರೆಂದು ಕೇಳಲು, ಜೀಯ್ಯ! ಶೈಯ್ಯದೊಳೀರ್ವರೂ ನಿನ್ನೆಯ ನಿಶಿಯೊಳಿದ್ದುದಂ ನೋಡಿದೆವು, ಉದಯವಾದನಂತರದಲ್ಲಿ ಕಾಣೆವೆಲ್ಲಿಹರೋ ಎಂದು ಬಿನ್ನಹಮಾಡಲು; ಸಹಸ್ರಾಯುವು ವಿಸ್ಮಿತನಾಗಿ ವಿಷಾದದಿಂದ ನಿಜಾಲಯಕ್ಕೆ ಬರುತ್ತ ತನ್ನರಸಿಕೊಂಡು ಬರುತಿರುವ ಸಹಜಾತನಾದ ವೃಷಕೇತುವಂ ಕಂಡು ತನ್ನ ಚರಣಂಗಳಿಗೆ ಮಣಿದ ಸಹಜಾತನಂ ತೆಗೆದಪ್ಪಿ-ವತ್ಸ! ಜನನಿಯಾದ ಕಲಾವತಿಯೂ ಮಹೀಪತಿಯೂ ಎಲ್ಲಿರುವರೋ ಕಾಣೆ, ನೋಡಿಬಾರೆಂದು ಪೇಳಲು; ವೃಷಕೇತುವು ದುಗುಡದಿಂ ನೋಡಿಬಂದಿರುವೆನೆಂದು ಪೇಳಲು; ಸಹಸ್ರಾಯುವು ಹಾಗಾದಡೆಲ್ಲಿಹರು ಪೇಳೆಂದು ಕೇಳಲು, ಮಹಾನಿಶಿಯಲ್ಲಿ ನಡದ ವೃತ್ತಾಂತವಂ ಜನನಿಯಕ್ರಮವನ್ನು, ಜನಕನವಿವೇಕಮಂ ವಿಸ್ತಾರವಾಗಿ ವಿವರಿಸಲು; ಸಹಸ್ರಾಯುವದಂ ಕೇಳಿಪರಮಾಶ್ಚರ್ಯಭರಿತನಾಗಿ ವೃಷಕೇತುವಂ ಕುರಿತು,ವತ್ಸ! ಹಾಗಾದಡೆ ಮುಂದೇನು ನಿನ್ನಮನೋಗತಾಭಿಪ್ರಾಯವೆಂದು ಕೇಳಲು;ವೃಷಕೇತನನು ಸಹಸ್ರಾಯುವಿನಡಿದಾವರೆಗೆ ಮಣಿದು, ಆರ್ಯ! ಸಾವಧಾನದೊಳವಧರಿಪುದೆನ್ನಬಿನ್ನಹವನೆಂದು ತನ್ನವೃ

ತ್ತಾಂತವಂ ಆದ್ಯಂತವಾಗಿ ತಿಳಿಸಿ, ಸುಶೀಲಾಪಾಣಿಗ್ರಹಣಪ್ರಯತ್ನವಂ ಮಾಡಿದುದರಿಂದ ತನಗಾದನರ್ಥಪರಂಪರೆಗಳಂ ವಿಜ್ಞಾಪನೆಮಾಡಿ,ಫಲಿತಾರ್ಥಮೇನೆಂದೊಡೆ, ಅಣ್ಣ! ನಿನ್ನಡಿಯ ನಗಲಿಬಾಳುವನಲ್ಲ, ಸುಶೀಲಾಪಾಣಿಗ್ರಹಣವಂ ಮಾಡದೆ ನಗರಪ್ರವೇಶವಂ ಮಾಡುವುದಿಲ್ಲ, ಇದುವೆ ಈ ಜನ್ಮದೊಳು ತನಗೆ ಜನ್ಮವ್ರತಗಳೆರಡೆಂದು ಸಹಸ್ರಾಯುವಿನ ಚರಣವಂ ಮುಟ್ಟಿ ಪ್ರತಿಜ್ಞೆಯಂ ಮಾಡಲು; ಸಹಸ್ರಾಯುವದಂ ಕೇಳಿ ಸಂತೋಷಯುಕ್ತನಾಗಿ ವೃಷಧ್ವಜನಿಂದಲೊಡಗೂಡಿ ನಿಜವಟಾಲಯಾಂತರಪ್ರವೇಶವಂ ಮಾಡಿ, ವೃಷಧ್ವಜನ ವಿವಾಹವಂ ಮಾಡಲೋಸುಗ ಮನದೊಳಾಳೋಚನೆಯ ಮಾಡಿ, ಮದಾಲಸಾಶಿರೋರತ್ನವಂ ತಂದಲ್ಲದಾಗುವದಿಲ್ಲವೆಂಬರ್ಥವಂ ನಿಶ್ಚಯಮಾಡಿ, ತದನುಗುಣವಾದ ಸಂವಿಧಾನವಂ ಮನದೊಳಾಳೋಚಿಸಿ, ಸರ್ವವೂ ಸುಘಟವಾಗಿಹುದು, ಪಾತಾಳವಿವರಮನ್ನೈದಿ ಬರುವಸಾಧನವನರಿಯದೆ ಅತ್ಯಂತಚಿಂತಾಕ್ರಾಂತನಾಗಿರುತಿರಲು; ವ್ಯಾಧಪುತ್ರನಾದ ಸುತೀಕ್ಷ್ಣನು ಸಹಸ್ರಾಯುವಿನ ಚಿಂತಾನಿದಾನವಂನರಿಯದೆ ಪ್ರಶ್ನೆಯಂಮಾಡಲು; ಸಮಯಪ್ರತೀಕ್ಷೆಯಂ ಮಾಡಿ ಏಕದೇಶದಲ್ಲಿರುವ ಕಾಲವಂ ನಿರೀಕ್ಷಿಸಿ ಮೆಲ್ಲ ಮೆಲ್ಲನೆ ಸಹಸ್ರಾಯುವಿನೆಡೆಗೈದಿ ರಾಜಕುಮಾರನಂ ಕುರಿತು- ವಯಸ್ಯಮಹಾರಾಜ! ಮಹಾನುಭಾವನಾದ ನಿನ್ನ ಮುಖಾಂಬುಜವು ಚಿಂತೆಯಿಂ ಬಾಡಿರುವುದೇನುಕಾರಣವೋ ತಿಳಿಯಲಿಲ್ಲವದರಿಂದ ತನ್ನೊಳನುರಾಗದಿಂ ಪೇಳಬೇಕೆಂದೆನಲು;ಸಹಸ್ರಾಯುವಾಸುತೀಕ್ಷ್ಣನಂ ನೋಡಿ ತನ್ನಮನೋಗತಾಭಿಪ್ರಾಯಮಂ ತಿಳಿಸಲು; ವ್ಯಾಧಪುತ್ರನಾ ರಾಜಕುಮಾರನಂಕುರಿತು-ಕೇಳ್ವೈವಯಸ್ಯ!ಇದಕೆ ಚಿಂತಿಪುದ್ಯಾಕೆ, ಪಾತಾಳವಿವರಮನ್ನೈದಿ ಬರುವುದಕೆ ಎನ್ನೊಳತ್ಯಂತ ಅಂತರಂಗಸಾಧನೋಪಾಯವಿರುವುದದರಿಂದ, ಕ್ಷಣಮಾತ್ರದಲ್ಲಿ ಪಾತಾಳಲೋಕಮನ್ನೈದಿಸುವೆ, ಇದಕೆ ಚಿಂತಿಸಬ್ಯಾಡವೆಂದು ನುಡಿದಾತನಂನೋಡಿ ಸಹಸ್ರಾಯುವು ಕೃತಕೃತ್ಯನಾದೆನುಅದು ಪರಮಸಂತೋಷದಿಂ ಸುತೀಕ್ಷ್ಣನನಾಲಿಂಗಿಸಿ ಶ್ಲಾಘನೆಯಂ ಮಾಡಿ, ಸತ್ಯವ್ರತನೀತ್ರನಂ ತನ್ನಕರದೊಳೀಯುತ್ತಿರುವ ಸಮಯದೊಳು ಪೇಳಿದ ನುಡಿಯ ನೆನೆದು ಆನಂ

ದಪಾರ್ಥಿಗಯೊಳು ಮುಳುಗಿ ನಿತ್ಯನಿಯಮಗಳನಾಚರಿಸಿ ಆರೋಗಣೆಯಂ ಮಾಡಿ, ಪೃಷಧ್ವಜನಿಂಗೆ ಯುವರಾಜ್ಯಾಭಿಷೇಕಮಂ ಮಾಡಿ, ಕೋಶ ಸೇನಾಪತಿಗಳೇ ಮೊದಲಾದ ಸಮಸ್ತಪ್ರಕೃತಿಗಳನ್ನು ಆತನಾಜ್ಞೆಯೊಳಿರುವಂತೆ ಕಟ್ಟಳೆಯಂ ಮಾಡಿ, ಧೇನುಮಿತ್ರರಿಂದೊಡಗೂಡಿ ಆ ದಿವ್ಯಕಿರೀಟಕುಂಡಲಕವಚಾದಿಗಳಿಂದಲಂಕೃತನಾಗಿ ದೇವಿಯೆಡೆಗೈತಂದು ವಂದನೆಮಾಡುತ್ತಪ್ಪಣೆಗೊಂಡು, ಪತ್ನಿಯರೆಡೆಗೆ ಬಂದು ನಿಜವಿಯೋಗಭಯಾತ್ರಸ್ತಹೃದಯರಾಗಿರುವರಂ ಕಂಡು ಮಧುರತರ ಸುಧಾಸಾರಶೀತಳಮನೋಹರೋಕ್ತಿಗಳಿಂದ ಸಮಾಧಾನಮಂ ಮಾಡಿ, ವಿಮಾನಾರೂಢನಾಗಿ ನಿರಾಲಂಬಮಾರ್ಗದೊಳು ಬರುತ್ತ ಬಂದು ದಿವ್ಯಜಲಾಶಯವನ್ನು ತತ್ತೀರದಲ್ಲಿರುವ ವಿವಿಧವಿಟಪಿನಿಕರಸಮಾಶ್ಲಿಷ್ಟಲಲಿತಲವಂಗಲತಾ ಕುಸುಮಸ್ತಬಕಸೌರಭ್ಯಸಮಾಹೃತ ನಿಖಿಲಪಥಿಕ ಜನಮನೋಹರಾರಾಮಮುಮಂ ಕಂಡು ವಿಮಾನಮಂ ಆ ಉಪವನದೊಳಿಳಿಸಿ, ಆ ದಿವ್ಯ ಜಲಾಶಯದೊಳು ಸ್ನಾನನಿಯಮಾದಿಗಳನಾಚರಿಸಿ, ಧೇನುಪ್ರಭಾವದಿಂ ದಿವ್ಯ ಭೋಜನಮಂ ಮಾಡಿ, ಸುತೀಕ್ಷ್ಣನಂ ಕುರಿತು ಪಾತ್ರಾಳವಿವರಮಂ ನೈದುವರೇ ಮಾರ್ಗವದಾವುದೆಂದು ಕೇಳಲು; ಸುತೀಕ್ಷ್ಣನು ವಯಸ್ಯ! ಎಲ್ಲಿ ಪೋಗುವೆನೆಂದು ನಿನ್ನ ಚಿತ್ತಕ್ಕೆ ತೋರುವುದೋ ಅಲ್ಲಿಹುದು ತನ್ಮಾರ್ಗವೆಂದು ನುಡಿದಾತನಂ ನೋಡಿ ರಾಜಕುಮಾರನು ಸುತೀಕ್ಷ್ಣನಂ ಕುರಿತು ಹಾಗಾದಡಿಲ್ಲಿಂದಲೇ ಪೋಗಬೇಕೆಂದು ನುಡಿಯಲು; ಸುತೀಕ್ಷ್ಣನು ಹಾಗೇ ಆಗಲೆಂದೊಡಂಬಟ್ಟು ಜಲಾಶಯದ ಸಮೀಪವನ್ನೈದಿಬಂದು ಮುಹೂರ್ತಧ್ಯಾನಮಂ ಮಾಡಿ ಜನಕನಿಂದದತ್ತವಾದ ದಿವ್ಯವೇತ್ರಮಂ ಕರದಲ್ಲಿ ಪಿಡಿದು ಉದಕಕ್ಕೆ ಸ್ಪರ್ಶಮಂ ಮಾಡಲು, ಆ ಜಲಾಶಯವು ದ್ವಿಭಾಗವಾಗಿ ಪಾತಾಳಲೋಕಮನ್ನೈದುವದಕ್ಕೆ ಕ್ಷಮವಾದಮಹಾಮಾರ್ಗಮಂ ಪ್ರಕಾಶಮಾಗಿ ತೋರಲು, ಸಹಸ್ರಾಯುವು ವಿಮಾನಾರೂಢನಾಗಿ ಧೇನುಸುತೀಕ್ಷ್ಣರಿಂದೊಡಗೂಡಿ ಆ ಮಾರ್ಗಮಂ ಪಿಡಿದು ಪಾತಾಳಲೋಕಮನ್ನೈದಿ ಅತ್ಯದ್ಭುತಸಂಪತ್ಸಮೃದ್ಧಿಯನ್ನೋಡಿ ವಿಸ್ಮಿತನಾಗಿ ನಿಜಜಲಜಧ್ವನಿಯಂ ಮಾಡಲು; ಪ್ರಳಯಭೈರವಸಟ್ಟಹಾಸಧ್ವನಿ

ಯಂತೆ ಅತಿ ಕಠೋರವಾದ ನಿನಾದಮಂ ಕೇಳಿ ಸರ್ಪಯೂಥಾಧಿಪತಿಗಳ ತ್ಯಮರ್ಷಿತರಾಗಿ ವಿವೇಕಶಾಲಿಗಳಾದ ಸರ್ಪಾಧಿಪತಿಗಳಂ ಕರೆದು ಬಂದಿರುವನಾವನೋ? ಅವನ ವೃತ್ತಾಂತಮಂ ತಿಳಿದು ಬರುವಂತೆ ಕಟ್ಟಳೆಯಂ ಮಾಡಿ ಕಳುಹಲು; ಆ ಸರ್ಪಯೂಥಾಧಿಪತಿಗಳೀರ್ವರೂ ಮಾನುಷಾಕಾರಮಂ ತಾಳಿ ಸಹಸ್ರಾಯುವಿನೆಡೆಗೈತಂದು ಸಾಕ್ಷಾತ್ಮನ್ಮಥನಂತೆ ಪ್ರಕಾಶಮಾನನಾಗಿರುವ ಸಹಸ್ರಾಯುವಂ ಕಂಡು ವಿಸ್ಮಿತರಾಗಿ ಸಮೀಪಕ್ಕೆ ಬಂದು ಕೈಮುಗಿದು ನೀವುದಾರಿಲ್ಲಿಗೈದಿದ ಕಾರ್ಯವೇನೆಂದು ಕೇಳಲು; ಸಹಸ್ರಾಯುವವರಂ ಕುರಿತು ತನ್ನ ಸ್ಥಾನ ನಾಮಾದಿಗಳ ನವರಿಂಗೆ ತಿಳಿಸಿ, ತಾನು ಬಂದಿರುವ ಕಾರ್ಯಮನ್ನೊರೆಯಲು; ಆ ಸರ್ಪಾಧಿಪತಿಗಳ್ ಸಹಸ್ರಾಯುವಂ ಕುರಿತು ಸರ್ಪಾಧಿಪತಿಗಳೆಲ್ಲರೂ ನಿಮ್ಮಭಿಪ್ರಾಯ ವಿಜ್ಞಾನಾರ್ಥವಾಗಿ ತಮ್ಮನ್ನಾರ್ವರಂ ಕಳುಹಿದರು, ತಿಳಿದುಬೇಗಮೆ ನಿಮ್ಮಭಿಪ್ರಾಯ ಮಿದನ್ನವರೊಡನೆ ಪೇಳುತವರೇನು ಪೇಳುವರೋ ತಿಳಿದುಬಂದಪೆವೆ ವೆಂದಪ್ಪಣೆಗೊಂಡು ನಾಗಾಧಿಪತಿಗಳೆಡೆಗೈದಿ ಸಹಸ್ರಾಯುವಿನ ಸೌಂದರ್ಯ ಶೌರ್ಯ ಪರಾಕ್ರಮ ಸುಕುಮಾರ್ಯಾದಿಗಳನ್ನು ವರ್ಣಿಸಿ, ತದಾಗಮನಕಾರ್ಯಮಂ ತಿಳುಹಲು; ಆ ದಂದಶೂಕಾಧಿಪತಿಗಳೆಲ್ಲ ಸಂತೋಷಚಿತ್ತರಾಗಿ ದುರ್ಮುಖನೆಂಬ ದೈತ್ಯನು ಬಲಾತ್ಕಾರದಿಂದ ಮಣಿಯನಪಹರಿಸಿಕೊಂಡು ಪೋಗಿರುವ ವೃತ್ತಾಂತಮನರುಹಿ, ಆರತ್ನಮಂ ತಂದಿತ್ತುದಾದೊಡೆ ಮದಾಲಸಾಯೆಂಬ ಕನ್ನಿಕೆಯನ್ನು ನಿನಗೆವಿವಾಹಮಂ ಮಾಡಿಕೊಡುವೆನೆಂದು ಪ್ರತಿಜ್ಞೆಯಂ ಮಾಡಿ, ಈವಾರ್ತೆಯಂ ಸಹಸ್ರಾಯುವಿಂಗೆ ತಿಳುಹಿಬರುವುದೆಂದು ಶಂಖಪದ್ಮರಂ ಕಳುಹಲು; ಸಹಸ್ರಾಯುವವರಭಿಪ್ರಾಯಮಂ ಕೇಳಿ ಹಾಗೇ ಆಗಲೆಂದೊಡಂಬಟ್ಟು, ಅಲ್ಲಿಂದ ಪೊರಮಟ್ಟು ಭೂಪೃಷ್ಟಮನ್ನೈದಿ, ಅಲ್ಲಿಂದ ಪೊರಮಟ್ಟು ಬಹುದೂರಮಾರ್ಗಮಂ ಕಳೆದು ಶತಶೃಂಗ ಪರ್ವತಮನ್ನೈದಿ ಅತ್ಯಂತ ವಿಶಾಲವಾದ ಮಹದುನ್ನತವಾದಶತಶೃಂಗಮಂ ನೋಡಿ ತದಾರೋಹಣಮಂ ಮಾಡಿ, ನಿರಾಲಂಬಮಾರ್ಗದೊಳು ವಿಮಾನದೊಳು ಕುಳಿತು ತದ್ದೇಶ ಸೌಭಾಗ್ಯಮಂ ನೋಡಿ, ತನ್ಮಧ್ಯದೇಶದಲ್ಲಿರುವ ಜಾಂಬೂನದ ರಚಿತಪ್ರಾಕಾರದಿಂದತ್ಯುಚ್ಛ್ರಿತವಾದ ವಿಚಿತ್ರತರ

ರತ್ನನಿಕರಮಯಸೌಧಪಂಕ್ತಿಗಳಿಂದ ಪ್ರಕಾಶಮಾನವಾಗಿರುವ ದುರ್ಮುಖನ ನಗರವಂ ಕಂಡು, ಅನೇಕ ಘೋರ ದೈತ್ಯರುಗಳಿಂದ ಪರಿರಕ್ಷಿತವಾಗಿ ದೇವಾಸುರಸಮೂಹಕ್ಕಸಾಧ್ಯವಾಗಿರುವ ಸನ್ನಾಹವಂ ನೋಡಿ ವಿಸ್ಮಿತನಾಗಿ, ದುರ್ಮುಖನಜೇಯನತ್ಯಂತ ಬಲಗರ್ವಿತನಾಗಿರುವನೆಂಬರ್ಥವಂ ತಿಳಿದು ಮನದೊಳಾಲೋಚನೆಯಂ ಮಾಡಿ, ಆ ಪುರೋದ್ಯಾನೋಪಕಂಠಪ್ರದೇಶದಲ್ಲಿ ವಿಮಾನವನ್ನಿಳಿಸಿ, ನಿಶಿಯೊಳಾತಾಣದೊಳುವಾಸವಂ ಮಾಡಿ, ಆ ರಾತ್ರಿ ಸಹಸ್ರಾಯುವು ಸುತೀಕ್ಷ್ಣನೊಡನೆ ಮಂತ್ರಾಲೋಚನೆಯಂ ಮಾಡಿ, ಅರುಣೋದಯದೊಳೆದ್ದು ಸ್ನಾನನಿಯಮಾದಿಗಳನಾಚರಿಸಲೋಸುಗ ಆ ಕ್ರೀಡಾವನಾಂತರಾಳವಂ ಪೊಕ್ಕು, ತನ್ಮಧ್ಯದೊಳಿರುವ ದಿವ್ಯಕಾಸಾರಮನೈದಿ ಸ್ನಾನನಿಯಮಾದಿಗಳನಾಚರಿಸುತ್ತಿರಲು; ಆ ವನಪಾಲಕರಾದ ದಿತಿಜಾತರೀತನಂ ಕಂಡು ಕ್ರೋಧಮೂರ್ಛಿತರಾಗಿ ತತ್ಸಮೀಪಕ್ಕೆ ಬಂದು ಲೋಕಾತಿಶಯನಾದ ಸಹಸ್ರಾಯುವಂ ನೋಡಿ ವಿಸ್ಮಿತರಾಗಿ ರಾಜಕುಮಾರನಂ ಕುರಿತು-ಎಲವೋ ಮಾನುಷಾಧಮನೆ! ಸಕಲ ಚರಾಚರಪ್ರಪಂಚದಿಂದಂಕಿತನಾದ ರಾತ್ರಿಂಚರಸಂಚಯಾಧಿಪತಿಯಾದ ದುರ್ಮುಖಾಸುರವರನ ಕ್ರೀಡಾಪ್ರದೇಶಮನ್ನೈದಲು ಸುರಾಸುರರಂಜುತಿಹರು, ಇಂತಿರಲು; ಮಾನುಷಾಧಮನಾದ ನೀನು ಬಂದೆಯಧೆಂತು ಎಂದು ನಾನಾಪ್ರಕಾರದಿಂ ಹೇಳನೆಯಿಂದ ದುರುಕ್ತಿಪರಂಪರೆಗಳನ್ನು ನುಡಿಯುತ್ತಿರಲು; ಸುತೀಕ್ಷ್ಣನದಂ ಕೇಳಿ ರೋಷಾಮರ್ಷ ಪರವಶನಾಗಿ, ಎಲಾ ರಾಕ್ಷಸಾಧಮರಾ! ನಿರುಪದ್ರವಿಗಳಾದೆಮ್ಮನೀರೀತಿಯಿಂ ನಿರಾಕರಣೆಯಂ ಮಾಡಿದಿರಿ, ಆದಲೆಯು ತೊಡರೇನು, ತಡವೇಗಾಡಿದದುರುಕ್ತಿಯಂ, ಇತರಪರವೇನಾದಡೆಯು ಗಳಹಿದಡೆ ನಾಲಿಗೆಯು ಕೊಯ್ವೆನೆಚ್ಚರದೊಳಹುದೆಂದು ಘರ್ಜಿಸಲು; ದಿತಿಜನಿಕರಂಗಳಾನುಡಿಯಂ ಕೇಳಿ ರೋಷಪರವಶರಾಗಿ ಸುತೀಕ್ಷ್ಣನಂ ಕೊಲ್ವೆವೆಂದೊತ್ತಿ ಬರುತಿರಲು; ಸುತೀಕ್ಷ್ಣನತ್ಯಂತ ಸತ್ವರಪಿ ನಿಜಸ್ತ್ರಿಂಶಮಂ ಪಿಡಿದು ರಾಕ್ಷಸಸಮೂಹದೊಳಪೊಕ್ಕು ಶೀರ್ಷ, ಬಾಹು, ಕರ್ಣ, ನಾಸಿಕಾದಿಗಳ ತರಿದು ನೆಲಕ್ಕುರುಳಿಸಲು; ಹತಶೇಷರಾದ ದಾನವರು ಫಲ

ಯಾನವಂ ಮಾಡಿ, ನಗರಮಂ ಪೊಕ್ಕು ಸಭಾಪ್ರವೇಶವಂ ಮಾಡಿ, ನಿಖಿಳ ದೈತ್ಯದಾನವಸಮೂಹದಿಂದುಪಾಸ್ಯಮಾನನಾಗಿ ದಿವ್ಯಸಿಂಹಾಸನದಿ ಕುಳ್ಳಿರುವ ದುರ್ಮುಖಾಸುರನಂ ಕಂಡು, ಸುರಿವರಕ್ತಧಾರೆಗಳಿಂದ ಬಂದು ಪ್ರೊಡವಟ್ಟು ಅಂಜಲಿಬದ್ಧರಾಗಿ ನಿಂದಿರಲು; ದುರ್ಮುಖನಿದೇನೆಂದು ವಿಚಾರಿಸಲು; ರಾಕ್ಷಸರು ಪುರೋವನದಲ್ಲಿ ನಡದ ವೃತ್ತಾಂತಮಂ ಬಿನ್ನಹಮಾಡಲು; ದುರ್ಮುಖನದಂ ಕೇಳಿ ಕ್ರೋಧಮೂರ್ಛಿತನಾಗಿ, ಸಮೀಪದಲ್ಲಿ ಕುಳ್ಳಿರುವ ಕಾಕೋದರನೆಂಬ ಯೂಥಪತಿಯಂ ಕರೆದು-ನಿಜದಿತಿಜಗಣದಿಂದ ಸಂಯುಕ್ತನಾಗಿ ಬಂದಿರುವ ಮಾನುಷಾಧಮನ ಕೊಂದವನ ಶೀರ್ಷಮಂ ತಂದು ತೋರುವುದೆಂದು ಕಳುಹಲು; ಆ ರಾಕ್ಷಸನು ಈರೈದು ಸಾವಿರ ಪದಾತಿಯಿಂದೊಡಗೂಡಿ ಪುರೋಪವನಾಭಿಮುಖನಾಗಿ ಬರುತಿರಲು; ಸೇನಾಪದಾಘಾತದಿಂದುತ್ಪನ್ನವಾದ ರಜೋರಾಜಿಯಂಬರಮಂ ನಡರುತಿರೆ? ಸಹಸ್ರಮುಖನದಂ ಕಂಡು, ಎಲೈ ಸುತೀಕ್ಷ್ಣನೆ! ಕೇಳು, ತಮ್ಮೊಡನೆ ಯುದ್ಧಮಂ ಮಾಡಲೋಸುಗ ಅನೇಕ ದೈತ್ಯಸಮೂಹಮೊಂದಾಗಿ ಬರುವಂತೆ ತೋರುತಿದೆ, ನೀನು ಸನ್ನದ್ಧನಾಗಿರುವುದೆಂದು ಪೇಳಿ ನಿತ್ಯನಿಯಮಾದಿಗಳ ಸತ್ವರದೊಳಾಚರಿಸಿ, ಕಿರೀಟಕುಂಡಲ ಕವಚಾದಿಗಳನ್ನು ಧರಿಸಿ ಸನ್ನದ್ಧರಾಗಿ ನಿಂದಿರಲು; ಆ ಕಾಕೋದರನೆಂಬ ದೈತ್ಯನು ನಿಜಸೈನ್ಯದಿಂದೊಡಗೂಡಿ ಸಹಸ್ರಮುಖನೆದುರ್ಗೆ ನಿಂದು ಯುದ್ಧಮಂ ಮಾಡಿ ಯಾವತ್ಪರ್ಯಂತವೂ ಸೆಣಸಿ, ವ್ಯಾಧಪುತ್ರನಾದ ಸುತೀಕ್ಷ್ಣನಿಂದ ಸಪರಿವಾರನಾದ ಕಾಕೋದರನು ಕಾಲನಧೀನನಾಗಲು; ಹತಶೇಷರಾದ ದೈತ್ಯರಮುಖದಿಂದ ಕಾಕೋದರನಸ್ತಂಗತನಾದ ವಾರ್ತೆಯಂ ಕೇಳಿ,ಬಂದುಕ್ಷಣವಾಲೋಚನೆಯಂ ಮಾಡಿ ಬಂದಿರುವ ಮಾನುಷನು ಸಾಮಾನ್ಯನಾಗಿ ಕಾಣುವದಿಲ್ಲ, ಆದಡೇನಾದುದೆಂದು ಮುಂದಿನಾಲೋಚನೆಯು ನಿಶ್ಚಯ ಮಾಡಿ, ತನ್ನ ದಕ್ಷಿಣಪಾರ್ಶ್ವದೊಳು ಕುಳ್ಳಿರುವ ನಿಜಾರ್ಭಕಸಮೂಹಮಂ ನೋಡಿ, ಆ ಸಮೂಹದೊಳು ಕರವೀರನೆಂಬ ಕನಿಷ್ಠಪುತ್ರನಂ ಕರೆದು ಪೋಗಿಬಾರೆಂದು ಪೇಳಿ, ಸೇನಾಪತಿಯಾದ ಮಹೋಕ್ಷನಂ ಕರೆದು ಕೆಲವು ಸೈನಿಕರಿಂದ ಪುತ್ರನೊಡನೆ ಪೋಗಿ ಸಪ್ರೋತ್ಸಾಹದಿಂ ಬಂದಿರು

ವ ನಾನುಷಾಧವನ ಕೊಂಡು ಬರುವುದೆಂದು ಅಪ್ಪಣೆಯಿತ್ತು ಕಳುಹಲು;
ಕರವೀರನಾಮಹೋಕ್ಷನಿಂದೊಡಗೂಡಿ ಸೇನಾಸಹಿತನಾಗಿ ನಗರದಿಂ ತೆರ
ಳಿ ಸಹಸ್ರಾಯುವಿರುವ ವನಾಭಿಮುಖನಾಗಿ ಬಂದು, ರಾಜಕುಮಾರನಂ
ಕಂಡು ರೋಷಾಮರ್ಷಪರವಶನಾಗಿ ಚಿರಕಾಲಯುದ್ಧವಂ ಮಾಡಿ, ಸು
ತೀಕ್ಷ್ಣನಾಶುಗಪರಂಪರಾಘಾತದಿಂ ಕಾಯಗಳನೀಡಾಡುತ್ತೀರ್ವರೂ
ಯಮನಾಗ್ರಜನ ನಗರವನ್ನೈದಲು; ದುರ್ಮುಖನದಂ ಕೇಳಿ, ಶೋಕಸಾ
ಗರದಲ್ಲಿ ಮುಳುಗಿ ಕ್ರೋಧಮೂರ್ಛಿತನಾಗಿ ಸಿಂಹಾಸನದಿಂದೆದ್ದು ಸಕ
ಲಸೇನಾಸಮೇತನಾಗಿ ನಿಖಿಲಯೂಥಪತಿಗಳು ಸನ್ನದ್ಧರಾಗಿ ಜವದಿಂದ ಪೊ
ರಮಡುವುದೆಂದು ಅಪ್ಪಣೆಯಿತ್ತು, ತಾನು ಅಂತಃಪುರಮಂ ಪೊಕ್ಕು
ಮಾಂಸರಾಸಿಗಳನಪರಿಮಿತವಾಗಿ ಭಕ್ಷಿಸಿ, ಸಹಸ್ರಘಟ ಪೂರಿತಾಸೃಕ್ಪಾ
ನವಂಮಾಡಿ, ವೀರಪಾನಜನಿತ ಮಹಾಮದತೃಣೀಕೃತ ಜಗತ್ರಯನಾಗಿ,
ಕಿರೀಟ, ಕುಂಡಲ, ಕಟಕ, ಹಾರ, ನೂಪುರಪ್ರಮುಖಭೂಷಣಗಳಿಂದಲೂ
ರಕ್ತಮಾಲ್ಯ ಗಂಧವಸ್ತ್ರಾದಿಗಳಿಂದಲೂ ಅಲಂಕೃತನಾಗಿ, ಅಂಧಕಾರ
ವೇ ಮೂರ್ತಿಭವಿಸಿದಂತೆ, ದಾವಾಗ್ನಿದಗ್ಧಮಹಾಶೈಲದಂತೆ, ಸಕಲಭುವನ
ತ್ರಯಾಧಿಸಾಕುರಮನ್ನೈದಿದಂತೆ, ಸಮಸ್ತಭುವನಭಯಂಕರಾಕಾರನಾದ
ದುರ್ಮುಖನು ನಿಖಿಳಶಸ್ತ್ರಾಸ್ತ್ರನಿಕರದಿಂಭರಿತವಾದ ಶತಾಶ್ವಯುಕ್ತ
ವಿಶಾಲಮಹದುನ್ನತಾಯಸಮಯಸ್ಯಂದನಾರೂಢನಾಗಿ, ಅಸಿಷ್ಟಾರಿಷ್ಟತ
ವೃಷ್ಟರೆಂಬ ಮಹಾಮಾತ್ಯಚತುಷ್ಟಯಯುಕ್ತನಾಗಿ, ಸಕಲ ಯೂಥಪತಿಗ
ಳಂ ಸನ್ನದ್ಧಮಾಗಿ ಅಪರಿಮಿತ ಸೇನೆಯಿಂದೊಡಗೂಡಿ ನಗರದಿಂಪೊರಮ
ಟ್ಟು ಬರುತಿರಲು; ಸೇನಾಪದಾಘಾತದಿಂದಿಳೆಯು ಚಲಿಸುತ್ತಿರಲು; ತತ್ಕಾ
ಲದಲ್ಲಿ ಮೂಡಿದ ಮಹೋತ್ಪಾತಕಾದಿಗಳನ್ನು ಗಣನೆಗೈಯ್ಯದೆ ಕಾಲ
ಮೋಹಿತನಾಗಿ ಬರುತಿರಲು; ಸಹಸ್ರಾಯುವು ಸುತೀಕ್ಷ್ಣನಿಂದಸಹಿತನಾ
ಗಿ, ಮುನ್ನೀರು ಮೇರೆವಪ್ಪಿದಂತೆ ಬರುತಿರುವ ಘೋರದಿತಿಜಾತ ಸೈನ್ಯ
ಮಂ ನೋಡಿ ವಿಸ್ಮಿತನಾಗಿ, ತನ್ನ ಪೌರುಷಪ್ರಕಾಶಸಮಯವಿಂದು ನಿ
ಶ್ಚಯಮಾಡಿ, ವಿಮಾನಾರೂಢನಾಗಿ ಕರದಲ್ಲಿ ಬಾಣಮಂ ತಿರುಹುತ್ತ ನಿಂ
ದಿರಲು; ಮುತ್ತಿದವು ದಿತಿಜಾತನಿಕರವತಿಘೋರತರಶಸ್ತ್ರಾಸ್ತ್ರವೃಷ್ಟಿ

ಯಂ ಕರೆದು ಭಯಂಕರ ಘೋರಾಟ್ಟಹಾಸಧ್ವನಿಯಿಂದ ಎಲವೋ ಮಾನುಷಪ್ರೋತ? ತಿರೆಯ ಸಾಲಾವಳಿಯು ನಿನಗೆ ತೀರಿದುದೆಂದು ಬಂದೆಯಾತಕೆ ಇಲ್ಲಿಗೆಂದು ನಾನಾವಿಧದಿಗಳಹುತ್ತಿರಲು; ಸಹಸ್ರಾಯುವು ನಸುನಗುತ ನಿಜಧನುರ್ಜ್ಯಾನಾದ ನಿಶಿತಾಸಿತಾಸುರಚಮೂನಿವಹವಂ ತರಿದು ಬಾಣವೃಷ್ಟಿಗಳಿಂದ ನಿರ್ಭೀತನಾಗಿ ಬರುತ್ತಿರಲು, ರಂಭಾರಣ್ಯವಂ ಪೊಕ್ಕ ಸ್ತಂಭೇರಮದಂತೆ ನಿಜಯುದ್ಧಪಂಕ್ತಿಗಳಂ ನಡೆಗೆಡಹುತ್ತೈತರುವ ಲೋಕೈಕವೀರನಂ, ಶೂರನಂ, ಮಾರನಂ, ಸೋಲಿಸುವ ಸುಂದರಾಕಾರನಂ ಧೀರನಂ, ದುರ್ಮುಖಾಸುರನು ರಣರಂಗದೊಳು ಸಾಕ್ಷಾತ್ ಕುಮಾರನಂತಿರುವ ಸುಕುಮಾರನಂ ಕಂಡು ಇವನು ಮಾನುಷನಲ್ಲ, ಭವತು ನೋಡುವೆನೆಂದು ಸಹಸ್ರಾಯುವಿಂಗೆ ಅಭಿಮುಖನಾಗಿ ಬರುತ್ತಿರಲು; ಸಹಸ್ರಾಯುವಾ ದುರ್ಮುಖನಂ ನೋಡಿ ವಿಸ್ಮಿತನಾಗಿ, ಸಕಲಭುವನ ಭಯಂಕರ ರಾಕಾರದಿಂದ, ತನುರೂಪು ಪರಾಕ್ರಮ ಸಾಹಸಾದಿಗಳಿಂದ, ಭಾರತೀರಮಣಪ್ರಸಾದಾಶಾದಿತಾಸುಗಮವರದಿಂದ ಸತತದಿಗ್ವಿಜಯಮಂ ಮಾಡಿರುವೆನೆಂಬಗ್ಗಳಿಕೆಯಿಂದ ತನಿಗ್ಯಾರು ಸರಿಯೆಂಬ ಮದದಿಂದ ಮುಂದುಗಾಣದೆ ಬರುವದುರ್ಮುಖಗೆ ಮಾರಾಂತುಸಾಂಬಕಾದಂಬಿನೀನಿಸ್ವನ ಸಮಾನಗಂಭೀರಧ್ವನಿಯಿಂದ ಸಹಸ್ರಾಯುವಾದುರ್ಮುಖನಂ ಕುರಿತು-ಎಲೋ! ದಿತಿಜಾಧಮನೆ! ಮದಾಲಸಾಶಿರೋರತ್ನಮಂ ತನಗೆ ತಂದಿತ್ತು ಶರಣಾಗತನಾದೊಡೆ ಬಿಡುವೆನಲ್ಲದಿರೆ ನಿನ್ನಸುವನೀಗುವೆನು, ಕಾದದಿರು, ದೇಹಮಂ ನೀಗದಿರು, ಯುನ್ನಕ್ಯೈಗುಣವನೀಕಾಣದವನಾದಕಾರಣ ಪೇಳುವೆ ಹಿತೋಕ್ತಿಯಂ, ಕೇಳುನೀನೆಂದೆನುತ ನುಡಿಯಲು; ದುರ್ಮುಖನದಂ ಕೇಳಿ ಕ್ರೋಧಮೂರ್ಛಿತನಾಗಿ, ಎಲವೆಲವೋ ಮಾನುಷಪ್ರೋತ! ಮಾನುಷಾದರೊಳು ನೀಸೋಸಿಬದುಕುವೆಯಾ? ಕೊಡುವೆನಾ ಮದಾಲಸಾರತ್ನಮಂ, ನೋಡು ನೀನೆಂದೆನುತ ಅಬ್ಬರಿಸಿ ಶೂಲಮಂ ಹಸ್ತದೊಳು ತೂಗಿಬಿಡಲಂಬರದೊಳು ಅಗ್ನಿಯಂಕಾರುತ್ತ ಬರುತಿರಲು; ಸಹಸ್ರಾಯು ನಸುನಗುತ ಸತ್ವದಿ ಬಾಣದಿಂ ಖಂಡಿಸುತ ಶೂಲಮಂ ನೆಲಕೆ ಕೆಡಹಿ ಬಾಣವರ್ಷಮಂ ಸುರಿದು ಸೂತನ ಶಿರವ ಖಂಡಿಸಲು; ದುರ್ಮುಖನು ರೋಷದಿಂ ಚಾಪಮಂ ಪಿಡಿದು

ನಿಶಿತಶರವೃಷ್ಟಿಯಂ ಸುರಿಯಲಂಬರವೆತ್ತ ಧರೆಯೆತ್ತಲೆಂಬಂತೆ ಮುತ್ತಿದುದು ಶರಜಾಲ, ಅದಂ ನೋಡಿ ಸಹಸ್ರಾಯು ಭಾಪುರೇ ದಿತಿಜಾತ! ಚಾಪವಿನ್ಯಾಸಸಂಪ್ರದಾಯವಿದು ವೀರಜನಶ್ಲಾಘನೀಯವಾಗಿಹುದೆಂದುದರಿದಸ್ತ್ರಜಾಲಮಂ ಸುರಿಸಲು ಶರಾವಳಿಯು, ಮಡಿದವು ರಥಾಶ್ವಗಳು, ಅಸುರನವಯವದೊಳಗೆ ಮೂಡಿದವು ಕೆಂಗಣೆಗಳನವರತ, ಪ್ರವಹರಿಸಿತು ರಕ್ತನದಿಗಳು, ಮತ್ತೆ ಪೂರಾಯಘಾಯದಿಂ ಮೈಮರೆದನಸುರಾರಿ, ಸುರರು, ವಿಸ್ಮಿತರಾಗಿ ನೋಡುತಿರಲು, ಆ ದುರ್ಮುಖನ ಸುತರು ತಾವೈತಂದು ಮುತ್ತಿದರು, ಸಹಸ್ರಾಯುವಂ ಬಾಣವರ್ಷದಿಂ ಸುತ್ತಿದರು, ಖತಿಯಿಂ ದುರುಕ್ತಿಗಳನಾಡಿದರು, ಇಂತು ಬಂದು ಮುತ್ತಿದ ರಜನೀಜನೀಚರರಂ ಕಂಡು ಸುತೀಕ್ಷ್ಣನಡಹಾಯ್ದು, ಎಲವೋ ಖೂಳ! ಖಳಪ್ರೋತ್ರರಿರ, ನಿಮ್ಮಸುವನೀಗುವೆನು ಫಲಾಯನವ ಮಾಡದಿರಿ, ಬಗುಳಿದಡೆ ನಾಲಿಗೆಯು ಕೀಯ್ವೆನೆಚ್ಚರವೆಂದು ಸುರಿಯೆ ಶರವೃಷ್ಟಿಯಂ, ಧರೆಯತ್ತ ದೆಶೆಯತ್ತ; ಭುವನೆತ್ತ ರಿಪುವೆತ್ತವೆಂಬಂತೆ ಮುತ್ತಿದವು ಬಾಣಗಳು, ಅರಸ! ಕೇಳ! ವಧರಿಸು, ಸುತೀಕ್ಷ್ಣನಾ ಘೋರಶರವೃಷ್ಟಿಯಿಂದ ಏಕೋನಪಂಚಾಶತ್ಸಂಖ್ಯಾತಾವಯವಪುತ್ರಸಮುದಾಯದೊಳು ಈರೈದು ಖಳರಳಿದು ನವಸಂಖ್ಯಾತಸುತರು ಕಂಠಗತಪ್ರಾಣರಾದರು, ಐವರ ಸಾರಥಿಗಳಳಿದರು, ಎಂಟುರಥಪುಡಿಯಾದುವೇನೆಂಬೆ ಲಾಘುದಚಮತ್ಕಾರಮಂ, ನರಸಮೂವರಿಗೆ ಚಾಪ ಖಂಡಿಸಿತು, ಈರ್ವರ ರಥಾಶ್ವಗಳು ಮಡಿದವು, ಮೂವರ ಭುಜದ್ವಯವು ಖಂಡಿಸಿತು, ನಾಲ್ವರ ವಾಮ ಬಾಹುಗಳು ಪೋದುವು, ಉಳಿದವರ್ವೈವರು ಯಥಾಸ್ಥಿತರಾಗಿ ಸ್ವಚಾಪಚ್ಯುತಾನೇಕಶರಪರಂಪರೆಗಳಿಂದ ಸುತೀಕ್ಷ್ಣನ ಬಾಣಪಂಜರವನ್ನು ಖಂಡಿಸಿ, ಪ್ರಕಾಶಮಾನರಾಗಿ ಭಾಪುಪುರೇ! ಸುತೀಕ್ಷ್ಣನೆಂಬ ನಾಮ ನಿನ್ನಲ್ಲಿ ಸಾರ್ಥಕವಾದುದೆಂದು ಶ್ಲಾಘನೆಮಾಡುತ್ತೈವರೂ ಸುತೀಕ್ಷ್ಣನಮೇಲೆ ಬಾಣವರ್ಷವಂ ವರ್ಷಿಸಲು; ವ್ಯಾಧಪುತ್ರನವರ ಬಾಣಗಳೆಕಡಿದು ಮೂವ್ವರ ಚಾಪಮಂ ಕಡಿಯಲು ಆ ಮೂವ್ವರು ಜತನದಿಂದ ಚಾಪಾಂತರವ ಪಿಡಿದು ಬಾಣಪ್ರಯೋಗವಂ ಮಾಡುತಿರಲು, ಇತ್ತ ದುರ್ಮುಖಾಸುರನೆಚ್ಚತ್ತು ತನಗಾದವಸ್ಥೆಯಂ

ನೋಡಿ ಅತ್ಯಂತ ರೋಷದಿಂ ಜ್ವಲಿಸುತ್ತ ವಿಘ್ನನಾದ ಕಾರಣ ದುಗುಡ ದಿಂದಿದ್ದ ಸುತೀಕ್ಷ್ಣನಸ್ತ್ರದಿಂದಗ್ರಸ್ತರಾಗಿರುವ ಪುತ್ರರಂ ಕಂಡು ಕ್ರೋಧಾಗ್ನಿಪ್ರಜ್ವಲಿಸಲತ್ಯಂತರದಿವ್ಯಾಯಸಮಯಪರಿಘಮಂ ನೆತ್ತಿ ಕರ ದಿಂ ತೂಗಿ ಸುತೀಕ್ಷ್ಣನಂ ಕುರಿತು-ಎಲಾ ಮಾನುಷಾಧಮಾ! ಇದಂ ತ ರಹರಿಸಿಕೊ ನೋಡುವೆನೆಂದು ಸರ್ವಪ್ರಾಣದಿಂ ಬಿಡಲು, ಸಾಕ್ಷಾತ್ಕೃತಪ ರ್ವದಂತೆ ಘುಡಿಘುಡಿಸುತ್ತ ಸುತೀಕ್ಷ್ಣನೆಸೆವ ಬಾಣಂಗಳನ್ನುಂಗುತ್ತಿ ರುವ ಪರಿಘಾಯುಧವಂ ಸಹಸ್ರಾಯು ನೋಡಿ, ಆ ಸುತೀಕ್ಷ್ಣನಿವರಿಂ ದ ಮರಣವನ್ನೈದುವನೆಂದು ಸತ್ವರದಿ ಚಾಪದೊಳ್ ಬಾಣಗಳ ಪೂಡಿ ಆ ಕರ್ಣಕೆಳೆದು ಬಿಡಲಾ ಮೂರುಬಾಣದಿಂ ಮೂರುತುಂಡಾಗಿ ಪರಿಘಾಯು ಧಬೀಳಲಿಳೆಯೊಳಗೆ, ಸಮಸ್ತ ದೈತ್ಯರು ಸಹಸ್ರಾಯುವಿನ ಸಾಹಸವ ಪೊಗಳುತಿರಲು, ದುರ್ಮುಖನು ಕ್ರೋಧಮೂರ್ಛಿತನಾಗಿ ಯಮದತ್ತ ಶಕ್ತಿಯಂ ಕರದೊಳು ಪಿಡಿದು-ಎಲವೋ ಮಾನುಷಪೋತ! ಧೀರನಹೆ? ಪ ರಿಘಮಂ ಸದದೆಗಡ? ಆದಡೇನಾದುದು, ಇದನೋಡು ನಿನ್ನಸುವನುಂಗುವ ಮೃತ್ಯುವಿದನು ತರಹರಿಸಿಕೊಳ್ಳುವದೆಂದು ತಿರುಹಿಬಿಡಲಾಗಸದೊಳತಿ ಕಠಿಣನಾದಮಂ ಮಾಡುತ್ತೈತರುವ ಶಕ್ತಿಯಂ ನೋಡಿ ಸಹಸ್ರಾಯುವು ಸತ್ಯವ್ರತನಿತ್ತ ಶಕ್ತಿಯಂ ತೆಗೆದು ಬಿಡಲು; ಎರಡು ಕಡಿದಾಡಿ ನಾಶವ ನ್ನೈದಲು, ಆ ದುರ್ಮುಖನು ನಿಸ್ತ್ರಿಂಶವಂ ಪಿಡಿದು ಖತ್ರಿಯಿಂದ ಬೊಬ್ಬಿ ರಿದು ಲಂಘಿಸುತ ಬರುತಿರಲು; ರಾಜಕುಮಾರನು ಯರಡು ಬಾಣಗಳಿಂ ದ ಖಡ್ಗಮಂ ಖಂಡಿಸಲು, ಅನಿತರೊಳಗೆರಡನೆಯರಥವಂ ತೆಗದು ಸಾರಥಿ ಬರಲು, ದುರ್ಮುಖನದರಲ್ಲಿ ಕುಳಿತು ನಿಜಚಾಪಮಂ ಪಿಡಿದು ರೋಷಪ ರವಶನಾಗಿ ಆಗ್ನೇಯಬಾಣವಂ ಮೂಠಿಗೆಯಿಂದ ತೆಗೆಯೆ ಕೂಡೆ ಭುಗಿ ಭುಗಿಲೆಂದು ಜ್ವಾಲೆಗಳು ಧೂಮಗಳು ದಶದಿಕ್ಕಿನೊಳು ವ್ಯಾಪಿಸಲು, ಚಾಪ ದೊಳು ಪೂಡಿ ತೆಗದೆಸೆಯಲು, ಮೂರುಜಗವದಹಿಸುವಪ್ರೋಲೈತರುತಿಹ ಬಾ ಣವಂ ರಾಜಕುಮಾರನು ನೋಡಿ ಜವದಿಂದ ವಾರುಣಮಹಾಸ್ತ್ರವಂ ಮೂಡಿಗೆಗೆ ಕೈನೀಡಿ ತೆಗೆದು ನಿಜಚಾಪದೊಳು ಪೂಡಿ ಬಿಡಲದರಿಂದ ಕಾ ರ್ಶಾನಮಾಸ್ತ್ರಪ್ರಶಾಂತವಾಗಲು; ದುರ್ಮುಖನದಂ ನೋಡಿ ಘನತಿ

ವಿರ, ಪಾಶುಪತ, ಭುಜಗ, ಬ್ರಾಹ್ಮ ಮೊದಲಾದ ಷಣ್ಣವತ್ಯಸ್ತ್ರಗಳ
ನುರುಬಲು, ಸಹಸ್ರಾಯುವು ವಾಯವ್ಯ, ಶಾಂತ, ಪಾಶುಪತ, ಗಾರುಡ,
ಬ್ರಾಹ್ಮ್ಯ, ಪ್ರಮುಖದಿವ್ಯಾಸ್ತ್ರನಿಕರದಿಂ ಪೊರಸಿ ಕಾಲಾಗ್ನಿಯಂ ತ
ರುಬಲು; ದುರ್ಮುಖನು ಬೊಬ್ಬಿರಿವುತೆಲವೋ ಮಾನುಷ! ನಿಖಿಲಮಂತ್ರಾ
ಸ್ತ್ರದಿಂಮುಳಿಸಿಸಿಂದು ಹಿಗ್ಗದಿರು, ಯಿವನುನೀಸಹಿಸಿದೊಡೆ ವೀರನಹುದೆಂ
ದೆನುತ ಸೆಳೆದು ಬಿಡಲಾ ಸರಳು ಸಹಸ್ರಾಯುವಿನ ವಕ್ಷೋಮಧ್ಯಮಂ
ಸುಗ್ಗಲು, ಪ್ರೂರಾಯುವಿಂ ಮೈಮರೆದು ಸುಮ್ಮನಿರೆ, ಸತ್ಯವ್ರತಾತ್ಮಜನು
ನೋಡಿ ಮರುಗುತ್ತ ಆಹಃ? ಮೋಸವಾದುದು ಎಂದು ಜವದಿಂದ ಸಮೀ
ಪಕ್ಕೆ ಬಂದು ಬಾಣವಂ ಕಿತ್ತು ಔಷಧವನಿರಿಸಿ, ಧೇನುವಿಂಗೆ ವಂದನೆ
ಮಾಡಿ ರಾಜಕುಮಾರಗೆ ಶೈತ್ಯೋಪಚಾರವಂ ಮಾಡಿಸುವುದೆಂದು ವಿಜ್ಞಾ
ಪನೆ ಮಾಡಿ, ಸತ್ವರದಿ ಚಾಪವುಂ ಪಿಡಿದು ದುರ್ಮುಖನಿಗೆದುರಾಂತು ಯು
ದ್ಧವಂ ಮಾಡುತಿರಲು; ಧೇನುವು ಮರುಗುತ್ತ ತನ್ನ ಮುಖದಿಂದ ದಿವ್ಯ
ಮಾನಿನಿಯಂ ಸೃಜಿಸಲು; ತದಾಸ್ಯದಿಂ ಸಮುತ್ಪನ್ನದಿವ್ಯಮಾನಿನಿಯರು
ದಿವ್ಯಸಮೀಚೀನವಸ್ತುಗಳಿಂದ ಶೈತ್ಯೋಪಚಾರಗಳಂ ಮಾಡಲು; ಸಹ
ಸ್ರಾಯುವು ಕಣ್ದೆರದು ಧೇನುಜೆಯರಿಗಪ್ಪಣೆಯಿತ್ತು ರೋಷಾವೇಷ
ಯುಕ್ತನಾಗಿ ಚಾಪವಂ ಪಿಡಿದು ನಿಸಿತಶರಜಾಲದಿಂ ರಥ, ಕುದುರೆ, ಸಾರಥಿ
ಧ್ವಜ, ಕಿರೀಟ, ಚಾಪಗಳ ನೊಂದೇಕ್ಷಣದಲ್ಲಿ ಛಿನ್ನಾಭಿನ್ನವಾಗಿ ಕತ
ರಿಸಲು; ದುರ್ಮುಖನು ವಿಗಥನಾಗಿ ಚಾಪವಿದ್ಯದೊಳು ಸಹಸ್ರಾಯುವಂ
ಜಯಿಸುವರೇ ತ್ರಿಪುರಾರಿಗಳವಲ್ಲ, ಮಾಯಾಯುದ್ಧದಿಂ ಕಂಗೆಡಿಸಿ ತ
ವಾಯು ಕೊಲ್ವೆನೆಂದು ಮನದೊಳಾಲೋಚನೆಯುಮಾಡುತಂತರ್ಧಾನವ
ನ್ನೈದಲು; ಸಹಸ್ರಾಯುವಸುರನಂ ಕಾಣದೇನಾದನೋ ಯೆಂದು ಯೋ
ಚಿಸುತ್ತಿರಲು; ದುರ್ಮುಖನದೃಶ್ಯನಾಗಿ ಮಾಯಾಪ್ರಯೋಗವುಂ ಸಾ
ಡೆ? ಮುಹದಂಧಕಾರವಾವರಿಸಿ, ಬರಸಿಡಿಲು, ಶಿಲಾವರ್ಷ, ರಕ್ತವೃಷ್ಟಿ
ನಿಖಿಲಶಸ್ತ್ರಾಸ್ತ್ರಗಳು ಅಂತರಿಕ್ಷದಿಂ ಸುರಿಯುತ್ತಿರಲು, ಅವಿಚ್ಛಿನ್ನ
ವಾಗಿ ಪರ್ವತಗಳೊಂದುಕಡೆಯೊಳೊತ್ತಿ ಬೀಳುತ್ತಿರಲು; ಸಹಸ್ರಾಯುವು
ನಿಜಚಾಪಚ್ಯುತಶಿಲೀಮುಖಗಳಿಂದ ಭೇದಿಸೆ ಪಾರಗಾಣದೆ, ಇದೇನೋಕ

ರಣವೆಂದು ಚಿಂತಿಸುತ್ತಿರೆ, ಆ ಮಹಾಂಧಕಾರದೊಳು ಘೋರೆಂದು ಮೊರೆಯುವ ಸೇನಾರವಮಂ ಕೇಳಿ ಬಂದುದೇನೋ ಪ್ರಳಯಕಾಲಮೆಂದು ಯೋಚಿಸುತ್ತಿರಲು; ದುರ್ಮುಖನು ರಾಜಕುಮಾರನ ಭಾವಮಂ ನೋಡಿ ಧ್ಯಾನಮಂ ಮಾಡುತ್ತಿರಲು; ತತ್ಕಾಲದಲ್ಲಿ ಚಂದ್ರನುದಯಿಸಿ ಕಿಂಚಿದಂಧಕಾರವಿರಳವಾಗಲು; ಕಾಂತಿಮಾಲಿನೀತನಯನು ಸ್ವಕೀಯ ಸೇನಾಸಮೂಹಮಂ ಕಂಡು ಇದೇನಾಶ್ಚರ್ಯಮೆಂದು ಸಮೀಪಕ್ಕೆ ಬರುತಿರಲು; ಆ ಚಮೂಮಧ್ಯದೊಳು ವೃಷಧ್ವಜನೇ ಮೊದಲಾದ ದೇಹನು ಬಂಧಿಗಳಂ, ಅಮಾತ್ಯ, ಕೋಶಾಧಿಪಾಧಿಪರಿವಾರಮಂ, ಸೇನಾಪತಿಯೇ ಮೊದಲಾದ ಸಮಸ್ತಯೂಥಪತಿಗಳಂ ಕಂಡು ವಿಸ್ಮಿತನಾಗಿ ಬರುತಿರಲು; ಶಸ್ತ್ರಧಾರಿಗಳಾದ ಸಮಸ್ತರೂ ಅಹಂಪೂರ್ವಮಹಂಪೂರ್ವನೆಂದು ರೋಷಾಮರ್ಷದಿಂ ಪರಸ್ಪಯುದ್ಧಮಾಡುತ್ತಿರಲದಂ ಕಂಡು ಸಹಸ್ರಾಯುವು ಇವನ್ನೆಲ್ಲಾ ಮಾಯಾಮೆಂದರಿಯುವೇ ಮೋಹಿತನಾಗಿ ಸ್ವಜನದಲ್ಲಿ ಈಪರಿಯ ಕಲಹಪುಟ್ಟುವರೇ ಕಾರಣವೇನೋ ಯೆಂದು ಚಿಂತಿಸಿ, ತಾನು ಸೇನಾಪ್ರವೇಶಮಂ ಮಾಡಿ, ಕಲಹಮಂ ಬಿಡಿಸುತ, ಇದರ ಮೂಲಮಂ ತಿಳಿವೆನೆಂದು ಜವದಿಂದ ಬರುತಿರಲು; ಅನಿತರೊಳು ವೃಷಧ್ವಜನೇ ಮೊದಲಾದ ಸಮಸ್ತರೂ ಪರಸ್ಪರ ಶಸ್ತ್ರಾಸ್ತ್ರಘಾತದಿಂ ಸುದ್ದಿಯಂ ನೊರೆಯಲೊರ್ವನಿಲ್ಲದಂತೆ ಸರ್ವರೂ ಮೃತಿಯನ್ನೈದಲು; ಸಹಸ್ರಾಯುವು ಅಹಹ? ಪ್ರಮಾದಬಂದುದೆಂದು ವಿಹ್ವಲಚಿತ್ತನಾಗಿ, ಉಪಕ್ರಮಿಸಿದ ಕಾರ್ಯವು ಘಾತವಾದಬಳಿಕ ಖಡ್ಗಚಾಪಮಂ ಧರಿಸಿ ಫಲವೇನು, ಲೋಕದೊಳು ಶತ್ರುವಿನೊಡನೆ ಯುದ್ಧಮಂ ಮಾಡಿ ಮೃತಿಯನ್ನೈದುವುದುಂಟು, ಸ್ವವ್ಯೂಹಕಲಹವೀಪರಿಯಲಾತ್ಯಂತಿಕಮಾಗುವುದಂ ಕೇಳಿದುದಿಲ್ಲ, ಇದಕ್ಕೆ ನಿಮಿತ್ತವೇನೋ ತಿಳಿಯಲಿಲ್ಲ, ಬಂದುದೇನೋ ಮಹದನರ್ಥ, ಇನ್ನು ಬರಿದೆ ಚಿಂತಿಸಿ ಫಲವೇನು, ವೃಷಧ್ವಜನೆ ಮೊದಲಾದ ಸಮಸ್ತ ಇಷ್ಟಜನರು ಮೃತರಾದ ಬಳಿಕ ಪತ್ನೀರಾಜ್ಯಾಯುಧಗಳಿದ್ದು ಫಲವೇನೂ ಎಂದು ನಿರ್ವೇದಮನ್ನೈದಿ, ಕೈದುಗಳನಿಳಿಯಮೇಲಿಳುಹಿ, ಉನ್ಮತ್ತನಂತೆ ರೋದನಮಾಡುತ್ತ, ಛಿನ್ನಕಾಯನಾಗಿ ಬಿದ್ದಿರುವನೆಡೆಗೈದಿ, ಕಬಂಧಮಂ ತೊಡೆಯ

ಮೇಲಿರಿಸಿ ಹಸ್ತದೊಳು ಶೀರ್ಷವಂ ಪಿಡಿದು ಕಂಬನಿಗರೆದು ವತ್ಸ! ನಿನ
ಗೀವಿಧಿಯು ಪ್ರಾಪ್ತವಾದುದೇ ಎಂದು ನಾನಾವಿಧ ಪ್ರಲಾಪವಂ ಮಾಡು
ತ್ತಿರಲು.

ಇತ್ತಲಾ ರಣರಂಗದೊಳು ಸುತೀಕ್ಷ್ಣನು ಸಹಸ್ರಾಯುವಂ ಕ
ಣದರಸುತ್ತ ಬರುತಿರುವ ದುರ್ಮುಖನು ನಿರಾಯುಧನಾಗಿ ಮೈಮರೆದ
ಹಂಬಲಿಸುತ್ತಿರುವ ಸಹಸ್ರಾಯುವಂ ಕಂಡು ಇವನ ಸಂಹರಿಸುವರಿದೇ ಸ
ಮಯವೆಂದು ನಿಶ್ಚಯಮಾಡಿ, ನಿರಾಯುಧನಾಗಿ ಯಿದ್ದಡೆಯು ಎದುಗೆ
ಪೋದಡೆ ದಕ್ಕುವನಲ್ಲವದರಿಂದ ವಂಚನೆಯಿಂದಲೇ ಸಂಹರಿಂಬೇಕೆಂದ
ಖಡ್ಗಚರ್ಮವಂ ಪಿಡಿದು ರಥವನಂಬಿಟ್ಟು ಪಶ್ಚಾದ್ಭಾಗದೊಳು ಗಲಗಾಗದ
ತೆ ಮೆಲ್ಲ ಮೆಲ್ಲನೆ ಬರುತಿರಲು; ಸುತೀಕ್ಷ್ಣನು ನಿಜಸೈನ್ಯವೆಲ್ಲ ಛಿನ್
ಭಿನ್ನವಾಗಿ ಸರ್ವರೂ ಮೃತರಾಗಿ ಬಿದ್ದಿರುವುದಂ ಕಂಡು ಮಾಯಾ
ಹೃತವಿವೇಕವುಳ್ಳವನಾಗಿ ಪರಮದುಃಖದಿಂದ ಇದೇನಾಶ್ಚರ್ಯವೆಂ
ದು ಬಿದ್ದಿರುವ ಸೇನಾಪತಿಯೇ ಮೊದಲಾದ ಸಮಸ್ತ ಯೂಥಪತಿಗಳ
ನೋಡಿ ಇದೇನಾಕಸ್ಮಿಕದಿಂದ ಮಹದಾಪದ ಬಂದೊದಗಿದುದೆಂದು ಚಿ
ತಿಸುತ ಬರುತ, ರಣಭೂಮಿಯೊಳು ವೃಷಧ್ವಜನ ಶಿರವಂಪಿಡಿದು ರೋ
ದನವ ಮಾಡುತ್ತಿರುವ ಸಹಸ್ರಾಯುವಂ ಕಂಡು ಚಿದಯುಕ್ತನಾ
ನಾಲ್ಕುದಿಕ್ಕುಗಳ ನೋಡುತ್ತ, ಸಹಸ್ರಾಯುವಿನ ಪೃಷ್ಟಭಾಗದೊಳ
ಮೆಲ್ಲ ಮೆಲ್ಲನೆ ಬರುತಿರುವ ಖಡ್ಗಪಾಣಿಯಾದ ದುರ್ಮುಖನಂ ಕಂಡ
ಮಹತ್ಸಂಶಯಾವಿಷ್ಟನಾಗಿ ಮನದೊಳಾಲೋಚನೆಮಾಡಿ, ಅಹಹ? ರಾ
ಸನ ಮಾಯವೆಂದು ನಿಶ್ಚಯಮಾಡಿ, ಸತ್ವರದಿ ಸಹಸ್ರಾಯುವಿನ ಸಮೀ
ಕ್ಕೆ ಬಂದು ಕರದಲ್ಲಿದ್ದ ಶಿರವಂ ಕಿತ್ತು ದೂರದಲ್ಲಿ ಬಿಸುಟು, ನಿನ್ನ ಪೋ
ಲುವ ವೀರನೀಭುವನತ್ರಯದೊಳುಂಟೆ, ಇದುವೆಲ್ಲ ರಾಕ್ಷಸಮಾಯ, ನ
ವು ಬಂದವರೀರ್ವರೆ, ಈ ಸೈನಿಕನಾದ ವೃಷಧ್ವಜನು ಇಲ್ಲಿಗೆ ಬಂ
ಮೃತನಾಗುವುದು ಸತ್ಯವಾಗುವುದೆ, ವೃಥಾಮೋಹಿಸಿ ಘಾತವಂ ಮಾ
ದಿರು, ಪ್ರತ್ಯಕ್ಷ ಯುದ್ಧವಂ ಮಾಡಲಾರದೆ ರಾಕ್ಷಸಾಪಶದನೀ ಮಾಯುವ
ಸೃಜಿಸಿ ಇದನ್ನು ಸತ್ಯವೆಂದೇ ತಿಳಿದು ಶೋಕಾಬ್ಧಿಯಲ್ಲಿ ಮುಳುಗಿರು

ನಿನ್ನಂ ನೋಡಿ ಕೊಲುವರೆ ಇದೆ ಸಮಯವೆಂದು ನಿಶ್ಚಯಿಸಿ ಪೃಷ್ಟಭಾಗದಲ್ಲಿ ಹೊಂಚುತ್ತ ಬರುತಿರುವ ಖೂಳ ಖಳನಂ ನೋಡು, ಸತ್ವರದಿ ಚಾಪಮಂಪಿಡಿದು ಖಳನಂ ಕೊಲುವುದೆಂದು ನುಡಿಯಲು, ಸಹಸ್ರಾಯುವು ವಯಸ್ಯನಾಡಿದ ನುಡಿಯಂ ಕೇಳಿ ಪಿಂತಿರಿಗಿನೋಡಿ ಖಡ್ಗಪಾಣಿಯಾಗಿರುವ ದುರ್ಮುಖನಕಂಡು ಸತ್ಯವ್ರತಾತ್ಮಜನ ನುಡಿಯು ಸತ್ಯವೆಂದೇ ತಿಳಿದು ರಾಕ್ಷಸನ ಮಾಯವೇಸರಿ ಎಂದು ನಿಶ್ಚಯಿಸಿಕೋದಂಡಮಂತ್ರಂಡ್ಲುಕಿ ದಿವ್ಯಾಸ್ತ್ರಸಂಧಾನಮಂ ಮಾಡಿ ಕರದೊಳಿಹ ಖಡ್ಗಮಂ ಛೇದಿಸಲು ;ಆ ದುರ್ಮುಖನು ಸಹಸ್ರಾಯುವಿನ ಕೋದಂಡಚ್ಯುತ ನಿಶಿತ ಶಿಲೀಮುಖ ಪರಂಪರೆಗಳಿಂದ ಘೂರಾಯಘಾಯವನ್ನೈದಿ ತಾನು ಮಾಡಿದ ಸಮಾರಂಭವು ವಿಫಲಮಾದುದೆಂದು ವಿಷಾದಮನ್ನೈದಿ, ವಿಷಾದನರ್ಧಾಂಗಿಯ ಕಟಾಕ್ಷದಿಂ ಪೂರ್ಣನಾಗಿರುವ ಸಹಸ್ರಾಯುವಿನ ಪ್ರಹಾರಮಂ ಸಹನಮಾಡಲಾರದೆ ದುರ್ಮುಖನು ವಿಮುಖನಾಗಿ ಪಲಾಯನಮಾಡಲು; ಸಹಸ್ರಾಯುವು ಪಲಾಯನಮಾಡಿದ ಸುರಾರಿಯಂ ಕಂಡು ಸತ್ವರದೊಳುಸಮೀಪದಲ್ಲಿರುವ ಜಲಾಶಯುವನ್ನೈದಿ ಸ್ನಾನಾಚಮನಾದಿಗಳಮಾಡಿ ರಾಕ್ಷಸಮಾಯಾನಿವೃತ್ತಿಕರವಾದ ರಕ್ಷೋಘ್ನಮಂಜಪಿಸಲು, ತತ್‌ಕ್ಷಣದಲ್ಲಿ ಮಾಯಾನಿವೃತ್ತಿಯಾಗಿ ತದುಪಾದಾನಕಾರ್ಯಗಳೆಲ್ಲ ನಾಶಮಂನೈದಲು, ರಾಹುಮುಕ್ತನಾದ ತಾರಾಪತಿಯಂತೆ ಪ್ರಕಾಶಮಾನನಾಗಿ, ಅಹಹ ? ದುರಾತ್ಮನಾದ ರಾಕ್ಷಸನ ಮಾಯೆಯೊಳು ಶಿಕ್ಕಿ ನಾನಾವಿಧ ಕ್ಲೇಶಮನ್ನನುಭವಮಾಡಿ ದಾಕ್ಷಾಯಣೀ ಚರಣಕಮಲಾನುಗ್ರಹದಿಂದ ಪ್ರೇರಿತನಾದ ಸುತೀಕ್ಷ್ಣನಿಂದ ಕಡೆಹಾದನೆಂದು ರೋಷಾಮರ್ಷಪರವಶನಾಗಿ ಈ ದುರಾತ್ಮನಾದ ದಿತಿಜಾತನಂ ತನ್ನಂತೆ ನಾನಾವಿಧ ಕ್ಲೇಶವನ್ನೈದಿಸಿ, ಇವನ ಸಮಸ್ತದೇಹಾನುಬಂಧಿಗಳು ಏಕತ್ರಮೇಳನವಾಗುವಂತೆ ಮಹೇಂದ್ರಜಾಲಮಂ ಪ್ರಯೋಗಿಸಿ ತದನಂತರದೊಳಿವನ ಸಂಹಾರಮಂ ಮಾಡುವೆನೆಂದು ನಿಶ್ಚಯಮಾಡಿ, ಪುರೋಭಾಗದಲ್ಲಿ ಧನುರ್ಧಾರಿಯಾಗಿ ನಿಂದಿರುವ ದುರ್ಮುಖನಂ ನೋಡಿ ಎಲವೋ ದಿತಿಜಾಧಮನೆ ? ನಟನಂತೆ ಮಾಯದಿಂ ಗೆಲ್ವೆನೆಂದಿಂತು ನೀಮಾಡಿದಡೆ ಹಾನಿಯೇನಾದುದಿಂದೆನ್ನ ಸಾಹಸಮನೆ ನೋಡೆಂದು ಯುದ್ಧಮಂ ಮಾಡು

ತಂತರ್ಧಾನವನ್ನೈದಿ ಮಹೇಂದ್ರಜಾಲವೆಂಬ ವಿದ್ಯಾಪ್ರಯೋಗವಂ ಮಾಡಲುಪಕ್ರಮಿಸಿ ಧ್ಯಾನಮುಂಮಾಡಲು;

ದುರ್ಮುಖನು ಯುದ್ಧಮಾಡುತ್ತಿದ್ದ ಸಹಸ್ರಾಯುವಂ ಪಲಾಯನ ಮಾಡಿದನೆಂದು ತಿಳಿದು ಖಡ್ಗಚರ್ಮವಂಧರಿಸಿ ರಣಭೂಮಿಯಲ್ಲಿ ಸಂಚಾರಮಾಡುತ್ತ ತನಿಗೆ ದಕ್ಷಿಣವಾಗಿ ನಾತಿದೂರದೊಳಿರುವಮಾಯಾ ಕಲ್ಪಿತ ದಿವ್ಯ ಯಾನಮಂ ಕಂಡು ಈ ವಿಮಾನದೊಳಡಗಿರುವನೋಏನೋ ಎಂದು ವಿಮಾನದ ಸಮೀಪವನ್ನೈದಿ ದಿವ್ಯ ಕಿನ್ನರೀ ಗಾನವಂ ಕೇಳಿ ವಿಸ್ಮಿತನಾಗಿ ಪ್ರತ್ಯಕ್ಷನಾಗಿ ಒಳಪೋಗಲು ಭಯದಿಂದ ಅದೃಶ್ಯನಾಗಿ ಒಳಹೊಕ್ಕು ಸಾಕ್ಷಾತ್ ರಂಭೋರ್ವಶಿಯರಂತೆ ಗಾನವಂ ಮಾಡುತ್ತಿರುವ ದಿವ್ಯಾಂಗನೆಯರಂ ನೋಡಿ, ತದವಲೋಕನಮಾತ್ರದಿಂದ ಪ್ರಮುಷಿತಾತ್ಮಜ್ಞಾನಪ್ರಮುಖ ಸಮಸ್ತ ವಿವೇಕಮುಳ್ಳವನಾಗಿ ತನ್ನಂ ತಾನೇ ಮರೆದು ವಿಮಾನದೊಳು ಸಹಸ್ರಾಯುವನರಸಿ ಕಾಣದೆ ನಿರ್ಭಯದಿಂದ ಪ್ರತ್ಯಕ್ಷನಾಗಿ ಆ ದಿವ್ಯಾಂಗನೆಯರೆಡೆಗೈತಂದು ಸೌಮ್ಯರೂಪನಾಗಿ ನೀವ್ಯಾರೆಂದು ಕೇಳಲು; ಆ ಮಾಯಾಮಾನಿನಿಯರು ಸುಭಗ! ನಾವು ಸಹಸ್ರಾಯುವಿನ ಪತ್ನಿಯರೆಂದು ಪೇಳೆ, ದುರ್ಮುಖನದಂಕೇಳಿ ಮೋಹಿತನಾಗಿ ವಂಚನೆಯಿಂದ ಅವರ ಸ್ವಾಧೀನವಂ ಮಾಡುವೆನೆಂದು ಯೋಚಿಸಿ ಅವರಂ ಕುರಿತು ಸಹಸ್ರಾಯುವು ದುಷ್ಟನಾದ ರಾಕ್ಷಸನಿಂದ ಸಂಪ್ರಹೃತನಾಗಿ ಛಿನ್ನಾಭಿನ್ನನಾಗಿಬಿದ್ದಿರುವನುನೀವವನಪತ್ನಿಯರಾಗಿ ಪತಿಯ ಮರಣಮುನರಿಯದೆ ಗಾನಮುಂಮಾಡುತ್ತಿಹರೇನೆಂಬೆನೆಂದೆನಲು; ಆ ಮಾಯಾಂಗನೆಯರಾನುಡಿಯಂಕೇಳಿ ಸಂಶಯಗ್ರಸ್ತರಾದಂತೆ ಯೋಚಿಸುತ್ತಿರಲು; ದುರ್ಮುಖನು ತಾನಾಡಿದರ್ಥದಲ್ಲಿ ಸಂಶಯಗ್ರಸ್ತರಾಗಿರುವಂತೆ ತೋರುತ್ತಿಥೆ ಎಂದು ತತ್ಕ್ಷಣದಿ ಮಾಯದಿಂಸಹಸ್ರಾಯುವಿನ ಕಿರೀಟ ಕುಂಡಲಾದ್ಯಾಭರಣಗಳ ಕಲ್ಪಿಸಿ ಇದಕೋ ಮೃತನಾಗಿರುವನಾಭರಣವೆಂದು ಕೊಡಲು; ಆ ಮಾಯಾಮಾನಿನಿಯರದಂ ನೋಡಿ ಕರದೊಳಿದ್ದ ವಿಪಂಚಿಕೆಯ ನೀಡಾಡಿ ಮುಕ್ತಕಂಠರಾಗಿ ರೋದನವಮಾಡುತ್ತ ತಮ್ಮಿರ್ವರಂ ರಾಕ್ಷಸನಧೀನಮುಂ ಮಾಡಿ ಪೋದೆಯಾ ಎಂದು ಹಂಬಲಿ

ಸೆ; ದುರ್ಮುಖನು ಇನ್ನೊಂದುಕ್ಷಣ ನೀವಿಲ್ಲಿದ್ದಡೆ ದುರಾತ್ಮನಾದ ರಾಕ್ಷಸನು ಬಂದು ನಿಮ್ಮಂಪಿಡಿದೊಯ್ವನೆಂದು ಪೇಳಲು, ಕುಹನಾಮಾನಿನಿಯರಿನ್ನೇನುಗತಿಯೆಂದು ಈರ್ವರೂ ಪರಸ್ಪರಾಲಿಂಗನೆಯುಮಾಡಿ ರೋದನಮಾಡೆ? ದುರ್ಮುಖನು ಅವರಂ ಕುರಿತು— ಎಲೈ ಮಾನಿನಿಯರಿರಾ! ಕೇಳಿ,ತನ್ನಧೀನರಾಗಿ ನೀವಿರುವದಾದಡೆ ರಾಕ್ಷಸನ ಬಾಧೆಯಿಂ ಪರಿಹರಿಸಿ ರಕ್ಷಿಸುವೆನೆಂದೆನಲು; ಮಾನಿನಿಯರಂಗೀಕಾರಮಾಡಲು; ಸೂರ್ಯನಸ್ತಂಗತನಾದಂತಾಗಿ ಮಹದಂಧಕಾರವಾವರಿಸಲು; ಯದ್ಯಪಿ ದುರ್ಮುಖನು ರಾತ್ರಿಂಚರನಾದಡೆಯು ಆ ಮಹಾಂಧಕಾರದೊಳೊಂದೂ ತಿಳಿಯದೆ ಕಿಂಚಿದಾಲೋಚನೆಯುಮಾಡಿ ಧೈರ್ಯದಿಂ ಮಾಯಾಮಾನಿನಿಯರೊಡನೆ ಮೆಲ್ಲಮೆಲ್ಲನೈದುತ್ತಿರಲು; ನಾತಿ ದೂರದಲ್ಲಿ ರಣಭೂಮಿಯೊಳು ಅಂತರಿಕ್ಷದೊಳು ಅತಿ ಭಯಂಕರಮಾದ ಭೇರಿಗಳ ನಾದಮುಂ, ಪಟಹಡಿಂಡಿಮಾದಿ ನಾನಾವಿಧ ಕಠೋರವಾದ್ಯಧ್ವಾನಮುಂ, ಪರಸ್ಪರ ಯುದ್ಧಮಾಡುತ್ತಿರುವ ಭಟರ ಕೋಲಾಹಲವನಾಲೈಸಿ ಇದೇನೋ ಪ್ರಳಯಕಾಲ ಬಂದುದೆಂದು ಆಲೋಚನೆಯ ಮಾಡುತ್ತಿರಲು; ಅಂತರಿಕ್ಷದಿಂ ರಕ್ತಧಾರೆಗಳು, ರಥತುರಗ ಪದಾತಿಗಳು ಛಿನ್ನಾಭಿನ್ನವಾಗಿ ನೆಲಕ್ಕೆ ಬೀಳುತ್ತಿರುವುದಂ ನೋಡಿ ತ್ರಸ್ತಹೃದಯನಾಗಿ ಯೋಚಿಸುತ್ತಿರಲು; ಅಂತರಿಕ್ಷದೊಳು ಪರಸ್ಪರ ಯುದ್ಧಮಂ ಮಾಡುತ್ತಿರುವ ದುರ್ಮುಖ ಸಹಸ್ರಾಯುವಿನ ಘೋರಾಟ್ಟಹಾಸಮುಂ ಕೇಳಿ ವಿಸ್ಮಿತನಾಗಿ ಗಗನದಿಂದುದುರುತಿಹ ನಾನಾವಿಧಾಸ್ತ್ರ, ಪರ್ವತ, ದ್ರುಮಪರಂಪರೆಗಳನ್ನು ತಪ್ಪಿಸುತ್ತ ಅಂಧಕಾರದೊಳಂಧಕನಂತೆ ಬಹು ದುಃಖಿತನಾಗಿ ದಿವ್ಯಮಾನಿನಿಯರಿಗೆ ರಾಕ್ಷಸನ ಬಾಧೆಯಂ ಬಿಡಿಸುವನೆಂದಭಯಮಂನಿತ್ತು ಕರತಂದೆ,ಮುಂದೇನುಮಾಡಲಿಬೇಕು, ಶಿವಶಿವಾ? ಎಂದು ಬೆದರಬಿರಿಯಂದು ಮಾನಿನಿಯರಿಂಗೆ ಸಮಾಧಾನಮಂ ಪೇಳುತ್ತ ಈ ದುರ್ಮುಖ ಸಹಸ್ರಾಯುವಿನ ಕಠೋರಸಂಮರ್ದದಿಂ ಭಯಂಕರಮಾದ ಈ ಪ್ರದೇಶಮಂ ಕಳೆದು ಹೋದೆನಾದೊಡೆ ಕೃತಾರ್ಥನಾಗುವೆನೆಂದು ತಿರುತಿರುಗಿ ಬಳಲಿ ಪಾರಗಾಣದೆ ಚಿಂತಿಸುತ್ತಿರಲು; ಸಹಸ್ರಾಯುವಿನ ಕರಚರಣಾದಿಗಳೊಂದೊಂದಾಗಿ ಕ

ತ್ತರಿಸಿ ತುಂಡುತುಂಡಾಗಿ ನೆಲಕೆ ಕ್ರಮದಿಂದ ಬೀಳುತ್ತಿರೆ? ದುರ್ಮುಖನ
ದಂನೋಡಿ ಅತ್ಯಾಶ್ಚರ್ಯಯುಕ್ತನಾಗಿ ಕಪಟಮಾನಿನಿಯರಂ ಕರೆದು
ತೋರುವನಿತರೊಳು ದುರ್ಮುಖನ ಕಾಯವೆರಡು ತುಂಡಾಗಿ ಪರ್ವದಂ
ತೆ ರಣಭೂಮಿಯೊಳು ಬೀಳಲು, ಇದೇನೋ ಮಹದಾಕಾರವೆಂದು ಅಂ
ಧಕಾರದೊಳು ಸ್ಫುಟವಾಗಿ ತೋರುತ್ತಿರಲು, ಆ ಸಮಯದೊಳು ಪೂ
ರ್ಣತಾರಾಪತಿಯುದಯಿಸಿ ಕಿಂಚಿದಂಧಕಾರವಿರಳವಾಗಲು, ದುರ್ಮುಖನ
ವಿಂಧ್ಯಾಚಲದಂತೆ ನಿಕೃಂತಕರಿಧರನಾಗಿ ಶಿರ ಬಂದುಕಡೆಯಲ್ಲಿ, ಕಬಂಧ
ಬಂದುಕಡೆಯಲ್ಲಿ ಬಿದ್ದಿರಲು, ಆ ಮಾನಿನಿಯರೊಡಗೂಡಿ ನೋಡುತ
ಬರುತ್ತ ಮೃತನಾಗಿ ಬಿದ್ದಿರುವ ದುರ್ಮುಖನ ವಾಮಹಸ್ತದೊಳು ಪಿ
ಡಿದಿರುವ ತತ್ಕಾಲನಿಕೃಂತ ಸಹಸ್ರಾಯು ಶೀರ್ಷಮಂಕಂಡು ಆ ಕಪಟ
ಮಾನಿನಿಯರು ಬಹುವಿಧವಾಗಿ ರೋದನ ಮಾಡಿ ಸುರಾರಿಯ ನುಡಿಯಂ
ಕೇಳದೆ ಚಿತಿಯಂರಚಿಸಿ ಸಹಸ್ರಾಯುವಿನ ಶರೀರಗಳನಾಚಿತಿಯ ಮೇಲಿ
ರಿಸಿ ಅಗ್ನಿ ಪ್ರತಿಷ್ಠೆಯಂ ಮಾಡಿ ರಾಕ್ಷಸನು ನಿರೋಧಮಾಡೆ ಸಮೀಪಕ್ಕೆ
ಬರುವನಿತರೊಳು ಪ್ರಜ್ವಲಿಸಲದರಲ್ಲಿ ಪ್ರವೇಶಮಾಡುತ್ತ ಭಸ್ಮೀಭೂ
ತರಾಗಲು; ದುರ್ಮುಖನು ಬಹುವಿಧ ಪ್ರಲಾಪಮಂ ಮಾಡಿ ಆ ದಿವ್ಯ
ಮಾನಿನೀವಿರಹದಿಂ ವಿಹ್ವಲಚಿತ್ತನಾಗಿ ರೋದನಮಾಡುತ್ತಿರಲು, ಪುನ
ಸಹಸ್ರಾಯುವು ಧ್ಯಾನಮಂಮಾಡಲು, ಅನಿತರೊಳು ದುರ್ಮುಖನ ಪತಿ
ಯು ಪರಿಮಿತ ಸಖೀಜನರಿಂದೊಡಗೂಡಿ ಸ್ವರಸ್ತಾಡನ ಪೂರ್ವಕವಾಗಿ
ರೋದನಮಾಡುತ್ತ ಸಮೀಪದಲ್ಲಿ ವಿಹ್ವಲಚಿತ್ತನಾಗಿ ನಿಂದಿರುವ ತನ್ನ
ನೋಡಿ ಮಾತಾಡದೆ ಮೃತನಾಗಿ ಬಿದ್ದಿರುವ ದುರ್ಮುಖನ ಶೀರ್ಷಮಂ
ಡಿದ್ದು ಬಹುವಿಧ ಪ್ರಲಾಪಮಂ ಮಾಡುತ್ತಿರಲು, ರಾಕ್ಷಸಾಧಮನದಂಕ
ಡು ಆಹಹ! ಮಹಾಯಶಸ್ವಿಯಾದ ದುರ್ಮುಖನು ಪರಮತೇಜಸ್ವಿಯಾ
ರಾಜಕುಮಾರನು ಪರಸ್ಪರ ಪ್ರವೃದ್ಧವೈರಾನುಬಂಧದಿಂ ಯುದ್ಧಮಂ
ಡಿ ಅನ್ಯೋನ್ಯ ಹಸ್ತಧೃತ ನಿಶಿತ ನಿಸ್ತ್ರಿಂಶಧಾರಾದಳಿತಗಾತ್ರರಾ
ಮೃತಿಯನ್ನೈದಿದರು ಎಂದಾಶ್ಚರ್ಯಯುಕ್ತನಾಗಿ ರೂಪವಯೋನಾ
ಗಳಿಂದ ಈ ದುರ್ಮುಖನಿಂಗೆ ಸಮಾನನಾದ ತಾನ್ಯಾರೋಕಾಣೆ,ತಾನೇ

ರ್ಮುಖನಾದೊಡೆ ಈ ದುರ್ಮುಖನಪತ್ನಿ ತನ್ನಂನೋಡಿ ಸಂಶಯವನೈದದಿರುವಳೆ? ಅದಂತಿರಲಿ, ಮಹಾಪರಾಕ್ರಮಿಯಾದ ದುರ್ಮುಖನುಪರಲೋಕವಂನೈದಿದನು, ತದ್ವೈರಿಯಾದವನು ಮೃತನಾದನದರಿಂದಲೀ ದುರ್ಮುಖನ ಪದವಿಯುಂನಾಕ್ರಮಿಸಲಿದು ಸಮಯವೆಂದು ಮನದೊಳಾಲೋಚನೆಯುಮಾಡಿ ಈಗ ಪತಿಶೋಕದಿಂದ ಬಂಧಿರುವ ಪರಿಮಿತಸಖೀಜನ ಸಮೇತಳಾದ ದುರ್ಮುಖನಪತ್ನಿಯುಂತತ್ಪರಿವಾರವಮಂ ಖಡ್ಗದಿಂ ಸಂಹರಿಸಿ ಭೇದೋಪಾಯದಿಂದ ಪದವಿಯುಂನಾಕ್ರಮಿಸುವೆನೆಂದು ನಿಶ್ಚಯವಮಾಡಿ ಖಡ್ಗದಿಂದ ದುರ್ಮುಖನಾದ ದೈತ್ಯನು ಸಪರಿವಾರಳಾದ ದುರ್ಮುಖನ ಪತ್ನಿಯುಂ ಸಂಹರಿಸಿ ತದೀಯಾಕಾರವಮಂತಾಳಿ ರೋದನ ಮಾಡುತ್ತ ಹತಶೇಷರಾದ ಅಮಾತ್ಯ ಚತುಷ್ಟಯ ಪ್ರಮುಖಯೂಥಪತಿಗಳಿರುವ ತಾಣಮಂ ಅರಸುತ್ತ ಬರುತಿರಲು;

ಸುತೀಕ್ಷ್ಣನ ಅಸ್ತ್ರಪ್ರಹಾರವಂ ತಾಳಲಾರದೆ ಪಲಾಯನ ಮಾಡಿ ತಂದೆಯನರಸುತ್ತ ಬರುತಿರುವ ಹತಶೇಷರಾದ ಪುತ್ರರಂಕಂಡು ಆತ್ಮಘಾತುಕನಾದ ದುರ್ಮುಖನು ಅಹಹ! ದುರ್ಮುಖನ ತನುಜಾತರೋರ್ವರಲ್ಲದೆ ಬಹುಮಂದಿ ಯಿರುತಿರಲು ತನಗೆ ತತ್ಸಾಮ್ರಾಜ್ಯವೆಂತು ಸ್ವಾಧೀನವಾಗುವದು; ಅದುಕಾರಣ ಈ ಪುತ್ರವಂಚಕವಂ ಸದದಲ್ಲದೆ ಮಹತ್ಕಾರ್ಯಸಿದ್ಧಿಯಾಗಲರಿಯದೆಂದು ದುರ್ಮುಖನಾಗಲು; ಆ ಪುತ್ರರಿವನಂಕಂಡು ಸತ್ವರದೊಳೈತಂದು ಚರಣಕ್ಕೆ ನಮಿಸಲು, ದುರ್ಮುಖನು ಈಷತ್ತು ಕರುಣವಿಲ್ಲದೆ, ಎಲಾ, ದುರ್ಭಗರಾದ ಪುತ್ರರಾ! ತನ್ನುದರದೊಳು ಪುಟ್ಟಿ ಶತ್ರುವಿನ ಪರಾಕ್ರಮಕ್ಕಂಜಿ ಪಲಾಯನಮಾಡಿ ತನ್ನ ಕೀರ್ತಿಗೆ ಮಾಲಿನ್ಯಮಂತಂದಿರಾ ಎಂದು ರೋಷಾವೇಶದಿಂದ ಖಡ್ಗದಿಂದೈವರ ಶಿರವಂತರಿದು ಖಡ್ಗಮಂಬಿಸುಟು ತಜ್ಜನನಿಯಾಕಾರವಂತಾಳಿ ಪುನಶ್ಚ ರೋಧನ ಮಾಡುತ್ತ ಬರುತಿರಲು; ಅರಿಷ್ಟಾನಿಷ್ಟಪ್ರಮುಖಮುಖ್ಯಾಮಾತ್ಯರೇ ಮೊದಲಾದ ಸಮಸ್ತಹತ ಶೇಷರಾದ ಯೂಥಪತಿಗಳು ರೋಧನವ ಮಾಡುತ್ತ ಬರುವ ಸ್ವಾಮಿಯ ಪತ್ನಿಯನ್ನೋಡಿ ಪರಮಾಶ್ಚರ್ಯಭರಿತರಾಗಿ ತಮ್ಮ ತಮ್ಮ ಯಾನದಿಂದಿಳಿದು ಪ್ರೈಡವುಟ್ಟು,

ತಾಯೆ! ನೀನಳುವುದ್ಯಾತಕೆ ಸತ್ವರದಿ ಪೇಳೆಂದು ಸಮಸ್ತರೂ ಕೈಮು
ಗಿದು ಕೇಳಲು; ಆ ವೇಷಧಾರಿಯಾದ ಸುರನು ಪ್ರತ್ಯುತ್ತರವನಾಡದ
ತ್ಯಂತ ದುಃಖದಿಂಬಹುಪ್ರಕಾರವಾಗಿ ಪ್ರಳಾಪವಂಮಾಡಲು, ಮುಖ್ಯ
ಮಾತ್ಯರಾದವರು ಬಹುಪ್ರಕಾರದಿಂ ಸಮಾಧಾನವಂಮಾಡಲು; ಆ ದು
ರ್ಮುಖನ ಪತ್ನಿಯು ಇನ್ನು ಪೇಳುವುದೇನು, ಪತಿಗೆ ಮೊದಲೇ ತಾನು
ರಾಜಕುಮಾರನು ಮಹಾ ಪರಾಕ್ರಮಶಾಲಿಯಾಗಿ ತೋರುತಿಧೆ ಯುದರಿಂದ
ಸೋಸಿರು, ರಾಜಕುಮಾರನ ಕಾರ್ಯವಂ ಮಾಡಿ ಕಳುಹಿಸಿ ಸುಖದಲ್ಲಿ
ರುವೆವೆಂದು ಪೇಳದೆನು, ಅಂಗನೆಯು ಮಾತೇನೆಂದು ಅನ್ಯತ್ಕಾರ್ಯವಂ
ಮಾಡಿ ಮಹಾ ತೇಜಸ್ವಿಯಾದ ಸಹಸ್ರಯುವಿನೊಡನೆ ಸೆಣಸುತೀರ್ವ
ರೂ ಮೃತಿಯನ್ನೈದಿ ಛಿನ್ನಾಭಿನ್ನರಾಗಿ ರಣಭೂಮಿಯೊಳು ಬಿದ್ದಿರುವರು
ನೀವು ಮದೀಯ್ಯಸೇವಕರಾಗಿ ಆತನ ಮೃತಿಯನ್ನರಿಯದೆ ಇರುವಿರಿನ್ನೇ
ನು ಮಾಡುವೆನು, ಹಾ!ಪತಿಯೆ ತನ್ನಂಅನಾಥಳಮಾಡಿದೆಯಾ ಎಂದು ಹಂ
ಬಲಿಸಿ ಎಲೈ ಕೊಷ್ಟ! ತನ್ನ ಪುತ್ರರ ಮುಖಾಂಬುಜವನಾದಡೆಯು ನೋ
ಡುವೆನು ಕರತರುವುದೆನಲು;

ಅನಿತರೊಳು ಜೀವಿನವರ್ಗೈತಂದು ಅಮಾತ್ಯರೊಡನೆ ಅಸುರಚಾರ
ರೆಂಪೆರೆಲೆತಾಯೆ! ಪುತ್ರರೆಲ್ಲರೂ ಸುತೀಕ್ಷ್ಣನ ಶಸ್ತ್ರದಿಂದ ಮೃತರಾ
ದರೆಂದು ಬಿನ್ನಪಮಾಡಲಾ ವೇಷಧಾರಿಯು ಕಪಟದಿಂ ಕೇಳಿ ಮೂರ್ಛೆ
ಯನ್ನೈದಲು; ಅಮಾತ್ಯರೇ ಮೊದಲಾದ ಸಮಸ್ತ ಯೂಥಪತಿಗಳು
ಬೆರಗಾಗಿ ತಾವರಿಯದಂತೆ ಲೋಕೈಕವೀರನಾದ ದುರ್ಮುಖನು ಮೃತಿ
ಯನ್ನೈದಿದನೆಂದು ನಗರದೊಳಂತಃಪುರಪ್ರವಿಷ್ಟಳಾದ ಸ್ವಾಮಿಪ
ತ್ನಿಯು ರಣಾಂಗಣವನೋರ್ವಳೈದಿದಳೆಂತು ಇದೇನೆಂದು ಮಹದಾ
ಶ್ಚರ್ಯಯುಕ್ತರಾಗಿ ತತ್ಸಮೀಪವನ್ನೈದಿ ಶೈತ್ಯೋಪಚಾರವಂ ಮಾಡ
ಲು; ಮಾಯಾವಿಯು ಕರದು ಹಾಪುತ್ರರಿರಾ! ಎಂದು ರೋದನವಂ ಮಾ
ಡಲು; ಮತ್ಯಾರು, ವೃದ್ಧರು ಸಮಾಧಾನೋಕ್ತಿಯಂ ಪೇಳುತ್ತಿರಲು
ಮಾಯಾವಿಯು ಹಾವಿಧಿಯೆ! ಮುಂದೆ ತನಿಗ್ಯಾರುಗತಿ ನಿಮ್ಮಪದವಿಯನಾ
ಳುವನದಾರೆಂದು ಕ್ಲೇಶಪಡಲಾಗ ಇದೇನಿದಾಶ್ಚರ್ಯವೆಂದು ಅಮಾತ್ಯರ

ಪತ್ಯಪತ್ಯವಿಯೋಗಕ್ಲೇಶವಂ ಬಿಟ್ಟು ವಿಪರೀತ ನುಡಿಯನಾಡುವಳೆಂದು ಮನಸ್ಸಿನೊಳು ವಿಮರ್ಶೆಯಂ ಮಾಡುತ್ತಾ ಮಾಯಾಮಾನಿನಿಯಂ ಕುರಿತು ಎಲೈ ತಾಯೆ! ನೀನೇ ತಮಗೆ ರಕ್ಷಕಳೆಂದು ನುಡಿದು ಸಮಾಧಾನವಂ ಮಾಡುತ್ತಿರಲು; ದುರ್ಮುಖನು ಮೃತಿಯನೈದಿದನೆಂಬ ವಾರ್ತೆಯು ನಗರಕ್ಕೆ ಹೋಗಲು; ಸಾಕ್ಷಾದ್ದುರ್ಮುಖನ ಪತ್ನಿಯಾವಾರ್ತೆಯಂಕೇಳಿ ಮೂರ್ಛಿತಳಾಗಿ ಮೈಮರೆದು ಶೋಕಪಾರವಶ್ಯದಿಂದ ಅಚೇತನಪ್ರಾಯಳಾಗಿ ಕರಗಿ ಕಂಬನಿಗರೆದು ಹಂಬಲಿಸಿ ಮರುಗಿ ಮಹಾ ಶೋಕಗ್ರಸ್ತಳಾಗಿ ಅಂತಃಪುರದಿಂದ ಬಹಿರ್ದ್ವಾರಕ್ಕೈತಂದು ಅನೇಕ ರಾಕ್ಷಸಿಯರೊಡಗೂಡಿ ಮುಕ್ತಕಂಠಳಾಗಿ ರೋಧನವಂ ಮಾಡುತ್ತ ನಗರದಿಂ ಪೊರಮಟ್ಟು ರಣಭೂಮಿಗೈತಂದು ಪತಿಪುತ್ರರ ಕಳೇಬರವು ಎಲ್ಲಿರುವುದೋ ಕಾಣೆ ಪೇಳುವರನೆಂದರಸಿಕೊಂಡು ಅಮಾತ್ಯರಿದ್ದೆಡೆಗೆ ಬರುತ್ತಿರಲು; ಮಾಯಾಮೋಹಿತನಾದ ಮಾನಿನೀ ವೇಷಧಾರಿಯೇ ಮೊದಲಾದ ಸಮಸ್ತರೂ ನೋಡಿ ವಿಸ್ಮಿತರಾಗಲು; ದುರ್ಮುಖನ ಪತ್ನಿಯು ನಿಜಾಮಾತ್ಯರಿದ್ದೆಡೆಗೆ ಅನೇಕ ರಾಕ್ಷಸಿಯರಿಂದ ಪರಿವಾರಿತಳಾಗಿ ಮುಕ್ತಕಂಠಳಾಗಿ ರೋದನವಮಾಡುತ್ತಾ ಬಂದು ಸ್ವಸಮಾನ ವಯೋರೂಪಾಲಪಗತಿಚೇಷ್ಟಾದಿಗುಣಗಳಾದಂಗನೆಯಂ ಕಂಡು ಬೆರಗಾಗಿ ಕ್ಲೇಶಮಂ ಮರೆದು ಮಹಾಮಾಯಾ ವಿಭ್ರಂಸಿತಚಿತ್ತಳಾಗಿ ದುರ್ಮುಖನ ಪತ್ನಿಯು ಕೇವಲ ಪತಿಪುತ್ರವಿಯೋಗಕ್ಲೇಶದಿಂದ ಅಚೇತನಪ್ರಾಯಳಾಗಿ ರೋದನಮಾಡುತ್ತಿರುವಳದೇನಾಶ್ಚರ್ಯ ವೀದುರ್ಮುಖನ ಪತ್ನಿಗೆ ಸಮಾನ ವಯೋರೂಪವುಳ್ಳ ತಾನ್ಯಾರೋ ಎಂದು ವಿವೇಕಶೂನ್ಯಳಾಗಿ ತನ್ನಂ ತಾನೇ ಮರೆದು ನೋಡುತ್ತಿರಲು; ಆ ವೇಷಧಾರಿಯಾದ ದುರ್ಮುಖನು ಪತ್ನಿಯಂ ನೋಡಿ ರಣಭೂಮಿಯಲ್ಲಿ ಅಪರಿಮಿತ ಸಖೀಜನರಿಂದಸಹಿತಳಾದ ದುರ್ಮುಖನ ಪತ್ನಿಯಂ ಕೊಂಡೆ, ಇವಳ್ಯಾರೋ ಎಂದು ಯೋಚಿಸಿ ಅಹಹಾ! ಮದುಪಕ್ರಮಿತಕಾರ್ಯಕ್ಕೆ ಅಂತರಾಯಬಂದುದಿನ್ನೇನು ಮಾಡುವೆನೆಂದು ವಿವರ್ಣಮುಖನಾಗಿ ಚಿಂತಿಸುತ್ತಿರಲು; ಇವರೀರ್ವರಂ ನೋಡಿ ಅಮಾತ್ಯರು, ಯೂಥಪತಿಗಳು, ದೂತಿಯರು, ಸಖಿಯ

ರು ಮೊದಲಾಗಿ ಸಮಸ್ತ ಜನರು ಇದೇದಾಶ್ಚರ್ಯವಿದು, ದುರ್ಮುಖ
ನ ಪತ್ನಿ ಈಕೆಯೋ? ಬಂದವಳೊ ಎಂದು ಮಹಾ ಸಂಶಯಗ್ರಸ್ತರಾಗಿ
ಒಂದೂ ತೋರದೆ ಸರ್ವರೂ ಸುಮ್ಮನೆ ನೋಡುತ್ತಿರಲು; ದುರ್ಮುಖನ
ಪತ್ನಿಯು ಸಂಶಯಗ್ರಸ್ತಳಾಗಿ ಯೋಚಿಸುತ್ತಿರುವ ಸರ್ವರಂ ನೋಡಿ
ಈಕೆ ಯಾರೆಂದು ಕೇಳಲು; ಸ್ತ್ರೀರೂಪಿಯಾದ ದುರ್ಮುಖನು ಆ ನು
ಡಿಯಂ ಕೇಳೀ ಹಾ ಮಿತ್ರರಾ! ಹಾ ಪ್ರಿಯತಮನೆ! ಇಂತು ಅನಾಥ
ಳಾದ ತನ್ನನೀಪರಿ ಪರಿಹಾಸಾಸ್ಪದಗಳ ಮಾಡಿ ಪೋದಿರಾ ಎಂದು ಬಹು
ಧವಾಗಿ ಪ್ರಲಾಪಿಸುತ್ತಿರಲು; ದುರ್ಮುಖನ ಪತ್ನಿಯು ಬೆರಗಾಗಿ ನೋಡಿ
ಸರ್ವರೂ ಈಕೆ ದುರ್ಮುಖನ ಪತ್ನಿಯೆಂದು ಬಂದುಯಿರುವಳು, ನೀವು
ಬುದ್ಧಿಹರೀಸರ್ವಸಾಮ್ಯದಿಂ ತಮಗೆ ಸಂಶಯಬಂದಿರುವುದದುಕಾರಣ ನಿ
ನೇ ದುರ್ಮುಖನ ಪತ್ನಿಯೋ? ಆಕೆಯೇ ದುರ್ಮುಖನ ಪತ್ನಿಯೋ?
ಮಗಾದಡೆ ತಿಳಿಯದೆಂದು ಪೇಳಲು; ಈ ಮಾಯಾವಿಯಾದ ದುರ್ಮುಖ
ನ ನುಡಿಯಂ ಕೇಳಿ ಎಲೈ! ಅಮಾತ್ಯಪ್ರಮುಖರಾದಸರ್ವಪ್ರಕೃತಿಗಳಿರ
ಕೇಳಿ ನೀವ್ಯಾತಕೆ ಸಂಶಯಪಡುವಿರಿ, ಆಕೆಯೆ ಸ್ವಾಮಿಪತ್ನಿ, ತಾನಾ
ರೋ ಆದರೇನಾಯಿತು ಈಕೆಯನ್ನೇ ನೀವು ಅನುಸರಿಸಿ ಬದುಕಿ,
ತ್ರರೂ, ಪತಿಯೂಪೋದಬಳಿಕ ಸಾಮ್ರಾಜ್ಯವೆಲ್ಲಿ ಪೋದಡೆಯು ಪೋ
ಲಿ ತನಿಗೇನು, ನೀವು ತನ್ನ ಜನಕನಾಲಯಕೆ ಕರದುಕೊಂಡು ತನ್ನನೈದಿ
ದರಾದಡೆ ನಿಮಗೆಮಹತ್ಪುಣ್ಯಬರುತಿದೆಯೆಂದು ಕಂಬನಿಗರೆಯೆ, ದುಮು
ಖನಪತ್ನಿಯು ರೋಷಾವೇಶದಿಂದೆಂದಳೆಲೆ ಮಾಯಾವಿನೀ! ನಿಂನತಂದೆಯ
ದಾರೆಂದು ಕೇಳಲು; ದುರ್ಮುಖನು ಪತಿಯಮಾವನಾದ ಮಕರಾಕ್ಷನ
ನಾರು ಆ ಕಪಟಯಾದ ಮಹಾನುಭಾವಳು, ನೀನು ಆದಡೇನಾಯ
ಮಾಯಾವಿನಿ ಎಂಬನುಡಿ ಈ ಭಾರಿ ಸಹಿಸಿದೆನು ಇತಃಪರಗಳಹಿದಡೆ
ಲಿಗೆ ಕೊಯ್ವೆನೆಚ್ಚರದೊಳಿರುವುದೆಂದು ಘರ್ಜಿಸಲು; ಅಮಾತ್ಯರೇ ಮೊ
ದಲಾದ ಸರ್ವಭೃತ್ಯ ಸಮುದಾಯವೆಲ್ಲಾ ನೀವು ವಿವಾದವಂ ಮಾಡ
ಎಂದು ತಡೆದು ಸರ್ವರೂ ಕೂಡಿ ಯೋಚನೆಯ ಮಾಡಿ ಇವರ ಜನನೀ
ನಕರೇ ಮೊದಲಾದ ಸಮಸ್ತ ದೇಹಾನುಬಂಧಿಗಳೆಲ್ಲಾ ಬಂದಲ್ಲದೇ

ವಿವಾದ ನಿಶ್ಚಯಕೋಟಿಯನ್ನೈದಲಾರದೆಂದು ನಿಶ್ಚಯವಮಾಡಿ ದೈತ್ಯಚಾರರಂ ಕರೆದು ಸಮಸ್ತ ದೇಹಾನುಬಂಧಿಗಳನ್ನೂ ಕರದುಕೊಂಡು ಜನದಿಂದ ಬರುವುದೆಂದು ಪೇಳಿ ದಿಕ್ಕು ದಿಕ್ಕುಗಳಿಗೆ ಬಹುಮಂದಿಯಂ ಕಳುಹಲು; ಆ ಚಾರರುಸಮಸ್ತಖಂಡಗಳಲ್ಲಿರುವ ಸರ್ವಸ್ತ ದೇಹಾನುಬಂಧಿಗಳಂ ಕರತರಲು; ದುರ್ಮುಖನ ಶರೀರಾನುಬಂಧಿಗಳು ತತ್ಪತಿಯ ಶರೀರಾನುಬಂಧಿಗಳೂಸರ್ವರೂ ಕೂಡಿ ಈರ್ವರಂನೋಡಿ ಇವಳೇ ದುರ್ಮುಖನ ಪತ್ನಿ, ಇವಳಲ್ಲವೆಂದು ನಿಶ್ಚಯವಮಾಡಲಾರದೆ ಸಮಸ್ತದೈತ್ಯರು ದುರ್ಮುಖನು ಮೃತಿಯನ್ನೈದಿ ಬಿದ್ದಿರುವ ಭಾವವಂನೋಡಿ ಯಥಾರ್ಥವಾದಡೆ? ದೇಹಸಂಸ್ಕಾರವಂಮಾಡಿ ತದನಂತರದೊಳು ವಿಚಾರವಮಾಡಿ ನಿಶ್ಚಯವಮಾಡುವೆವೆಂದು ವೇಷಧಾರಿಯಂ ಕರೆದು ದುರ್ಮುಖನು ಮೃತಿಯನ್ನೈದಿರುವ ತಾಣವಂ ತೋರುವುದೆಂದೆನಲು; ಆಕಪಟಮಾನಿನಿಯು ತೋರುವೆನು ಬರುವುದೆಂದು ಸರ್ವರಿಂದೊಡಗೂಡಿ ರಣಭೂಮಿಯನ್ನರಸುತ್ತ ದುರ್ಮುಖನ ಕಾಯಮನ್ನರಸಿ ಕಾಣದೇ ಸ್ತ್ರೀರೂಪಿಯಾದ ರಾಕ್ಷಸನು ವಿಸ್ಮಿತನಾಗಿ ಯೋಚಿಸುತ್ತಿರಲು; ಸಮಸ್ತಜನರು ವೇಷಧಾರಿಯಲ್ಲಿ ಕಿಂಚಿತ್ಸಂಶಯ ಮನಸ್ಕರಾಗಿ ಬರುತ ಪುರೋಭಾಗದೊಳು ನಾತಿದೂರದಲ್ಲಿ ಕೃಶಾಂಗನಾದ ವೈಶ್ವಾನರಶಿಖಾಸಮಾನಜಟಾಭಾರಶೋಭಿತನಾದ ಹಸ್ತಧೃತಾಕ್ಷಮಾಲಿಕಾ ಕಮಂಡಲಾದಿಗಳಿಂದ ಪ್ರಕಾಶಮಾನನಾಗಿರುವ ತಾಪಸನಂಕಂಡು ಸಮಸ್ತರಾಕ್ಷಸರು ತಾಪಸನಿಗಭಿಮುಖರಾಗಿ ಬರುತವನೆಡೆಗೆ ಬಂದು ವಂದನೆಯಂಮಾಡಿ ತಾವ್ಯಾರು, ಎಲ್ಲಿಂದ ಬಂದಿರೆಂದು ಪ್ರಶ್ನೆಯಂಮಾಡಲು; ಆ ಮಾಯಾತಾಪಸನು ತಾನು ಭಾರ್ಗಅಮಹರ್ಷಿಯಂ ತೇವಾಸಿಯಾದಪ್ರೀತಿಹೋತ್ರನೆಂಬುವನು,ಆಚಾರ್ಯ ನಿಮ್ಮೆಡೆಗೆ ಕಳುಹಿದಕಾರಣ ಬಂದಿರುವೆನೆಂದು ಪೇಳಲು; ಸರ್ವರೂ ಸಂತೋಷಯುಕ್ತರಾಗಿ ಸಾಕ್ಷಾತ್ಕುಲಾಚಾರ್ಯನಅಂತೇವಾಸಿಎಂದು ಪರಮಾಭಯಭಕ್ತಿಯಿಂದ ಅಂಜಲಿಯಂಕಟ್ಟಿ ನಿಂದಿರಲು; ನೀವು ಹೋದಪದಾರ್ಥವನ್ನು ಹುಡುಕುವವರಂತೆ ಕಾಣುತಿಹಿರಿ ಅದೇನೆಂದು ಕೇಳಲು; ಸಮಸ್ತ ದೈತ್ಯರು ಕೈಮುಗಿದು ಸಕಲ ವೃತ್ತಾಂತವಂ ಪೇಳಲು; ಆ ಮಾ

ಯಾ ತಾಪಸನು ನಸುನಗುತ ಸಮಾಧಿ ವಿಜ್ಞಾತಸಕಲ ಜಗದ್ವ್ಯಾಪಾರನಾದ ಅಸ್ಮತ್ಕುಲಪತಿಯು ತನ್ನ ಕರೆದು ವತ್ಸ! ಭೂಲೋಕದಲ್ಲಿ ಶತಶೃಂಗ ಪರ್ವತದಲ್ಲಿರುವ ದುರ್ಮುಖನೆಂಬ ರಾಕ್ಷಸೋತ್ತಮನು ಸಹಸ್ರಾಯುವೆಂಬ ಮಹಾನುಭಾವನಾದ ರಾಜಕುಮಾರನು ಈರ್ವರೂ ನಾಗಕನ್ಯಾಶಿರೋರತ್ನ ನಿಮಿತ್ತ ಪ್ರವೃದ್ಧವೈರಾನುಬಂಧದಿಂ ಯುದ್ಧವಂಮಾಡಿ ಆ ದುರ್ಮುಖನು ಆ ರಾಜಕುಮಾರನ ಮಹಾ ವಿದ್ಯಾಪ್ರಯೋಗದಿಂ ವಿಭ್ರಂಸಿತಚಿತ್ತನಾಗಿ ತನ್ನಂ ತಾನೇ ಮರೆದು ಸ್ತ್ರೀರೂಪಮಂ ಧರಿಸಿ ತನ್ನ ಪುತ್ರರಂ ತಾನೇ ಸಂಹಾರಮಾಡಿ ಭ್ರಷ್ಟನಾಗಿರುವದಂ ನೋಡಿ ತದೀಯ್ಯಬಂಧು ಸಮುದಾಯಪರಿವಾರಪ್ರಕೃತಿಗಳೆಲ್ಲರು ಮಹತ್ಸಂಶಯಾವಿಷ್ಟರಾಗಿರುವರದರಿಂದ ನೀನು ಅವರೆಡೆಗೆ ಪೋಗಿ ಯಥಾಸ್ಥಿತ ವಸ್ತುಸ್ವರೂಪಮಂ ನಿದರ್ಶನಮಾಡಿ ಸಂಶಯಮಂ ಪರಿಹರಿಸಿ ಬರುವುದೆಂದು ಕಳುಹಿದರದರಿಂದ ಬಂದೆನೆಂದು ಪೇಳಲು; ಆ ಮಾನಿನೀ ರೂಪಧಾರಿಯಾದ ರಾಕ್ಷಸನು ಆದಂ ಕೇಳಿ ಅಹಹ! ತಾನೇ ದುರ್ಮುಖನು, ಪುತ್ರರನ್ನು ತಾನೇಸಂಹಾರವಂಮಾಡಿ ಇಂತು ಪರಿಹಾಸಕ್ಕೊಳಗಾದೆನೆಂದು ಪರಮಲಜ್ಜಾಶೋಕಸಾಗರದಿ ಮುಳುಗಿ ಪರವಶನಾಗಿ ನಿಜರೂಪಮಂತಾಳಿ ವಂದನೆಯಂಮಾಡಿ ತಲೆವಾಗಿ ನಿಲ್ಲಲು; ಸರ್ವರೂ ಸ್ವಾಮಿಯಾದ ದುರ್ಮುಖನಂ ಕಂಡು ವಿಸ್ಮಿತರಾಗಿ ಇದೇನೆಂದು ಕೇಳಲಂಜಿ ಸುಮ್ಮನೆ ನೋಡುತ್ತಿರಲು; ಶತ್ರುವಿನ ಪ್ರಹಾರಮಂ ತಾಳಲಾರದೆ ಫಲಾಯನಮಾಡಿ ತನ್ನ ನರಸುತ್ತ ಬಂದು ವಂದನೆಯಂಮಾಡಿದ ಸಾಕ್ಷಾತ್ಪುತ್ರರಂ ತನ್ನ ಕೈಯಿಂದ ತಾನೇ ಸಂಹಾರಮಂಮಾಡಿದೆನೆಂದು ಪರಮಕ್ಲೇಶದಿಂ ಮುಕ್ತಕಂಠನಾಗಿ ರೋದನಮಾಡಿ ಹಂಬಲಿಸುತ್ತಿರಲು; ಸಹಸ್ರಾಯುವು ದುರ್ಮುಖನ ದೇಹಾನುಬಂಧಿಗಳೆಲ್ಲರು ಬಂದು ಕೂಡಿರುವದಂ ದುರ್ಮುಖನು ಕ್ಲೇಶಪಡುವದಂ ನೋಡಿ ಉಪಕ್ರಮಿಸಿದ ವಿದ್ಯೋಪಸಂಹಾರಮಂಮಾಡಿ ಧನುರ್ಧಾರಿಯಾಗಿ ಆ ದುರ್ಮುಖನ ಪುರೋಭಾಗದಲ್ಲಿ ಪ್ರತ್ಯಕ್ಷನಾಗಲು; ಆ ರಾತ್ರಿಯು ಚಂದ್ರನು, ತಾಪಸನೇ ಮೊದಲಾದ ಸಮಸ್ತ ಪದಾರ್ಥಗಳು ಮಾಯವಾಗಿ ಸಾಯಾನ್ಹಕಾಲವಾಗಿರಲು ಪರ

ಮಾತ್ಸರ್ಯಭರಿತರಾದ ಸಮಸ್ತ ದೈತ್ಯರಿಂದ ಯುಕ್ತನಾದ ದುರ್ಮುಖನು ಸಾಕ್ಷಾದ್ವೈಶ್ವಾನರನಂತೆತೇಜೋವಿಶೇಷದಿಂಪ್ರಕಾಶಮಾನನಾಗಿ ನಿಂದಿರುವ ಸಹಸ್ರಾಯುವಂ ನೋಡಿ ರೋಷಾವೇಶಪರವಶನಾಗಿ ಗದೆಯಂ ಪಿಡಿದು ಪುನಶ್ಚ ಯುದ್ಧೋದ್ಯುಕ್ತನಾಗಲು; ಸಹಸ್ರಾಯುವು ನಸುನಗುತ ಎಲವೋ ದುರ್ಮುಖನೆ! ಈಗಲಾದಡೆಯು ರತ್ನವನ್ನಿತ್ತು ಶರಣಾಗತನಾದಡೆ ನಿನ್ನನ್ನುಳುಹಿ ಹೋಗುವೆನು, ವೃಥಾಮರಣವಂನೈದದಿರು ಎಂದು ಪೇಳಲು, ದುರ್ಮುಖನು ಆ ನುಡಿಯಂ ಕೇಳಿ ಸಹಿಸಲಾರದೆ ತಂನ ಸಾಕ್ಷಾತ್ಪುತ್ರರಂ ತಾನೇ ತರಿದು ಇವನ ಮಾಯಾವಿಭ್ರಂಶಿತಚಿತ್ತನಾಗಿ ಇನ್ನು ಜೀವಿಸುವದಕ್ಕಿಂತ ಯುದ್ಧವಂಮಾಡಿ ಶತ್ರುವಿನ ಸಂಹಾರವೇ ಮಾಡಬೇಕು, ಇಲ್ಲದಿರೆ ತಾನೇ ಆ ಶತ್ರುವಿನಿಂದ ಮೃತಿಯನ್ನೈದಬೇಕಲ್ಲದೆ ಎರಡನೆಯುಪಾಯಮಾತುಂಟೆ ಎಂದು ಮನದೊಳಗೆ ನಿಶ್ಚೈಸಿ ಕ್ರೋಧಮೂರ್ಛಿತನಾಗಿ ಗದಾಹಸ್ತನಾಗಿ ಸಹಸ್ರಾಯುವನಟ್ಟಿ ದಂಡಪಾಣಿಯಂತೆ ಬರುತಿರಲು; ಅದಂ ಕಂಡು ಯುದ್ಧಮಂನೋಡೆ ಬಂದಿರುವ ದಿವ್ಯ ವಿಮಾನಾರೂಢರಾದ ಸಹಸ್ರಾಕ್ಷನೇ ಮೊದಲಾದ ಸಮಸ್ತ ನಾಕಿಗಳು ಅಹಹ! ರಾಜಕುಮಾರನು ರಾಕ್ಷಸನಿಂದಗ್ರಸ್ತನಾದನೆಂದು ಸಂಭ್ರಮದಿಂದ ನೋಡುತ್ತಿರಲು; ಅನಿತರೊಳು ಸಹಸ್ರಾಯುವು ನಿಜಶರಾಸನ ನಿರ್ಮುಕ್ತಮಹಾಸ್ತ್ರದಿಂ ಗದಾಯುಕ್ತವಾದ ಬಾಹುವಂ ಕತ್ತರಿಸಿ ಇಳೆಗೆ ಕೆಡಹಲು; ಸರ್ವರೂ ಸಹಸ್ರಾಯುವಿನ ಪರಾಕ್ರಮವಂ ಕೊಂಡಾಡುತ್ತಿರಲಿಂತೇಳುದಿನವಹೋರಾತ್ರಿರಾತ್ರಿಂಚರರೊಡನೆ ಯುದ್ಧವಂ ಮಾಡಿಅರಾಕ್ಷಸಾಸ್ತ್ರಮಂತೆಗದುಪ್ರಯೋಗಮಾಡುವೆನೆಂದುನಿಷಂಗಕ್ಕೆ ಕೈನೀಡಿ ತೆಗೆಯಲು, ಕಾಟೋರ್ಗೆಯು ಕವಿದು ದವನಿಯಲ್ಲಾಡಿದುದು, ಕುದಿದವು ಜಲಾಶಯಗಳದ್ರಿಗಳು, ಕಾವೇರಿ ಸಿಡಿದುದು, ರಾಕ್ಷಸಸ್ತ್ರೀಗಳ ಗರ್ಭಗಳು ಜಗುಳಿದವು, ದೈತ್ಯಕುಲ ಹಂಮ್ಮೈಸಿ ಮೂರ್ಛೆಯಂನೈದಿತು, ಮಯಾಸುರತಪಃಪ್ರಭಾವವೆಂತುಟೋ ಎಂದು ಜಗವೆಲ್ಲ ತಲೆದೂಗೆ? ದಿವ್ಯಾಸ್ತ್ರವಂ ಚಾಪದೊಳು ಹೂಡಲು ಮಹಾಜ್ವಾಲೆಯಂ ಬರಲವನಾಕ್ರಮಿಸಲಂಜಿದಾ ದುರ್ಮುಖನು ವಾಮಹಸ್ತದೊಳು ಪರಿಘ

ಮುಂಪಿಡಿದು ಮಹದಟ್ಟಹಾಸಮಂ ಮಾಡುತ್ತ ಸಹಸ್ರಾಯುವನಟ್ಟಿ ಬರು
ವನಿತರೊಳು ಕಾಂತಿಮಾಲಿನಿಯು ತನಯನತಿಸಂಭ್ರಮದಿ ಕಳದು ಬಿಡಲಾ
ದಿವ್ಯಾಸ್ತ್ರವು ಧೂರ್ಜಟಿಯ ನಿಟಿಲಾಗ್ನಿಜ್ವಾಲೆಯಂತೆ ಬರುತಲೊಂ
ದೇನಿಮಿಷಮಾತ್ರದೊಳು ದುರ್ಮುಖನೇ ಮೊದಲಾದ ಸಮಸ್ತರಾಕ್ಷಸ ಸ
ಕಲ ಮಹಾರಣ್ಯಮಂ ದಹಿಸಿ ಪುನಶ್ಚ ಸಹಸ್ರಾಯುವಿನ ನಿಷಂಗಮಂ ಸೈ
ದಲು; ರಾಕ್ಷಸಸ್ತ್ರೀಬಾಲವೃದ್ಧ ಮೊದಲಾದ ನಿಖಿಲದಿತಿಜಾತರು ಭಸ್ಮೀ
ಭೂತರಾಗಿ ಹೋಗಲು, ಗಗನಚರರತ್ಯಂತ ಹರ್ಷದಿಂ ಸಹಸ್ರಾಯುವಿನ
ಮೇಲೆ ಕುಸುಮವರ್ಷಮಂ ಕರೆದು ಸ್ವಸ್ಥಾನಮಂ ಸೈದಲು; ಸರ್ವಮಂಗ
ಳಾಚರಣನಳಿನಮಂ ಧ್ಯಾನಿಸುತ ವಿಗತಶ್ರಮನಾಗಿ ವಿಮಾನದೆಡೆಗೆ ಬಂದು
ಧೇನುವಿಗೆ ವಂದನೆಯಂ ಮಾಡಿ, ಸುತೀಕ್ಷ್ಣನನಾಲಿಂಗಿಸಿ, ದಿವ್ಯಕಾಸಾರ
ದೊಳು ಮಜ್ಜನವ ಮಾಡಿ, ಸಾಯಾಹ್ನನಿಯಮಗಳನಾಚರಿಸಿ, ಧೇನುಪ್ರ
ಭಾವದಿಂ ದಿವ್ಯಭೋಜನವಂ ಮಾಡಿ ರವಿಯಸ್ತಮಯಕಾಲದೊಳು ದು
ರ್ಮುಖನ ನಗರಿಯಂ ಪೊಕ್ಕು ಆ ನಿಶಿಯಲ್ಲಿ ಬಹುಶ್ರಾಂತನಾಗಿ ವಿಮಾನ
ದೊಳು ಗಾಢನಿದ್ರೆಯನ್ನೈದಿ, ರವಿಯುದಯವಾಗಲು ಎದ್ದು ನಿತ್ಯನಿಯ
ಮಾದಿಗಳನಾಚರಿಸಿ, ತರುವಾಯ ಸುತೀಕ್ಷ್ಣನಿಂದೊಡಗೂಡಿ ನಗರವೆಲ್ಲ
ಮಂ ತಿರುಗಿ ನೋಡಿ ವಿಸ್ಮಿತನಾಗಿ, ದುರ್ಮುಖನ ಅರಮನೆಯಂ ಪ್ರೊಕ್ಕು
ಕುಬೇರನಾಲಯದಂತಿರುವ ಸಕಲಸಂಪತ್ಸಮೃದ್ಧಿಯಂ ನೋಡಿ ಪರಮಾ
ಶ್ಚರ್ಯಯುಕ್ತನಾಗಿ, ರಾಶಿ ರಾಶಿಗಳಾಗಿ ಬಿದ್ದಿರುವ ದಿವ್ಯಾನರ್ಘರತ್ನಗಳ
ನೋಡಿ ಆ ದಿವ್ಯ ರತ್ನರಾಶಿಪರಂಪರೆಗಳಲ್ಲಿರುವ ಮದಾಲಸಾಶಿರೋರತ್ನ
ವಾವುದೋ ತಿಳಿಯದುದರಿಂದ ಚಿಂತಾಯುಕ್ತನಾಗಿ, ಇಂತು ಸಾಹಸವ
ಮಾಡಿದಡೆಯು ಕಾರ್ಯಸಫಲವಾಗಲಿಲ್ಲೆಂದು ಯೋಚಿಸುತ್ತಿನ್ನೇನುಪಾ
ಯಮಂ ಮಾಡುವೆನೆಂದು ವಿಮರ್ಶೆಯಂ ಮಾಡಿ, ಉಪಾಯಮಂ ಕಾಣದೆ
ನಿರ್ವಿಣ್ಣನಾಗಿ ದೇವಿಯ ಚರಣನಳಿನಂಗಳಂ ಧ್ಯಾನಿಸಲು, ದೇವಿಯಡಿ
ದಾವರೆಯ ಕರುಣದಿಂ ವಾನರದತ್ತ ತತ್ವದರ್ಶಿ ಎಂಬ ಸುಲೋಚನಪ್ರಭಾ
ವವು ತಕ್ಷಣದಲ್ಲಿ ಸ್ಮೃತಿಯಾಗಲು ಪರಮಸಂತೋಷದಿಂ ವಿಕಸಿತವ
ದನಾರವಿಂದನಾಗಿ ಸುಲೋಚನವಂ ತೆಗದು ಪೂಜಿಸಿ ಈ ಮಹಾರತ್ನಗ

ಳೊಳು ನಾಗಕನ್ಯಾಶಿರೋರತ್ನವಂ ತಿಳಿಸಬೇಕೆಂದು ಪ್ರಾರ್ಥನೆಯಂ ಮಾಡಿ ಸುಲೋಚನವನಿಟ್ಟು ನೋಡಲು, ಆ ರತ್ನರಾಶಿಗಳೊಳಾ ಮದಾಲಸಾಶಿರೋರತ್ನವು ಒಂದೇ ಕಾಣಿಸಿ ಮಿಗಿಲಾದ ರತ್ನರಾಶಿಗಳು ಕಾಣದಿರಲು, ಸಹಸ್ರಾಯುವು ನೋಡಿ ವಿಸ್ಮಿತನಾಗಿ ಆ ರತ್ನವಂ ಕರದೊಳಾಂತು ಸುಲೋಚನವಂ ಭದ್ರವಾಗಿಟ್ಟು ಕೃತಕಾರ್ಯನಾಗಿ, ಭೋಜನಾದಿಗಳಮಾಡಿ ಆ ದುರ್ಯೋಧನ ಭಂಡಾರವಂಪೊಕ್ಕು ನೋಡಿ ಪರಮೋತ್ಕೃಷ್ಟ ರತ್ನಾದಿಗಳನ್ನು ವಿಮಾನದೊಳು ತುಂಬಿ ಮಿಗಿಲಾದ ಸಮಸ್ತಪದಾರ್ಥವಂ ಋಷಿಗಳಿಗೆ ಯಥಾಭಿಲಷಿತವಾಗಿತ್ತು ನಗರವಂ ಬರಿದೆ ಮಾಡಿ ಮುಕ್ತಾಹಾರಕಟಕಾದಿಗಳನಪರಿಮಿತವಾಗಿ ಧೇನುಷಿಗಳ್ಗಂ ಕರೆಸಿ ವಂದನೆಯಂಮಾಡಿ, ಸುತೀಕ್ಷ್ಣನಿಂಗೆ ದಿವ್ಯರತ್ನಮಯಕಿರೀಟಕುಂಡಲಹಾರಕಟಿಕನೂಪುರಾಂಗದ ಕಾಂಚೀಮೊದಲಾದ ದಿವ್ಯಾಭರಣಗಳನಿತ್ತುತ್ತರುವಾಯ ತತ್ರತ್ಯ ಋಷಿಗಳಿಂದಾಜ್ಞಪ್ತನಾಗಿ ವಿಮಾನಾರೂಢನಾಗಿ ಭೋ ವಿಮಾನರಾಜ! ನಡೆ ಎಂದು ಪ್ರಾರ್ಥನೆಯುಮಾಡಿ ಪಾತಾಳವಿವರವಂ ಯಥಾಪೂರ್ವವಾಗಿ ಪೊಕ್ಕು ಭುಜಂಗಪುರಸಮೀಪವನ್ನೈದಿ ನಿಜಜಲಜವಾಂಧ್ವನಿಮಾಡಲು, ಆ ಕಠೋರಜಲಜಧ್ವಾನಮಂ ಕೇಳಿ ಸಮಸ್ತಭುಜಗಾಧಿಪತಿಗಳು ಬರಸಿಡಿಲು ತಲೆಯು ಬಂದೆರ್ದಂತೆ ಅಸಹ್ಯಮಾನಧ್ವಾನಮಿದೇನೆಲೋ ಎಂದು ತ್ರಸ್ತಹೃದಯರಾಗಿ ಚಾರರಂ ಕರದು ರಹಸ್ಯವಾಗಿ ಸುದ್ದಿಯಂತಿಳಿದುಬರುವುದೆಂದು ಕಟ್ಟಲೆಯಂಮಾಡಿ ಕಳುಹಿಸಿ, ಸಮಸ್ತರೂ ಏಕತ್ರಮೇಳನವಾಗಿ ಮಂತ್ರಾಲೋಚನೆಯ ಮಾಡುತ್ತಿರಲು;

ಅನಿತರೊಳು ಸಕಲ ಭೂಭಾರನಂ ಅನಾಯಾಸದಿಂ ವಹಿಸಿರುವ ಸಾಕ್ಷಾತ್ಸಹಸ್ರಶೀರ್ಷನಂಘ್ರಿ ಪಂಕೇರುಹವ ಕಾಣಲೋಸುಗ ಬರುವ ಚಾರಣಯುಗ್ಮವಂ ಕಂಡು ಆ ಸಮಸ್ತ ಸರ್ಪಾಧಿಪತಿಗಳು ಮಧುರೋಕ್ತಿಯಿಂದ ಚಾರಣಯುಗ್ಮವಂ ಸಭಾಪಕ್ಕೆ ಕರೆದು ನೀವೆಲ್ಲಿಂದ ಬಂದಿರೆಲ್ಲಿಗೆ ಹೋಗುವಿರಿಯೆಂದು ಪ್ರಶ್ನೆಯಂಮಾಡಲು. ತಾವು ಬಂದಕಾರ್ಯವಂ ನೊರೆಯಲದಂ ಕೇಳಿ ಈ ಕಠೋರಧ್ವಾನನಿನಾದ ನಿಮಗೇನಾದಡೆಯು ತಿಳಿದಿರುವದೋ ಏನೋ ಎಂದು ಪ್ರಶ್ನೆಯಂಮಾಡಲು, ಆಯುಗ್ಮದೊಳ

ಗೋಪರ್ವ ನಿಂತೆಂದನು. ಎಲೈ ಸರ್ಪಾಧಿಪತಿಗಳಿರಾ! ಕೇಳಿ ಸಾಕ್ಷಾದ್ದಾಕ್ಷಾಯಣೀ ಕಟಾಕ್ಷದಿಂ ಪರಿಪೂರ್ಣನಾಗಿರುವ ಸಹಸ್ರಾಯುವೆಂಬ ರಾಜಕುಮಾರನು ಶತಶೃಂಗದಲ್ಲಿರುವ ದುರ್ಮುಖಾಸುರನೊಡನೆ ಬಹುಕಾಲ ಯುದ್ಧವಂಮಾಡಿ ಯುಷ್ಮತ್ಕುಲೋತ್ಪನ್ನ ಕನ್ಯಾಶಿರೋರತ್ನ ನಿಮಿತ್ತವಾಗಿ ಸಪುತ್ರಮಿತ್ರಸಪರಿವಾರನಾದ ದುರ್ಮುಖಾಸುರನಂ ಅರಾಕ್ಷಸಾಸ್ತ್ರದಿಂದಳಿಸಿ ಆ ದಿವ್ಯರತ್ನವಂ ತೆಗೆದು ಕನ್ಯಾನಿಮಿತ್ತವಾಗಿಯುಷ್ಮನ್ನಗರ ಸಮೀಪವನೈದಿ ನಿಜಾಗಮನ ಸೂಚನೆಯಂ ಮಾಡಲೋಸುಗ ಸ್ವಾಪಮೋಘ ಜಲಜವಂ ಪೂರೈಸಲು, ಆ ಮಹಾಧ್ವನಿಯು ಗಗನ ಧರೆದಿಕ್ಕುಗಳತುಂಬಿದುದು, ಇದುವೆ ವೃತಾಂತವೆಂದು ಸವಿಸ್ತಾರವಾಗಿ ವಿವರಿಸಿ ಅವರಿಂದಪ್ಪಣೆಗೊಂಡು ಚಾರಣಯುಗ್ಮಮುಂದೆ ನಡೆಯುತ್ತಿರ್ದುದೆಂಬಲ್ಲಿಗೆ॥*॥ಇಂತು ಕರ್ನಾಟಕ ಭಾಷಾವಿರಚಿತವಾದ ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲದೇಶಾವತಂಸಕರ್ನಾಟಕಜನಪದಧಿಷ್ಠಾನಭೂತ ಶ್ರೀಮನ್ಮಹಿಶೂರ ಮಹಾಸಂಸ್ಥಾನ ಮಧ್ಯದೇದೀಪ್ಯಮಾನಾವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖನಿಖಿಲನಿಜರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತದಿವ್ಯರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜಪರಮೇಶ್ವರಪ್ರೌಢಪ್ರತಾಪಾ ಪ್ರತಿಮವೀರನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃ ಪಾರಾವಾರಕಳಾನಿಧಿಶಂಖಚಕ್ರಾಂಕುಶಕುಠಾರ ಮಕರಮತ್ಸ್ಯಶರಭಸಾಳ್ವಗಂಡಭೇರುಂಡ ಧರಣೀವರಾಹಹನುಮದ್ಗರುಡ ಕಂಠೀರವಾದ್ಯನೇಕಬಿರುದಾಂಕಿತ ಶ್ರೀಚಾಮರಾಜಮಹೀಪಾಲಧರ್ಮಪತ್ನೀ ಕೆಂಪನಂಜಮಾಂಬಾಗರ್ಭಸುಧಾಂಬುಧಿರಾಕಾಸುಧಾಕರಾಯಮಾನ ಶ್ರೀ ಚಾಮುಂಡಿಕಾಂಬಾವರಪ್ರಸಾದೋದ್ಭವರಾದಆತ್ರೇಯಸಗೋತ್ರಆಶ್ವಲಾಯನಸೂತ್ರಋಕ್ಶಾಖಾನುವರ್ತಿಗಳಾದಶ್ರೀಮನ್ಮಹೀಶೂರಪುರವರಾಧೀಶಶ್ರೀಮತ್ಕೃಷ್ಣರಾಜಬಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀಕೃಷ್ಣರಾಜವಾಣೀವಿಲಾಸವೆಂಬಾಂಕಿತದಿಂದ ಕರ್ನಾಟಕ ಭಾಷಾವ್ಯಾಖ್ಯಾನರೂಪಕವಾಗಿ ರಚಿಸಿದ ಬ್ರಹ್ಮಾಂಡೋಪಪುರಾಣ ೭ಲಿ

ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ಹದಿನಾರನೆ ಅಧ್ಯಾಯಕ್ಕೆ ಮಂಗಳಮಹಾ *

## ಹದಿನಾರನೇ ಅಧ್ಯಾಯ ಸಂಪೂರ್ಣವು.

---

## ಹದಿನೇಳನೇ ಅಧ್ಯಾಯ.

---

ಸಮಸ್ತನಾಗಾಧಿಪರಪ್ಪಂ ಕೇಳಿ ಪರಮಸಂತೋಷಯುಕ್ತರಾಗಿ ಚಾರರಾಗಮನಮಂ ನಿರೀಕ್ಷಿಸುತ್ತಿರಲು,

ಇತ್ತಲಾನಾಗಚಾರರೈತಂದು ವಿಮಾನಮಂಕಂಡು ತತ್ಸಮೀಪದನೈದಿ ಸಹಸ್ರಾಯುವಂ ಕಂಡು ಮದಾಲಸಾನಿಮಿತ್ತವಾಗಿ ಪೂರ್ವದಲ್ಲಿ ಬಂದಿದ್ದ ರಾಜಕುಮಾರನಿವನೆಂದು ನಿಶ್ಚಯಮಾಡಿ ಕಾಮರೂಪಿಗಳಾದ ಚಾರರು ಮಾನುಷಾಕಾರಮಂತಾಳಿ ಸಹಸ್ರಾಯುವಿನೆಡೆಗೆ ಬಂದು ವಂದನೆಮಾಡಿ ನಿಲ್ಲಲು; ಸಹಸ್ರಾಯುವವರಂನೋಡಿ ನೀವುಯಾರು, ಎಲ್ಲಿಂದ ಬಂದಿರೆಂದು ಕೇಳಲು, ಆ ಚಾರರು ನಾಗಾಧಿಪತಿಗಳು ಯುಷ್ಮಜ್ಜಲಜಸಮುತ್ಪನ್ನನಿನಾದಮಂ ಕೇಳಿ ತಿಳಿದು ಬರುವುದೆಂದಪ್ಪಣೆಯನೀಯ್ಯಲಾವು ಬಂದೆವೆನೆ! ಸಹಸ್ರಾಯುವವರಂ ಕುರಿತು ಎಲೈ ಚಾರರಾ! ಕೇಳಿ ನಾಗಾಧಿಪತಿಗಳೆಲ್ಲ ತನಗೇನುಕಾರ್ಯಮಂನಿಯಮಿಸಿ ಕಳುಹಿದರೊ? ತತ್ಕಾರ್ಯಮಂ ಮಾಡಿಕೊಂಡೈದಿರುವೆನದರಿಂದ ಸತ್ವರದಿ ನೀವು ಪುರಮನೈದಿ ಭುಜಗೇಶರೊಡನೆ ಈವೃತ್ತಾಂತಮನೊರೆವುದೆಂದು ಅಪ್ಪಣೆಯನೀಯ್ಯಲು; ಆ ಚಾರರು ಸಹಸ್ರಾಯುವಿಂಗೆ ಕೈಮುಗಿದು ಪೊರಟು ನಗರಮನೈದಿ ರಾಜಕುಮಾರನಾಗಮನವಾರ್ತೆಯನೊರೆಯಲು; ಭುಜಗಾಧಿಪತಿಗಳು ಸಮಸ್ತ ವೈಭವದಿಂದ ದುಷ್ಟಬುದ್ಧಿಯೇ ಮೊದಲಾದ ಸರ್ವರೂ ಬಂದು ವಿಮಾನವಂ ಕಂಡು ತತ್ಸಮೀಪಕ್ಕೆ ಬರುತ್ತಿರಲು, ಅದಂಕಂಡು ಸಹಸ್ರಾಯುವು ವಿಮಾನದಿಂದಿಳಿದು ಸುತೀಕ್ಷ್ಣನಿಂದೊಡಗೂಡಿ ಸಮಸ್ತನಾಗಾಧಿಪತಿಗಳಂ ಕಾಣಿಸಿಕೊಂಡು ಪರಸ್ಪರಾಲಿಂಗನಕುಶಲಪ್ರಶ್ನೆಗಳಂ

ದ ಸನ್ಮಾನಮಂ ಮಾಡಲು, ಆ ಸಹಸ್ರಾಯುವಿನ ಸೌಂದರ್ಯಗಾಂಭೀರ್ಯ ಶೌರ್ಯ ಸೌಕುಮಾರ್ಯ ಸಹನ ಪಾಂಡಿತ್ಯ ಪರಾಕ್ರಮಾದಿ ಮಹಾಗುಣಂಗಳೆಲ್ಲವು ಸಂಪೂರ್ಣವಾಗಿರುವುದಂನೋಡಿ ಚಾರಣನು ವಿದಿತ ರಾಜಕುಮಾರವೃತ್ತಾಂತಮುಳ್ಳವರಾದಕಾರಣ ಪ್ರೋಡಕಾರ್ಯವೇನಾಪುದೆಂದು ಪ್ರಶ್ನೆಯಂಮಾಡದೆ ಸುಮ್ಮನಿರಲು; ಸಹಸ್ರಾಯುವಾನಾಗಾಧಿಪತಿಗಳಂ ಜವ್ಯಾಮೋಘ ವಿಮಾನದೊಳು ಕರೆತಂದು ಪಂಕ್ತಿಯಾಗಿ ಕುಳ್ಳಿರಿಸಿ ದಿವ್ಯಾಂಬರಾಭರಣಗಳಿಂದ ತಾರತಮ್ಯಾನುಗುಣವಾಗಿತ್ತು ಸನ್ಮಾನಮಂ ಮಾಡಿ ಸುತೀಕ್ಷ್ಣನಾನನಮಂನೋಡಲು, ಸುತೀಕ್ಷ್ಣನು ದಿವ್ಯ ರತ್ನಖಚಿತವಿಶಾಲ ಪಾತ್ರೆಯೊಳು ಆ ದಿವ್ಯಮದಾಲಸಾಶಿರೋರತ್ನಮನಿಟ್ಟು ಸದಸ್ಸಿನ ಮಧ್ಯದೊಳು ತಂದಿರಿಸಲು, ದುಷ್ಟಬುದ್ಧಿ ಪ್ರಮುಖ ಸಮಸ್ತ ಕಾಕೋಧರಾಧಿಪತಿಗಳದಂ ನೋಡಿ ವಿಸ್ಮಿತರಾಗಿ ಸಹಸ್ರಾಯುವಂ ಬಹುಪ್ರಕಾರದಿಂ ಸ್ತುತಿಮಾಡುತ್ತಿರಲು, ಆ ದುಷ್ಟಬುದ್ಧಿಎಂಬ ಶೇಷಾಮಾತ್ಯನತ್ಯಂತ ಹರ್ಷಪರವಶನಾಗಿ ಸಹಸ್ರಾಯುವಂ ತೆಗದಪ್ಪಿ ತದಂಗಸ್ಪರ್ಶಸುಖಪಾರವಶ್ಯದಿಂದಾನಂದಾಬ್ಧಿಯೊಳ್ಮುಳುಗಿ ವತ್ಸ! ನಿನ್ನ ಪೋಲ್ವ ಪುರುಷರೀಭುವನದೊಳುಂಟೆ! ನಾನು ಮಾಡಿದ ಸುಕೃತದಿಂದೊರೆದೆ ನೀನೆಂದು ಬಹುಪ್ರಕಾರದಿಂದ ಶ್ಲಾಘನೆಮಾಡಿ ಸಮಸ್ತ ವೈಭವದಿಂದ ಪುರಕ್ಕೆ ಕರದುಕೊಂಡುಬಂದು ದಿವ್ಯಾಲಯಮಂ ಬಿಡದಿಯಂಮಾಡಿ ಸಹಸ್ರಾಯುವನ್ನಿರಿಸಿ, ರತ್ನಮಂ ತನ್ನ ಕರದೊಳಾಂತು ದುಷ್ಟಬುದ್ಧಿಯು ತನ್ನಾಲಯಕೆ ಬಂದು ಪತ್ನೀಪುತ್ರಿಯರಿಂಗೆ ರಾಕ್ಷಸಾಪಹೃತದಿವ್ಯರತ್ನಮಂ ತೋರಲು, ಅವರೀರ್ವರದಂನೋಡಿ ಪರಮವಿಸ್ಮಯಮಂನೈದಲು, ದುಷ್ಟಬುದ್ಧಿಯು ರಾಜಕುಮಾರನ ವಯೋರೂಪಲಾವಣ್ಯ ಪರಾಕ್ರಮಾದಿಗಳನ್ನು ವರ್ಣಿಸಲು, ಆ ಮದಾಲಸೆಯು ಪರಮಸಂತೋಷಪದಿ ಯುಕ್ತಳಾದ ಭಾವನಂ ಜನನೀಜನಕರು ನೋಡಿ ದುಷ್ಟಬುದ್ಧಿಯು ಮಗಳಂ ಕುರಿತು ವತ್ಸೇ! ನಿನ್ನಪುಣ್ಯಕ್ಕೆಣೆಗಾಣೆ! ಸ್ವಸಮಾನ ಪತಿಯಂ ಪಡೆವ ಕಾರಣವೊಂದು ಪೇಳಿ ನಾಳೆಯುದಯದಿ ಲಗ್ನಮದರಿಂದ ಮಂಗಳಸ್ನಾನವಮಾಡಿ ಪ್ರಶಸ್ತಳಾಗಿರುವುದೆಂದಪ್ಪಣೆಯಿತ್ತು ತಾನು ಸಭಾಸ್ಥಾನಮು

ನ್ನೈದಿ ಸಮಸ್ತರಿಂದೊಡಗೂಡಿ ಲಗ್ನವಂ ನಿಶ್ಚೈಸಿ, ಸುಮುಹೂರ್ತದೊಳು ರತ್ನಸಹಿತವಾಗಿ ಮದಾಲಸೆಯಂ ಸಹಸ್ರಾಯುವಿಂಗಿತ್ತು ವಿವಾಹವಂಮಾಡಿ ಪರಮೋತ್ಸವದಿಂದಲಾದುಷ್ಟಬುದ್ಧಿ ಎಂಬ ಕಾಕೋದರಾಧಿಪತಿಯು ಸಮಸ್ತ ಪ್ರಾಣಿಗಳನ್ನು ದಿವ್ಯಾನ್ನ ವಸ್ತ್ರಾಭರಣ ರತ್ನಗಳಿಂದ ಸತ್ಕರಿಸಿ, ಚಂದ್ರನಿಂದ ಯುಕ್ತಳಾದ ರೋಹಿಣಿಯಂತೆ ಸಹಸ್ರಾಯುವಿನರ್ಧಾಂಗಿಯಾದ ನಿಜಪುತ್ರಿಯಂ ಕಂಡು ಪರಮಸಮ್ಮೋದಮನ್ನಾಂತು, ಅನೇಕ ರತ್ನಾಭರಣಗಳನಪರಿಮಿತವಾಗಿತ್ತು ದೂತೀಸಹಸ್ರಮನ್ನಿತ್ತು ಕೃತಕೃತ್ಯನಾಗಲು;

ಸಹಸ್ರಾಯುವಾಮದಾಲಸಾಪಾಣಿಗ್ರಹಣಮಂ ಮಾಡಿ, ತಲ್ಲೋಕಸ್ಥಿತಸಮಸ್ತ ಪ್ರಾಣಿಗಳಂ ಯಥಾಭಿಲಷಿತ ದಿವ್ಯಾನ್ನಾಭರಣಗಳಿಂದ ಸಂತೋಷಯುಕ್ತರಂಮಾಡಿ, ಸರ್ವರಿಂದಲೂ ಸ್ತೂಯಮಾನನಾಗುತಪ್ಪಣೆಗೊಂಡು ಪ್ರಯಾಣೋದ್ಯುಕ್ತನಾಗಲು, ಆ ದುಷ್ಟಬುದ್ಧಿ ಎಂಬ ನಾಗಾಧಿಪನು ಪ್ರಿಯಪುತ್ರಿಯಾದ ಮದಾಲಸಾವಿಯೋಗಮಂಸಹಿಸಲಾರದೆ ಸ್ವಲೋಕದಲ್ಲಿರುವ ಪರಮೋತ್ಕೃಷ್ಟಪದಾರ್ಥಗಳಂ ಸಹಸ್ರಾಯುವಿಗಿತ್ತು ದಂಪತಿಗಳನ್ನೋಡಿ, ದಣಿಯದತ್ಯುತ್ಸಾಹದಿಂದಲಪ್ಪಣೆಯನೀಯಲು; ಸಹಸ್ರಾಯುವನೇಕಸಖೀಜನರಿಂದ ಪಾತ್ಸಂಪದದಿಂದ ಯುಕ್ತಳಾದ ಪತ್ನಿಯಿಂದೊಡಗೂಡಿ ವಿಮಾನಾರೂಢನಾಗಿ, ಅಲ್ಲಿಂದ ಪೊರಮಟ್ಟು ರವಿಯಸ್ತಮಯವಾಗುವನಿತರೊಳು, ನೇತ್ರಾವತೀತೀರಮಂನೈದಿ ಬರುತಿರಲು; ಅಂತರಿಕ್ಷದೊಳು ತಾರಾಪತಿಯಂತೆ ಬರುತಿರುವ ದಿವ್ಯವಿಮಾನವಂ ಕಂಡು, ವೃಷಧ್ವಜನೇ ಮೊದಲಾದ ಸಮಸ್ತ ಜನರು ಮಹಾನುಭಾವನಾದ ಸಹಸ್ರಾಯುವೈತಂದನೆಂದು ಪರಮಾಹ್ಲಾದಯುಕ್ತರಾಗಿ ನೋಡುತ್ತಿರಲು; ಸಹೋದರಾಮಾತ್ಯಸೇನಾಪತಿಯೇ ಮೊದಲಾದ ಸಮಸ್ತ ಜನಸಮೂಹವಿದ್ದೆಡೆಯೊಳ್ವಿಮಾನಬಂದಿಳಿಯಲು, ವಿಮಾನದಿಂದಿಳಿದು ವೃಷಧ್ವಜನು ಬಂದು ವಂದನೆಯಮಾಡಲಾಲಿಂಗಿಸಿ, ಸರ್ವರನ್ನೂ ಕುಶಲಪ್ರಶ್ನೆಯಂಮಾಡಿ ಸಂತೋಷಪಡಿಸುತೆಲ್ಲರಿಂದೊಡಗೂಡಿ ನಗರಪ್ರವೇಶವಂಮಾಡಿ, ಶಾಂತಿಮಾಲಿನೀದೇವಿಯರ ಮನೆಯಂ

ಪ್ರೋಕ್ಷ್ಯ ಮತ್ತಂಗಿಯಿಂದ ಯುಕ್ತಳಾದ ಜನನಿಯಡಿದಾವರೆಗೆ ಪತ್ನಿಯಿಂದ
ಯುಕ್ತನಾಗಿ ವಂದನೆಯಂ ಮಾಡಲು, ನಾಗಕನ್ಯಾಯುಕ್ತನಾದ ಪುತ್ರ
ನಂ ನೋಡಿ ತೆಗೆದಪ್ಪಿ ಇರ್ವರಂ ತೊಡೆಯ ಮೇಲಿಟ್ಟು ಮುದ್ದಿಸಿ, ಪರ
ಮಾನಂದವಾರ್ಧಿಯೊಳು ಮುಳುಗಿರುವ ಜನನಿಯಪ್ಪಣೆಯಂಗೊಂಡು,
ಅಸಂಖ್ಯಾತದಾತಿಯರಿಂ ಸಮೇತಳಾದ ಪತ್ನಿಯಂ ಜನನಿಯಧೀನಮಂ
ಮಾಡಿ ಸ್ನಾನಮಂ ಮಾಡಿ ನಿತ್ಯನಿಯಮಾದಿಗಳನಾಚರಿಸಿ, ಧೇನುವಂ
ಪೂಜಿಸಿ ವಂದನೆಮಾಡಿ, ತರುವಾಯ ಸರ್ವರಿಂ ಜೊತೆಗೂಡಿ, ಆರೋಗಣೆ
ಯಂ ಮಾಡಿ ಸುಗಂಧಿನಿಯ ಅಂತಃಪುರವಂ ಪ್ರವೇಶಮಾಡಲು; ಸುಗಂಧಿ
ನಿಯು ಪತ್ಯಾಗಮನವಾರ್ತೆಯಂ ಕೇಳಿ, ಗೃಹಾಲಂಕಾರಾದಿಗಳಮಾಡಿ
ಕಾದಿದ್ದು ಪತಿಯು ಮನೆಗೈತರಲು ಇಂದುವಂ ಕಂಡ ಕುಮುದಿನಿಯಂತೆ
ನಲಮೇರಿ ಎದುರ್ಗೆ ಬಂದು ವಂದನೆಮಾಡಿ ಗಾಢತರಾನುರಾಗದಿಂದ ಆ
ಲಿಂಗನೆಯಂ ಮಾಡಿ ಪ್ರಿಯತಮನ ಕರವಿಡಿದು ಶಯನಾಲಯಕ್ಕೆ ಕರೆದೊಯ್ದು
ದಿವ್ಯ ಮಣಿಮಯ ಪರ್ಯಂಕದೊಳು ಕುಳ್ಳಿರಿಸಿ, ದಿವ್ಯ ಸ್ರಕ್ಚಂದನಾದಿ
ಗಳಿಂದಲಂಕರಿಸಿ, ಸಾಕ್ಷಾತ್ಕುಸುಮಶರನಂತೆ ನೇತ್ರಾನಂದಕರನಾದಪ್ರಿ
ಯತಮನನಪಾಂಗದಿಂ ನೋಡಿ, ಕಾತರದಿಂದ ಶಿರೀಷಸಮಾನಬಾಹುಗಳಿಂದ
ಗಾಢಾಲಿಂಗನಮಂ ಮಾಡಲು, ಆ ರಾಜಕುಮಾರನಾ ಕಾಂತೆಯಂ ಸಮ
ವಿಷಮ ರತಿಯಿಂದ ಶ್ರಾಂತಳಂ ಮಾಡಿ ತದ್ಬಾಹುಲತಾಶ್ರಯನಾಗಿ ಸುಖ
ಸುಷುಪ್ತಿಯನೈದಿ ಅರುಣೋದಯದೊಳೆದ್ದು ಸುತೀಕ್ಷ್ಣನ ಮುಖದಿಂ
ದ ವಿದಿತನಿಜವೃತ್ತಾಂತ ಪ್ರಮುದಿತಳಾಗಿರುವ ದೇವಿಯಡಿದಾವರೆಗೆ ವಂ
ದನೆಯಂ ಮಾಡಿ, ಧೇನುವಿಗೆ ವಂದಿಸಿ, ತದನಂತರದೊಳು ಮಜ್ಜನಾಲಯ
ಮನ್ನೈದಿ ಸ್ನಾನಮಂ ಮಾಡಿ, ದಿವ್ಯಾಂಬರಮಂ ನುಟ್ಟು ಸರ್ವಮಂಗಳಾ
ಚರಣಕಮಲಾರಾಧನೆಯಂ ಮಾಡಿ ಕಿರೀಟಕುಂಡಲಾದಿಗಳಿಂದ ಅಲಂಕೃತ
ನಾಗಿ ಸಭಾಸ್ಥಾನಮನ್ನೈದಿ ದಿವ್ಯಸಿಂಹಾಸನದಿ ಕುಳಿತು ಧರ್ಮಗುಪ್ತ
ನಪುತ್ರನಾದ ಜಯಂತನೆಂಬ ಮುಖ್ಯಾಮಾತ್ಯನಂ ಕರೆದು ನಾಳೆಯುದ
ಯದೊಳು ವೃಷಧ್ವಜನ ವಿವಾಹಾರ್ಥವಾಗಿ ಪ್ರಯಾಣಮಾಡಬೇಕಾದ
ರಿಂದ ಸರ್ವಸನ್ನಾಹದಿಂ ಸನ್ನದ್ಧರಾಗುವುದೆಂದು ಕಟ್ಟಳೆಯಂ ಮಾಡಿ ಸೇ

ನಾಪತಿಯುಂ ಕರೆಸಿ ಎರಡಕ್ಷೋಹಿಣೀ ಸೇನೆಯಿಂದ ವೃಷಕೇತನನ ವಿವಾಹಾರ್ಥವಾಗಿ ಪ್ರಯಾಣವಂ ಮಾಡಬೇಕಪ್ಪುದರಿಂದ ಕಾಶ್ಮೀರದೇಶದೊಳು ದೇವಸೇನರಾಯನ ನಗರವಂ ಕುರಿತು ನಾಳೆಯುದಯದೊಳು ತೆರಳಬೇಕದರಿಂ, ಸರ್ವಸೈನ್ಯದಿಂದ ಸನ್ನದ್ಧರಾಗಿರುವುದೆಂದು ಅಪ್ಪಣೆಯಿತ್ತು, ಕೋಶಾಧಿಪತಿಯುಂ ಕರೆದು ವಿವಾಹವಾಗುವದಕ್ಕೆ ಉಪಯುಕ್ತವಾದ ಧನಕನಕವಸ್ತ್ರಾಭರಣ ರತ್ನಾದಿಗಳಂ ಸಿದ್ಧವಮಾಡುವುದೆಂದು ಆಜ್ಞಾಪಿಸಿ, ಜನನಿಯುಡನೈತಂದು ನಾಳೆಯುದಯದೊಳು ವೃಷಧ್ವಜನ ವಿವಾಹಾರ್ಥವಾಗಿ ಹೊರಡಬೇಕೆಂದು ಬಿನ್ನಹಮಾಡಿ, ಪರಮ ಸಂತೋಷಯುಕ್ತಳಾದ ದೇವಿಯುಂ ಕುರಿತು ವೃಷಕೇತನನಿಗೆ ಮಂಗಳಮಜ್ಜನಾದಿಗಳಂ ಚಿಂದುಮಾಡುವುದೆಂದು ವಿಜ್ಞಾಪನೆಯಮಾಡಿ, ಆ ದಿನವೆಲ್ಲ ವಿವಾಹನಿಮಿತ್ತ ಪ್ರಯಾಣ ಸನ್ನಾಹವಂ ಮಾಡಿ, ರವಿಯಸ್ತಮಯವಾಗಲು ಸಾಯಾಹ್ನ ನಿಯಮಗಳನಾಚರಿಸಿ, ಹೇಮಮಾಲಿನಿಯು ಅಂತಃಪುರಪ್ರವೇಶವಂ ಮಾಡಿ ಆ ನಿಶಿಯೊಳಾಕೆಯಿಂದೊಡಗೂಡಿ, ಇನನುದಯವಾಗಲು ಜನನಿಯಬಳಿಗೈತಂದು ಮದಾಲಸಾ ಶಿರೋರತ್ನವುಂ ದೇವಿಯು ಕರದೊಳಿತ್ತು, ಮತ್ತಂಗಿಯಿಂದ ಯುಕ್ತಳಾದ ಜನನಿಯುಂ, ಮಿತ್ರವಿಂದಾಸಹಿತಳಾದ ಹೇಮಮಾಲಿನಿಯುಂ, ತಿರಸ್ಕರಣಿಯಿಂದ ಯುಕ್ತಳಾದ ಸುಗಂಧಿನಿಯುಂ, ಅನೇಕ ಸಖೀಜನರಿಂ ಸಹಿತವಾಗಿ ವೃಷಧ್ವಜನೊಡನೆ ಪ್ರಯಾಣವಂ ಮಾಡಿ, ಮದಾಲಸಾಸುಶೀಲೆಯರಿಂಗೆ ಪರಸ್ಪರ ಮನೋವಿಷಾದಮಂ ಸರಿಪು ತನ್ನಬಳಿಯೊಳಟ್ಟು, ಜಯಂತ ಕೋಶಸೇನಾಪತಿಗಳೇ ಮೊದಲಾದ ಸಮಸ್ತಪರಿವಾರವುಂ ನ್ನೆರಡಕ್ಷೋಹಿಣೀ ಸೈನ್ಯದಿಂದ ಸುಮುಹೂರ್ತದಲ್ಲಿ ಪ್ರಯಾಣವಂ ಮಾಡಿಸಿ ಕಳುಹಲಾ ವೃಷಧ್ವಜನು ಸಹಸ್ರಾಯುವಿನ ಸೌಜನ್ಯವುಂ ಕಾಂತಿಮಾಲಿನಿಯು ನಿರ್ವೈರವಂ, ಸಹಸ್ರಾಯುವಿನ ಪತ್ನಿಯರ ಸೌಹಾರ್ದವುಂ, ಕಲಾವತಿಯ ವೈಷಮ್ಯವುಂ, ಸುಶರ್ಮನ ಮರ್ಯಾದಾತಿಕ್ರಮಣವುಂ, ಸರ್ವಮಂಗಳಾಚರಣಾನುಗ್ರಹ ಪ್ರಭಾವವುಂ, ಮತಂಗಿಯ ಕ್ರಿಯಾಶುದ್ಧಿಯುಂ, ಧಾನ್ಯಮಾಲಿನಿಯ ಪಾತಿವ್ರತ್ಯವುಂ, ಕನಕಾಂಗಿಯ ಸಾಹಸವುಂ ನೋಡಿ ಕೇಳಿ ಕೇಳಿ ನೆನೆನೆನೆದು ತಲೆದೂಗಿ

ವಿಸ್ಮಯ ಹರ್ಷಖೇದಾಧ್ಭುತಕಲಿತಮಾನಸನಾಗಿ, ಸಹಸ್ರಾಯುವಿನಡಿಗೆ ರಗಿ, ಅಲ್ಲಿಂದ ತೆರಳಿ ಸಪ್ತದಶದಿನದೊಳಾಕಾಶ್ಮೀರದೇಶವಂ ಪೊಕ್ಕು ಬರುತಿರಲು; ದೇವಸೇನರಾಯನು ವೃಷಧ್ವಜನೈತರುವ ವಾರ್ತೆಯಂ ಕೇಳಿ ಜಗದ್ವಿಖ್ಯಾತನಾದ ಸಹಸ್ರಾಯುವಿನ ಕೀರ್ತಿಯಂಕೇಳಿದವನಾ ದುದರಿಂದ ನಿಜಪುತ್ರಿಯಾದ ಸುಶೀಲೆಯುಡೆಗೈತಂದು ರಾಜಕುಮಾರನಾಗ ಮನಮಸೆರೆಯಲು, ಸುಶೀಲೆಯುದಂಕೇಳಿ ಪರಮಾನಂದಭರಿತಳಾಗಿ ಕಾಳಿಯಾಲಾಪಮಂ ನೆನೆನೆನೆದು ಜನಕನಂಕುರಿತು ಕೃತಕಾರ್ಯನಾಗಿ ಬಂದಿರುವನದರಲ್ಲಿ ಸಂಶಯಮಿಲ್ಲ, ಅದರಿಂದ ವಿಷಾದಮಂ ತ್ಯಜಿಸಿ ಮುಂದಿನಕಾರ್ಯವಂ ಯೋಚಿಸುವುದೆಂದು ನುಡಿದ ಸುತೆಯ ವಾಕ್ಯ ಮಂಕೇಳಿ ಸಭಾಸ್ಥಾನಮನ್ನೈದಿ ವೃಷಧ್ವಜನಿಂಗೆ ಸರ್ವೋಪಚಾರಮಂ ಮಾಡುವಂತೆ ಪತ್ರಿಕಾಮುಖದಿಂದ ಆಜ್ಞಾಪಿಸಿ, ಪುರಾಲಂಕಾರ ಮೊದ ಲಾದ ವಿವಾಹಸನ್ನಾಹಮಂಮಾಡುತ್ತಿರಲು;

ವೃಷಧ್ವಜನು ನಗರದಸವಿಾಪಮನ್ನೈದಿ ಸೇನಾನಿವೇಶಮಂ ಮಾಡಿ, ಜಯಂತನಂ ಕರೆದು ನಗರಮಂಪೊಕ್ಕು ನೃಪನಭಿಪ್ರಾಯಮಂತಿ ಳಿದು ಬಾರೆಂದು ಕಳುಹಲು; ಜಯಂತನಂತಃಪುರಪ್ರವೇಶಮಂಮಾಡಿ, ದೇವಸೇನನಂಕಂಡು ರತ್ನಸಹಿತನಾಗಿ ವೃಷಧ್ವಜನೈತಂದಿರುವ ವಾ ರ್ತೆಯಂ ತಿಳುಹಲು; ಆ ದೇವಸೇನನತ್ಯಂತ ಮೋದದಿಂ ಜಯಂತನಿಗೆ ಬಹುವಿಧ ಸನ್ಮಾನಮಂಮಾಡಿ, ಸಮಸ್ತ ವೈಭವದಿಂದ ವೃಷಧ್ವಜನಿಂಗೆ ದುಗೊಂಡು ಪರಮ ಸಂಭ್ರಮದಿಂದ ವೃಷಕೇತನನಂ ಪುರಪ್ರವೇಶಮಂ ಮಾಡಿಸಿ, ದಿವ್ಯಸಭಾಸ್ಥಾನಮನ್ನೈದಿ ರತ್ನಖಚಿತ ಸಿಂಹಾಸನದಿ ಕುಳ್ಳಿ ರಿಸಿ ಸರ್ವೋಪಚಾರಮಂಮಾಡಿ ಕುಶಲಪ್ರಶ್ನೆಯಂಗೈದು ಪರಮೋ ತ್ಸವದಿಂದ ಬಿಡದಿಗೆ ತಂದುಬಿಟ್ಟು, ಮುಖ್ಯಾಮಾತ್ಯರಂ ವಿಚಾರಿಸಿಕೊಂ ಬುವದಕ್ಕೆ ನಿಯಮಿಸಿ. ತನ್ನರಮನೆಯಂನೈದುವದಕುದ್ಯುಕ್ತನಾಗಲು; ವೃಷಧ್ವಜನು ಮದಾಲಸಾಶಿರೋರತ್ನಮಂ ಕರದೊಳೇಯಲು, ಸಾಕ್ಷಾ ದ್ಬಾಲಸೂರ್ಯನಂತಿರುವ ಆಮೋಘರತ್ನಮನ್ನೀಡಿ, ದೇವಸೇನ ಮೊದ ಲಾದ ಸಮಸ್ತ ಸಭಾಸ್ಥಿತಜನರು ಮಣಿಕಿರಣ ಪ್ರಭಾಜಾಲದಿಂ ಪ್ರತಿಹ

ತೇಕ್ಷಣರಾಗಿ ವಿಸ್ಮಯದಿಂದ ಸಮಸ್ತರೂ ಶ್ಲಾಘನೆಯಂ ಮಾಡುತ್ತಿರಲು; ದೇವಸೇನನು ಪರಮಾಶ್ಚರ್ಯಯುಕ್ತನಾಗಿ, ತನ್ನರಮನೆಗೆ ಬಂದು ತನಯಳಂತಃಪುರಪ್ರವೇಶಮಂ ಮಾಡಿ ಆ ದಿವ್ಯ ರತ್ನಮಂ ತೆಗೆದು ಸುಶೀಲೆಯ ಕರದೊಳಿಡಲು; ಆ ಸುಶೀಲೆಯೂ ಅನರ್ಘ್ಯರತ್ನಮನ್ನಿದ್ದೆರಡು ಕರದೊಳ್ಕೊಂಡು ಆ ಕನ್ಯೆಯು ಅಪೇಕ್ಷಿತ ರತ್ನಪ್ರಾಪ್ತಿಯಿಂದಲೂ, ಸ್ವಕೃತಪ್ರತಿಜ್ಞಾಸಾಫಲ್ಯದಿಂದಲೂ, ಏತನ್ಮೂಲಕವಾಗಿ ಮಹಾಪುರುಷ ಸಂಗಸಂಗದೊರೆದುದರಿಂದಲೂ, ಪರಮಾನಂದವಾರಿಧಿಯಲ್ಲಿ ಮುಳುಗಿ ಪರವಶಳಾಗಲು; ಮಹೀಪತಿಯು ದೈವಜ್ಞರಿಂದ ನಿಶ್ಚಿತವಾದ ಸುಲಗ್ನದಲ್ಲಿ ತನುಜಾತೆಯುಂ ವೃಷಧ್ವಜನಿಂಗಿತ್ತು ಮಹೋತ್ಸವದಿಂದ ವಿವಾಹಮಂ ಮಾಡಿ, ತನಯಳಿಗೆ ಅಪರಿಮಿತ ಪಾರಿಬರ್ಹಮನ್ನಿತ್ತು, ತನಯಾವಿಯೋಗಕಾತರಳಾಂತಃಕರಣನಾಗಿ ಬಹು ಪ್ರಯಾಸದಿಂದಪ್ಪಣೆಯಿತ್ತು ಕಳುಹಲು; ಆ ವೃಷಧ್ವಜನು ಪತ್ನೀಸಹಿತನಾಗಿ ಪ್ರಯಾಣಮಂ ಮಾಡಿ, ಮೆಲ್ಲ ಮೆಲ್ಲನೆ ನೇತ್ರಾವತೀ ತೀರಕ್ಕೈತಂದಿರುತ್ತಿದ್ದನು.

ಇತ್ತಲಾ ಸಹಸ್ರಾಯುವು ವೃಷಧ್ವಜನಂ ವಿವಾಹಾರ್ಥವಾಗಿ ಕಳುಹಿದನಂತರದಲ್ಲಿ ಮನದೊಳಾಲೋಚನೆಯಂ ಮಾಡಿ, ಜನಕನಾದ ಸುಕರ್ಮರಾಯನು ಕಲಾವತಿಯ ದುರ್ಬೋಧನೆಯಿಂದ ಸ್ವವಿಷಯವಾಗಿ, ಅನ್ಯಥಾಬುದ್ಧಿಯಂ ಮಾಡಿ ಪೊರಟುಪೋಗಿರುವನು. ಅದರಿಂದಲಾತನ ಮನೋವಿಷಾದಮಂ ಪರಿಹರಿಸಬೇಕೆಂದು ತಾತನ ಪ್ರಸಾದಮಂ ಸಂಪಾದಿಸದೆ ಪೋದಡೆ, ತನ್ನಿಂದುಪಾರ್ಜಿತವಾದ ಕೀರ್ತಿ ಎಂಬ ಕಲಾನಿಧಿಗೆ ಕಳಂಕು ತಗಲದಿರದದರಿಂದ, ವೋರೆಡಾ? ವೇಗದಿಂ ತಾತನಮನೋವಿಷಾದಮಂ ಪರಿಹರಿಸಬೇಕೆಂದು ನಿಶ್ಚಯಮಂ ಮಾಡಿ, ನಿಖಿಲ ಮಹೀಶರಿಂಗೆ ಸಪ್ತಸ್ರವೈಭವದಿಂದ ಬರುವುದೆಂದು ಲೇಖನಗಳಂ ಬರೆಯಿಸಿ, ದೂತರಂ ದೇಶದೇಶಕ್ಕೆ ಕಳುಹಲು; ಸಮಸ್ತ ದೇಶಾಧಿಪತಿಗಳು ಸಹಸ್ರಾಯುವಿನಾಜ್ಞೆಯಂ ಶಿರಸಾವಹಿಸಿ, ತಮ್ಮ ತಮ್ಮ ವೈಭವದಿಂದ ಯುಕ್ತರಾಗಿ, ಕಾಣಿಕೆಪ್ಪಗಳಂ ತೆಗದುಕೊಂಡು ನೇತ್ರಾವತೀ ತೀರಕ್ಕೈತಂದು ಸಾಕ್ಷಾನ್ನಾಕದಂತಿರುವ ನಗರಮಂ ಪೊಕ್ಕು ಸಹಸ್ರಾಯುವಿನ ಸಭಿದಾಪತ್ರಿಯಂ ಕಂಡು

ತಂದ ಕಾಣಿಕೆ ಕಪ್ಪಗಳನರ್ಪಿಸಿ, ಸ್ವಾಜಗಭಾವುನಾದ ಸಹಸ್ರಾಯುವಿನಿಂದ ಸನ್ಮಾನಿತರಾಗಿ ತಮ್ಮ ತಮ್ಮ ಬಿಡಾರದೊಳು ಸುಖದಿಂದಿರುತ್ತಿರಲು; ಸಹಸ್ರಾಯುವು ವೃಷಧ್ವಜನ ಪತ್ನೀಸಹಿತನಾಗಿ ಬರುವ ವಾರ್ತೆಯಂ ಕೇಳಿ ಪುರಾಲಂಕಾರವಂ ಮಾಡಿಸಿ ಸಮಸ್ತ ನರಪತಿಗಳಿಂದ ಯುಕ್ತನಾಗಿ ಪರಮ ವೈಭವದಿಂದ ಸಹೋದರನೆದುರ್ಗೆ ಪೋಗಿ ಕರತಂದ ವೈಭವಮಂ ವರ್ಣಿಸಲು ಶೇಷನಿಂಗಳವೆ? ಕೇಳರಸ! ಇಂತು ಸುಶೀಲಾಯುಕ್ತನಾದ ಸಹೋದರನಿಂದ ಸಮೇತನಾಗಿ ಬಂದು ಮಾಸ ಪರ್ಯಂತರ ಸುಖದಿಂದಿದ್ದು ಪತಿವಿಯೋಗದಿಂದ ವಿಮನಸ್ಕಳಾಗಿರುವ ಜನನಿಯಭಿಪ್ರಾಯಮಂ ಮಾತಂಗಿಯಿಂ ತಿಳಿದು ಪ್ರಯಾಣಸನ್ನಾಹವಂ ಮಾಡುತ್ತಿರಲು;

ಇತ್ತಲಾ ಮಾಹಿಷ್ಮತೀ ನಗರಿಯೊಳು ಸುಶರ್ಮರಾಯನು ಪರಮ ಪಾಪಿಯಾದ ಕಲಾವತಿಯ ದೆಸೆಯಿಂದ ಲೋಕಾತಿಶಯನಾದ ಪುತ್ರನಂ ತ್ಯಜಿಸಿ ನಗರಿಯನ್ನೈದಿದಾರಭ್ಯ ಪರಮ ಚಿಂತಾಯುಕ್ತನಾಗಿ, ಮಹಾನುಭಾವನಾದ ಪುತ್ರನಂ ತ್ಯಜಿಸಿ ಬಂದುದರಿಂದ ಸಮಸ್ತಪ್ರಜೆಗಳೂ ಧರ್ಮಗುಪ್ತನೇ ಮೊದಲಾದ ನಿಖಿಲಾಧಿಕಾರಿಗಳು ವಿರಕ್ತರಾಗಿರುವ ಭಾವಮಂ ತಿಳಿದು, ಪರಮದುಃಖಿತನಾಗಿ ಸಹಸ್ರಾಯುವಿನ ಪ್ರಭಾವವಂ ನೆನೆನೆನೆದು ಸಂತಾಪದಿಂದಿರಲು; ಜಯಂತ ಸೇನಾಪತಿಗಳೇ ಮೊದಲಾದವರು ಪ್ರತಿಕ್ಷಣದಲ್ಲಿ ನಡೆದ ವೃತ್ತಾಂತವಂ ಬರೆದು ಕಳುಹುತ್ತಿರಲು; ತಾನು ರಾತ್ರೀಕಾಲದೊಳು ಪೊರಟು ಬಂದನಂತರದಲ್ಲಿ ಸಹೋದರನ ಪ್ರತಿಜ್ಞಾಪೂರ್ತಿಪೂರ್ವಕವಾಗಿ ವಿವಾಹವಂ ಮಾಡಲೋಸುಗ ಅಮಾನುಷಸಾಧ್ಯವಾದ ಪಾತಾಳವಂ ಪೊಕ್ಕು ಸಮಸ್ತ ನಾಗಾಧಿಪತಿಗಳಿಂದ ಸನ್ಮಾನಿತನಾಗಿ ಅಲ್ಲಿಂದ ಶತಶೃಂಗಪರ್ವತಮನೈದಿ ಸಮಸ್ತ ಲೋಕಗಳ ಜಯಿಸಿ ಭಾರತೀಕಾಂತ ಪ್ರಸಾದಾಸಾದಿತ ವರದಿಂದತ್ಯಂತ ದೃಪ್ತನಾಗಿರುವ ದುರ್ಮುಖಾಸುರನೊಡನೆ ಸಪ್ತಾಹೋರಾತ್ರ ಯುದ್ಧವಂ ಮಾಡಿ ಸಂಹರಿಸಿ, ನಾಗಕನ್ಯಾಶಿರೋರತ್ನವಂ ಸಂಗ್ರಹಿಸಿ, ಮದಾಲಸಾಪಾಣಿಗ್ರಹಣವಂ ಮಾಡಿಕೊಂಡಾಕೆಯಿಂದೊಡಗೂಡಿ ನೇತ್ರಾವತಿಯ

ನ್ನೈದಿ ಸಹೋದರನಪ್ಪ ತ್ರಿಜ್ಞಾಪೂರ್ತಿಗೆ ಪ್ರವರ್ತಕನ ಶೀಲಾವಿವಾಹವಂ ಮಾಡದಪರ್ವನಾದ ಭ್ರಾತೃವ್ಯಾಪಾರವಂ ಕೇಳಿ ವಿಸ್ಮಿತನಾಗಿ ಅಹಹ! ಪತ್ನಿಯುಗೆಶೆಯಿಂದೀ ಅನರ್ಥ ತನಗಾದುದಿನ್ನೇಗೈವೆ? ಪುತ್ರಯುಗ್ಮವಂ ಮಹಾನುಭಾವಳಾದಕಾಂತಿಮಾಲಿನಿಯುಂ ಅಗಲಿತಾನೆಂತಿರುವೆನೆಂದು ಚಿಂತಾಬ್ಧಿಯೊಳ್ಮುಳುಗಿ, ಧರ್ಮಗುಪ್ತನೊಡನೆ ತನ್ನ ಮನದಳಲನೊರೆಯೆ ಲಜ್ಜಿತನಾಗಿ ಕ್ಷಣಂ ಒಂದುಯುಗವಾಗಿ ದಿನಗಳೆಯುತ್ತಿರಲು;

ಇತ್ತಲಾಸಹಸ್ರಾಯುವು ಒಂದು ಅಕ್ಷೋಹಿಣೀ ಸೈನ್ಯದ್ವಿಜಯಂ ತನ್ನಲ್ಲಿರಿಸಿ ಮಿಗಿಲಾದ ಸಮಸ್ತರಿಂದೊಡಗೂಡಿ ಮಾಹಿಷ್ಮತೀನಗರಿಯಂ ಕುರಿತು ತಾತನಡಿದಾವರೆಯ ಕಾಣಲ್ಕೆ ತರುತಿರಲು; ಸೇನಾಭಾರವಂ ಸಹನಮಾಡಲಾರದೆ ಧರಣಿಯಲ್ಲಾಡುತ್ತಿರೆ; ಒಂದು ಮಾಸಕ್ಕೆ ಕೋಸಲದೇಶಮನ್ನೈದಿ ಅತಿರಮಣೀಯಪ್ರದೇಶಮನ್ನೋಡಿ, ಸೇನಾಪತಿಯಂ ಕರೆದು ಇಲ್ಲಿ ಸೇನೆಯನ್ನಿಳಿಸುವುದೆಂದು ಆಜ್ಞಾಪಿಸಲು; ಸಾರ್ಧದ್ವಾದಶಯೋಜನ ವಿಶಾಲವಾಗಿ ಸೇನಾನಿವೇಶಮಾಗಲು, ಸಮಸ್ತನಾಕಿಗಳು ಸಹಸ್ರಾಯುವಿನ ಮಹಾಪ್ರಭಾವಮಂನೋಡಿ ವಿಸ್ಮಿತರಾಗಿ ಕೊಂಡಾಡುತಿರಲು, ಮಾನುಷರಪಾಡೇನು ? ಸಾವಧಾನದೊಳವಧರಿಸು ಮಹಾರಾಜ! ಮುಂದಿನಾಖ್ಯಾನವಂ:- ತರುವಾಯ ಆಸಹಸ್ರಾಯುವು ವಿಮನಸ್ಕನಾಗಿರುವ ಜನಕನ ರಾಷ್ಟ್ರಮಂ ತನ್ನಾಜ್ಞೆಯಿಂದಲ್ಲದೆ ಪ್ರವೇಶಮಂ ಮಾಡಬಾರದೆಂದಾಲೋಚನೆಯಂ ಮಾಡಿ, ವಿನ್ನಹಪತ್ರಿಕೆಯಂ ಬರೆದು ಸುತೀಕ್ಷ್ಣನ ಕರದೊಳಿತ್ತು ತಾತನೆಡೆಗೈದಿ ಪತ್ರಿಕೆಯನರ್ಪಿಸಿ, ತಾನು ಬಂದಿರುವ ವಾರ್ತೆಯಂ ಪೇಳಿ ಏನಪ್ಪಣೆಗೊಡುವನೋ ತಿಳಿದು ಬಾರೆಂದೆನಲು: ಸುತೀಕ್ಷ್ಣನತ್ಯಂತ ಸಂತೋಷದಿಂ ದಿವ್ಯ ರಥಮನ್ನೇರಿ ನಡೆದು ರವಿಯಸ್ತಮಯಕಾಲದೊಳು ಮಾಹಿಷ್ಮತೀ ನಗರಮಂ ಪ್ರೊಕ್ಕು ರಾಜಮಂದಿರದ್ವಾರಮನ್ನೈದಿ ಸ್ಯಂದನದಿಂದಿಳಿದು ದಿವ್ಯ ಸಭಾಮಧ್ಯದೊಳು ರತ್ನಸಿಂಹಾಸನದಿ ರಾಹುಗ್ರಸ್ತನಾದ ತಾರಾಪತಿಯಂತೆ ಪರಮಚಿಂತಾಕಬಳಿತ ರಾಜತೇಜಸ್ಕನಾಗಿ ದುಗುಡದಿಂ ಕುಳ್ಳಿರುವ ಸುಶರ್ಮ ಮಹಾರಾಯನಂ ಕಂಡು ತತ್ಸಮೀಪಮನ್ನೈದಿ ವಂದನೆಮಾಡಲು,

ಸುಶರ್ಮ ಮಹಾರಾಯನು ಪುತ್ರನ ವಯಸ್ಯನೆಂದರಿದು ಸತ್ವರದೊಳೆದ್ದು ಆಲಿಂಗನೆಯಂಮಾಡಿ ದಿವ್ಯಾಸನದಿ ಕುಳ್ಳಿರಿಸಿ, ಕುಶಲಪ್ರಶ್ನೆಯಂ ಮಾಡಲು; ಸುತೀಕ್ಷ್ಣನಾಸನದಿಂದೆದ್ದು ಸಹಸ್ರಾಯುವಿನ ವಿಜ್ಞಾಪನಾಪತ್ರಿಕೆಯನೀಯಲು, ಸುಶರ್ಮನಾ ಪತ್ರಿಕೆಯನ್ನು ಸಾಕ್ಷಾತ್ಪುತ್ರನೇ ಪ್ರಾಪ್ತನಾದಂತೆ ತನ್ನ ಕರದೊಳಾಂತನೇ ವಾಚಿಸಿ ಮನದಿ ತನುಜಾತನಭಿಪ್ರಾಯವಂ ತಿಳಿದು ಒಂದು ಮುಹೂರ್ತ ಮನದೊಳಾಲೋಚನೆಯಮಾಡಿ ಸಭಾಸ್ಥಾನದಿಂದೆದ್ದು ಸುತೀಕ್ಷ್ಣನ ಕರವಂ ಪಿಡಿದು ಅಂತಃಪುರಪ್ರವೇಶಮಂಮಾಡಿ ಆರೋಗಣೆಗೈಸಿ ಕುಮುದಿನೀಪತಿಯುದಯಿಸಲು ದಿವ್ಯಾಶ್ಚರ್ಯಯುಕ್ತವಾದ ನಿಜಸ್ಯಂದನಮನಲಂಕರಿಸಿ ತರುವಂತೆ ಸೂತನಂಕರೆದು ರಹಸ್ಯವಾಗಿ ಪೇಳಲು, ಸೂತನು ಸತ್ವರದಿ ರಥಮನ್ನಲಂಕರಿಸಿ ತಂದು ಬಿನ್ನಹಮಾಡಲು; ಮಹೀಶನು ಸುತೀಕ್ಷ್ಣನಿಂಸಹಿತನಾಗಿ ರಥಾರೋಹಣವಂಮಾಡಿ ಸೂತನಿಂಗೆ ಗಮ್ಯಸ್ಥಾನವಂ ಸೂಚನೆಮಾಡಲು, ಸೂತನಾಅಶ್ವಗಳತುರಬಲುನಡೆದವತಿಜವದಿಂದ ಮಾರುತನು ನಗುವಂತೆ ನಗರಮನ್ನುಳಿದು ನಡೆಯುತ್ತಿರಲು; ತಾನು ಬಂದಾರಭ್ಯದಿಂದ ನಡೆದ ವೃತ್ತಾಂತಗಳನ್ನು ಸುತೀಕ್ಷ್ಣನ ಮುಖವಚನದಿಂದ ವಿಸ್ತಾರವಾಗಿ ಕೇಳಿ ವಿಸ್ಮಿತನಾಗಿ ತನ್ನ ಪುಣ್ಯಕ್ಕೆಣೆಯಿಲ್ಲವೆಂದು ಪರಮಸಮ್ಮೋದಮನಾಂತು ಬರುತಿರಲು, ಸೂರ್ಯನುದಯಾಚಲವನ್ನೇರಿದನು ತಾಳ ತನುಜಾತರ ಸಮಾಗಮವನೊಡಲನುರಾಗದಿಂದ, ಅನಿತರೊಳು ದಿವ್ಯಾಶ್ವಗಳು ಬಹು ದೀರ್ಘಮಾರ್ಗವಂ ಕಳೆದು ಸಹಸ್ರಾಯುವಿನ ಬಿಡಾರದ ಸಮೀಪವಮನೈದೆ? ಸುಶರ್ಮರಾಯನು ವರುಣಾಲಯದಂತೆ ಅಪಾರವಾಗಿರುವ ಸೇನೆಯಂನೋಡಿ ತ್ರಸ್ತಹೃದಯನಾಗಿ ಧರಣಿ ಈದುದೋ ಸೈನ್ಯಮಂ ಅಹಹ! ವಿಸ್ಮಯಮಿದೆಲ್ಲಿಯಚಮೂನಿವಹವೋ? ಶಿವಶಿವಾ! ಎಂದು ಪರಮಾಶ್ಚರ್ಯಯುಕ್ತನಾಗಿ ಸುತೀಕ್ಷ್ಣನಂ ಕುರಿತು—ವತ್ಸ! ಧರಣಿಯಗಲದೊಳಳದಿರುವಸೈನ್ಯಮಿದಾವರಾಯನದು? ಪುತ್ರನಿರುವ ಪ್ರದೇಶಮಿನ್ನೆಂತು ದೂರದೊಳಹುದು ಪೇಳೆನಲು, ಸತ್ಯವ್ರತಾತ್ಮಜನು ನಸುನಗುತ ಜೀಯ! ಕೇಳವಧರಿಸು, ನಿನ್ನಡಿಯ ದರುಶನಕೆ ಬಂದಿರುವ

ಭವದಾತ್ಮಜನ ಚತುರಂಗವಿಳಿದಿರುವುದೆಂದು ವಿಜ್ಞಾಪನೆಯಂ ಮಾಡಲು; ಸುಶರ್ಮನು ಪುತ್ರಸಭ್ಯುದಯಮಂನೋಡಿ ಪರಮಾನಂದದಿಂ ಮೈಯುಬ್ಬಿ ಸುತೀಕ್ಷ್ಣನಂಕುರಿತು ವತ್ಸ! ವಾಹಿನೀಪತಿಯಂತಿರುವ ಈ ವಾಹಿನಿಯೊಳಿರುವ ನರಪತಿಗಳ ನಿವಾಸಮಂತೋರೆನಲು; ಸತ್ಯವ್ರತಾತ್ಮಜನು ಜೀಯಾ! ವಿಭವಾರ್ಥವಾಗಿ ಪರಿಮಿತಸೇನೆಯಿಂ ಬಂದಿರುವ ಮಂಡಲಾಧಿಪರ ಬಿಡಾರಮಂನೋಡು, ದಕ್ಷಿಣದಲ್ಲಿ ತ್ರಿಂಶತ್ಸಹಸ್ರಗಜಘಟಾಸಮೂಹದೊಳು ಜಾಂಬೂನದ ಕಲಶಪರಿಶೋಭಿತನೀಲವರ್ಣವಿಶಾಲ ಗೂಡಾರದಲ್ಲಿಳಿದಿರುವ ಸೌರಾಷ್ಟ್ರದೇಶಾಧಿಪತಿಯಾದ ಹೇಮಾಂಗದನ ಕರಿಕೇತನವನೀಕ್ಷಿಸುವುದು, ಎಲೈ ರಾಯ! ಮತ್ತಾವಗೆದಕ್ಷಿಣದಲ್ಲಿ ಅಶೀತಿ ಸಹಸ್ರತುರಗ ಸೇನಾಮಧ್ಯದೊಳು ಮೆರೆವ ಮಹಾರಾಷ್ಟ್ರ ದೇಶಾಧಿಪತಿಯಾದ ಕನಕಾಂಗದನ ಹಾಟಕಮಯಕಲಶದಿಂ ಶೋಭಿಸುವ ಸಂಧ್ಯಾರಾಗದಂತಿರುವ ಪಟಾಲಯ ಸಮೀಪದೊಳು ನಿಂದಿರುವ ದೀರ್ಘತಾಳಧ್ವಜನನವಲೋಕಿಸು. ಮೇಣಾತನ ಪುರೋಭಾಗದಲ್ಲಿಳಿದಿರುವ ಪಂಚಾಶತ್ಸಹಸ್ರಸ್ಯಂದನ ಸಮೂಹದೊಳು ಯಾವನಾಧಿಪತಿಯಾದ ಬರ್ಬರನ ಕನಕ ಕಲಶದಿಂ ರಾಜಿಸುವ ಶಕಟಕೇತನವ ಧರಿಸು. ತದ್ವಾಮಪಾರ್ಶ್ವದೊಳು ಲಕ್ಷಪದಾತಿಯೊಡನಿಳಿದಿರುವ ಮಾಗಧನ ಹುತಭುಕ್ಕೈಖಾಸಮಾನತಪ್ತಸೌವರ್ಣಮಲ್ಲಿಕಾಕ್ಷಕೇತನದಿ ದೃಷ್ಟಿಯನ್ನಿರಿಸಿ ಆರ್ಯ ನೋಡು, ಇಂತು ಈ ಪಾರ್ಶ್ವದೊಳಗಿಳಿದಿರುವ ಮತ್ಸ್ಯ, ಘೂರ್ಜರ, ಕಳಿಂಗ, ಮಾಳವ, ನೇಪಾಳ, ವಿಷಯಾಧಿಪತಿಗಳ ವಿಚಿತ್ರವೈಭವಮಂನಪಾಂಗದಿಂದೀಕ್ಷಿಸುವುದು. ಎಲೆ ತಾತ! ಇತ್ತ ಕೌಬೇರದಿಕ್ಕಿನೊಳು ನೆಲಸಿರುವ ದೇಶಾಧಿಪರ ನವಧರಿಸು. ವಿಂಶತ್ಸಹಸ್ರರಥಗಳಿಂದಿಪ್ಪತ್ತೈದು ಸಾವಿರ ಸೈಂಧವಗಳಿಂ, ಈರೈದುಸಾವಿರ ಕರಿಗಳಿಂ, ತ್ರಿಂಶತ್ಸಹಸ್ರಪದಾತಿಯಿಂದಿಳಿದಿರುವ ಕುಂತಳಾಧಿಪನ ಪಿಂಜರಪಟಾಗಾರದುಪಕಂಠದಲ್ಲಿರುವ ರಜತಮಯದಂಡದಿಂ ರಂಜಿಸುವ ಮಯೂರಾಕಾರಪತಾಕಮಂ ನೀಕ್ಷಿಸು, ಮಹಾರಾಜ! ತತ್ಪೂರ್ವಭಾಗದೊಳು ಚತುರಯುತ ಚತುರಂಗವೃತನಾಂತರಾಳದೊಳು ನೆಲಸಿರುವ ಕಾಂ

ಭೋಜರಾಜನ ವಿಚಿತ್ರಗುಡಾರವತಿ ರಮಣೀಯಕಾಕೋದರಧ್ವಜದಿ ರಾಜಿಸುವದು. ಆದಕೆ ಈಶಾನ್ಯದೊಳಗಪರಿಮಿತ ಸೈನ್ಯದಿಂದಿಳಿದಿರುವ ಪಾಂಡ್ಯನಂ, ಚೋಳ, ಮಳೆಯಾಳ, ಆಂಧ್ರದೇಶಾಧಿಪತಿಗಳತ್ಯಧಿಕ ಭಾಗ್ಯಮನೀಕ್ಷಿಸು, ಮಹೀಪಾಲ ! ಪಶ್ಚಿಮದೊಳಿಳಿದಿಹರನೇಕ ನರಪತಿಗಳ ವರಸಂಪದವ ವರ್ಣಿಸಲ್ಕಳವಲ್ಲ, ನಿಖಿಲ ನರಪತಿತಿಲಕ! ಪುರೋಭಾಗದೊಳು ವಿಶಾಲ ರಾಜಕಾಲಯನೇಕ ವೀರರಿಂ ಗುಪ್ತಮಾಗಿರುವುದತ್ಯುನ್ನತ ವೃಷಭಪತಾಕದಿಂ ರಂಜಿಸುವುದದುವೇ ವಿವೇಕಜನಶಿರೋರತ್ನನಾಗಿರುವ ವೃಷಧ್ವಜನ ನಿವಾಸಸ್ಥಾನ. ಈ ಸೇನಾಸಮುದ್ರಮಧ್ಯದೊಳು ಸಹಸ್ರಕ್ಷನಾಲಯದಂತೆ ಅನೇಕ ರತ್ನಮಯ ಕಲಶಸಾಹಸ್ರದಿಂ ರಾಜಿಸುವ ಜಾಂಬೂನದಾಂಬರ ಕೃತಾಗಾರವತಿ ವಿಶಾಲ ವಿಚಿತ್ರತರ ಕಕ್ಷ್ಯಪಙ್ಕ್ತಿಪರಿಶೋಭಿತಮಾಗಿ ವರ್ತುಳಾಕಾರದಿಂದುಬಿಂಬದಂತೆ ಪರಮಪ್ರಕಾಶಮಾಗಿರುವುದು; ಅಸಂಖ್ಯಾತಯೂಥಪತಿಗಳಿಂ ಪರೀಕ್ಷಿತಮಾಗಿರುವುದತ್ಯುನ್ನತ ತಪ್ತಹಾಟಕರಚಿತದಂಡದಿಂದುಜ್ವಲ ವಿಶಾಲಮಣಿಮಯ ವಿಚಿತ್ರಲೋಚನಾಸೇಚಕಮಾಗಿರುವ ಹರ್ಯಕ್ಷಕೇತನದಿಂದ ರಂಜಿಸುವುದದುವೇ ಮಹಾನುಭಾವನಾದ ಸಹಸ್ರಾಯುವಿನ ನಿಲಯವು. ಇದಕೆ ಚತುರ್ದಿಕ್ಕಿನೊಳು ದ್ವಾರಚತುಷ್ಟಯಮಿಹುದು. ಪ್ರತಿದ್ವಾರದೊಳು ದಶಸಹಸ್ರ ಶಸ್ತ್ರಪಾಣಿಗಳು ಕಾದಿಹರು, ಇದರಂತರಾಳದೊಳು ಮರಕತಾಮಲಕಲಶದಿಂದ ರಮಣೀಯ್ಯಮಾಗಿರುವುದೇ ಮದಾಲಸಾ ಎಂಬ ನಾಗಕನ್ಯೆಯ ವಿಹಾರಸ್ಥಾನ, ಇಂತು ರಾಜಾಗಾರವಸಂಖ್ಯಾತ ದಾಸೀದಾಸನಿಚಯದಿಂ ಸಾಂದ್ರಮಾಗಿರುವುದು, ಎಲೆ ಜೀಯ್ಯ! ನಿನ್ನಯ ಪುಣ್ಯಕ್ಕೆಣೆಯುಂಟೆ, ಇನಿತಲ್ಲದೀಕಟಕದೊಳು ವಿಶ್ವಕರ್ಮನನ್ನಣಕಿಸುವ ಶಿಲ್ಪಿಗಳಸಂಖ್ಯಾತವಾಗಿಹರು; ಧನದನಂಧಿಕ್ಕರಿಪ ತ್ರಿಲಕ್ಷಶ್ರೇಷಿಗಳು ಕೈಗಟ್ಟಿ ನಿಂದಿಹರು; ಪೇಳಲೆನಗಳವಲ್ಲವೆಂದು ವರ್ಣಿಸುತಿರಲು;

ಸುಶರ್ಮರಾಯನು ನೋಡಿ ಪರಮಾಶ್ಚರ್ಯದಿಂಸ್ತಬ್ಧನಾಗಿರಲು, ಅನಿತರೊಳು ಸೈನ್ಯಕ್ಕೆ ಅರ್ಧಯೋಜನದಲ್ಲಿ ಕಾದಿರುವ ರಾವುತರು ಮು

ಹಾರಾಜನಾಗಮನಮಂ ದೂರದೊಳು ಕಂಡು ಸಹಸ್ರಾಯುವಿನಡಿದಾವರೆಗೆ ಬಿನ್ನೈಸಬೇಕೆಂದು ಸತ್ವರದೊಳೀರ್ವೈವರಶ್ವಗಳಧಾವನೆಯ ಮಾಡುತ್ತೈತಂದು ದ್ವಾರಪಾಲಕರೊಡನೆ ಮಹಾರಾಜನಾಗಮನಮನ್ನುಸುರೆ? ಜವದಿಂದ ಕಂಚುಕಿಗಳೊಳಪ್ರೊಕ್ಕು ಹರ್ಯಕ್ಷಕೇತನನಡಿಗೆ ಬಿನ್ನಹಮಾಡಲು; ಸಹಸ್ರಾಯುವಾಶಬ್ದಶ್ರವಣಮಾತ್ರದಿಂ ಸಹಗರದೊಳೆದ್ದು ಸಂಭ್ರಮದಿಂದ ಪಾದಚಾರಿಯಾಗಿ ಸರ್ವರಂ ಬರಹೇಳೆನುತ ಸತ್ವರದೊಳಂತಃಪುರದಿಂ ತೆರಳಿಬರಲು; ಸುಪಾರ್ಶ್ವನೆಂಬ ಸೂತನತಿಜವದಿಂದ ರಥಮಂ ಅಲಂಕರಿಸಿ ಮಾರ್ಗಕ್ಕೆತರಲು; ಧಾನ್ಯಮಾಲಿನಿಯುರಸನಾರಥವನೇರಿ ನಡೆಯುತಿರೆ? ಸೇನೆಯೊಳು ತುಂಬಿದುದು ವಾರ್ತೆ; ವೃಷಕೇತನನೇ ಮೊದಲಾದ ನರಪತಿಗಳ್ೀರ್ವರಿಗೋರ್ವರೊರೆಯುವವಕ್ಕವಕಾಶವಿಲ್ಲದತಿಜವದಿಂದ ಬಂದೊದಗುವನಿತರೊಳು ಸುತೀಕ್ಷ್ಣನಿಂಜೊಡಗೂಡಿ ಬರುವ ಮಹೀಶನಾತ್ಮಜನಾಗಮನಮನ್ನಖಿಲ ನರಪತಿನಿಕರಬರುವ ಸಂದರ್ಭಮಂನೋಡಿ ಮನದೊಳುಕ್ಕುವ ಹರ್ಷದಿಂದ ಪರವಶನಾಗಿ ಮೆಲ್ಲಮೆಲ್ಲನೆ ಬರುತ್ತಿರಲು; ಸಹಸ್ರಾಯುವಾತನ ಸಮೀಪಮನ್ನೈದಿ ದಿವ್ಯ ರಥದಿಂದಿಳದು ಧರಣಿಯೊಳು ಪ್ರೊಡಮಟ್ಟು ಪಿತನ ರಥಮನ್ನೇರಿ ಜನಕನಡಿದಾವರೆಗೆ ವಂದನೆಯಮಾಡಲು, ಆ ಮಾಹಿಷ್ಮತೀಪತಿಯು ಪುತ್ರನಂತೆಗಪ್ಪಿ ತದಂಗಸ್ಪರ್ಶಜನಿತಾನಂದದಿಂ ಜಡೀಕೃತನಾಗಿ ವತ್ಸ! ದುರ್ಮುಖ ಶಿಲೀಮುಖದಿಂದ ನೊಂದುದೇ ನಿನ್ನ ಕೋಮಲಕಳೇಬರವೆಂದು ಮೈದಡವಿ ಕಂಬನಿಗರೆದು ಲಾಲಿಸುತ ಮುದ್ದಾಡಿ ಕಂದ! ನಿನ್ನಭ್ಯುದಯದಿಂದೆರಡು ಲೋಕಗಳ ಜಯಿಸಿದೆನು, ತನಿಗಾರು ಸರಿಯೆಂದು ನುಡಿವ ತಾತನಡಿದಾವರೆಗೆ ಮಣಿದು ತಲೆವಾಗಿ ಸಹಸ್ರಾಯುವು ತಾತ! ನಿನ್ನಡಿದಾವರೆಯ ಪುಣ್ಯಪ್ರಭಾವಮಿದು, ಎನುತ ನುಡಿಯಲು, ಅನಿತರೊಳು ವೃಷಧ್ವಜನೇ ಮೊದಲಾದ ನರಪತಿಗಳೈತರಲು, ಸುಶರ್ಮನು ರಥದಿಂದಿಳಿದು ನಿಜಪಾದಕಮಲದೊಳು ಮಣಿದು ವೃಷಕೇತನನ ಬಿಗಿದಪ್ಪಿ ವತ್ಸ! ದೈವಾನುಗ್ರಹದಿಂದ ಸಂಕಲ್ಪಿತಾಂಗನಾಗಿ ಹಿತನಾದ ನಿನ್ನನು ಕಂಡೆನೆಂದೆನಲು; ವೃಷಧ್ವಜನು ತಾತ ! ಕೇಳಗ್ರಜನನುಗ್ರಹ

ದಿಂದಲೆಂದು ನುಡಿಯುತ್ತಿರಲು; ಅಪ್ಪಣೆಯನೀಯಬೇಕೆಂದು ಸಮಸ್ತ ನರಪತಿಗಳು ಸುಶರ್ಮನಡಿದಾವರೆಗೆ ವಂದನೆಯ ಮಾಡಲು, ಮಹೀಪತಿಯು ನಿಖಿಲ ಧರಣೀಶರನಾಲಿಂಗಿಸಿ, ಕುಶಲಪ್ರಶ್ನೆಯಂಮಾಡಿ ಬಹುಮಾನಮಂಮಾಡಿ ಯಾನಮನ್ನೇರಿ ಬರುವಂತೆ ಅಪ್ಪಣೆಯಿತ್ತು, ಮತ್ತೆ ಹಸ್ತಿಸ್ಕಂಧಮನ್ನೇರಿ ಚಂದ್ರಮಂಡಲ ಚಾರುಶ್ವೇತಾತಪತ್ರದಿಂ ಸಾಕ್ಷಾತ್ಶಚೀಪತಿಯಂತೆ ಸಮಸ್ತ ನರಪತಿಗಳಿಂದನುಗಮ್ಯಮಾನನಾಗಿ ಬರುತ ಕಟಕಪ್ರವೇಶಮಂಮಾಡಿ, ರಾಜಭವನದ್ವಾರದೊಳು ಹಸ್ತಿಯನ್ನಿಳಿದು ಸರ್ವಾದ್ಭುತ ನಿದಾನಮಾಗಿರುವ ಸಭಾಪ್ರವೇಶಮಂಮಾಡಿ ರತ್ನಮಯ ಪಂಚವಕ್ತ್ರಾಸನದಿ ಕುಳ್ಳಿರಲು; ಸಮಸ್ತ ನೃಪರಾಸಾರ್ವಭೌಮನಾಜ್ಞೆಯಿಂದುಚಿತಾಸನಗಳಲ್ಲಿ ಕುಳ್ಳಿರಲು;

ಇತ್ತಲಾ ಮಾಹಿಷ್ಮತೀ ನಗರದೊಳು ಧರಣೀಶ ತೆರಳಿದ ವಾರ್ತೆಯಂ ಕೇಳಿದಾಕ್ಷಣದಿ ಧರ್ಮಗುಪ್ತನು ಸಮಸ್ತಾಧಿಕಾರಿಗಳಿಂದ ಯುಕ್ತನಾಗಿ ದಿವ್ಯರಥಗಳನೇರಿ ಬಂದನತಿಜವದಿಂದ, ಕಂಡನತ್ಯದ್ಭುತದ ಸೇನಾಸಮುದ್ರಮಂ ಶಿವಶಿವಾ? ಅಚಿಂತ್ಯಮಹಿಮನು ಸಹಸ್ರಾಯುಧನೆಂದೆನುತ ಕಟಕಮಂ ಪೊಕ್ಕು ರಾಜಾಲಯದ್ವಾರಮನೈದಲು; ದ್ವಾರಪಾಲಕರು ಅಮಾತ್ಯನಾಗಮನಮಂ ಕಂಡು ಒಳಪೊಕ್ಕು ಬಿನ್ನೈಸಲು, ಮಹಾಮಾತ್ಯನಾಗಮನಮಂ ಸುಶರ್ಮ ಮಹಾರಾಜನು ಕೇಳಿ ಕ್ಷಣಮನದೊಳಾಲೋಚನೆಯಮಾಡಿ ಕರತರುವುದೆಂದಪ್ಪಣೆಯನೀಯ್ಯಲು; ಕಂಚುಕಿಗಳೈತಂದು ಅಖಿಲಾಧಿಕಾರಿಗಳಿಂದ ಯುಕ್ತನಾದ ಮಹಾಮಾತ್ಯನನ್ನಂತಃಪ್ರವೇಶಮಂ ಮಾಡಿಸಲು; ಧರ್ಮಗುಪ್ತನು ಅನೇಕ ವಿಚಿತ್ರಕಕ್ಷ್ಯಗಳನ್ನತಿಕ್ರಮಿಸಿ ವಿಸ್ಮಿತನಾಗಿ ಬರುತ ಪರಮಾದ್ಭುತಮಾದ ಸಭಾಸ್ಥಾನಮಂ ಕಂಡು ಪರವಶನಾಗಿ ನಿಖಿಲ ನರಪತಿಗಳಿಂದುಪಾಸ್ಯಮಾನನಾಗಿ ಸಹಸ್ರಾಕ್ಷನಂತೆ ದಿವ್ಯ ಸಿಂಹಾಸನದಿ ಕುಳ್ಳಿರುವ ಮಹೀಪಾಲನಂ ಕಂಡು ಅನೇಕ ಛತ್ರಚಾಮರ ವ್ಯಜನಾದಿಗಳಿಂದ ಸಪ್ತಾಂಗಪರಿಪೂರ್ಣಮಾಗಿರುವುದನ್ನೋಡಿ ಮನದುಂಬಿದುತ್ಸಾಹದಿಂದಂಜಲಿಬದ್ಧನಾಗಿ ಬರುತಿರಲು; ಸುಶರ್ಮರಾಯನು ಸಮಸ್ತರಿಂದೊಡಗೂಡಿ ಸಾಕ್ಷಾದ್ಧಿಷ

ಣಾಚಾರ್ಯನಂತೆ ಬರುತಿರುವ ಧರ್ಮಗುಪ್ತನಂ ಕಂಡು ಪುತ್ರನಭ್ಯುದಯಾವಲೋಕನಾಸಕ್ತಿಯಿಂದುತ್ಕಂಟಿತವಾಗಿ ತನ್ನಸತಿಕ್ರಮಿಸಲಾರದಿದುವರಿಗೆ ಮಾಹಿಷ್ಮತೀಯೊಳಿವರಿರ್ದರಿನ್ನುತಾನೈದಿದಬಳಿಕ ಇವರಿರುವರೆಧಿಟವೆಂದು ಮನದಿ ಯೋಚಿಸುತಿರಲು; ಧರ್ಮಗುಪ್ತನು ಸಮೀಪಕ್ಕೈತಂದು ವಂದನೆಮಾಡಿ ನಿಂದಿರಲು, ಸುಶರ್ಮರಾಯನು ನಿಖಿಲಧರಾಧಿಪತಿಗಳಿಗೆ ವಸ್ತ್ರಭೂಷಣ ಸ್ರಕ್ಚಂದನ ತಾಂಬೂಲಾದಿಗಳನಿತ್ತು ಸನ್ಮಾನಮಂಮಾಡಿ ನಿಖಿಲ ಯೂಥಪತಿಗಳಂಗೆ ಬಹುಮಾನಗೈದು ಸಮಸ್ತಸಾಮ್ರಾಜ್ಯದಿಂ ಕುಳ್ಳಿರಲು; ಸಹಸ್ರಾಯುವು ಮಹೀಶನಂ ಸ್ನಾನಾರ್ಥವಾಗಿ ಅಂತಃಪುರಕೆ ಕರದೊಯ್ವುದೆಂದು ಸುತೀಕ್ಷ್ಣನಿಂಗೆ ಸೂಚನೆಮಾಡಲು, ಸುತೀಕ್ಷ್ಣನು ಸುಶರ್ಮನಂಕುರಿತು ಜೀಯ್ಯಾ! ಸ್ನಾನಾರ್ಥವಾಗಿ ಚಿತ್ತೈಸಬೇಕೆಂದು ಮೆಲ್ಲನೆ ವಿಜ್ಞಾಪನೆಯಮಾಡಲು, ಸುಶರ್ಮ ಮಹಾರಾಯನು ಸಿಂಹಾಸನದಿಂದೆದ್ದು ಸುತೀಕ್ಷ್ಣನ ಕರಮಂಪಿಡಿದು ಅಂತಃಪುರಪ್ರವೇಶಮಂಮಾಡಿ ಮಜ್ಜನಾಲಯಕೆ ದಯೆಗೈದು ಪಂಚಸಹಸ್ರ ಪರಿಚಾರಕ ಸಮೂಹದಿಂ ಸಾಂದ್ರವಾಗಿರುವುದಂ ಕಂಡು ಸ್ನಾನಮಂಮಾಡಿ ನಿತ್ಯನಿಯಮಾದಿಗಳನಾಚರಿಸುತಿರಲು; ಸಹಸ್ರಾಯು ಧರ್ಮಗುಪ್ತನನ್ನಾಲಿಂಗಿಸಿ ಕುಶಲಪ್ರಶ್ನೆಯಂಮಾಡಿ, ವೃಷಧ್ವಜನಂ ಕರೆದು ವತ್ಸ! ಸಮಸ್ತನೃಪರಿಂಗೆ ಮಹಾರಾಜನೊಡನಾರೋಗಣೆಗೆ ಬರಬೇಕೆಂದು ವಿದಿತಮಂಮಾಡಿ ಕರೆದೊಯ್ವುದೆಂದೆನಲು, ವೃಷಕೇತನನು ಸಕಲನರಪತಿಗಳಿಗೆ ವಿದಿತಮಂಮಾಡಿ ಸರ್ವರಿಂದೊಡಗೂಡಿ ಭೋಜನಶಾಲೆಗೈತಂದು ಜಾಂಬೂನದ ಪೀಠದೊಳು ಕುಳ್ಳಿರಲು;

ಸಹಸ್ರಾಯುವು ಧರ್ಮಗುಪ್ತನೆ ಮೊದಲಾದ ಸಮಸ್ತಪ್ರಕೃತಿಗಳಂಗೆ ಸ್ನಾನನಿಯಮಾದಿಗಳನಾಚರಿಸಿ ಜವದಿಂದ ಭೋಜನಕೆ ಬರುವುದೆಂದಾಜ್ಞೆಯನಿತ್ತು ತನ್ನರಮನೆಯನೈದಿ ಜವದೊಳಾಹ್ನಿಕಗಳಂ ಮಾಡಿ ದಿವ್ಯಸುವರ್ಣರತ್ನಮಯ ಭೂಷಣಾಂಬರನಿಚಯದಿಂದಲಂಕೃತವಾದ ಧೇನುವಿನ ನಿಲಯಮನ್ನೈದಿ ಸಾಷ್ಟಾಂಗದಿಂನಮಿಸಿ ದಯಮಾಡಬೇಕೆಂದು ಪ್ರಾರ್ಥನೆಯಮಾಡುತ ಮಹಾಧೇನುವಿನಿಂದೊಡಗೂಡಿ ಭೋಜನಶಾಲೆ

ಗೈತರಲು; ನಿಖಿಲ ನರಪತಿಗಳಿಂದ ಯುಕ್ತನಾದ ಸುಶರ್ಮನಾ ಸಹಸ್ರಾಯುವಿನಿಂದನುಗಮ್ಯಮಾನಳಾಗಿ ಸರ್ವಾಭರಣಭೂಷಿತಳಾಗಿ ಮೆಲ್ಲಮೆಲ್ಲನಡಿಯಿಡುತಿರುವ ಮಹಾಧೇನುವಂ ಕಂಡು ವಿಸ್ಮಿತರಾಗಿ ಸರ್ವರೂ ಗಕ್ಕನೆ ಎದ್ದು ವಂದನೆಮಾಡಿ ಕೈಗಟ್ಟಿ ನೋಡುತ್ತ ನಿಂದಿರಲು; ರತ್ನಖಚಿತ ಪರ್ಯಂಕದೊಳು ಧೇನು ಬಂದು ಮಲಗಲು, ಸಹಸ್ರಾಯು ಸರ್ವೋಪಚಾರದಿಂ ಪೂಜೆಯಂಮಾಡಿ ವಂದನೇ ಮಾಡಿ ಜನನಿಯಂತೆ ಪ್ರಾರ್ಥನೆ ಮಾಡಲು, ಆ ಮಹಾನುಭಾವಳಾದ ಧೇನುವಿನ ಮುಖದಿಂದ ಅನೇಕ ದಿವ್ಯಮಾನಿನಿಯರು ಸರ್ವಾಭರಣಭೂಷಿತರಾಗಿ ಪೊರಮಟ್ಟು ನಿಜಕರಯುಕುಶೇಶಯವಿಧೃತಾಕ್ಷಯಪಾತ್ರೆಗಳಿಂದ ಸಮಸ್ತರಿಂಗೆ ಯಾವದಪೇಕ್ಷಿತಾಶೇಷಪದಾರ್ಥಂಗಳಂ ಬಡಿಸಲು, ಸುಶರ್ಮಮಹಾರಾಯನು ಸರ್ವರಿಂದಸಹಿತನಾಗಿ ಭೋಜನವಮಾಡಿ ಧೇನುವಿನ ಪ್ರಭಾವವಂ ಸುತೀಕ್ಷ್ಣನ ಮುಖದಿಂದ ಕೇಳಿದುದಂ ಪ್ರತ್ಯಕ್ಷವಾಗಿ ನೋಡಿ ಪರಮಾಶ್ಚರ್ಯಯುಕ್ತನಾಗಿರಲು, ಆ ದಿವ್ಯಮಾನಿನಿಯರ್ಕ್ತುದು ಧೇನುಮುಖಪ್ರವೇಶಮಂ ಮಾಡಲು; ಸುಶರ್ಮಮಹಾರಾಯನು ಸಮಸ್ತರಿಂದೊಡಗೂಡಿ ತಪ್ತಚಾಮೀಕರಾಂಶುಕವಿನಿರ್ಮಿತ ವಿಶಾಲರಮಣೀಯಚಂದ್ರಶಾಲಾಪ್ರವೇಶಮಂಮಾಡಿ ನೋಡಿ, ಪರಮಾನಂದಭರಿತನಾಗಿ ದಿವ್ಯಾಸನದಿ ಕುಳಿತು ಸಕಲ ಭೂಪತಿಗಳ ಮಧ್ಯದೊಳೇ ಭಗಳಮಧ್ಯದೊಳಿರುವ ತಾರಾಪತಿಯಂತೆ ರಾಜಿಸುತ್ತಿರಲು; ವೃಷಧ್ವಜನು ಸುತೀಕ್ಷ್ಣ, ಧರ್ಮಗುಪ್ತರು ಅನೇಕ ಸೇವಕಜನಸಮೇತರಾಗಿ ದಿವ್ಯಗಂಧಪುಷ್ಪಮಾಲಿಕಾ ತಾಂಬೂಲವ್ಯಜನಾದಿ ಸರ್ವೋಪಚಾರವಂಮಾಡುತ್ತಿರೆ, ದಿವ್ಯಾಗರುಧೂಮಜನಿತಾಮೋದನಿರ್ಭರೇಂದು ಶಾಲೆಯೊಳು ಪರಮಸುಪ್ರೀತರಾಗಿ ಸರ್ವರೂ ನೆಲಸಿರಲು; ಸಹಸ್ರಾಯುವಿನಿಂದಾಜ್ಞಪ್ತರಾಗಿ ಸುಗಂಧಿನಿಯು ಪ್ರಿಯಸಖಿಯರಾದ ಕಾದಂಬಿನೀ ಲಕೆಂಬಿನಿಯರೆಂಬ ಗಾಯಕಿಯರಪರಿಮಿತದಿವ್ಯಾಭರಣಭೂಷಿತರಾಗಿ ಪರಿಕರ ಪರಿವಾರಯುಕ್ತರಾಗಿ ಅಟ್ಟಲ್ಲತೆಯಂತೆ ಚಂದ್ರಶಾಲಾಪ್ರವೇಶಮಂಮಾಡಿ ಮಹಾರಾಜನಡಿದಾವರೆಗೆ ದೂರದಿಂ ಮಣಿದು ತದಾಜ್ಞೆಯಿಂಕುಳಿತು ತಾಳ, ಮುರ

ಜ, ಮೃದಂಗ, ಡಕ್ಕೆ, ಮುಖವಿಪಂಚಿಕಾ, ವೇಣು, ವೀಣಾದಿ ನಾನಾವಿಧ ವಿಚಿತ್ರವಾದ್ಯನಿಚಯಂ, ಸಮಾನಶ್ರುತಿ, ನಿಪುಣಸ್ವನ, ಕವಿತಾತಿಮಸೃಣ ಸ್ನಿಗ್ಧ, ನಿಜಕಂಠ ನಿಸ್ಸೃತ ನಿಷಾದ ಋಷಭಗಾಂಧಾರಾದಿ ಸಪ್ತಸ್ವರಾರೋಹಣಾವರೋಹಣ, ಗ್ರಾಮ, ಮೂರ್ಛನಾ, ಪದಪ್ರಮುಖಗಂಧರ್ವವಿದ್ಯಾರಹಸ್ಯ ಚಮತ್ಕಾರಪ್ರಕಾರ ವಿಮರ್ಶೆಯಿಂ ಗಾನಮಾಡಲು; ಆ ಸಮಸ್ತಸಭಾಸ್ಥಿತಜನರು ತದ್ಗಾನಶ್ರವಣಜನಿತಾಹ್ಲಾದಲಹರೀನಿಮಜ್ಜನದಿಂದ ಪರವಶರಾಗಿ ಸ್ಮರಬ್ರಹ್ಮಾನಂದಾತ್ಮೆಯನ್ನೈದಿ ಜಡಪ್ರಾಯರಾಗಲು;

ಅನಿತರೊಳು ರವಿಯಸ್ತಮಯಮಾಗೆ ಮಾನಿನಿಯರು ಗಾನಮಂ ನಿಲ್ಲಿಸಲಾಸುಶರ್ಮನು ತನ್ನ ಗಾತ್ರದೊಳಿದ್ದ ಸರ್ವಾಭರಣನಿಕರಮಂತೆಗದಿತ್ತು ಮನ್ನಿಸುತ ಬಹುಮಾನಮಂಮಾಡಿ ಸಾಯಾಹ್ನನಿಯಮಂಗಳನಾಚರಿಸಿ ಚಿರಕಾಲವಿರಹದಿಂ ವಿಮಲಶಾಂತಶೀಕರಣಳಾಗಿರುವ ಕಾಂತಿಮಾನಿಯ ನಿಲಯಮನ್ನೈದಲು; ಕಾಂತಮಾಲಿನೀದೇವಿಯುಂ ಪತ್ಯಾಗಮನಮಂ ತಿಳಿದು ಎದುರ್ಗೆ ಬಂದು ವಂದನೆಮಾಡಿ ಹಸ್ತಲಾಘವನ್ನಿತ್ತು ಕರದೊಯ್ದು ದಿವ್ಯಪರ್ಯಂಕದೊಳು ಕುಳ್ಳಿರಿಸಿ ವ್ಯಜನಮಂ ಕರದೊಳಾಂತು ಕಾಂತ! ಕುಶಲವೆ? ಕಲಾವತಿ ಸುಖದಲ್ಲಿರುವಳೆ? ಪರಸ್ಪರ ಪ್ರತಿಕ್ಷಣ ಸಮುಪಚಿಯ್ಯಮಾನ ನಿರುಪಮಾನುರಾಗವು ಸ್ವೈರಂತರ್ಯತಾದಾತ್ಮೆಯನ್ನೈದಿರುವುದೆ? ನಿನ್ನಡಿಯ ದಾಸಿಯೊಳು ಕರುಣತಲೆದೋರಿದುದೆ? ಬಹುಮಾತಿನಿಂದೇನು, ನಲ್ಲ! ನಿನ್ನಯುಹರ್ಷಮೆಂತಾದಡೆಯುಂ ನೆರವೇರಿದಡೆ ಸಾಕು. ಎಂದಿಂತು ಕಮಲಮುಖಿ ಕುಶಲಪ್ರಶ್ನೆಯಂಮಾಡಲು, ಮಹೀಶನತಿವಿದಗ್ಧೆಯಾದ ಕಾಂತಿಮಾಲಿನಿಯ ಗಂಭೀರ ಮಧುರತರವಾಕ್ಯಮಂಕೇಳಿ ತತ್ತಾತ್ಪರ್ಯಮಂ ಮನಕೆ ತಂದಿಳೆಯರಸ ನುಡಿದನೆಲೆ ಚಂದ್ರಮುಖಿ! ನಿನ್ನನುಡಿ ಸತ್ಯವೇಸರಿ, ಪ್ರತ್ಯುತ್ತರವನಾಡಿಫಲವೇನಿನ್ನು ನಿನ್ನನ್ನೋಲುವ ಸತಿಯರುಂಟೆ ಈ ಭುವನದೊಳು ಎಂದರಸಿ ಕೈಪಿಡಿದು ಪರ್ಯಂಕದೊಳು ಕುಳ್ಳಿರಿಸಿ ಸಕಲಾನುಭವಗಳಂ ನೆನೆನೆನೆದು ಪೇಳುತೋರ್ವರಿಗೊರ್ವರುದ್ಬುದ್ಧಪರಮಾನುರಾಗದಿಂ ಪರ

ವಶರಾಗಿ ಮದನಕದನಾನಂದಲಹರಿಯಿಂ ಗಾಢತ್ರಮಸುಷುಪ್ತಿಯನೈದಿ ನೃಪತಿಯರುಣೋದಯದೊಳೆದ್ದು ನಿತ್ಯನಿಯಮಾದಿಗಳನಾಚರಿಸುತಿಂತು ಸುಖದಿಂದಿರ್ದರೆಂಬಲ್ಲಿಗೆ;

ಇಂತು ಕರ್ನಾಟಕಭಾಷಾವಿರಚಿತವಾದ ಶ್ರೀಸತ್ಸಮಸ್ತ ಭೂಮಂಡಲಮಂಡನಾಯಮಾನನಿಖಿಲದೇಶಾವತಂಸ ಕರ್ನಾಟಕ ಜನಪದಸಂಪದಧಿಷ್ಠಾನುಭೂತ ಶ್ರೀಮನ್ಮಹಿಶೂರಮಹಾಸಂಸ್ಥಾನ ಮಧ್ಯದೇದೀಪ್ಯಮಾನಾವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲನಿಜ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ಪರಮೇಶ್ವರಪ್ರೌಢಪ್ರತಾಪಾಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾಗರ್ಭ ಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಆತ್ರೇಯಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರಪುರವರಾಧೀಶ ಶ್ರೀಕೃಷ್ಣರಾಜ ಒಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀಕೃಷ್ಣರಾಜ ವಾಣೀವಿಲಾಸವೆಂಬಾಂಕಿತದಿಂದ ಕರ್ನಾಟಕ ಭಾಷಾವ್ಯಾಖ್ಯಾನರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯ ಸಂವಾದದಲ್ಲಿ ಸಪ್ತದಶೋಧ್ಯಾಯಕ್ಕೆ ಮಂಗಳ ಮಹಾ. ಶ್ರೀ ಶ್ರೀ ಶ್ರೀ *

ಹದಿನೇಳನೆ ಅಧ್ಯಾಯ ಸಂಪೂರ್ಣವು.

———

# ಹದಿನೆಂಟನೇ ಅಧ್ಯಾಯ.



ಯತ್ಕೀರ್ತಿ ವಿಜಿತಾಃ ಕಲ್ಪತರವಃ ಪ್ರಾಪ್ಯಪಂಚತಾಂ| ಯಯು ಸ್ಸಾಕಂಕ್ಷಿತಾಸ್ಸೋಯಂ ಕೃಷ್ಣರಾಜೋವಿರಾಜತೆ ॥ * *

ಮಹಾರಾಜ? ಸಾವಧಾನದೊಳವಧರಿಸುವುದು ಮುಂದಿನಾಖ್ಯಾನ ಮಂ:—ಆ ಸುಶರ್ಮ ಮಹಾರಾಯನು ಇಂತು ಕಾಂತಿಮಾಲಿನಿಯೊಡನೆ ಸುಖಾನುಭವಮಂ ಮಾಡುತ್ತಿರಲು; ಬಂದುದಿನ ಮಹಾನುಭಾವಳಾದ ಕಾಂತಿಮಾಲಿನಿಯು ಪತಿಯ ಮುಖಮಾರ್ಗಮಂನೋಡಿ ವಂದನೆಮಾಡಿ ತಾನು ಆಬಾಲ್ಯವಾಗಿ ನಿನ್ನಡಿಯನುಗ್ರಹದಿಂದ ವಿಚ್ಛಿನ್ನಮಾಗಿ ಸರ್ವ ಮಂಗಳಾಚರಣ ಕಮಲಾರಾಧನೆಯ ಮಾಡಿರುವುದಿದಾವರೆಗೆ ವಿದಿತಮಾ ಗಿಯೇ ಇರುವದು, ಅರಸ! ಇದಕ್ಕೆ ಉದ್ಯಾಪನೆಯಮಾಡೆ ನಿನ್ನಡಿಯನ ಗಲ್ಪಿನಗೆ ಸಂದರ್ಭವಿದುವರಿಗೆ ದೊರೆಯಲಿಲ್ಲದರಿಂದಲೀಗ ಮಾಡಿಸಬೇ ಕು ಕರುಣದಿಂದೆನುತ ವಿಜ್ಞಾಪನೆಯ ಮಾಡಲು; ಮಹೀಶನಾನುಡಿಯಂ ಕೇಳಿ ಪರಮಸಂತೋಷಯುಕ್ತನಾಗಿ ಧರ್ಮಗುಪ್ತನಂ ಕಳುಹಿ ಸ ಹಸ್ರಾಯುವಂ ಕರೆಸಲು. ಸಹಸ್ರಾಯುವು ಧರ್ಮಗುಪ್ತನೊಡನೈತಂ ದು ವಂದನೆಮಾಡಲು, ಮಹೀಶನುದ್ಯಾಪನೆಯಮಾಡಬೇಕೆಂದು ವತ್ಸನಿಗೆ ಆಜ್ಞಾಪಿಸಲು, ಸಹಸ್ರಾಯುವು ಜೀಯಾ! ಹಾಗೆಯೇ ಆಗಲೆಂದೊಡಂ ಬಟ್ಟು ವಂದನೆಮಾಡುತಪ್ಪಣೆಗೊಂಡು ಸಭಾಸ್ಥಾನಮನ್ನೈದಿ ಸಮಸ್ತ ದೇಶಗಳಲ್ಲಿರುವ ನಿಖಿಲ ಭೂಸುರೋತ್ತಮರನ್ನು ಕರೆಯಿಸುವಂತೆ ತತ್ತದ್ದೇಶಾಧಿಪತಿಗಳಿಗೆ ಆಜ್ಞಾಪಿಸಲು; ಆ ಸಮಸ್ತ ನರಪತಿಗಳು ಆ ಮಹೋತ್ಸವಕ್ಕೆ ಬರುವಂತೆ ಸಮಸ್ತ ಭೂಸುರರಿಗೆ ಪತ್ರಿಕೆಯಂ ಬರೆಸಿ ತಮ್ಮ ತಮ್ಮ ರಾಜ್ಯಕ್ಕೆ ಕಳುಹಲು ; ಪಕ್ಷಸಂಖ್ಯಾತದಿನದೊಳೈತಂದ ರಸಂಖ್ಯಾತಧರಣೀದಿವಿಜರನಿತರೊಳು ಮಹಾರಾಜನಬಿಳೆ ಸಂಭಾರವಂ ಅಪರಿಮಿತವಾಗಿ ಸಿದ್ಧಮಂಪಾಡಲು, ಸುಶರ್ಮ ಮಹಾರಾಯನು ಸಮ ಸ್ತಜ್ಞಾನಿಗಳು ನಿಶ್ಚಯಮಾಡಿದ ಶುಭದಿನಪ ಸುಮುಹೂರ್ತದಲ್ಲಿ ಪತ್ರಿ

ಯಿಂಸಹಿತನಾಗಿ ಮಂಗಳಸ್ನಾನಮಂಮಾಡಿ ದೀಕ್ಷಿತನಾಗಿ ಕಲ್ಪಪ್ರಕಾರ
ಮಾಗಿ ಯಥಾವಿಧಿಯಿಂದ ಉದ್ಯಾಪನೆಯಂಮಾಡಲುದ್ಯುಕ್ತನಾಗಿ, ಸಂಕ
ಲ್ಪಮಂಮಾಡಿ ರತ್ನಮಯಜಾಂಬೂನದ ಕಲಶಸ್ಥಾಪನಮಂಮಾಡಿ ಪ್ರತಿ
ಮೆಯಂವಸ್ತ್ರಾದಿಗಳಿಂದಲಂಕಾರಮಂಮಾಡಿ ರತ್ನಮಯಮಂಟಪದಿ ಮಹಾ
ವೈಭವದಿಂದ ಷೋಡಶೋಪಚಾರ ಪೂಜೆಗಳಂ ಮಾಡಿ, ಧರಣೀದಿವಿಜ
ರಿಂಗೆ ಸಾಲಂಕೃತಗಳಾದ ಲಕ್ಷಗೋದಾನಗಳನಿತ್ತು ಅಪರಿಮಿತಧನಕನಕ
ವಸ್ತ್ರಗಳೆಯಾವದಪೇಕ್ಷಿತವಾಗಿತ್ತು ದಿವ್ಯಾನ್ನಭಕ್ಷಪಾಯಸಾದಿಗಳಿಂದ
ಭೋಜನಾದಿಗಳಮಾಡಿಸಿ ತೃಪ್ತಿಯನ್ನೈದಿದವರುಗಳಿಂದ ಆಶಿಷಗಳಂಪ
ಡೆದು, ನಿಖಿಲ ವೈಭವದಿಂದ ಶೈಲಕನ್ಯಾಚರಣನಳಿನಯುಗಳಂಗಳಂ ಪರ
ಮಭಕ್ತಿಯಿಂ ಪೂಜಿಸಿ ವಂದನೆಯಂಮಾಡಿ, ಕಾಂತಿಮಾಲಿನಿಯು ಪುಷ್ಪಾಂ
ಜಲಿಯನ್ನಿತ್ತು ಜನನಿ! ನಿನ್ನಡಿಯ ಸತ್ಕರುಣದಿಂದುದಯಿಸಿದ ಪುತ್ರನೊ
ಳಗನ್ಯಥಾ ಬುದ್ಧಿಯಂ ಮಾಡಿರುವನರಸನೆಲೆತಾಯೆ ! ಲೋಕಾಪವಾದ
ಭೀತಿಯಿಂದಿದನು ಪರಿಹರಿಸಲಿನ್ಯಾರುಂಟು, ದೇವಿ ನಿನ್ನಯಚಿತ್ತಕ್ಕಿಂತು
ಬರುವುದೋ ಹಾಗೇಆಗಲಾನೇಗೈವೆ, ಕಡೆಹಾಯಿಸುವಭಾರ ನಿನ್ನಡಿಯ
ಸೇರಿರಲು ಚಿಂತಿಪುದ್ಯಾಕೆ ಎಂದು ಮನದೊಳಗೆ ಸರ್ವಮಂಗಳೆಯಡಿಗೆ
ತನ್ನಳಲನುಸುರುತಿರೆ? ತತ್ಕಾಲದಲ್ಲಿ ದೇವದುಂದುಭಿಗಳು ಮೊಳಗಿದವು
ಗಗನದೊಳು, ವೈಮಾನಿಕರು ನೆರೆದರು, ಗುಣತ್ರಯೋಪೇತಮಾರುತನು
ಸುಳಿದನು; ಮಹೀಪಾಲ! ಸಮಸ್ತ ಭೂಸುರರು, ನೃಪತಿಗಳು, ಇವರೇ
ಮೊದಲಾದಖಿಳ ಸಭಾಸದರು ಪರಿತೋಷವನ್ನೈದಿ, ತನ್ನಿದಾನವನ್ನ
ರಿಯದೆ ಚಿಂತಿಸುತ್ತಿರಲು; ಸಾಕ್ಷಾತ್ಪೂರ್ಣದೇವಿಯು ಕಾಂತಿಮಾಲಿನಿ
ಯ ಮನದಭಿಪ್ರಾಯಮಂ ತಿಳಿದು ತತ್ಸಭಾಮಧ್ಯದೊಳಗುದಯಿಸಿದಳ
ನೇಕೋಟಿ ಬಿಂಬಗಳು ಸಮಸಮಯದಲ್ಲಿ ನೆರದಂತೆ, ತತ್ಕಾಲದ
ಲ್ಲಿ ಸಭಾಸ್ಥಿತಜನರು ಆ ಪ್ರಚಂಡತೇಜಃಪ್ರತಿಹತೇಕ್ಷಣರಾಗಿ ದೂರ
ದೊಳು ನಿಂದು ಮೆಲ್ಲಮೆಲ್ಲನೆ ಕಣ್ದೆರದು ಪರಮಮಂಗಳನಿಲಯಳಂನೋ
ಡುತಿರುತಿರಲು ; ಸುಶರ್ಮಮಹಾರಾಯನು ಪರಮಾಶ್ಚರ್ಯಭರಿತನಾಗಿ
ಗಡಗಡನೆ ನಡುಗುತೆದುರೊಳು ನಿಂದು ದಂಡಪ್ರಣಾಮಮಂ ಮಾಡುತಂ

ಜಲೀಬದ್ಧನಾಗಿ ಸ್ತುತಿಮಾಡೆ ಮುಂದೋರದಿರುತಿರಲು; ಭೂಸುರೋತ್ತಮರೆಲ್ಲ ಜಗನ್ಮಾತ್ರೆಯುಂ ಕಂಡು ಶ್ರುತಿಶಿರಸ್ಸುಗಳಿಂದ ನುತಿಮಾಡಲನಿಮಿಷರು ಸುಮವೃಷ್ಟಿಯುಂ ಸುರಿಯೆ? ರುದ್ರಾಣಿ ನಸುನಗುತ ದೂರದೊಳು ನಿಂದಿರುವ ಸಹಸ್ರಾಯುವಂ ಅಪಾಂಗದಿಂದೀಕ್ಷಿಸಿ ವತ್ಸ! ಬಾರೆಂದೆನುತ ಕರುಣದಿಂದಂಕದೊಳು ಕುಳ್ಳಿರಿಸಿ ಲಾಲಿಸುತ ನೃಪತಿಯುಂ ಕುರಿತು, ಕೇಳೆಲಮ್ರೋ ಮಹೀಪತ್ನೀಪತಿಯೆ! ಸಾಕ್ಷಾತ್ತ್ರಿಪುರಹರನೊಲುಮೆಯಿಂ ಲಬ್ಧಮಾದಾಮ್ರಫಲವನ್ನು ನೀನವಿವೇಕದಿಂದ ಗುಣವತಿಯಾದ ಪತ್ನಿಗೀಯದೆ ಮರೆದು ಕುತ್ಸಿತಳಾದ ಕಲಾವತಿಗೆ ಬಲುಪಕ್ಷಪಾತದಿಂದಿತ್ತು ನಿಜಾನ್ನಾಚಾರವಂ ಮರೆದು ಪರಿಶುದ್ಧಳಾಗಿರುವ ಮಾನಿನಿಯೊಳಪಚಾರಬುದ್ಧಿಯಂ ಮಾಡಿರುವೆ, ಕೇಳಾದಡೆಲಮ್ರೋ! ನೀನಿತ್ತ ಚೂತಫಲರೂಪ ಸದ್ಯೋಜಾತಪರಮಪ್ರಸಾದಮಂ ನಿಸ್ಸ್ವರಸಿಯಾದ ಕಲಾವತಿಯು ಮದಹಂಕಾರದಿಂ ರಸತೆಗೆದೆತ್ತರಲು ಕುವಾದಿನಿಯೆಂಬ ಪಾತ್ರಿಯಂ ಶಕ್ತಿಯಲವಳಿಲ್ಲದಿರೆ, ತಾನಾಕೆಯಾಕಾರವಂ ತಾಳಿ ಕಿಂಚಿತ್ಪ್ರಸನ್ನಳಾಗಿ ಗಿತ್ತಾಮ್ರಫಲವನೀ ಕಾಂತಿಮಾಲಿನಿಗೆ ದುರ್ಭಾಗ್ಯಕಾರಣದಿಂದಲುದಯಿಸಿದ ವತ್ಸನಿವನಿದಕೆ ಸಂಶಯವ್ಯಾಕೆ ಬಿಡು, ದುಷ್ಟಬುದ್ಧಿಯುನ್ನೀಡಾಡು ಎಂದು ಘನನಿಸ್ವನದಿ ನುಡಿಯುತಿರೆ? ಗಡಗಡನೆ ನಡುಗುತ್ತ ಪ್ರೌಢವಿಪತಿಯಾಡಿಗಳಿಗೆ ಪ್ರೌಢಮಡಲು; ಮರಸುತ್ತ ವತ್ಸನಂ ತೆಗೆದಪ್ಪಿ ಮುದ್ದಿಸುತ ನುಡಿಸುತಿರೆ? ಗಿರಿಜಮನುಜೇರಗರು ದೇವಿಯುರ ಭಕ್ತವತ್ಸಲತೆಯಂ, ಸಹಸ್ರಾಯುವಿನ ಸುಕೃತಮಂ ಕೊಂಡಾಡುತ್ತಿರಲು; ಕಾಂತಿಮಾಲಿನಿಯುಂ ಕುರಿತು ವತ್ಸೆ! ಮಾನಿನಿಯರಿಗೆ ಪತಿಯೆ ಪರದೈವ ಬೇರೆ ನರಿದು ನಡೆಯುವುದೆಂದು ಪೇಳುತ್ತಂತರ್ಧಾನಮನೈದಲು;

ಅನಂತರ ಸರ್ವಾಭರಣಮಂ ಕುರಿತು ವಂದನೆಮಾಡಿ ಪರಮ ವಿಸ್ಮಯದಿಂದ ಕಾಂತಿಮಾಲಿನಿಯು ಕೊಂಡಾಡುತಿರೆ, ಅವನೀಪತಿಯು ಮನದ ಸಂಶಯವನುಳಿದು ಅಹಹ! ದೈವವಿಲಾಸವನ್ನರಿದವರಾರೆಂದು ಕಿರಿಯರಸಿಯೆಸೆಯಿಂದ ಬರಿದೆ ಬಳಲಿದೆ, ಇಂತು ಹರನರಸಿಯೊಲುಮೆಯಿಂ ಕಡೆಹಾಯ್ದೆನೆಂದೆನುತ ಪರಮಸಂತೋಷದಿಂ ಯಾವದ್ರಾಜ್ಯದೇಶದೊಳು ಪಾ

ರ್ವತೀದೇವಿಯರು ಪ್ರತ್ಯಕ್ಷವಾದರೊ ಆ ಸ್ಥಾನದೊಳು ಬಹುವಿಧವಾಗಿ ವಿತ್ತಮಂ ವ್ಯಯಮಾಡಿ, ನಾನಾವಿಧ ವಿಚಿತ್ರವಿಶಾಲಶಿಲಾಮಯಾಗಾರವಾಗಿ, ನಡೆಯುವಂತೆ ನಿರುಪಾಧಿಕವೃತ್ತಿಯಂ ಕಲ್ಪಿಸಿ, ತರುವಾಯ ಕಲಾವತಿಯಿಂದಧಿಷ್ಠಿತವಾದ ಮಾಹಿಷ್ಮತೀ ನಗರಮಂ ಪೋಗಲು ಮನಬಾರದವನಿಪತಿಪುತ್ರನಂ ಕರೆದು ವತ್ಸ! ಶಿವನರ್ಧಾಂಗಿಯೊಲಿದಿರು ಪಟ್ಟಣದೊಳು ನೆಲಸಿರಲು; ತನ್ನ ಮನವೆಳಸಿರುವುದದರಿಂದ ತಿಳುಹಿದೆನು ನಿನಗೆಂದು ನುಡಿಯಲು, ಸಹಸ್ರಾಯುವದಂಕೇಳಿ ಪರಮಸಂತೋಷದಿಂ ತಂದೆಗಭಿವಂದಿಸುತ ಧರ್ಮಗುಪ್ತ ಸುತೀಕ್ಷ್ಣರಿಂದೊಡಗೂಡಿ ಸಪ್ತಪ್ರತೀಕೋಪೇತಸಭಾಸ್ಥಾನಮನ್ನೈದಿ ಸಮಸ್ತ ಶಿಲ್ಪಿಪ್ರಮುಖರಂ ಕರೆಸಿ ಬಹುಮಾನಮನ್ನಿತ್ತು ಮಾಸತ್ರಯದೊಳನುಪಮದ ಕೋಟೆಯುಂ ಸಲಕ್ಷಣಾವಯವಸಂಪೂರ್ಣವಾಗಿ ರಚಿಸುವಂತೆ ಅಜ್ಞಾಪಿಸಲು, ಶಿಲ್ಪಿಗಳು ತದಾಜ್ಞಾನುಸಾರವಾಗಿ ನಗರಪ್ರತಿಷ್ಠೆಯಂಮಾಡಿ ಮಾಸತ್ರಯದಿ ರಚಿಸಿದರು ಪಟ್ಟಣವನರಸ! ಕೇಳ್ವರ್ಣಿಸಲ್ಕಳವಲ್ಲ ದಿವಿಜರಿಗೆ ನೋಡಲಮರಾವತಿಯೋಲಂಕೆಯೋ?ವೈರೋಚನನಿಲಯಾಲಯವೋ? ಎಂಬಂತೆ ಸಕಲಸಂಪದದಿಂದ ಭೋಗವತಿಯಂತಿರುವ ಪಟ್ಟಣವನಿಖಿಲ ನೃಪತಿಗಳಿಂದಲೊಡಗೂಡಿ ಸುಮುಹೂರ್ತದಲ್ಲಿ ನಗರಪ್ರವೇಶಮಂ ಮಾಡಿ, ತರುವಾಯ ಸಕಲ ನರಪತಿಗಳಿಗೆ ಬಹುಮಾನಮಂಮಾಡಿ ಧರ್ಮದಿಂ ರಾಜ್ಯಮಂ ಪೊರೆಯುವಂತೆ ಕಟ್ಟಳೆಯಂಮಾಡಿ ಅವರವರ ದೇಶಕ್ಕೆಪೋಗಲಪ್ಪಣೆಯನೀಯಲು; ಮಹೀಪತಿಗಳು ಸಹಸ್ರಾಯುವನಗಲಿ ಪೋಗಲಾರದಳಲುತ್ತ ಕೊಂಡಾಡುತನಿಶ ತಮ್ಮತಮ್ಮ ದೇಶಮಂ ಕುರಿತು ನಡೆಯುತ್ತಿರಲು, ಸುಶರ್ಮ ಮಹಾರಾಯನು ಸಕಲ ಸಂಪತ್ಸಮೃದ್ಧಮಾದ ಹೈಮವತಿಯೆಂಬ ನೂತನನಗರದೊಳು ಪುತ್ರರಿಂದೊಡಗೂಡಿ ಪರಮ ವೈಭವದಿಂದ ರಾಜ್ಯಮಂ ಪೊರೆಯುತ್ತಿರಲು;

ಇತ್ತಲಾ ಶೂನ್ಯಾರಣ್ಯದಂತಿರುವ ಮಾಹಿಷ್ಮತಿಯೊಳಿರುವ ಕಲಾವತಿಯು ಪತಿಯ ವೃತ್ತಾಂತಮಂ, ಕಾಂತಮಾಲಿನಿಯ ಮಹದುನ್ನತಿಯಂ, ಸಹಸ್ರಾಯುವಿನ ಪ್ರಭಾವಮಂ ಕೇಳಿ ಪರಮ ದುಃಖಿತಳಾಗಿ ಚಿಂ

ತಿಸಿ ಪೋರಗೊಂಡದೆ, ವಂಚನೆಯೊಳೆಪೋಯು ಕುಶಲಳಾದಪ್ರಯುಕ್ತ ಸರ್ವಸ ನ್ನಾಹದಿಂ ಸಹಸ್ರಾಯುವಂ ಸಂಹಾರವಮಾಡಬೇಕೆಂದು ನಿಶ್ಚಯವಮಾಡಿ, ಸತ್ಸಂವಿಧಾನಮಂ ಚಿರಕಾಲ ವಿಮರ್ಶೆಯಂಮಾಡಿ, ವಿದರ್ಭ ದೇಶಾಧಿಪತಿ ಯಾದ ಹರದತ್ತರಾಯನೆಂಬ ಅಗ್ರಜನಿಂಗೆ ಪತ್ರಿಕೆಯಂ ಬರೆದು ಪರ ಮಾಪ್ತರಾದ ದೂತರಿಂಗೆ ವಸ್ತ್ರಾದಿಗಳನಿತ್ತು ತ್ವರೆಯಿಂದ ಕಳುಹಲು; ಆ ದೂತರತಿಜವದಿಂದ ವಿದರ್ಭದೇಶದೊಳಿರುವ ಹಸ್ತಿನೀನಗರವಂ ಪೊ ಕ್ಕು ಹರದತ್ತನಂಕಂಡು ಪೊಡಮಟ್ಟು ಸಹೋದರಿಯಾದ ಕಲಾವತಿಯು ಪತ್ರಿಕೆಯನರ್ಪಿಸುತ್ತ ಕೈಮುಗಿಯೆ? ಹರದತ್ತನಾಪತ್ರಿಕೆಯಂ ವಾಚಿಸಿ ತರುರೂಪವನ್ನುಳಿದು ಪತಿಪುತ್ರರಿಂಸಹಿತಳಾಗಿ ಪುನರುಜ್ಜೀವಿತಳಾದ ಳೆಂಬ ಪರಮ ಸಂತೋಷದಿಂ ದೂತರಂ ಸಂತೈಸಿ ಪ್ರಯಾಣಮನ್ನಿಶ್ಚಯ ಮಾಡಿ ಮಂತ್ರಿಗಳಿಂಗೆ ಸೂಚನೆಯಂಮಾಡುತರಮನೆಗೆ ಬಂದು ತನ್ನಪ ತ್ನಿಯೊಡನೆ ಸಹೋದರಿಯು ದೈವಾನುಗ್ರಹದಿಂದ ವೃಕ್ಷಭಾವಮನ್ನುಳಿ ದು ಪುತ್ರಪತಿಸಹಿತಳಾಗಿ ನಿಜರೂಪಮನ್ನಾಂತು ಪತ್ರಿಕೆಯಂ ಕಳುಹಿರು ವಳದರಿಂದ ನಾಳೆಯುದಯದಿ ತೆರಳಿ ಮಾಹಿಷ್ಮತಿಗೆ ಪೋಗಿ ಸರ್ವರಂ ನೋಡಿಬಹೆನೆಂದು ಪೇಳಿ ಪರಮ ಸಂತೋಷದಿಂ ರಾತ್ರಿಯಂ ಕಳೆದುಪ ರಿನಿತ ಸೇನಾಸಮೇತ ಮಹೀಷ್ಮತೀನಗರಮನ್ನೈದಿ ಶೂನ್ಯಾರಣ್ಯ ದಂತಿರುವ ಪುಟಭೇಡನಮಂಕಂಡು ಇದೇನಚ್ಚರಿಯೆಂದು ದುಗುಡದಿಂ ನ ಗರಿಯ ಪ್ರವೇಶಮಂಮಾಡಿ ಕಲಾವತಿಯ ಅರಮನೆಯ ಬಾಗಿಲೊಳು ಯಾನಮನ್ನುಳಿದು ಬರುತಿರಲು, ಕಲಾವತಿಯು ಅಗ್ರಜನ ಎದುರ್ಗೆ ಬಂ ದು ವಂದನೆಮಾಡಲು, ಹರದತ್ತನಾಸಹೋದರಿಯ ಚಿಂತಾಮಹಾರಾ ಹುಕಬಳತಾನನವಿಧುವನವಲೋಕನವಮಾಡಿ ದುಗುಡದಿಂ ಹರಸುತ್ತ ಅಂತಃಪುರಪ್ರವೇಶಮಂಮಾಡಿ, ಮೌನದಿಂ ಸ್ನಾನ ಭೋಜನಾದಿಗಳಂ ಮಾಡಿ ವಿಶ್ರಾಂತನಾಗಿ ಕುಳಿತಾಕೆಯಂಕರೆದು ವತ್ಸೆ! ನಿನ್ನಾನನವು ಬಾಡಿ ರುವುದೇನುಕಾರಣ ಪೇಳು, ಪತಿಪುತ್ರರೆಲ್ಲಿಹರು, ಕಾಂತಿಮಾಲಿನಿಯು ಮೇಣೆಲ್ಲಿರುವಳೆಂದು ಪ್ರಶ್ನೆಯಂಮಾಡಲು; ಕಲಾವತಿಯು ಕಂಬನಿದುಂಬಿ ಕೇಳಣ್ಣಾ! ಎನ್ನವಿಧಿಯುಂಎಂದು ನಿಖಿಲ ವೃತ್ತಾಂತಮಂ ತನ್ನ ಮಂತ್ರೀ

ಪಥಗಳಣವ್ವಾಗಿ ವಿವರಿಸಲು; ಹರದತ್ತನಾಸಹೋದರಿಯು ಮಹಾಅಸೂ
ಯೆಯಿಂ ವಿಪರೀತವಾಗಿ ವರ್ಣಿಸಿದ ವೃತ್ತಾಂತಮಂ ಕೇಳುತದ್ವಿಷಮವಚ
ನವಿಷಯುಕಲಶಪರಿಪೂರಿತಕಾಂತಿಮಾಲಿನೀ ತನಯದಿವ್ಯಚರಿತಾಮೃತಪಾ
ನದಿಂ ಹರ್ಷವಿಷಾದವನ್ನೈದಿ, ಮುಹೂರ್ತ ಮನದೊಳಾಲೋಚನೆಯು
ಮಾಡಿ ವತ್ಸೆ! ಮಹಾನುಭಾವರ ವಿಷಯವಾಗಿ ನಿರ್ವ್ಯಾಜದಿಂ ಮಾಡಿದ
ಅಪರಾಧವು, ಕೇಳು. ಕರ್ತೃವಿಗೆ ಸರ್ವಾನರ್ಥಪರಂಪರಾಹೇತುವಾಗ
ದಿರುವುದೇ? ಗತಗೋಷ್ಠಿಯನ್ನೆನದು ಫಲವೇನು, ಇನ್ನುಮೇಲಾದಡೆ
ಯು ದುರ್ಬುದ್ಧಿಯಂ ಬಿಟ್ಟು ಸದ್ಬುದ್ಧಿಗಳವಟ್ಟು ಪತಿಯ ಪರಮಾನು
ಗ್ರಹವ ಪಡೆಯುವ ಉಪಾಯವಂ ಯೋಚಿಸುತ ಬದುಕುವುದು ಯು
ಕ್ತವೆಂದೊರೆಯಲು, ಕಲಾವತಿಯು ಕ್ರೋಧಮೂರ್ಛಿತಳಾಗಿ ಅಣ್ಣ
ನಂಘ್ರಿಗಳಂ ಕಂಡು ಎನ್ನಳಲೊರೆದು ಮತ್ಕಾರ್ಯಸಿದ್ಧಿಯಂ ಕಾಣ್ಬೆನೆಂದಾಶೆ
ಯಿಂ ನಿನ್ನೆಡೆಗೆ ಕಳುಹಿದೆನು; ದೂರತರದ ಕರುಣದಿಂ ಬಂದು ನೀನೊಂದೆ
ನುಡಿಯಿಂದಖಿಲದಂದುಗವನಿಂದು ನೀಗದೆ, ಶೋಕಸಂಪೇಹಾರವಾದುದ
ಗ್ರಜ! ಕೇಳು ಎನ್ನವಿಧಿಯಿಂತಿರಲು ನೀನು ಮಾಡುವುದೇನು, ಎಂತಾ
ದಡೆಯುಂ ನಿನ್ನ ದರುಶನವಾದುದೇ ತನಗೆ ಪರಮಲಾಭ, ಭವನ್ನಗರವ
ನೈದಿ ಸುಖದಿಂದಿರು ಹೋಗೆಂದು ನುಡಿದು ಕಂಬನಿಬಿಡುವ ಪರಮದಾ
ರುಣಹೃದಯಳಾದ ಭಗಿನಿಯಂ ನೋಡಿ ಹರದತ್ತನಾಕೆಯ ಅಭಿಪ್ರಾಯ
ಮಂ ತಿಳಿದು; ವತ್ಸೆ ಕಲಾವತಿ! ಹಾಗಾದಡೆ ನಿನ್ನ ವ್ಯವಸಾಯಕ್ಕೆ ಫಲಾ
ನುಸಂಧಾನವಾದಡೆಯೂ ವಿನದಿಂ ತಿಳುಹೆನಲು, ಕಲಾವತಿಯು ಎಲೈ ಅಗ್ರ
ಜನೆ! ಕೇಳು ಮಹಾರಾಜನ ಉದರದೊಳು ಪುಟ್ಟಿ ಪುತ್ರನಿಂಸಹಿತಳಾಗಿ
ಕಾಂತಿಮಾಲಿನಿಯು ದಾಸಿಯಾಗಿರಬಾರದೆಂಬುದೇ ಫಲವೆನಲು; ಹಾಗಾ
ದಡೀಗ ತಾವಸಿ ಮಾಡುವುದೇನು ಪೇಳೆನಲು, ಕಲಾವತಿಯು ಸರ್ವೋಪಾ
ಯದಿಂ ಶತ್ರುನಿಶ್ಶೇಷವಮಾಡಬೇಕೆಂದೆನಲು, ಹರದತ್ತನಾನುಡಿಕೇಳಿ ವಿ
ಸ್ಮಿತನಾಗಿ ಎಲೈ ಸುಮತಿಯೆ! ಕೇಳು ಸಹಸ್ರಾಯುವಂ ಚತುರ್ಥೋ
ಪಾಯದಿಂ ಜಯಿಸುವರೆ? ಪುರಾರಿಗಳಲ್ಲ, ತ್ರಿತೀಯೋಪಾಯದಿಂ ಜಯಿ
ಸುವರೆ? ಧನದನಿಂಗಳಲ್ಲ, ದ್ವಿತೀಯೋಪಾಯದಿಂ ಜಯಿಸುವರೆ? ಭೂ

ಗನ್ವನಿಗಳವಲ್ಲ, ಸಾವುದಿಂ ಜಯಿಸುವರೆ? ಸಾವಕಾಶವೇ ಇಲ್ಲ, ಮಾಯು ದಿಂ ಜಯಿಸುವರೆ? ಮಾಯುನಿಂಗೆ ಮುಂದೋರದು, ಅವನಿಯೊಳು ಕನ್ಯಕಾಂ ಗಿಪ್ರಾಡಿದ ಮಹತ್ಕಾರ್ಯಕ್ಕಿಂತಧಿಕ ಚಾತುರ್ಯಮಿನ್ನುಂಟೆ, ಮೇಲೆ ಮಹದು ಪಕಾರಿ, ನಿರಸೂಯು, ಸ್ವರ್ಗಭೂಮಂಡಲವೂ ತ್ವದಧೀನವಾಗಿಯಿರುವು ದಿಂತಪ್ಪ ಮಹಿಮೆಯೊಳು ತಾನು ಮಾಡುವುದೇನು, ಲಲನೆ! ಕೇಳ್ ನ್ನಿಂದ ತೀರದೀ ಕಾರ್ಯಹರನಾಣೆ ಎನಲು, ಕಲಾವತಿಯು ಹರದತ್ತನಂ ಕುರಿತು ಅಣ್ಣ ನಿನ್ನಯನುಡಿಯು ಸತ್ಯವೇಸರಿ, ತದಪಿ ಕಾಂತಿಮಾಲಿನಿ ಯೊಡನೆ ವೈರಮಂ ಪೃಥ್ವಿಯೊಳುಮಾಡಿ ಈ ಸಮಯದೊಳು ಸಡಲೆ ಯಬೆಳಸಿದಡೆ? ಪುಟ್ಟುವದೇ ಸೌಜನ್ಯವು, ಆದರಿಂ ಪ್ರ ನಿಷ್ಠುರವ ಕಡೆ ಗಾಣಬೇಕಲ್ಲದೆ ಅನ್ಯಥಾ ಯೋಚನೆಯಮಾಡಲಾಗದು, ಕೇಳು ಪಂಚ ನೋಪಾಯದಿಂ ಸಾಧಿಸುವೆ ಭಯಬೇಡ, ಕೃತ್ರಿಮಾಗಾರಮಂ ರಚಿಸಿ ಕೊಲ್ಲುವೆನು ನೋಡೆನ್ನ ಸಾಹಸವಂ, ನೀನಿದಕ್ಕೆ ಸಾನುಕೂಲರಮಾಡಿ ಸಾಧನಗಳೊದಗಿಸೆ ತತ್ಸುಕೃತದುಪಾಯಮಂ ಆದ್ಯಂತವಾಗಿ ವಿವರಿಸಲು, ಹ ರದತ್ತನಾ ಭಗಿನಿಯಾಲಾಪಮಂ ಕೇಳಿ ತೀರವಾಗಲಿ ಎಂದು ಮನದೊಳಾ ಲೋಚಿಸುತ ಹತ್ತು ಸಾವಿರ ಶಿಲ್ಪಿಗಳ ಕಳುಹುವೆನು, ಕೋವಿದರಕಡೆ ಯಿಂದ ಕಡಿಗಾಣು ಕಾರ್ಯಮಂ, ಎನುತ್ತಪ್ಪಣೆಗೊಂಡು ಮನದೊಳಗೆ ಕಟ್ಟ ಳವಳಿಂದು ನಿಶ್ಚಯಮಾಡಿ ಪೊರಟು ನಿಜನಗರಮಂ ಪೊಕ್ಕು ನೃಪನು ತವಕದಿಂದೀರೈದು ಶಿಲ್ಪಿಸಹಸ್ರಗಳ ಜೊತೆಮಾಡಿ ಅವರೊಡನೆ ಪಂಚ ಸಹಸ್ರಘನಶಕಟಗಳನಿತ್ತು ಮಾಹಿಷ್ಮತಿಗೆ ಕಳುಹಿದನು. ತವಕದಿಂ ಬರ ಲಾ ಕಲಾವತಿಯು ಶಿಲ್ಪಿಗಳೊಳಧಿಕ ಮತಿಯುಳ್ಳವರ ಕರೆದು ಅವರಿಗುಡು ಗೆರೆಗಳನ್ನಿತ್ತು ಕೃತ್ರಿಮಾಗಾರರಚನಾಪ್ರಕಾರಮನೊರೆಯಲು, ಅವ ರದಂ ಕೇಳಿ ಪರಮ ವಿಸ್ಮಯದಿಂದ ತಾಯೆ! ರಚಿಸುವೆವೆಂದು ಒಪ್ಪಿ ಅವರು ಕೈಮುಗಿದು ಕಲಾವತಿಯಿಂದ ನಿಶ್ಚಿತವಾದ ಮಹಾಪುರುಷದನನಾನು ಕೂಲಪರಮದಾರುಣಮುಹೋರ್ಗ್ಯಲಗ್ನದೊಳು ಕಾಂತಿಮಾಲಿನೀ ಕಲಾವ ತಿಯರ ಮನೆಯ ಅಂತರಾಳದೊಳಿರುವ ವಿಶದಪ್ರದೇಶದೊಳು ಗೃಹಾ ರಂಭಮಂ ಮಾಡಿ ಕೃತ್ರಿಮಾಗಾರಮಂ ರಚಿಸಿ, ಭೂವಿವರದೊಳು ಮಹದ

ದ್ಭುತಸಭಾಸ್ಥಾನಮಂ ನವರತ್ನಮಯವಾಗಿ ರಚಿಸಿದರು ಕೋವಿದರದೇನೆಂಬೆ
ನದ್ಭುತವ, ಅಹಹ! ಕೇಳ್ಮೆಯನಿಂದ ತೀರದಾ ಕೆಲಸವಂತ ತಿಚತುರಗಾಶ್ಚರ್ಯಕ
ರವಾದ ನಿಲಯಮಂ, ಅದಕೆ ಭೂವಿವರದೊಳು ಮಾರ್ಗಮಂ ರಚಿ
ಸಿದರದೆಂತೆನೆ, ಭೂಪೃಷ್ಟದೊಳು ರಚಿಸಿದರಮನೆಯ ಮಧ್ಯದೊಳಗೊಂ
ದು ಸುರುಚಿರಬಿಲದ್ವಾರಮಂ ಮಾಡುತ್ತದರಿಂದ ಭೂವಿವರದೊಳು ಮಾ
ರ್ಗಮಂ ರಚಿಸುತಾಪಥವನ್ನು ಕೆಲವುದೂರದಮೇಲೆ ತ್ರಿವಿಧಮಂ ಮಾಡು
ತಲ್ಲಿ ದ್ವಾರತ್ರಯವ ರಚಿಸಿದರು ಲೋಹಮಯದುರ್ಗಮಕವಾಟಗಳಂ,
ಆ ಮೂರು ಬಾಗಿಲೊಳು ಮಧ್ಯಮದ್ವಾರದಿಂ ಭೂಗರ್ಭದೊಳಗಿರುವ
ರತ್ನಮಯಸಭೆಗೈದಲೊಂದು ಪಥಮಂ ಮಾಡಿ, ತದ್ವಾಮಭಾಗದೊಳಿರುವ
ಬಾಗಿಲಪಿಡಿದು ಭೂಪೃಷ್ಟದೊಳಿರುವ ಕಲಾವತಿಯ ನಿಲಯಮನ್ನೈದು
ವಂತೊಂದು ಪಥಮಂ ಮಾಡಿ, ಮೂರನೆಯಬಾಗಿಲಿಂ ಭೂಪೃಷ್ಟದೊಳ
ಗಿರುವ ಕಾಂತಾರಮನ್ನೈದಿಸುವ ಬಹುದೂರಮಾರ್ಗಮಂ ಭೂಗರ್ಭ
ದೊಳು ಮಾಡಿಡುತಲ್ಲಲ್ಲಿ ನೆಲಸಮಿನ ವಾಸಗಳ ಜಲಕಲಿತ ಕೂಪಗಳ ರಚಿ
ಸಿದರು. ಈ ಮಾರ್ಗತ್ರಯಾಂತ್ಯದೊಳು ದ್ವಾರತ್ರಯಗಳಂ ಮಾಡಿ,
ಅವುಗಳಿಗೆ ದುರ್ಗಮವಾದ ಲೋಹಮಯಕವಾಟಗಳನ್ನಿಟ್ಟು ಈ ಮೂ
ರು ಮಾರ್ಗದೊಳು ಬೇಕಾದ ಕಡೆಯಲ್ಲಿ ಬೆಳಕಿಗಾಸ್ಪದಮಾಡಿ, ಚಕ್ರ
ನಾಳಗಳನ್ನಿರಿಸಿದರು. ಮತ್ತು ಮಾಧರೆಯುದರದೊಳಗಿರುವ ದಿವ್ಯಹಾಟ
ಕಮಯಸಭಾಸ್ಥಾನದೊಳು ರತ್ನಖಚಿತಾಸನಗಳಂ ನಿರಿಸಿ, ಪ್ರತ್ಯಾಸನೋ
ಪರಿತೀವ್ರಧಾರಾಕಲಿತಚಕ್ರನತೀಸಿಶಿತಾರಮಯವಾಗಿ ದಿವ್ಯಾಂತಪತ್ರಗ
ಳತೆರದಿಂದ ರಚಿಸಿ, ಆ ಪೀಠದೊಳು ಮಂಡಿಸಿದಡಾಕ್ಷಣದಿ ಕುಳಿತವರಕಂ
ಧರವ ಕತ್ತರಿಸಿ ಬಿಡುವಂತೆ ಸೂತ್ರಸಂಧಾನಮನಿರಿಸಿ, ಮೋಹನದರಸಂಧಾ
ನಗಳು ನೋಳ್ಪರಿಗೆ ಪರಿಕಿಸಿದಡೆಯುತಿಳಿಯದಂತಹಹ! ಷಣ್ಮಾಸದೊಳು
ಕಲ್ಪಿಸಿದ ರಾಶಿಲ್ಪಿಕೋವಿದರು. ವರ್ಣಿಸಲ್ಕಳವೆ? ವಾಕ್ಯಗಳಿಂದ, ಧ
ರಣೀಶ! ಬಹುವಿತ್ತರಾಶಿಗಳು ವ್ಯಯಮಾದುದಂತೆ. ಮತ್ತಾಬಿಲದ್ವಾರಕ
ತ್ಯಧಿಕಲೋಹಮಯ ದುರ್ಗಮಯಕವಾಟಗಳ ರಚಿಸಿ, ಮೋಹನಾನಿಲ
ಯದೊಳಗೆ ಇನಿತು ದಿನವಾಸಮಂ ಮಾಡಿದಡೆಯುಂ ದ್ವಾರಮೊಂದು ತಿಳಿ

ಯದವೊಲತಿಚತುರತನದಿಂದರಚಿಸಿ, ಅನಂತರದಿ ಭಿತ್ತಿ ಬೋದಿಗೆ ವಿಟಂಕ ಸ್ತಂಭಾದಿಗಳಮೇಲೆ ಸ್ವರ್ಣರಾಜಿಗಳಿಂದ ರತ್ನನಿಕರಗಳಿಂದ ಕೆತ್ತಿದರು; ಮುತ್ತಿನ ವಿಚಿತ್ರ ತರತೋರಣವ ಕಟ್ಟಿದರು. ಸೃಷ್ಟಿಯೊಳಗೀತೆರದ ನಿಲಯವಿಲ್ಲೆಂಬಂತೆ. ತರುವಾಯ ಕಲಾವತಿಯು ಅತ್ಯದ್ಭುತಾಲಯವನೋಡಿ ಹೃಷ್ಟಮಾನಸಳಾಗಿ ಸರ್ವಶಿಲ್ಪಿಗಳಿಂಗೆ ಧನಕನಕ ವಸ್ತ್ರಗಳನಪರಿಮಿತವಾಗಿತ್ತು ಸಂತೋಷಯುಕ್ತರಂ ಮಾಡಿ ಕಳುಹಲಪ್ಪಣೆಗೊಂಡು ಪರಮಸಂತೋಷದಿಂದೈದಿ ಹರದತ್ತರಾಯನಿರುವೆಡೆಗೆ ನಿಖಿಲವೃತ್ತಾಂತಮಂ ನೊರೆಯುತಪ್ಪಣೆಗೊಂಡು ತಮ್ಮ ತಮ್ಮಾಲಯಕೆನಡೆಯುತಿರಲು;—

ಇತ್ತಲಾ ಕಲಾವತಿಯು ಈ ತೆರದ ಕೃತ್ರಿಮಾಗಾರಮಂ ರಚಿಸಿ ಸರ್ವಸನ್ನಾಹಮಂಮಾಡಿ ತದನಂತರದಿ ಪತಿಯೆಡೆಗೆ ಪೋಗಲುದ್ಯುಕ್ತಳಾಗಿ ಕುಮುದಿನಿಎಂಬ ಪ್ರಿಯಸಖಿಯನೊಡಗೊಂಡು ಶಸ್ತ್ರಪಾಣಿಗಳಾದ ಪಟುಭಟ ಸಹಸ್ರದಿಂಪೆರಸಿ ದಿವ್ಯರಥದೊಳು ಕುಳಿತು ಭೂಷಣಗಳಂ ತೆಗದು ನಗರದಿಂತೆರಳಿ ಹೈಮವತಿಯನೈದಿ, ರಾಜಭವನದ್ವಾರದೊಳು ಸ್ಯಂದನವನಿಳಿದು ಬಹುಭೇದದಿಂ ಬಳಪೊಕ್ಕು ಕಾಂತಿಮಾಲಿನೀದೇವಿಯಂತಃಪುರಪ್ರವೇಶಮಂ ಮಾಡಿ ಅನೇಕ ಸಖೀಜನರಿಂದುಪಾಸ್ಯಮಾನಳಾಗಿ ಸಾಕ್ಷಾತ್ಕಚಿಯಂತೆ ದಿವ್ಯಪೀಠದೊಳು ಕುಳ್ಳಿರುವಕಾಂತಿಮಾಲಿನಿಯಂ ಕಂಡು ಲಜ್ಜಿತಳಾಗಿ ಖೇದದಿಂ ಬರುತಿರುವ ಕಲಾವತಿಯಂ ದೂರದೊಳು ಕಾಂತಿಮಾಲಿನಿಯು ಕಂಡು ಪರಮವಿಸ್ಮಯದಿಂದ ನೋಡುತಿರೆ? ಕಲಾವತಿಯು ಬಂದು ಸಾಷ್ಟಾಂಗದಿಂನಮಿಸಲು, ಕಾಂತಿಮಾಲಿನಿಎದ್ದು ವತ್ಸೆ! ಬಾರೆಂದೆನುತ ಬಿಗಿದಪ್ಪಿ ದಿವ್ಯಾಸನದಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆಯಂ ಮಾಡಿ ಸರ್ವೋಪಚಾರಗಳಿಂದ ಸತ್ಕರಿಸಿ ವತ್ಸೆ! ಚಿಂತೆಯೊಳಿರುವ ಭಾವ ಕಾಣುತ್ತಲಿಹುದೇನುಕಾರಣ ಪೇಳು, ಅಥವಾ ಕೇಳುವದೇನು, ನರಪತಿಯನಗಲಿರುವ ದುಗುಡದಿಂದ ಬಳಲಿರುವಭಾವದನರಿವೆ ತಾನರವಿಂದದಳನಯನೆ! ಶೋಕ ಚಿಂತಿಸಬೇಡ, ಬಂದುದುತ್ತಮವಾಯ್ತು ಎನುತಾಕಲಾವತಿಯ ಸಂತೈಸಿ ಮಜ್ಜನಭೋಜನಾದಿಗಳ ಮಾಡಿಸುತ, ದಿವ್ಯದುಕೂ

ಲಾಭರಣ ನಿಕರದಿಂದಲಂಕರಿಸಿ, ಕಾಂತಿಮಾಲಿನಿಯು ಜವದಿಂ ಸಹಸ್ರಾ
ಯುವಿನ ಕರಸುತೆ ಕಲಾವತಿಯು ಆಗಮನಮನ್ನೊರೆದು ತೋರಂತಡಿಗ
ಳಿಗೆ ನಮಿಸೆನಲು; ನರಪತಿಕುಮಾರನಾ ಜನನಿಯಡಿದಾವರೆಗೆ ನಮಿಸೆ ?
ಹರಸುತಂತರ್ಭರಿತ ಪರಮ ವಿಷಮಯುಳ್ಳಾದ ಕಲಾವತಿಯು ಸಾಧುಭಾವ
ಮಂ ನಟನೆಮಾಡುತ್ತ, ಸಹಸ್ರಾಯುವಿನ ಪತ್ನಿಯರನಾದರಿಸುತನಿಶವ
ವರಿಂಗಲಂಕಾರ ಮೊದಲಾದುದನು ತಾನೇ ಮಾಡುತ್ತ, ಇಂತು ನಾನಾವಿ
ಧದಿ ಕಪಟೋಪಾಯಚತುರೆಯಾದ ಕಲಾವತಿಯು ನಿಜಕಾರ್ಯಸಿದ್ಧಿಗೋ
ಸುಗ ಚದುರತ್ವದಿಂದ, ಅರಸ! ತರುವಾಯ ಕಾಂತಿಮಾಲಿನಿಯು ಕಲಾ
ವತಿಯ ಸೌಜನ್ಯಮಂ ನೋಡಿ ಸತ್ಯವೆಂದೇ ತಿಳಿದು, ಕುಪಿತನಾಗಿಹಪತಿ
ಗೆ ಪರಿಪರಿಯ ಬೋಧನೆಯುಮಾಡುತ ವಳೊಳು ಕರುಣಪುಟ್ಟುವವೋ
ಲಾತನಿಗೆ ನಿರುತ ಪೇಳುತ್ತಿಗಲು, ಮಾಹಿಷ್ಮತೀಪತಿಯು ಕಾಂತಿಮಾಲಿನಿ
ಯು ನಿರ್ಬಂಧಮಂ ಮೀರಲಾರದೆ? ಭೂಯಃಕಲಾವತಿಯೊಳೊಡಮೆರದು
ಮನಗೊಟ್ಟು ಮಾತಾಡುತಾನವರತ ಕಾಂತಿಮಾಲಿನಿಯ ಗುಣಗಳಂ ಪ್ರೊ
ಗಳುತ್ತಿ ಮೋದದಿಂದಿರುತ್ತಿರಲು;

ಕಲಾವತಿಯೊಂದುದಿನ ಕಾಂತಿಮಾಲಿನಿಯೊಡನೆ ಕೇಳಕ್ಕ! ನರ
ಪತಿಯು ನಗರಮಂ ತನ್ನೊಳತಿಕೋಪಮಂತೋರದಿರುವುದನುಚಿತವು,
ಸುರುಜುಗಳಿಗಂಜುತಂ ಬರವಬಿಟ್ಟಂದದೊಳು ; ಚಿರಕಾಲನಿಲಯಮಂ
ತ್ಯಜಿಸಲಾಗದು, ತಾಯೆ! ನರಪತಿಗೆ ತಿಳುಹಿ ನೀಕರದೊಯ್ದುಸಂಗತಿಯ
ಮಾಡಬೇಕಿಂತಲ್ಲದನರತಧಾನ್ಯಮಾಲಿನಿಯು ಪತಿವಿರಹದಿಂ ಮರುಗು
ತಿರುವಳಿದೇನು ತರವಲ್ಲ, ತರಳೆಯನು ಮರದಿರುವುದೇನು, ಎಂದು ಕ
ಲಾವತಿಯು ವಿವರಿಸಲು, ಅದಂ ಕೇಳಿ ಕಾಂತಿಮಾಲಿನಿಯು ಯುಕ್ತವೆಂ
ದೇ ತಿಳಿದು ನರಪತಿಕುಮಾರರಿಗೆ ತಿಳುಹಿದಳು ತೆರಳಬೇಕೆಂದೆನುತ, ನರ
ಪತಿಯು ಕುಮಾರರನುಮತಿಯಿಂದ ಪುನಃ ಮಾಹಿಷ್ಮತಿಗೆ ಸರ್ವರಿಂದೊ
ಗೂಡಿ ಪರಮವೈಭವದಿಂದ ಪೊರಟು ಮಾಹಿಷ್ಮತಿಯನೈದಿದನುಮೋ
ದಿಂನೆಲಸುತಾನಗರನೊಳು ಧರ್ಮದಿಂರಾಜ್ಯಮಂ ಪ್ರೋಯುತ್ತಿರಲು; ಒಂದ
ದಿನ ಕಲಾವತಿಯು ಕಾಂತಿಮಾಲಿನಿಯೊಡನೆ:—ಅಕ್ಕ! ನಿನ್ನಯ ಚರಣ

ಯುಗಳ ನಳಿನವಿಹಾರಕೋಸುಗ ತಾನು ನಿಜಬುದ್ಧಿಯಿಂದೊಂದು ಮಣಿ ಮಯಾಗಾರವಂ ರಚಿಸಿರುವೆನು, ಅದರೊಳು ಬಿಲದ್ವಾರವಂ ಮಾಡಿ ರುವೆನಾಬಿಲದ್ವಾರನಡೆಯಲಿಳಿಯುದರದೊಳು ನವರತ್ನಖಚಿತಮಾದರಮ ನೆಯು ರಚಿಸಿರುವೆನು. ಅದಂ ನೀನು, ಸಹಸ್ರಾಯು ವೃಷಧ್ವಜರ ನೊ ಡಗೂಡಿ ದಯಮಾಡಿ ನೋಡಬೇಕೆಂದು ಮನವೆಳಸುತಿದೆ ಎಂದೆನಲು; ದೈವಮೋಹಿತಳಾಗಿ ಕಾಂತಿಮಾಲಿನಿಯಾಕೆಯ ನುಡಿಗೇಳಿ ಕಪಟಮಂ ದರಿಯದೆ, ಸಹಸ್ರಾಯುವಂ ಅನುಜನಿಂದೊಡಗೂಡಿ ಕರತರಲು ದೂತಿ ಯರಕಳುಹಲು; ಅವರೈತಂದು ತಿಳುಹಿದರು ನರಪತಿ ಕುಮಾರರಿಗೆ,ದೂ ತಿಯರ ನುಡಿಗೇಳುತವರೀರ್ವರೈತಂದು ಜನನಿಯಡಿಗಳಗೆರಗಿ ಕರಸಿದ ಮನೋರಥವನೊರೆಯಬೇಕೆಂದೆನಲು; ವಿವರಿಸಿ, ಕಲಾವತಿಯು ಚತುರ ತೆಯ ನೋಡಬೇಕೆಂದೆನಲು; ಈರ್ವರೂಪಾಪಿಯ ಅತಿವಂಚನೆಯನರಿ ಯದಂಗೀಕಾರವಂ ಮಾಡಲು; ಕಲಾವತಿಯು ಪೂರ್ವನಿಶ್ಚಿತವಾದ ಮೂರುಜನ ದೂತಿಯರ ಕರೆದು ಕರದೊಯ್ವುದೆನೆ:—ಕಾಂತಿಮಾಲಿನಿ ಯು ಇವಳ ಕಪಟಮುನ್ನರಿಯಬೇಕೆ ಬಿಲರಂಧ್ರಮಂನೈದಿ, ದೂತಿಯೋ ರ್ವಳ ಕರವಪಿಡಿದು ನಡೆದಳು ಮುಂದೆ. ತರುವಾಯ ಮತ್ತೋರ್ವ ದೂತ್ರಿಯು ಸಹಸ್ರಾಯುವಂ ಕರದೊಯ್ದಳು, ಅವನಿಪತಿ ! ಕೇಳು, ತ ದನಂತರದಿ ವೃಷಕೇತು ರಾಯನಂ ಓರ್ವಸಹಚರಿ ಬಂದು ಕರವಪಿ ಡಿದು ಕರದೊಯ್ದಳು, ಇಂತು ಮೂವರನು ಕಲಾವತಿಯ ದೂತಿಯರು ಕರದೊಯ್ದು ಬಿಲಮಾರ್ಗವಂ ಪೊಕ್ಕು ನಡೆತಂದರಾದ್ವಾರತ್ರಯಂಗಳ ಹತ್ತಿರತಿ ಸತ್ವರದೊಳು, ಅಂಧಕಾರಮಯವಾಗಿರಲು? ವೃಷಕೇತನ ನ ಕರವ ಪಿಡಿದಿರುವ ದೂತಿಯು ವಾಮದೊಳಿರುವ ದ್ವಾರದೊಳು ಪೊ ಕ್ಕು ಮೇಣಲ್ಲಿಂದ ಭೂಪೃಷ್ಟದೊಳಿರುವ ಕಲಾವತಿಯ ಅರಮನೆಗೆ ತಗ ಲಿರುವ ನೂತನ ವಿಚಿತ್ರ ತರರಜತಮಯನಿಲಯಕೈದಿಸುವ ಬಿಲಮಾರ್ಗ ದೊಳು ಕರೆತಂದು ಆ ಮಾರ್ಗದಂತ್ಯದೊಳಗಿರುವ ಬಾಗಿಲದಾಂಟಿಸಿ ದೂತಿಯಾತನಂ ಭೂಪೃಷ್ಟದಲ್ಲಿರುವ ರಜತಮಯನಿಲಯಮಂನೈದಿಸಿ. ಹಿಂತಿರುಗುತಾ ಬಿಲದ್ವಾರವಂಪೊಕ್ಕು ಬಾಗಿಲದಾಂಟುತಾಬಿಲದ್ವಾರವಂ

ಲೋಹಮಯಕವಾಟಗಳಿಂದ ಮುಚ್ಚುತಲ್ಲಿಂದಂಧಕಾರಮಯಮಾರ್ಗದೊಳು ದ್ವಾತ್ರಯದೊಳಹ ತಾಣಮಂನೈದಿ ಆ ಮೂರುಬಾಗಿಲೊಳು ತಾಪ್ಪೋಗಿ ಬಂದದ್ವಾರಸಂಕವಾಟಗಳಿಂದ ಮುಚ್ಚುತಲ್ಲಿಂದಬಿಲದ್ವಾರಮಂನೈದಿ ಆ ಬಿಲದ್ವಾರದೊಳು ಕುಳ್ಳಿರುವ ಕಲಾವತಿಗೆ ಪೋಗಿಬಂದ ವೃತ್ತಾಂತಮಂ ನೊರೆದಳು.

ಇತ್ತಲಾ ಸಹಸ್ರಾಯುವಿನ ಕರವಪಿಡಿದು ಕರದೊಯ್ದು ದೂತಿಯು ಮಧ್ಯದ್ವಾರದಿಂದೊಳಪ್ಪೊಕ್ಕು ತಿಮಿರಮಯಮಾಗಿರುವ ಮಾರ್ಗದೊಳು ಮೆಲ್ಲಮೆಲ್ಲನೆ ಸಹಸ್ರಾಯುವಂ ಕರವಪಿಡಿದು ಆ ಮಾರ್ಗಚರಮಭಾಗದೊಳಿರುವ ದ್ವಾರದಿಂದೊಳಪೊಕ್ಕು ಭೂಗರ್ಭದೊಳು ರಚಿಸಿದನವದ್ಯನವರತ್ನಮಯದಿವ್ಯಸಭೆಯಂನೈದಿಸಿ ದೂತಿಯಾ ಸಭಾಸ್ಥಾನವಂ ತೋರಿಸಲು, ಮಹಾನುಭಾವನಾದ ಸಹಸ್ರಾಯುವತಿಚಿತ್ರತರ ರತ್ನಮಯಸಭಾಸ್ಥಾನವಂನೈದಿ ವಿಸ್ಮಿತನಾಗಿ ಅಹಹ! ಈ ಸಭೆಯನಾವಿಶ್ವಕರ್ಮನೇ ಬಂದು ರಚಿಸಿದನೋ? ಶಿವಶಿವಾ! ಎಂದು ನೋಡುತತಿಹರುಷದಿಂದಾ ಸಭಾಮಧ್ಯದೊಳು ದಿವ್ಯಮಣಿಮಯ ಮಹಾಹರ್ಯಕ್ಷಪೀಠದೊಳು ಮಂಡಿಸಲು, ಆಕ್ಷಣದಿ ತದುಪರಿಸ್ಥಿತನಿಶಿತ ಧಾರಾಮಯಕಠಿಣ ಘೋರತರ ಚಕ್ರವತಿವೇಗದಿಂದಾ ಸಹಸ್ರಾಯುವಿನ ವಜ್ರನಿಭಕಂಧರವ ಕತ್ತರಿಸಿ ಕೆಡಹಿತ್ತೇನಚ್ಚರಿಯೊ? ಕೇಳರಸ; ರಾಜಪುತ್ರನ ಶೀರ್ಷವು ಶಿವೆ, ಸರ್ವಮಂಗಳೆ, ಜಗಜ್ಜನನಿ, ರುದ್ರಾಣಿ, ಪಾಹಿ, ಪಾರ್ವತಿ, ಭವಾನಿ, ಎನುತ ದಾಕ್ಷಾಯಣಿಯಂ ನೆನೆಯುತಿನಮಂಡಲದ ತೆರನಂತೆ ನೆಲಕುರುಳೆ? ದೂತಿಯದಂ ನೋಡಿ ಅತಿ ಸತ್ವರದಿ ತಿರುಗಿ ನಡನಡುಗುತಾದ್ವಾರಮಂದಾಂಟಿ ಬಾಗಿಲನು ಲೋಹಮಯಕವಾಟಗಳಿಂದ ಮುಚ್ಚುತಾತಿಮಿರಮಯಮಾರ್ಗದೊಳು ನಡೆತಂದು ಮೂರುಬಾಗಿಲಗಳಿಹ ತಾಣಮನ್ನೈದಿ, ತಾನೈದಿದ ದ್ವಾರವಂ ಕವಾಟಗಳಿಂದ ಮುಚ್ಚಿ ದೂತಿಯಾ ಬಿಲದ್ವಾರಮನ್ನೈದಿ, ಮೇಣಲ್ಲಿ ಕುಳ್ಳಿರುವ ತನ್ನೊಡತಿಯೊಡನಖಿಲವೃತ್ತಾಂತಮಂ ವಿವರಿಸಲು, ಪರಮಸಂತೋಷದಿಂದ ಕಲಾವತಿ ಎದ್ದು ದೂತಿಯಂ ಬಿಗಿದಪ್ಪಿ ತನ್ನಂಗದೊಳಗಿರ್ದ ಭೂಷಣವನವಳಿಗುಚಿತಮನಾಡಿ, ಮೂರನೆಯ ದೂತಿಯಾ

ಗಮನವಂಗೈಯುತ್ತಿರಲು;

ಇತ್ತಲಾ ಕುಬ್ಜೆ ಕಾಂತಿಮಾಲಿನಿಯ ಕರವಂ ಪಿಡಿದು ನಡೆಯುತ್ತಾ ಆ ಮೂರು ಬಾಗಿಲುಗಳ ದಕ್ಷಿಣದೊಳಿರುವ ಬಾಗಿಲನ್ನು ದಾಂಟಿ ಪಿಪಾಸವನ್ನೈದಿಸುವ ದೀರ್ಘತಮಮಾರ್ಗದೊಳು ನಡೆಯುತಲ್ಲಲ್ಲಿ ನಿಲಿಸುತ್ತ ಭೋಜನಾದಿಗಳನ್ನು ಮಾಡಿಸುತ್ತಲಾ ಕೋಮಲಾಂಗಿಯನು ಕರೆತರಲು, ಕಾಂತಿಮಾಲಿನಿಯು ನೋಡಿ ಬಹುಗಾಡಿ ನಡೆದು ಭಯಾಕುಲಿತಮಾನಸೆಯಾಗಿ ಮೈಮರೆದು ಕೇಳಿದಳು ದೂತಿಯನು ಸಂಶಯದಿ ಕುಬ್ಜೆ! ಸುತರೆಲ್ಲಿ ತವೊಮ್ಮನೆ ಬರಲಿಲ್ಲನ್ನು ಎನಿತು ದಿನ ಮಾರ್ಗವಂ ನಡೆಯಬೇಕೆಲೆವತ್ಸೆ! ನಡುಗುತ್ತಿದೆ ಎನ್ನೆದೆಯು ಸತ್ಯವಾಗಿ ಪೇಳು ಎನುತ ವಿನಯದಿ ಕೇಳೆ? ಪರಮದಾರುಣಹೃದಯಳಾದ ದೂತಿಯು ನುಡಿದಳೆಲೆ ತಾಯೆ! ನೀಂ ಅಂಜದಿರು ಎರಡು ಮಾರ್ಗಗಳಿರುವುದರಿಂ ಇನ್ನೊಂದು ಮಾರ್ಗದೊಳಗೈದುವರೋ ಏನೋ? ಮೋಸಾಮಾರ್ಗವೀಮಾರ್ಗವೆರಡರೊಳಗೈದಿದವರಾ ಸಭಾಸ್ಥಾನಕೆ ತಲಪುವರು ತೊಡರಿಲ್ಲ, ಅದರಿಂದಲಂಜದಿರು ನಡೆ ಎಂದುಪಾಯದಿಂದಿಂತು ಬಹುದಿವಸ ನಡೆತಂದು ಆ ಮಾರ್ಗಚರಮಭಾಗದೊಳಿರುವ ಬಾಗಿಲನ್ನೈದಿ ನುಡಿದಳು ಕುಬ್ಜೆ ಎಲೆ ತಾಯೆ! ಕೇಳವಧರಿಸು, ನಿನ್ನ ತಂಗಿಯು ರಚಿಸಿದದ್ಭುತವ ಸಭಾಸ್ಥಾನದೆಡೆಗೆ ನಾವೈದಿದೆವು, ಹರಿಮನೋಹರವಾಗಿ ದ್ವಿಜಪಂಕ್ತಿಶೋಭಿತವಾಗಿ ಪುಂಡರೀಕವಿರಾಜಿತವಾಗಿ ನರರಿಂದಗಮ್ಯವಾಗಿರುವ ನಿಲಯವು ಅತಿದೂರದೊಳಿರುವುದು, ಈ ಬಾಗಿಲನ್ನು ದಾಂಟಿ ಕಾಣುವದದರ ನವರತ್ನಮಯಕಲಶಗಳು, ಎನುತಾ ಮಹಾಪಾಪಿ ನುಡಿಯುತ್ತಿರಲು; ಆ ಕೋಮಲಾಂಗಿಯತಿಸಂಭ್ರಮದಿದಾಂಟಿ ಸತಿಯು ಮುಂದಕ್ಕಡಿಯಿಡೆ? ಕುಬ್ಜೆ ಜವದಿಂ ಕವಾಟಗಳಂ ಮುಚ್ಚಿ ಬೀಗವನ್ನು ಹಾಕಿದಳು, ಮದಗಜಗಳೊದೆಯಲಲ್ಲಾಡದಂತೆ, ಅಹಹ! ಮಾನಿನಿಯರಿನ್ನೆಂತು ಸಾಹಸಿಗಳೋ? ಕೇಳವನಿಪತಿತಿಲಕ! ಹಿಂತಿರುಗಿ ಕುಬ್ಜೆ ನಡೆತಂದಳತಿಜವದಿಂದ, ಸಪ್ತದಿನಕಾ ಮೂರು ಬಾಗಿಲಿರುವೆಡೆಗೆ ಬಹು ಜತನದಿಂ ಮುಚ್ಚುತ ಬಾಗಿಲನು, ವೇಗದಿ ಬಿಲದ್ವಾರವಂ ಮುಚ್ಚಿ ಮನುಷ್ಯಮಾತ್ರರಿಗೆ ಗೋಚರವಾಗದಂತೆ ಮರೆ

ಮಾಡಿ ಕಲಾವತಿಯು ನಿಜಪುತ್ರನಿರುವ ವಿವ್ಯಾಲಯದ ಪರಿಪರಿಯ ದಿವ್ಯ ವಸ್ತುಸಮಾಜಗಳನೊದಗಿಸುತ ಜಪದಿಂದ ವೈಷಯಿಕಸುಖದಿಂದ ಮಗ್ನ ಮಾನಸನಾಗಿ ನಿಲಯವಂ ಬಿಟ್ಟಗಲಿ ಸುತಗೆ ಮನಬಾರದೊಲು ಯಾವತ್ ಸಮುದೋನ್ಮತ್ತಚಿತ್ತಹಸ್ತಿವಿಹಾರಕ್ಕನುಕೂಲವಾಗಿರುವ ವಿವಿಧವಸ್ತು ಸಮಾಜಸಂಪೂರ್ಣವಾಗಿರುವ ಗೃಹಾರಾಮವಂ ರಚನೆಮಾಡಿರಲು; ಆ ವೃದ್ಧಜನು ಸುಶೀಲೆಯಿಂದೊಡಗೂಡಿ ತದೀಯ ಸೌಂದರ್ಯ ಸೌಕುಮಾರ್ಯವಯೋರೂಪವಿಭ್ರಮವಿಲಾಸ ಚಾಟೂಕ್ತಿನಿಕರದಿಂದಾಕ್ಷಿಪ್ತ ಮಾನಸನಾಗಿ ಉದಯಾಸ್ತಮಗಳಂನರಿಯದೇ ತದಾಲಿಂಗನ ಚುಂಬನ, ಪ್ರಣಯಕಲಹ, ವಿಯೋಗ, ಸಖೀಜನಾನುಸಂಧಾನ, ಸಮವಿಷಮ ಸಂಯೋಗದಂತಸುಖಾನುಭವ, ವನಜಲವಿಹಾರಪ್ರಮುಖ ನಾನಾವಿಧ ಕ್ರೀಡೆಗಳಿಂದ ವಿಸ್ಮೃತಜಗದ್ವ್ಯಾಪಾರಮುಳ್ಳವನಾಗಿ ದಿನಗಳ ಕಳೆಯುತ್ತಿದ್ದನು,

ಇತ್ತಲಾ ಕಾಂತಿಮಾಲಿನೀದೇವಿಯು ತಾನು ಬಾಗಿಲುದಾಂಟಿ ಮುಂದಕ್ಕಡಿಯಿಡೆ? ಕುಬ್ಜೆಯಾಕ್ಷಣದಿ ಬಾಗಿಲನು ಕವಾಟಗಳಿಂದ ಮುಚ್ಚಲುತ್ತುದ್ವೇಗಕಲಿತಮಾನಸಳಾಗಿ ಹಿಂತಿರುಗಿ ಬಾಗಿಲಿಗೆಬಂದು ಕವಾಟಗಳನೆರಡು ಕೈಯಿಂತರುಬಿನೋಡಲಲ್ಲಾಡದಿರೆ? ಕುಲಗಿರಿಯತೆರನಂತೆ ಕುಬ್ಜೆಯನು ಕೂಗಿದಳು, ಬಹುವಿಧವಾಗಿ ಬಳಲಿ ಬಾಯಾರಿದಳು, ಮರೆದಳು ಕಳೇಬರವ, ಯೋಚಿಸಿದಳಡಿಗಡಿಗೆ, ಮನದೊಳು ಕಲಾವತಿಯ ಕೃತ್ರಿಮವಿದೆಂದೆನುತ ನಿಶ್ಚಯಮಾಡಿದಳು, ಬಳಿಕ ಭೂಪೃಷ್ಟಮಂ ನೇರಿದಳು, ನೋಡಿದಳಪಾರಮಾಗಿರುವ ಕಾಂತಾರವಂ, ಗಗನಚುಂಬಿತ ಮಹಾತರುಷಂಡಪತಿಸಾಂದ್ರಮಾಗಿರುವುದದರಿಂ ನಭೋಮಣಿಕಿರಣಕಪಕಾಶವಿಲ್ಲದೆ ನಿರಂತರ ಛಾಯದಿಂದಿರುವದು, ಅಲ್ಲಿ ನಿಶಿಯಂತೆ ಘೋರತರಮಾಗಿರುವ ವಿಪಿನಮಂಪೊಕ್ಕು ಘೋರಮುಖ, ದುಷ್ಟಖಗ, ಕಟುಕರಾಳಧ್ವಾನಜನಿತಸಾಧ್ವಸಮೂಢಮಾನಸಳಾಗಿ ದಿಕ್ಕುಗಳತಿಳಿಯದೇಲೆ "ಇರುಳುನೋಡಿದಕೂಪದೊಳ್ ಹಗಲುಬಿದ್ದಂತೆ, ಬಹುತರಾನುಭವದಿಂದ ನಿಶ್ಚಿತಮಾದ ಕಲಾವತಿಯ ಕೃತ್ರಿಮದಬಲೆಯೊಳಗೆ ತಿಳಿತಿಳಿದು ಸಿಕ್ಕಿದೆನು,

ಎನ್ನ ಪೋಲುವ ಮೂಢರೀಭುವನದೊಳಗುಂಟೆ, ಎಂದು ನಾನಾವಿಧದಿ ಹಂಬಲಿಸಿ, ವತ್ಸನನ್ನೇನುಮಾಡುವಳೋ ? ದಾರುಣಹೃದಯಳನ್ನೇನು ಮಾಡುವೆನು, ಹಾವಿಧಿಯೇ! ತಾನೇ ತನ್ನವಿವೇಕದಿಂದಿಂತು ದುರ್ಗತಿಯನ್ನೈದಿದೆನು. ಪುತ್ರನೇನಾಗುವನೊ? ಶಿವಶಿವಾ! ಎಂದು ಹಂಬ್ಯೈಸಿದಳು. ತನ್ನುದರವನ್ನೆರಡುಕರಗಳಿಂ ತಾಡನೆಯಮಾಡುತವನಿಯಮೇಲೆ ತನುವನೀಡಾಡುವಳು. ವತ್ಸ ! ಜಗದಾನಂದಕರನಾದ ನಿನ್ನಮೊಗಚಂದಿರನ ನಾನೆಂತು ಕಾಣುವೆನು ಎಂದು ಅಬಲೆಮೂರ್ಛೆಯಂಗೈವಳು! ವಿಪಿನದೊಳು ಮಂದಮಾರುತನ ಸಂಬಂಧದಿಂದೆಚ್ಚೆತ್ತು, ಪುತ್ರನ ಮಹಾಗುಣವನೇ ನೆನೆ ನೆನೆದು ಕರಗಿ ಕಂಬನಿಗರೆದು ವನದಲ್ಲಿ ಸಂಚಾರಮಾಡುತತಿಕೋಮಲಸರೋಜನಿಭಪಾದಗಳಗತಿ ಕಠಿಣಕಂಟಕಗಳೂರೆತಗಲಿರೋದನವ ಮಾಡುತ, ಹಾಕಂದ! ಹಾ ಎನ್ನ ಮಂದಾರ! ಮದನಾವತಾರ! ನೀನೇನಾದೆಯೋ! ಎಂದು ಹಂಬಲಿಸಿ ರೋದನಮಾಡುತ್ತ ನೋಡುತ್ತ ಘೋರಸತ್ವಗಳನ್ನು ಭಯದಿಂದ ಗಡಗಡನೆ ನಡುಗಿ ಮೈಮರೆದು ಮರುಗುತ ಮತಂಗಿಯನ್ನು ನೆನೆನೆನೆದು ವತ್ಸ! ನಿನ್ನ ಇಯಷ್ಟ ಸಫಲಮಾದುದು ಕಡೆಗೆ, ಪರಮಪಾಪಿಗೆ ಮಾಡಿದುಪಕಾರವದು ಮಡದಿ ಕೊನೆಗಾಣುವುದೇ ಎನುತ ನಾನಾವಿಧದಿ ಬರಲುತ ವಿಪಿನದೊಳಗಿಂತೈದುದಿನ ತಿರುಗಿ, ಉರುಶೋಕಶಿಖಾಗ್ರಸ್ತಳಾದ ಕಾಂತಿಮಾಲಿನಿಯು ಕಂಡಳೊಂದು ಕುಲಾಚಲವಂ ಅತಿಭಯಂಕರವಾಗಿ ಗಗನಮಂ ತುಳುಕುತಿಹ ಶಿಖರಸಾಲುಗಳಿಂದ ಬಹುಯೋಜನವಿಶಾಲವಾಗಿರುವುದದು ನೋಡುತೀಗಿರಿಯ ಸಾನುವನೇರಿ ಜರಿಯೊಳು ಬಿದ್ದೊಡಲನೀಗುವೆನು, ದುರ್ಗತಿಯನನುಭವಿಸಿ ಬಿಂನ್ನಾರೇನೆಂದೆನುತ ಕುಲಗಿರಿಯನೇರಿದಳು, ನಾರಿತಾಮನದೊಳಗೆ ಮಥನೆಯಂ ಮಾಡಿದಳು, ಬಂದು ವ್ಯಾಳಿಗೆ ಸುತನು ಜೀವಿಸಿರ್ದಡೆ? ತಾನುಕೋರಿದಿಷ್ಟಗಳೆಲ್ಲ ಕೈಸಾರುವುದು, ಈಗ ಬಂದಂ ತಿಳಿಯದೇಲೆ ಶೋಕಮೂರ್ಛಿತಳಾಗಿ ತನುವನೀಡಾಡಿದಡೆ ಮುಂದೆ ಫಲವೇನುಂಟು, "ಏತಿಜೀವಂತಮಾನಂದೋನರಂವರ್ಷಶತಾದಪಿ" ಎಂದು ಧರಣಿಸುತೆಯು ನುಡಿದಿರುವಳದರಿಂದ ಸಾವಧಾನಮಾಡಿ ನೋಡುವೆನು, ಎನುತಲಾಮಹಾಚಲದ

ಲ್ಲಿ ಸಂಚಾರವಮಾಡುತಿರಲು; ಒಂದು ದಿನವಾಗಿರಿನಿತಂಬದೊಳು ಕಂಡಳ ವಿಚಿತ್ರತರತರುಷಂಡಮಂಡಿತ ತಪೋವನದಲ್ಲಿ ಗೈರುತಲೊಂದು ಪುಷ್ಪ ಫಲಭರಿತ ಪುನ್ನಾಗದಡಿಯಲ್ಲಿ ಕುಳಿತು ನಾನಾವಿಧದಿ ಚಿಂತಿಸುತ ರೋದನವಮಾಡುತಿರಲು;

ಆ ತಪೋವನದಲ್ಲಿ ಚಿರಕಾಲದಿಂ ತಪವಮಾಡುತಿಹ ಜಾಬಾಲಿ ಎಂಬ ಪರಮಋಷಿಯಾರೋದನಧ್ವನಿಗೇಳಿ ನಾರಿಯಾವಳೋ ದುಃಖದಿಂದಳುವಳೆಂದೆನುತ ಬಂದನತಿಕರುಣದಿಂದಿಂದುಮುಖಿ ಇದ್ದೆಡೆಗೆ, ಮಂದಗಮನೆಯು ಕಂಜಳರವಿಂದಬಾಂಧವನ ಪೋಲುವತಿಕಾಂತಿಯಿಂ ಮೆರೆವ ಮುನಿವರನೆಡೆಗೆ ಕಾಂತಿಮಾಲಿನಿಯು ಭಯಭಕ್ತಿಯಿಂದೊಂದಿಸಲು; ಹರಸುತ್ತ ಸರ್ವಮಂಗಳೆಯೋ ಈ ಅಂಗನಾರೂಪದಿಂ ತನ್ನ ವನಕ್ಕೈದಿನಿಂತಿರುವತರುಣಿಯನೋಡಿ ಮನಮರುಗುತಲೆವತ್ಸೆ! ನೀನ್ಯಾರು, ತನ್ನ ವನಕ್ಕೈದೆ ಕಾರಣವೇನು, ರೋದನವ ನೀನ್ಯಾಕೆಮಾಡುತಿಹೆ ಪೇಳೆನಲು ; ಕಾಂತಿಮಾಲಿನಿಯು ನಡುನಡುಗುತಡಿಗಳಿಗೆ ಮಣಿದು ಸಾಷ್ಟಾಂಗದಿಂದಡಿಗಳಿಗೆ ನುಡಿದಳೆಲೇತಂದೆ! ಕೇಳೆನ್ನವಿಧಿಯನ್ನೆನುತವಿವರಿಸಿದಳಖಿಳ ವೃತ್ತಾಂತವಂ ಕೇಳಿದನು, ಜಾಬಾಲಿಯು ಶ್ರೀಯುರಸನೊಲುಮೆಯಿಂ ತಿಳಿದನಿದರಾಂತರ್ಯವೆಲ್ಲವಂ, ಮುಂದೆ ನಡೆವಖಿಳ ವ್ಯಾಪಾರಮಂ ಮನದೊಳಗೆ, ಸುತನ ಮೃತಿಯನ್ನರಿಯಬಾರದೀ ಸತಿಗೆಂದು ನಿಶ್ಚೈಸಿ, ನುಡಿದಳೆಲೆ ವತ್ಸೆ! ಕೇಳ್ ತ್ವತನುಜಕುಶಲದಿಂದಿರುವ ನೀನಳಬೇಡವೆಂದೆರಡುದಿನ ತನ್ನಸೇವಿಸುತಿರು ಮಗನತೋರುವೆನು ಭಯಬಡಬೇಡವೆಂದೆನುತ ಅಭಯಪ್ರದಾನವಂ ನೀಡಲು; ಆ ಕಾಂತಿಮಾಲಿನಿಯು ಕಡುದುಃಖವಂಬಿಟ್ಟು ಅಡಿಗಡಿಗೆ ಪೊಡಮಟ್ಟು ಪರಮ ಸಂತೋಷದಿಂ ಸೇವಿಸುತಿರುತಿರ್ದ್ದಳೆಂಬಲ್ಲಿಗೆ

ಇಂತು ಕರ್ನಾಟಕ ಭಾಷಾವಿರಚಿತಮಾದ ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನನಿಖಿಲದೇಶಾವತಂಸ ಕರ್ನಾಟಕಜನಪದಸಂಪದದಧಿಷ್ಠಾನಭೂತ ಶ್ರೀಮನ್ಮಹಿಶೂರ ಮಹಾಸಂಸ್ಥಾನಮಧ್ಯದೇದೀಪ್ಯಮಾನಸಕಲಕಲಾನಿಧಿಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ

ನಿಖಿಲ ನಿಜ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ಪರಮೇಶ್ವರ ಪ್ರೌಢ ಪ್ರತಾಪಾ ಪ್ರತಿಮ ವೀರ ನರಪತಿ ಬಿರುದೆಂತೆಂಬರ ಗಂಡಲೋಕೈಕ ವೀರ ಯದುಕುಲ ಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀ ಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಅತ್ರೇಯಸಗೋತ್ರ ಆಶ್ವಲಾಯನ ಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರ ಪುರವರಾಧೀಶ ಶ್ರೀಮತ್ಕೃಷ್ಣರಾಜ ಒಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀಮತ್ಕೃಷ್ಣರಾಜ ವಾಣೀವಿಲಾಸವೆಂಬಾಂಕಿತದಿಂದ ಕರ್ನಾಟಕ ಭಾಷಾ ವ್ಯಾಖ್ಯಾನ ರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪ ಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯ ಸಂವಾದದಲ್ಲಿ ಅಷ್ಟಾದಶೋಧ್ಯಾಯಃ

---

ಹದಿನೆಂಟನೇ ಅಧ್ಯಾಯವು ಸಂಪೂರ್ಣವು.

ಶ್ರೀರಾಮಾಯನಮಃ.

---

## ಹತ್ತೊಂಭತ್ತನೇ ಅಧ್ಯಾಯವು.

---

ಅತ್ತಲಾ ಮಾಹಿಷ್ಮತೀನಗರದೊಳು ಸಹಸ್ರಾಯುವಾಬಿಲ ಪ್ರವೇಶಮಂ ಮಾಡಲಾಕ್ಷಣ ಮಹೋತ್ಪಾತಗಳು ಪುಟ್ಟಿದವು, ಮಧ್ಯಾಹ್ನ ಕಾಲದೊಳು ಮಹಾಂಧಕಾರವಾವರಿಸಿದುದು, ತಾರೆಗಳು ನೆಲಕುರುಳ ಬೀಳುತಿಹವು, ಅಖಿಲ ದೇವಾಲಯಗಳೊಳು ಶಿಲಾದಿ ವಿಗ್ರಹಗಳನವರತ

ಹೋ! ಎಂದು ಕೂಗಿದವು, ಗಗನದಿಂ ರಕ್ತಧಾರೆಗಳು ಸುರಿದವು, ಸಕಲ ದಿಕ್ಕುಗಳಲ್ಲಿ ಧೂಮಕೇತು ಪುಟ್ಟಿದುದು, ಅಂಬರದಿ ಪ್ರತಿ ಸೂರ್ಯನುದಯಿಸಿದನು, ಗಜತುರಗವಶ್ವಗಳ ಬಿಡುತಿರ್ದವು, ಆನಿತರೊಳು ರತ್ನಮಯ ಹರ್ಯಕ್ಷಕೇತನವು ಮುರಿದು ನೆಲಕುರುಳಿತು, ಮಹೀಪಾಲ! ಇಂತಹ ಮಹಾ ಪುರುಷನಸ್ತಮಯಕಾಲದೊಳು ಘೋರತರ ನಾನಾ ಧಮಹೋತ್ಪಾತಗಳು ಕಾಣುತ್ತಿರಲು, ಅದಂ ನೋಡಿ ಸಾಹಿಬಸ್ಮೃತೀ ಪತಿಯು ಪರಮ ಸಾಧ್ವಸದಿಂದ ಧರ್ಮಗುಪ್ತನ ಕರೆದು ಸಚಿವಮಣಿ! ಮಹದುತ್ಪಾತನಿಕರಗಳ ನೋಡಿದೆಯಾ, ಇದಕ್ಕೆ ಕಾರಣ ಫಲಗಳೇನೋ? ಶಂಕರನೇ ಬಲ್ಲ, ಇದಕೆ ತಾವೀಗ ಮಾಡುವುದೇನು ಪೇಳೆನಲು, ಧರ್ಮಗುಪ್ತನು ಕರವ ಮುಗಿದೆಂದನೆಲೆ ಜೀಯ್ಯ! ನಗರಕ್ಕೆ ತಿರುಗಿ ನೀನೈದಿದುದೇ ಕಾರಣವು ಫಲವು,ಲೋಕೋತ್ಕೃಷ್ಟ ವಸ್ತುವಿಗೆ ಮಹದೆಡರು, ಹರನೇ ರಕ್ಷಿಸಬೇಕು, ದಯ ಫಲಿತಾರ್ಥವನು ಬಿನ್ನಹವ ಮಾಡುವೆನು, ಮನದೊಳವಧರಿಸುವುದು, ಮೂರು ಲೋಕದಿ ನಿನಗೆ ಎಡರನಾಚರಿಸುವರ ಕಾಣೆಸಿದು ನಿಶ್ಚಯವು, ನಿನ್ನ ಮನೆಯೊಳಗೆ ಏನಾದಡಾಗುವದು, ಜೀಯ್ಯ! ಕ್ಷಮಿಸುವುದೆನ್ನಬಿನ್ನಹವ, ನಾರಿಯರ ನುಡಿಗೇಳಬಾರದಿದು ಸರ್ವಮತ ಸಿದ್ಧಾಂತ, ಈಗ ಪ್ರಕೃತದೊಳಖಿಳ ಭೂಸುರೋತ್ತಮರನ್ನು ಕರಸುತುತ್ಪಾತಗಳಗುಚಿತಶಾಂತಿಯ ಮಾಡಬೇಕೆಂದುಸಚಿವಮಣಿ ಬಿನ್ನೈಸುತಿರಲು ; ವಿಮಾನವಂ ಕಾದಿರುವ ಸುಭಟರೊಳಗೋರ್ವನೈತಂದು ನರಪತಿಯಡಿಗೆ ಮಣಿದು ಕರಗಳ ಮುಗಿದು ಜೀಯ್ಯ! ರಿಕ್ತ ವಿಮಾನ ಗಗನವನ್ನೇರಿ ನಡೆದುದು ನಿಮಿಷಮಾತ್ರದಲಿ, ಮಾರುತನಿಗಾವೇಗವಿಲ್ಲಿಹುದು ಎಂದೆನುತ ಬಿನ್ನಹವ ಮಾಡಲು ; ನರಪತಿಯು ಚಿಂತಾಬ್ಧಿಯೊಳ್ಮುಳುಗಿ ಮಣಿಮಂತನೆಂಬೋರ್ವ ಸಚಿವನಂ ಕರೆದು ನೃಪವತ್ಸನಂ ಕರೆತರುವುದೆಂದು ಕಟ್ಟಲೆ ಮಾಡಲು, ಆ ಸಚಿವ ಜವದಿಂ ಸಹಸ್ರಾಯುವಿನ ನಿಲಯಮಂ ಐದಿ ಕಾಣದೇ ವಿಚಾರಿಸುತ ನೆಲೆಯ ತಿಳಿಯದೆ ನರಪತಿಗೆ ಬಿನ್ನೈಸಲತ್ಯಂತ ಭಯದಿಂದ, ಸತ್ಯವ್ರತಾತ್ಮಜನ ಕರಸಿ ಕೇಳಲು, ಜೀಯ್ಯ! ಕಾಣೆನರಮನೆಯೊಳಗೆ, ಕ್ಷತ್ರಿಯರ

ಗೃಹದೊಳಗೆ ಇರುವನೋ ಏನೋ ತಾನರಿಯೆ ಎಂದೆನಲು; ನೃಪನು ಸುಕಜುದೊಳಾಗ್ರಸದಿಂದೆದ್ದು ಕಾಂತಿಮಾಲಿನೀದೇವಿಯರ ಮನೆಗೆ ನಡೆತಂದು ಸತಿಯಂತಃಪುರದ ಕಾಣದತಿಚಿಂತೆಯಿಂ ಕರದಾಮಾತಂಗಿಯನು ಕೇಳೆ, ನರಪತಿಯಡಿಗೆ ಮಣಿದು ನುಡಿದಳು. ಜೀಯಾ! ನೂತನಾಲಯವ ತೋರಿಸಿ ಕಲಾವತೀದೇವಿ ಕರದೊಯ್ದಳೆಂದೆನುತ ಕೇಳಿದೆನು ಕಾಣೆನೆಂದೆನುತ ಬಿನ್ನೈಸೆ, ನೃಪನಾ ಮಾತಂಗಿಯು ನೀನೇ ಪೋಗುತ ಕಲಾವತಿಯ ಅಂತಃಪುರಕ್ಕೆ ತಿಳಿಯುತೀವಾರ್ತೆಯನು ಜವದಿಂದ ಬರುವುದೆನೆ, ನಡೆದಳತಿತ್ವರೆಯಿಂದಲಾಕೆಯು ಅರಮನೆಗೆ, ಮೋಹರಸ ಕಾಣದೆ ಕಲಾವತಿಯುಷ್ಟೆಗೆ ಬಂದೆರಗಿ ಕಾಂತಿ ಮಾಲಿನಿದೇವಿ ಎಲ್ಲಿಹಳು ಎನುತಾಮಾತಂಗಿ ಪ್ರಶ್ನೆಯಂ ಮಾಡಲು; ಕಲಾವತಿಯುಮಳಗುಚಿಹಾಸವನಿತ್ತು ತನ್ನಂಗದೊಳಗಿರ್ದ ಸರ್ವಭೂಷಣಗಳ ನಾಕೆಗೆ ಸಮರ್ಪಿಸಿ ನುತಿಸಿ ತಾನರಿಯೆನೆಂದೆನಲು; ನೀವು ನೂತನವಾಗಿ ರಚಿಸಿರುವ ನಿಲಯಮಂ ನೋಡೆ ಕರದೊಯ್ದರೆಂದಾಳಿಯರು ತನ್ನೊಡನೆ ಪೇಳದರು, ತಾನು ನರಪತಿಯಡಿಗೆ ಬಿನ್ನೈಸೆ ನೋಡಿ ಕರತರಲೆನ್ನ ಕಳುಹಲಾನೈದಿದೆನು ತಾಯೆ! ಕೇಳೆಂದೆನಲು; ಕೇಳಿ ಕಪಟೋಪಾಯ ಕುಶಲಳಾದ ಕಲಾವತಿಯು ಮಾನಿನೀಮಣಿ! ಕೇಳು ದೇವಿಯರು ಪುತ್ರರಿಂದೊಡಗೂಡಿ ದಯಮಾಡಿ ನೋಡೆ ನೂತನ ಗೃಹವ ನಿಜಸೌಧಮಂ ಕುರಿತು ಚಿತ್ತೈಸಲು, ಅನು ತನ್ನಾಲಯಕೆ ಬಂದಿನಿದು ವೃತ್ತಾಂತವೆಂದೆನಲು; ಮಾತಂಗಿಯು ಮಹತ್ಸಂಶಯಾವಿಷ್ಟಳಾಗಿ ಕಲಾವತಿಯ ಅತಿ ವಿನಯಮಂ ನೋಡಿ ವಂಚನೋಪಾಯ ನಡದಿರುವುದೇನೋ ಎಂದು ನಿಶ್ಚಯ ಮಾಡಿ ಮನದೊಳತಿ ದುಗುಡದಿಂ ತಾಯೆ! ಪೋಗುವೆ ನರಸನಡಿಗೆ ತಿಳುಹುವೆನೆಂದು ತೆರಳಿ ಬಂದೊರೆಯಲು, ಆ ನರಪತಿಯು ಪರಮ ವಿಸ್ಮಯದಿಂದ ಧರ್ಮಗುಪ್ತನ ಕರಸಿ ಸಚಿವಮಣಿ! ಸತಿಸುತರು ಕಾಣೆನರಮನೆಗಳೊಳು, ಅತಿ ಚದುರೆ ರಚಿಸಿರುವ ನೂತನಾಲಯಕೆ ನೋಡೆ ಕರದೊಯ್ದಳೆಂದು ಸಹಚರಿಯರೆಲ್ಲರು ಪೇಳ್ವರಾಕೆಯುಂ ಕೇಳಿದಡೆ ನೋಡಿ ಪೋದರು ಎಂದು ಪರಮದಾರುಣ ಹೃದಯಳಾದ ಕಲಾವ

ತಿಯು ಪೇಳಿದಳು ಗಡ, ಮಗನನೇನುಮಾಡಿದಳೋ, ಹಾ ! ಶಿವಶಿವಾ
ಎಂದು ನೃಪನಶ್ರುಗಳ ಸುರಿಸುತಿರೆ, ಸಚಿವನತಿ ಖೇದದಿಂ ದೂತರನ
ಕರಸುತರಸಲು ಕಳುಹಲು, ಸಹಚರರು ಸತ್ವರದಿ ನೋಡಿ ಕ್ರೀಡಾವನದಿ
ಕ್ರೂಡೆಸರಯೂ ನದೀತೀರದೊಳು, ಪುಷ್ಪಿತರಸಾಲ ಪುನ್ನಾಗ ಪಾಟಲೀ
ವೃಕ್ಷ ನಿಬಿಡಸುಚ್ಛಾಯದಿಂ ಮಂದಮಾರುತನ ಸಂಚಾರದಿಂ ರಮಣೀಯ
ದಾಗಿರುವ ಪುಳಿನ ಪ್ರದೇಶದೊಳು ಮಲ್ಲಿಕಾ ಮಾಲತೀ ಕೋಮಲ
ಲವಂಗ ಲವ ನೀಲಲತಾ ನಿಲಯದೊಳಗರಸಿ ಕಾಣೆವು, ಜೀಯ್ಯಾ ! ಸ
ಕುಮಾರ ನಡಿಗಳನು, ಎನುತ ಬಿನ್ನಹ ಮಾಡೆ, ಧರಣೀಪತಿಯು ಚಿಂತಿ
ಸುತಲೊಂದೆರಡುದಿನ ಕಳೆದುಬಂದಾ ಕಲಾವತಿಯ ಮಂದಿರಕೆ, ಪತ್ನಿ
ಯಿಂದಾ ಮಹೀಪಾಲನು ಪೂಜಿತನಾಗಿ ಮಂಚದೊಳು ಮಂಡಿಸುತ
ಸತಿಯೊಡನೆ ಕಾಂತಿ ಮಾಲಿನಿ ಸಹಸ್ರಾಯು ವಿವರೀರ್ವರಂ ಕಾಣೆನೇನಾ
ದರೋ? ಎಲ್ಲಿಗೈದಿದರೋ ? ಮತ್ಯಾರೇನು ಕೃತ್ರಿಮವ ಮಾಡಿದರೋ
ಜೀವಂತರಾಗಿಹರೋ? ಇಲ್ಲವೋ? ಎಂದೆನುತ ದುಃಖದಿಂ ನುಡಿಯಲು
ಆ ಕಲಾವತಿಯು ನಸುನಗುತ ನರಪತಿಯೊಡನೆ ಜೀಯ್ಯಾ ! ತಾ
ದರಭಿಪ್ರಾಯಮಂ ಮೊದಲೇ ನಿನ್ನಡಿಗಳಿಗೆ ಬಿನ್ನಹ ಮಾಡಿಗುವೆ
ಚಿತ್ತದೊಳು ತಾರದಿರೆ ತಾನು ಮಾಡುವುದೇನು, ಕಾಂತ! ಕೇಳವಧ
ನು, ಲೋಕಾತಿಶಯನಾದ ಪುರುಷನಲ್ಲಿ ಕೃತ್ರಿಮೋಪಾಯಗಳು ನ
ಯುವುದೆ, ಕಾಂತಿಮಾಲಿನಿಯುವನಂ ಪುತ್ರನೆಂದೆನುತ ವ್ಯವಹಾರವಂಮಾ
ಡಿಕೊಂಡಿದ್ದಳು, ಅವನಿಪತಿ ! ಚಿತ್ತೈಸು, ನಾರಿಯರು ರಾಜ್ಯವನಾ
ಳುವರೆ, ಭುವನದೊಳು ಪ್ರಿಯನೊಲುಮೆಯಿಲ್ಲದ ಪ್ರಮದೆಗೆ ಕುಮಾರ
ನುದಯಿಸುವನೆ, ಪರದೈವವು ಮಾನುಷಗೆ ಪ್ರತ್ಯಕ್ಷವಾಗುವದೇಂ ಸು
ಲಭವೇ, ಲೋಕದೊಳಗಪಕೀರ್ತಿಗಂಜರೆ ಸಜ್ಜನರು, ಕಾಂತ! ಸಮ
ಕಾಲದೊಳು ದಿವ್ಯವಿಮಾನವಾಕಸ್ಮಿಕದಿ ಗಗನಮನ್ನೇರಿ ಬಲುಜವದಿಂ
ಪೋದಬಳಿಕಿನ್ನು ಸಂಶಯವೇಕೆ, ಯಾತಕ್ಕೈದಿದರೋ, ಮೋಹಿನ್ನೇನ
ಮಾಡಿದರೋ ಕಾಣೆ, ನಿನ್ನ ಮನದಳಲಂನೋಡಿ ವಿಷಾದದಿಂದೆನಗೆ ತೋ
ರಿದರ್ಥಗಳ ಬಿನ್ನೈಸುವೆನು, ಬನ್ನಣೆಯನುಡಿಯರದೆನ್ನ ಕಠಿಣೋಕ್ತಿಗ

ಮನ್ನಿಸುವುದೆನೆ, ನೃಪತಿಕನ್ಯೆಯಾಲಾಪವನು ಕರ್ಣದಿಂ ಕೇಳಿ ಬಲುಖಿನ್ನನಾಗುತ ತರುಣಿ! ನಿನ್ನಂಗನೆಲ್ಲಿಹನು ಎನುತ ನರಪತಿಯು ಕೇಳೆ, ಜೀಯ! ತನ್ನರಮನೆಯೊಳಿರುವನೆಂದೆನೆ, ಮಹೀಪತಿಯು ನಿಜಪತ್ನಿಯು ಪಿಂಡಿಸಲು ರಂಧ್ರಮಂ ಅರಸಿ ಕಾಣದೆ ಮಹಾಸಂಶಯದಿ ಮರುಗುತ್ತಲಿರುತ್ತಿರೆ; ಸಹಸ್ರಾಯುವಿನ ಪತ್ನಿಯರು ಕೇಳಿ ಪರಿತಾಪದಿಂದಳಲುತ್ತಿರಲಾ ಮಹಾಧೇನುವಶ್ರುಗಳನ್ನು ನಿರುತ ಬಿಡುತಲಿಂತು ನಗರದೊಳು ಕಲ್ಮಷವು ಕವಿದುದಿಂತಲ್ಲದಾ ಜನಪದದೊಳಖಿಳ ಜನರು ಪರಮಸಂತಾಪಕಲಿತಹೃದಯರಾಗುತ ಹೇತುವನು ಕಾಣದಳಲುತ್ತಿಹರೇನೆಂಬನದ್ಭುತವನು, ಅರಸ ಕೇಳವಧರಿಸು:—

ಇತ್ತಲಾ ಕಿಂಪುರುಷಖಂಡದೊಳ್ ಮಣಿಪುರದಲ್ಲಿ ನೆಲಸಿರುವ ಸುಪ್ರಭೆಯು ಪತಿಯು ಗುರುಕಾರ್ಯಗೌರವದಿಂದ ಗರ್ಭದೊಳಗುದಯಿಸುವನು ಲೋಕಾತಿಶಯನಾದ ಸುತನೆಂದು ಪರಿಪರಿಯುಪಾಯದಿಂ ತನ್ನ ಸಂತೈಸುತ್ತ ಪ್ರಥಮಗರ್ಭದಿಂ ಬಳಲುತ್ತಿಹ ತನ್ನಂ ತೊರೆದೈದೆ, ಬಳಿಕ ನವಮಾಸಗಳು ತುಂಬಿ ಸುಮಕರನಂತೆ ಪರಮತೇಜೋಮಯನಾದ ಪುತ್ರನುದಯಿಸಲು, ಪತಿಯಾಜ್ಞೆಯಿಂದಾಶಿಶುವಿಗನ್ವರ್ಥವಾಗಿಹ ಸುಶರ್ಮನೆಂಬ ನಾಮವನಿರಿಸಿ ಭುವನಾತಿಶಯಲೀಲೆಯಿಂ ಮೆರೆಯುತ್ತಿಹ ಬಾಲಕನ ಕ್ರೀಡೆಗಳ ನೋಡುತಾನಂದದಿಂ ಮೆರೆದು ಪತಿವಿರಹವಂ ಮರೆಯುತಿರಲು; ಆ ಶಿಶುವನೊಂದು ದಿನ ಸಕಲಸುರಮುಕುಟತಟಘಟಿತ ಮಣಿನಿಚಯರುಚಿನೀರಾಜಿತಾಂಘ್ರಿಯುಗನಾದ ಧಿಷಣಾಚಾರ್ಯನೈತರಲು ಯದೃಚ್ಛೆಯಿಂದರಮನೆಗೆ, ಸುಪ್ರಭೆಯು ಕುವರನಿಂದೊಡಗೂಡಿ ಚರಣಗಳಿಗತಿಭಕ್ತಿ ಭಯದಿಂದಮಣಿದು ಮಣಿಮಯಮಾದ ದಿವ್ಯಪೀಠದೊಳು ಸುರಗುರುವಂ ಕುಳ್ಳಿರಿಸಿ ಮಧುಪರ್ಕ ಮೊದಲಾದಖಿಳ ಪೂಜೆಗಳ ಮಾಡುತ್ತ ವಿನಯದಿಂ ಪರಿಪರಿಯ ವಿಧದಿಂದ ನುತಿಮಾಡೆ, ಪರಮಕರುಣಾಳುವಾದ ಅಮರಗುರು ಹರಿಯೊಲುಮೆಯುಚಿತವಾಗಿರುವನಿವನೆಂದೆನುತ ಪರಮಲಕ್ಷಣದಿಂದ ಕುನವಿ ನಿಶ್ಚಯಮಾಡಿ ಶರದಾಸುದರ್ಶನನನಂಕದೊಳು ಕುಳ್ಳಿರಿಸಿ ಪರಮಾನುರಾಗದಿಂ ಕುತ್ತರಿಸಿ, ರಸನೆಯೊಳು ಬರೆದು ಬೀಜಾಕ್ಷರವನೊರೆ

ದಖಿಳವಿದ್ಯೆಗಳ ನರಹರಿಯು ಮನುವನ್ನು ಕರ್ಣದೊಳು ಕರುಣದಿಂದುಪದೇಶಿಸುತ್ತಾ, ಶಿರದಿ ಕರವಿಟ್ಟು ಪರಮಾನುಗ್ರಹಗೈಯ್ಯುತ್ತಂಬರವನಡರಿ ನಡೆಯಲು ಸುರಾಚಾರ್ಯನು, ಅಂದಿನಾರಭ್ಯ ನರಪತಿಕುಮಾರನತ್ಯಧಿಕತೇಜಸ್ಸಿನಿಂದಭಿವೃದ್ಧನಾಗುತ್ತಿರಲಾರು ಹಾಯನವಯಸ್ಸಂಪನ್ನನಾಗಲಾಖಂಡದೊಳಗಿರುವಖಿಲ ಭೂಭುಜರಂ ವಿಗ್ರಹದಿ ನಿಗ್ರಹಿಸಿ, ನಿಜತೀವ್ರಶಾಸನಮಹೋಗ್ರತರಪಾಶದಿಂ ಬದ್ಧರಂ ಮಾಡುತ್ತಾಖಂಡಲನತೆರನಂತೆ ಪ್ರೌಢಿಯುತಾಖಂಡವಂ ಸಿರುತ್ತಿದ್ದನು;

ಇತ್ತ ನಿಜಜನಕನಾಪುತ್ರಕಾಶನಿಯ ಬಲು ಕೃತ್ರಿಮೋಪಾಯದಿಂ ಮೃತ್ಯುವಿನ ತುತ್ತಾಗೆ, ನಿಜಪುರದಿ ಪುಟ್ಟುತ್ತ ಮಹೋತ್ಪಾತನಿಕರಪತಿಸಾಧ್ವಸವಸೂಚನೆಯಂ ಮಾಡುತ್ತಿರೆ, ಸುಪ್ರಭಾತನಯನು ನಿಜವಸದಿಂದ ಜನನಿಯೆಡೆಗೈತಂದು ಮಣಿದು ಕರಗಳಮುಗಿದು, ಅಂಬ! ಮಹದುತ್ಪಾತನಿಕರಗಳು ಥರಥರದಿ ಕಾಣುತ್ತಿವೆ, ಜನಕನೆಂತಿರುವನೋ, ತಾಯೆ! ತನಗಪ್ಪಣೆಯನಿತ್ತಡೆ ನಿಜೋದ್ಧತಸೇನಾನಿವಹಮಂ ಬೆರಸಿ ಭಾರತ ಮಹಾವರ್ಷದೊಳಗಿರುವ ಜನಕನಿಹ ಮಾಹಿಷ್ಮತೀನಗರಮನ್ನೈದಿ, ದುರ್ಮುಖಾಸುರನ ಕುಲಮಹಾರಣ್ಯದಾವನಾಗಿರುವ ನಿಜಜನಕನಡಿದಾವರೆಯ ಕಂಡು ಕರೆತರುವೆನೆಂದೆನೆ, ಸುದರ್ಶನನ ಸೂಕ್ತಿಕೇಳಿ ಸುಪ್ರಭೆಯು ತದ್ದರ್ಶನಾಲಾಪಜನಿತಾನಂದದಿಂದ ಪರವಶಳಾಗಿ ಮಗನಂ ತೆಗೆದಪ್ಪಿ ತನ್ನಂಕದೊಳು ಕುಳ್ಳಿರಿಸಿ ಶಿರವನಾಘ್ರಾಣಿಸುತ ಸುತನ ಬಾಲಕ್ರೀಡೆ ಮೊದಲಾದ ಲೋಕಾತಿಶಯಮಾದ ಮಹಿಮೆಯನ್ನು ತನ್ನೈರೆಯನೋಡಲಿಲ್ಲೆಂಬ ಮನದಳಲಿನಿಂದೆಂದಳೆಲೇ ವತ್ಸ! ಕುಲಗಿರಿಗಳು ಘೋರಕಾಂತಾರಸಂತತಿಗಳಿಂದಗಣಿತಾಗ ಧನದ ನದಿಗಳಿಂ ವ್ಯವಹಿತಗಳಾಗಿರುವ ವರ್ಷಗಳನ್ನೈದುವರೇ ಮಾನುಷರು, ಕಂದ! ಕೇಳ್ ಸಂದರ್ಭವಿಲ್ಲದಾಲಾಪದಿಂದೇನು ಫಲ, ಪತಿಯನಾ ಇಂದಿರಾಪತಿಯೇ ಕರತಂದು ತೋರಲಿಬೇಕು, ಸಂದೇಹವಿಲ್ಲೆನುತ ಇಂದುಮುಖಿನುಡಿಯುತಿರೆ, ಚಂದ್ರಧರನಂತೆ ಖತಿಯಿಂದ ನಿಜಜನನಿಯಂ ಕುರಿತಾಸುದರ್ಶನನು ನುಡಿದನೆಲೆತಾಯೆ! ಕುಲಗಿರಿಗಳನು ಕತ್ತರಿಸಿ ಕೇಳನವನಾದಡೆಯು ಅತಿಸುಲಭದಿಂ ನಡೆಯುವವ್ರೋ ಲಂಬ!

ಕೇಳತಿಸುಗಮಮಾರ್ಗಮಂ ರಚಿಸುವೆನು, ನಿಮಿಷದೊಳು ನಿಜಬಾಹುಧೃತ ಗದಾಘಾತದಿಂ ವಿಪಿನಗಳನೆಣಿಕೆಯೊಳು ತರುವೆನೆ, ಜನನಿ; ನಿನ್ನಡಿಯಾಣೆ,ನಿಮ್ನಗಾನಿಕರಗಳು ತನಗೆಡರನಾಚರಿಸಬಲ್ಲವೆ? ನಿಜಶರಾಸನಗಳತಶರಗಳಿಂ ಕಟ್ಟುವೆನು ಸೇತುವೆಯ ಚತುರಂಗಬಲವದರಮೇಲೆ ನಡೆವಂದದಲಿ, ಇದಕೆ ಚಿಂತಿಪುದ್ಯಾಕೆ, ಜನನಿ! ಪರಿಕಿಸಿ ನೋಡು ತನ್ನ ಸಾಹಸವ ನೋಡೆಂದೆನುತ ನುಡಿಯುತಿರುವ ತನುಜಾತನಾಗ್ರಹವನೋಡಿ ವಿಸ್ಮಿತಳಾಗಿ ಪ್ರತಿವಚನವಂ ನುಡಿಯಲುದ್ಯುಕ್ತವಾಗುವನಿತರೊಳು ತಾಂ ಚೇಟಿಕೆಗಳೈತಂದು ಬಿನ್ನೈಸಿದರು-ತಾಯೆ! ರಿಕ್ತವಿಮಾನ ನಿಮ್ಮಂದಂಬರಪಥದಿ ಮಾರುತನ ಸೋಲಿಸುವವೇಗದಿಂದರಮನೆಯ ಬಾಗಿಲೊಳು ಬಂದಿರುವುದೀಗಲೇ, ಜನನಿ! ಜವದಿಂದ ದಯೆಮಾಡಿ ನೀನೋಡಬೇಕೆಂದೆನುತ ಬಿನ್ನಹವಮಾಡಲು; ಆ ಸುಪ್ರಭೆಯು ಸಾಧ್ವಸತ್ರಸ್ತಮಾನಸಳಾಗಿ ತವಕದಿಂದೆದ್ದು ಸುತನೊಡನೆ ನಿಜಸೌಧದಿಂದಿಳಿದು ಬಂದಾದಿವ್ಯಯಾನದೆಡೆಗೊಂದಿಸುತ ರಿಕ್ತವಾಗಿರುವುದಂ ಕಂಡು ಪತಿಗನ್ಯಥಾಭಾವವಂ ಮನದಿ ನಿಶ್ಚಯಮಾಡಿ ಮೈಮರೆದು ರೋದನವಮಾಡುತ್ತವನಿಯಮೇಲೆ ಬಿದ್ದು ಮೂರ್ಛೆಯನೈದಿ ಪ್ರಿಯತಮನಗುಣಗಳಂ ನೆನೆನೆನೆದು ಹಂಬಲಿಸುತಿನೆಯುನೇನಾಗನೋ? ಹಾವಿಧಿಯೇ! ಪತಿಯ ಮುಖಚಂದಿರನ ನೋಡುವೆನದೆಂತಹಹ! ಎಂದು ನಾನಾವಿಧದಿ ಕುರರಿಯಂತೊರಲುತಿಹ ಜನನಿಯಂ ನೋಡಿ, ಸುತನೆಂದನೆಲೆತಾಯೆ! ನೀನಳುವದೇತಕೆ, ಇಂತು ದಶಶತಾಯುವಿಗೆ ಮೃತಿಯೆಂತು ಸಂಭವಿಸುವುದು, ಚಿಂತೆಯಿಲ್ಲ, ಅಪಮೃತ್ಯುವಾದಡೊಂದೇ ನಿಮಿಷಮಾತ್ರದೊಳು ಪರಿಹಾರಮಾಡುವೆನು, ಭಯಬ್ಯಾಡನೋಡೆನ್ನ ಸಾಹಸವ ಶ್ರೀಹರಿಯ ಕರುಣದಿಂದೆನುತ ನಿಜಜನನಿಯನುಸಂತೈಸಿ, ಸಚಿವಮುಖಸಕಲ ಪ್ರಕೃತಿಗಳನ್ನು ಕರೆದವರಿಗುಚಿತೋಕ್ತಿನಿಕರಗಳಪೇಳೆ, ಆ ಸಚಿವರೊಳಗತ್ಯಧಿಕಮತಿಯುಳ್ಳ ಶಿಬಿಯೆಂಬ ಪರಮಾಪ್ತಮಂತ್ರಿಯಂ ಕರೆದವಗೆ ನಿಖಿಲಾಧಿಕಾರವಂ ದಯೆಮಾಡಿ ಮುದ್ರಿಕೆಯನಿತ್ತು, ಮಿಗಿಲಾದವರಾತನಾಜ್ಞೆಯೊಳಿರುವುದೆನುತ ಕಟ್ಟಲೆಮಾಡಿ, ಜನಕನಡಿದಾವರೆಯ ದರುಶನಕೆ ಪೋಗಿಬಹೆನತಿಜಾಗರೂಕರಾ

ಗಿರುವುದನವರತ, ಕೇಳ್ಸಚಿವ! ನೀನೊಂದೇಮನದಿಂದಲುಭಯಾಯತ್ತ
ದೃಷ್ಟಿಯುಳ್ಳವನಾಗಿ ಮೂರುಶಕ್ತಿಗಳಿಂದ ದ್ವಿಯುಗಪರಮೋಪಾಯ ಪ
ರಿಶೀಲನಾಸಕ್ತಬುದ್ಧಿಯುಳ್ಳವನಾಗಿ, ಸ್ವಪ್ರಭಾವಿಷಯದೊಳು ನಾತ್ಯ
ಗ್ರವೃದುವಾಗಿ, ಸಪ್ತಪ್ರತೀಕಸಂಪೂರ್ಣವಾಗಿಹ ರಾಜ್ಯಲಕ್ಷ್ಮಿಯೊಳು
ನಿರತಾನುರಕ್ತಮಾನಸನಾಗಿ ಪ್ರೇರಿಸುವದು ಧರಣಿಯನು, ಸಂತತದ್ಯೂ
ತವನಿತಾಸಕ್ರೀಡೆಯೊಳನಿರತನೀನಾಗದಿರು, ಕಾರ್ಯಸಾಧನದಲ್ಲಿ ಕಾತ
ರವತಾಳದಿರು, ಪೂರ್ವಮರ್ಯಾದೆಗಳ ಕನಸಿನಲ್ಲಿ ಮೀರದಿರು, ಸಚಿವ!
ನೀವ್ಯಾಜದಿಂ ನಿಗ್ರಹಾನುಗ್ರಹವಮಾಡದಿರು, ದುರ್ಜನರಿಗಾಸ್ಪದವನೀ
ಯ್ಯದಿರು, ಅರ್ಥಾಭಿಲಾಷೆಗಳನಾಕ್ಷಣದಿ ಮಾಡುತಿರು, ಜಾತಿಧರ್ಮಗ
ಳನ್ನುವಿರತನೀನೋಡುತಿರು, ಭೂಜೀವಜೀವತಾನಿಕರಗಳ ವೃತ್ತಿಯನು
ಕಣ್ದ್ಧದು ನೋಡದಿರು ಎಂದು ನಾನಾವಿಧದಿ ರಾಜನೀತಿಯನೊರೆದು ಮಾ
ಲತೀ ಎಂಬ ನಿಜಸಖಿಯೊಡನೆ ಜನನಿಯಂ ಆ ದಿವ್ಯ ಯಾನದೊಳು ಕು
ಳ್ಳಿರಿಸಿ ನಿಜನಿಷಂಗಗದಾಸಿ ಚಾಪಮೊದಲಾದಖಿಳ ಶಸ್ತ್ರಾಸ್ತ್ರನಿಕರಗಳ
ನಾಪಿಮಾನದೊಳಿರಿಸಿ, ಸರ್ವರಪ್ಪಣೆಗೊಂಡು ದ್ವಿಜರ ಪಾದಕೆ ನಮಿಸಿ,
ದಿವ್ಯಕವಚಕಿರೀಟಕುಂಡಲಾಂಗದ ಕಟಕಹಾರನೂಪುರ ಕಾಂಚೀ ಮೊದ
ಲಾದ ಭೂಷಣಗಳಿಂದಲಂಕೃತನಾಗಿ, ಕರವೀರನೆಂಬ ಸಾರಥಿಯನೊಡ
ಗೊಂಡು ಪರಮಸುಂದರನಾದ ಸುಕುಮಾರನಾಮನೋಜವವೆಂಬ ಯಾನ
ಮನ್ನೇರಿ ಭೋ ವಿಮಾನರಾಜ! ಮಾಹಿಷ್ಮತೀ ನಗರಿಗೈದಬೇಕೆಂದೆನಲು;
ರಾಮಚಾಪವಿಮುಕ್ತಬಾಣದಂತಂಬರದೊಳತ್ಯಂತ ವೇಗದಿಂ ವಿಮಾನವು
ಪೋಗುತ್ತಿರಲು ;

ಆ ಮಹಾಚಲದಲ್ಲಿ ವಾಸವಂಮಾಡುವ ಜಾಬಾಲಿ ಎಂಬಪರಮಋ
ಷಿಯಾಗಂತರಿಕ್ಷದಿ ಬರುವ ದಿವ್ಯ ತೇಜೋಮಯವಾದ ಯಾನಮಂಕಂ
ಡು ತಿಳಿದಾಸುದರ್ಶನನು ಬರುವನೆಂದು ಕಣ್ಗಳಮುಚ್ಚಿ ಧ್ಯಾನವಂಮಾಡ
ಲು; ಧರಣಿಪತಿ! ಕೇಳಾತಪೋಧನನ ಮಾಹಾತ್ಮೆಯಿಂ ಅಂಬರದೊಳಾ
ದಿವ್ಯಯಾನವು ಗಿರಿಸರಿಸದೊಳು ಬಂದು ಮುಂದಕೆ ನಡೆಯಲಾರದಲ್ಲೇ
ನಿಲ್ಲಲು, ತಾಪಸೋತ್ತಮನು ಶಾಂತಿಮಾಲಿನಿಯಂ ಕರೆದು ನಿನ್ನಯನಪ್ತ

ನು ಜನನಿಯಿಂದೊಡಗೂಡಿ ದಿವ್ಯಯಾನದಿ ಕುಳಿತು ಗಗನದೊಳು ಬಂದು ನಿಂದಿಹನು ನೋಡೆಂದೆನುತ ನುಡಿಯಲು, ಆ ದೇವಿಯು ಮುನಿಗೊಂದಿಸುತ ಅಂಬರದಿ ಚಂದಿರನ ಬಿಂಬದೊಳು ನಿಂದಿರುವ ಯಾನವಂ ಕಂಡು ವಿಸ್ಮಯದಿಂದ ನೋಡುತಿರೆ, ಸುಪ್ರಭೆಯು ನಿಜಯಾನ ಮುಂದಕ್ಕಡಿಯಿಡದಲ್ಲಿ ನಿಷ್ಪಂದವಾಗಿ ನಿಲ್ಲಲದಕೆ ಕಾರಣವನ್ನು ತಿಳಿಯದತಿಚಿಂತೆಯಿಂ ಯೋಚಿಸುವ ಸುತನೊಡನೆ ನುಡಿದಳೆಲೆ ವತ್ಸ! ಕೇಳೀ ದೇವಯಾನವು ಮಹದುಲ್ಲಂಘನಾದಿಗಳಂ ಸರ್ವಥಾ ಮಾಡುವುದಿಲ್ಲ ಆದರಿಂದ ಈ ಮಹಾಗಿರಿಯಲ್ಲಿ ಯಾರೋ ಮಹಾನುಭಾವರಿಹರದರಲ್ಲಿ ಸಂಶಯವಿಲ್ಲ; ಅದು ಕಾರಣ ತಾವು ಈ ಗಿರಿಯಮೇಲಿದ್ದವರ ಚರಣಗಳ ದರ್ಶನವ ಮಾಡುತವರಪ್ಪಣೆಯನಾಂತಲ್ಲದೀ ಯಾನ ಮುಂದಕ್ಕಡಿಯಿಡದೆಂದು ನುಡಿಯಲು, ಜನನಿಯಾಲಾಪವಂ ಕೇಳಿ ನರಪುಂಗವನು ಮನದಿ ಪರ್ವತದಮೇಲಿಳಿಯಬೇಕೆಂದೆನುತ ಯೋಚಿಸಲು; ಯಾನವತಿವೇಗದಿಂ ಆ ತಪೋವನದಲ್ಲಿ ಪರಮರ್ಷಿಯಾಗಿರುವ ಜಾಬಾಲಿಮುನಿವರನೆದುರಾಗಿ ಇಳಿಯಲು. ನೃಪಕುಮಾರನು ಜ್ವಲಹುತಾಶನಂತಿರುವ ಮುನಿಪರನ ಕಂಡಾ ತಪೋಧನನೆಡೆಯೊಳದ್ರಿವರತನುಜಾತೆಯಂತಿರುವ ದೇವಿಯಂ ಕಂಡು ವಿಸ್ಮಿತನಾಗಿ ಜವದಿಂ ವಿಮಾನದಿಂದಿಳಿದು ಮುನಿವರನೆಡೆಗೆ ಬರುತಿರಲು; ಜಾಬಾಲಿಯು ನರಪತಿಕುಮಾರನಂ ಕಂಡು ವಿಸ್ಮಿತನಾಗಿ ಇವನು ಯಾದವನೋ? ನೋಡೆ ನಳಕೂಬರನೋ? ನಳಿನಬಾಣನೆ ಮಾರಿಸಲಾಜಯಂತನೋ? ಶಿವಶಿವಾ! ಮಹಾದೇವ! ನರರೊಳಗೆ ಈಪರಿಯ ಪುರುಷನುದಯಿಸುವನೆ? ಈತನ ಹರಿಕರುಣಾಪಾತ್ರನಾದಕಾರಣ ಸುರಾಚಾರ್ಯನೈತಂದನುಗ್ರಹಮಾಡಿದನು, ಯುಕ್ತವೇ ಸರಿ ಎಂದು ಮನದೊಳು ವಿಮರ್ಶೆಯಂ ಮಾಡುತಿರಲು; ಅನಿತರೊಳಗಾ ಸುದರ್ಶನನೈದಿ ಚರಣಸರಸೀರುಹಕೆ ಸಾಷ್ಟಾಂಗದಿಂ ನಮಿಸೆ, ಮುನಿವರನು ಹರಸುತ ಅನುರಾಗದಿಂದಾಸನವನಿತ್ತು, ನೃಪನ ಕುಶಲವನ್ನು ಕೇಳುತಿರೆ, ಕಾಂತಿಮಾಲಿನೀದೇವಿಯು ಪುತ್ರನಂತಿರುವ ನಿಜನಪ್ತೃಮಾಕಾರವಂ ನೋಡಿ ಪರಮಾನಂದದಿಂದ ಪರವಶಳಾಗಿರಲು, ವಿಮಾನದಿಂ ಸುಪ್ರಭೆಯು ಪಾಲಕಿಯನೊಡಗೊಂಡು ಯಿಳಿಯುತಿರೆ ಮದನ

ಮೊದಕರಿಯಂತೆಬಂದು ಪ್ರೊರಮಡಲು, ಜಾಬಾಲಿಯು ಪರಮಾದರದಿಹರಸಿ ದೇವಿಯತ್ತೋರಿ ವತ್ಸ! ನಿಮ್ಮತ್ತೆಯೀಕೆ ಇವಳಡಿಗೊಂದಿಸೆನೆ, ಸುಪ್ರಭೆಯು ಪರಮ ವಿಸ್ಮಯದಿಂದ ಪೌಲೋಮಿಯಂತೆ ಕುಳ್ಳಿರುವ ದೇವಿಯಡಿಗೆ ಸಾಷ್ಟಾಂಗದಿಂದೆರಗೆ, ಕಾಂತಿಮಾಲಿನಿಯು ಪರಮಾಶಿಷವನೊರೆದು ಬಿಗಿದಪ್ಪಿ ಬಳಿಯಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆಯಂಮಾಡುತ್ತಿರೆ, ತಾಪಸನು ತರಳನಂಕುರಿತು ಕೇಳೆಲೆವತ್ಸ! ಈಕೆ ನಿಮ್ಮಯ ತಾತನಿಂಗೆ ಸಾಕ್ಷಾತ್ ಜನನಿಯದರಿಂದಡಿಗೆ ನಮಿಸೆನಲು, ಪರಮಸಂತೋಷದಿಂದಾ ಸುದರ್ಶನನು ಬಂದು ಕಾಂತಿಮಾಲಿನಿಯಡಿಗೆ ಮಣಿಯೆ ಪರಮಾಶಿಷವನೊರೆದು ಬಿಗಿಯಪ್ಪಿ ಪರಮಾನಂದ ವಾರ್ಧಿಯೊಳು ಮುಳುಗಿ ಪರವಶಳಾಗಿ ಮುದ್ದಿಸುತ್ತಿರೆ, ತಾಪಸೋತ್ತಮನು ಶ್ರೀಹರಿಯ ಮಾಯಾಮಹಿಮೆಯಂ ನೋಡಿ ಪರಮ ವಿಸ್ಮಯದಿಂದ ನುಡಿದನೆಲೆ ವತ್ಸ! ಕೇಳ್ವಮ್ಮ ತಾತನು ಕಲಾವತಿಯ ಕೃತ್ರಿಮದಿಂದ ಜೈವಮೋಹಿತನಾಗಿ ಬಿಲಮಾರ್ಗಮಂಪ್ರೊಕ್ಕು ಭೂಗರ್ಭದೊಳಗಿರುವ ರತ್ನಮಯ ಸಭೆಯಲ್ಲಿ ಘೋರ ಕೃತ್ರಿಮ ಚಕ್ರದಿಂ ನಿಕೃಂತಕಂಧರನಾಗಿ ಮಲಗಿರುವನು. ಈ ಕಾಂತಿ ಮಾಲಿನಿಯು ಮತ್ತೊಂದು ಬಿಲಮಾರ್ಗದಿಂದ ಲೀಕಾಂತಾರವನ್ನೈದಿ ದೈವಗತಿಯಿಂದೆನ್ನ ಆಶ್ರಮವನ್ನೈದಿದಳು; ಕಲಾವತಿಯ ಪುತ್ರನಾದ ವೃಷಧ್ವಜನೊಂದುಮಾರ್ಗದಿಂ ಭೂಪೃಷ್ಠದಲ್ಲಿರುವ ಅರಮನೆಯೊಳದನರಿಯದಂಗನಾಸಕ್ತನಾಗಿರುವನು. ಇದು ವೃತ್ತಾಂತವೆಂದು ವಿಸ್ತರದಿ ವಿವರಿಸಲು ಅದಂಕೇಳಿ ಶೋಕಸಾಗರದಲ್ಲಿ ಮುಳುಗಿ ಮೂರ್ಛೆಯನ್ನೈದಿ ಮೂವ್ವರೂ ಮೈಮರೆಯೆ, ಮುನಿವರನು ಮಾಲತಿಯ ಮೊಗಮನ್ನೋಡಿ ಮಾನಿನಿಯೆ! ಮಾಡು ಶೀತೋಪಚಾರವನ್ನಿವರಿಗೆಂದೆನಲು ದೂತಿಯುಪಚಾರಮಂಮಾಡಿ ತಾಳವೃಂತಮಂಪಿಡಿದು ತರುಣಿ ಬೀಸುತ್ತಿರಲು; ಸುಪ್ರಭೆ ಕಾಂತಿಮಾಲಿನಿಯರತಿದುಃಖದಿಂ ರೋದನವಮಾಡುತ್ತ ನಾನಾಪ್ರಕಾರದಿಂ ಹಂಬಲಿಸುತಿರೆ, ಸುದರ್ಶನನು ಮನದಿ ಯೋಚಿಸುತ ಶೋಕಸಮೂರ್ಛಿತನಾಗಿ ಮುಂದೋರದಿರಲು ; ತಾಪಸೋತ್ತಮನಾಗ ನುಡಿದನತ್ರಿಕರಣದಿಂ ದಶಶತ್ರಾಯುಷನು ಶ್ರೀಹರಿಯಕಾರುಣ್ಯದಿಂ ಬದುಕುವ

ಉಪಾಯವಿರೆ ಬರಿದೆ ದುಃಖಿಪುದೇಕೆ ಸುಪ್ರಸನ್ನನಿರಿ ನೀವೆಂದು ಸಂತೈಸುತ ವರಸ್ನು ಕರದಾಸುದರ್ಶನನ ಬಳಿಗೆ ಮುನಿ ಕಂದ! ಕೇಳ್ಬರಿದೆನೀನವರಂತೆ ಹಂಬಲಿಸದಿರು, ಮುಂದೆ ಬಹುಕಾರ್ಯಕಾರಣಗಳಿಹುದೆನುತ ನುಡಿಯಲು. ಆ ಸುಕುಮಾರನಡಿಗಡಿಗೆ ವಂದಿಸುತ ಮಡಿದಿರುವ ತಾತನುಜ್ಜೀವನೊ ಹೊಂದುವನೋ ಎಂದೆನಲು, ತಾಪಸೋತ್ತಮನಾಗ ನುಡಿದನೆಲೆ ಸುಭಗ! ಕೇಳ್ನಿನ್ನ ಸರ್ವಜ್ಯೇಷ್ಠಜನನಿಯು ಕಾನನಗಳೊಳು ಚಿರಕಾಲದಿಂದ ಕಲಾವತಿಯು ದುರ್ಯೋಧನಾಸಕ್ತನಾಗಿಹ ರಾಯನಿಂದ ಕಾರಾಗೃಹದಿ ಗೌರಿ ದೇವಿಯಂ ರತಿಯು ಪೂಜಿಸುತ ಯೋಗಿಗಳ ತೆರನಂತೆ ಕಾಲವನು ಕಳೆಯುತಿಹಳು, ಆ ಸತಿಯು ಪಾದದಂಗುಷ್ಟವನ್ನು ಪೋಲುವ ಪತಿವ್ರತೆಯು ರೀ ಭುವನದೊಳಗಿಲ್ಲ ಪೇಳಲೇನಳವಲ್ಲ, ಆ ಧಾನ್ಯಮಾಲಿನಿಗೆ ಸಂಧಾನ ಕರಣಿಯುಂ ಬಂದು ಕಾರ್ತಿಕದಿಂ ಮೊದಲು ಅಮೃತಸಂಜೀವನಿಯು ಮಂತ್ರವನು ದಶಕತ್ತಾಯುಕ್ಷನು ಉಪದೇಶವಂ ಮಾಡಿರುವನು, ಅದರಿಂದಲೀಗ ನಿಮ್ಮಯ ಜನಕನಾಕೆಯಿಂ ಬದುಕುವನು ಭಯಬ್ಯಾಡವೆನಲು: ಸುದರ್ಶನನು ಮುನಿವರನ ತಪೋಜನಿತ ಪರಮವಿಜ್ಞಾನ ಮಾಹಾತ್ಮೆಯಂ ನೋಡಿ ವಿಸ್ಮಿತನಾಗಿ ಕರಗಳಮುಗಿದು ತಾಪಸಪ್ರವರ! ಕೇಳ್ ಕಲಾವತಿಯು ಬಿಬ್ಬೋಕಜಾಲದಿ ಸಿಕ್ಕಿ ತದಧೀನನಾಗಿರುವ ರಾಯನು ಪಾಲಿಸುತಿರುವ ಮಹಿಷ್ಮತೀಪುರಿಗೆ ತಾನು ಪೋಗುವುದೆಂತು ? ಪೋದಡೆಯು, ನೂತನಾಗಾರದಲ್ಲಿ ಮಾಡಿರುವ ಆ ಬಿಲದ್ವಾರವಿಹ ತಾಣ ತಿಳಿಯುವದೆಂತು? ತಿಳಿದಡೆಯು, ತಾನದರೊಳ್ಪೊದಿ ಕಾಣುವುದೆಂತು ? ಕಂಡಡೆಯು, ಬಾವಿಯೊಳಗಿರುವ ನಿಜಜನನಿಯಡೆಗಾನು ಪೋಗುವದೆಂತು, ಪೋದಡೆಯು ದೇವಿಯರಿಗೆನ್ನೊಳನುರಾಗ ಜನಿಸುವುದೆಂತು, ಜನಿಸಿದಡೆಯುಂ ತನ್ನ ವಾಕ್ಯದೊಳು ಸತ್ಯತಾಬುದ್ಧಿ ಪುಟ್ಟುವದೆಂತು, ಪುಟ್ಟಿದಡೆಯುಂ ಧಾನ್ಯಮಾಲಿನಿಯು ಪತಿಯನುಜ್ಜೀವನದ ಮಾಡಲವಕಾಶವೆಲ್ಲಿಹುದು, ಅಯ್ಯ ತಿಳಿಯುಪೇಳುವದೆಂದು ಕೇಳಲು ; ಆ ತಾಪಸನು ಬಾಲಕನ ಕುಶಲತೆಯ ಕೇಳಿ ಪರವಶನಾಗಿ ಜಾಬಾಲಿ ಮುನಿವರನು ನುಡಿಗನೆಲೆ ತಾತ! ಕೇಳೀಗ ಚತನೋಪಾಯದಿಂದಲೇ ನಿಮ್ಮಯ ಪಿತಾಮಹನ ನಗರದಿಂ ಪೊರಡಿಸಿ

ತರುವಾಯ ಕಾರ್ಯಸಂಗತಿಗಳಂ ಕಾಣಬೇಕಲ್ಲದಿನ್ನಿಲ್ಲ ಸಂದರ್ಭವೆಂದೆನುತ ಅದ್ಯಾಕೆನೆ ಕೇಳು- ಕನಸಿನಲ್ಲಾದಡೆಯು ನಿಮ್ಮ ಸಂಗತಿಗಳನು ತಿಳಿದಡೆ ಕಲಾವತಿಯು ನಿನ್ನ ಜನಕನ ತನುವನೇನಮಾಡುವಳೋ ಕೇಳದರಿಂದ ಲೋರ್ವನೇ ನೀನು ಮಾಹಿಷ್ಮತೀ ನಗರದುಪಕಂಠವನ್ನೈದಿ ಆಕಸ್ಮಿಕದೊಳಡಗಿ ತಾಪಸರಿಂದೆತ್ತಣದೋ ಎಂದವರಿಂಗೆ ಇದರ ಮೂಲವು ತಿಳಿಯದಂತೆ ಜವದಿಂದವರಂಕೆಣಕಿ ಜಗಳವ ತೆಗದು ವಿಗ್ರಹದಿ ನಿಗ್ರಹಿಸಿ ನಗರದಿಂ ಪೊರಡಿಸಿ ನೀನು ನಗರವಪ್ಪೊಕ್ಕು ತರುವಾಯ ಸುದ್ದಿಯನು ತಮ್ಮೆಡೆಗೆ ಕಳುಹಿದಡೆ ತಾವಿಪರೊಡಗೂಡು ಬರುವೆನೀದಿವ್ಯಯಾನದಿಕುಳಿತು ಸತ್ವರದೊಳೆನುತ, ಸಂಗತಿಗಳಂ ವಿಸ್ತರದಿ ವಿವರಿಸೆ, ಸುದರ್ಶನನು ಮನದೊಳು ವಿಮರ್ಶೆಯನುಪಗಾಡಿ ವಿಸ್ಮಿತನಾಗಿ ಪೊಗಳುತ ತಪೋಧನನಂ ಹಾಗಾದಡಪ್ಪಣೆಯ ತನಗೆ ಕೊಡಬೇಕೆಂದು ವಂದಿಸಲು, ಕಾಂತಿಮಾಲಿನಿಯು ಸುದರ್ಶನನ ವ್ಯವಸಾಯಮಂ ನೋಡಿ ಸಾಧ್ವಸದಿಂದ ತಾಪಸನ ಚರಣಕ್ಕೆ ನಮಿಸಿ ನುಡಿದಳು ತಂದೆ! ಕಂದನಿವನೋರ್ವ, ಕೇಳಲ್ಲಿ ಮಾರಿಯುಮುರಿದುನುಂಗುವ ಮಹಾಶೂರರಮಿತವಾಗಿಹರು,ಉಗ್ರಹರ್ಯಕ್ಷ್ಯನತಿ ತೀಕ್ಷ್ಣಕೋರದಾಡೆಗಳನ್ನುಪಿಡಿವ ಜೋಲಾಡುವತ್ತ್ಯಧಟ ಪಟುಭಟರಸಂಖ್ಯಾತವಾಗಿಹ ರಾರ್ಯ! ಬಹುಯುದ್ಧಗಳ ಮಾಡಿ ತತ್ಪರಿಶ್ರಮ ಜನಿತ ಪಾಂಡಿತ್ಯದಿಂದ ನಿಶ್ಚಲಹೃದಯರಾಗಿರುವರಪರಿಮಿತ ಯೋಧಪರು ನಿತ್ಯ ಸನ್ನದ್ಧರಾಗಿರುವರು, ಇಂತಲ್ಲದನುಪಮ ಧನುರ್ವೇದ ಪರಮಾಂತರಾಗ ತಾತ್ಪರ್ಯ ಪರಿಶೀಲನಾಜನಿತ ವೈದಗ್ಧ್ಯದಿಂ ನ್ಯಕ್ಕೃತ ಸಮಸ್ತ ಭುವನಸ್ಥಿತಾಶೇಷ ಶೂರನಾಗಿಹ ಸುತೀಕ್ಷ್ಣನೆಂಬ ಗುರುಪುತ್ರನಿರುಪನಶ್ವತ್ಥಾಮನಂತೆ, ಮುನಿವರ್ಯ! ಕೇಳವಧರಿಸು, ನಿಜಬಾಹುದಂಡ ನಿಸ್ತ್ರಿಂಶ ಮೌರ್ವೀವಾಹಾಘೋರ ನಿನದಾಪಹತ ಕುಲಿಶ ಸಮಾಕರ್ಣ ತಮರಿಪುಹೃದಯಸಂತಪವಾಗಿರುವ ವೃಷಕೇತನನ ಯುದ್ಧದೊಳು ತಡೆಯಲಾ ದಂಡಧರಗಳವಲ್ಲ, ಇಂತಿರಲು ಈ ಪಸುಳೆ ರಥವಿಲ್ಲದೊರ್ವನೇ ಪೋಗಿ ಜಯಿಸುವುದೆಂತು, ಸಕಲಜ್ಞನಹ ನಡಿಗ ತಾವು ಬಿನ್ನಹನಾಳ್ಪುದೇನೆನಲು; ಜಾಬಾಲಿಯು ಕಿಂಚಿದುಗ್ರತದಿಂದ

ಧ್ವಂದಗಮನೆಯುಕುರಿತು– ನುಡಿದನೆಲೆಮಾಸಿನಿಯೆ! ನಿನ್ನನುಡಿ ಸತ್ಯವೇ ಸರಿ, ಆದಡೀ ಮಹಾಪುರುಷನತಿ ಮಾನುಷ ವ್ಯಾಪಾರಮಹಿಮೆಗಳ ನಾವು ಬಲ್ಲೆವು, ನಿನಗೆ ತಿಳಿಯುವಪರಿಂತಬಲೆ! ಹಾಗಾದಡಾ ಸಾರವ ಕೇಳು ಸಂಕ್ಷೇಪದಲಿ.

ಕಿಂಪುರುಷ ವರ್ಷದೊಳಗಿರುವ ಸಾಮಾನ್ಯಜನರಯುತಮದ ಹಸ್ತಿಬಲಶಾಲಿಗಳು, ಶಸ್ತ್ರಗಳು ಪಿಡಿದು ಯುದ್ಧವ ಮಾಳ್ಪ ಪಟುಭಟರ ಶಕ್ತಿಯನು ಶಕ್ತಿಧರನೇಬಲ್ಲ; ಇಂಥಾ ಮಹಾ ವರ್ಷದೊಳಗಿರುವ ಸಕಲ ಭೂಪತಿಗಳೀಬಾಲಕನ ಪರಮತೇಜೋಹುತಾಶನ ಶಿಖಾಶಲಭತಾತ್ಮೀಯಸತ್ವವುಳ್ಳವರಾಗಿ ಪಾದಗಳ ಮರೆಪೊಕ್ಕು ಬದುಕುತಿಹರು. ಈ ನರಾಧಮರೀತಗೆದುರಾಂತು ಜೀವಿಸಬಲ್ಲರೆ, ಮರುಳೆ! ಶ್ರೀನರಹರಿಯ ಪರಮ ಕರುಣಾಪಾತ್ರನಿವಗೆ ಸಾಕ್ಷಾದಮರಗುರುವೆ ಪರಮಾಚಾರ್ಯನು, ಆತನೀ ಸುಕುಮಾರಗಖಿಳ ಶಸ್ತ್ರಾಸ್ತ್ರಗಳನುಪದೇಶ ಮಾಡಿರುವನು. ಈತ ಮಾನುಷನೆಂದು ತಿಳಿಯದಿರು, ಮುಖ್ಯ ನಿಮ್ಮಹು ಸುಕೃತಕ್ಕೆಣೆಯಿಲ್ಲವೆಂದೆನುತ ಕಾಂತಿ ಮಾಲಿನಿಯೊಡನೆ ನುಡಿದು, ಬಳಿಕಾರಾಜಪುತ್ರನಂಕುರಿತು ಮುನಿಯು ವತ್ಸ! ಕೇಳೀಗಿರಿಗೆ ಪಶ್ಚಿಮದೊಳಹುದೊಂದುಯೋಜನ ವಿಶಾಲಕಾಸಾರವು, ಆ ಸರಸಿಯೊಳು ಚಿರಕಾಲದಿಂ ಜಲದಿ ಮುಳುಗಿರುವುದಾಯುಸ ಮಯಾಭೇದ್ಯತಮ ದಿವ್ಯರಥವೊಂದುಕಾರಣ, ನೀನಾಜಲಾಶಯವ ಪೊಕ್ಕದನು ಸಾಧಿಸುತ ತರುವುದೆನಲು;

ಆ ಸುದರ್ಶನನು ಜವದಿಂದೆದ್ದು ನಮಿಸುತಾ ಮುನಿವರಗೆ ತೆರಳಿ ಸರಸಿಯನರಸುತಾಗಿರಿಯ ಪಶ್ಚಿಮದಿ ಕಂಡು ಕಾಸಾರವನು ಬಳಲಾತಪದಿಂದ, ಸ್ನಾನವನು ಮಾಡಿ ತರುವಾಯ ನೋಡುವೆ ರಥವ ಸಾಧಿಸುವ ಕಾರ್ಯವನು ಎನುತೆ, ಆ ದಿವ್ಯ ಜಲಕಿಳಿದು ಮಜ್ಜನ ಮಾಡುವನಿತರೊಳು ಘೋರತರಮಕರವಾಬಾಲಕನ ಚರಣಗಳ ಪಿಡಿದೊಳಗೆ ಸೆಳೆಯುತಿರಲು, ಅತಿಸತ್ವನಾದ ನೃಪಕುವರನದಂ ಮೇಲಕ್ಕೆ ಸೆಳೆಯುತಿರಲು, ಇಂತು ಘಟಿಕಾಮಾತ್ರವದರೊಡನೆ ಕಲಹವನು ಮಾಡುತಿರೆ ಕಾಸಾರವು ಕದಡಿ

ಕಲ್ಕಲವಾಗಲು, ಅತ್ಯಂತ ಖತಿಯಿಂದ ಕರದಿ ಕರವಾಳವಂ ಪಿಡಿದು ಪೂರಾಯದಿಂ ಪ್ರಹರಿಸಲು, ಆ ಘೋರ ಮಕರವು ಬಾಹುಮುಕ್ತಾಸಿವರನಿಶಿತ ಧಾರಾವಳಿತ ಪರ್ವಗತೋತ್ತಮಕಾಯನಾಗಿ ನಿಜರೂಪವಂ ತಾಳಲು, ಆ ಕಾಸಾರವು ದಿವ್ಯರಥವಾಗುದಾ ಸೋಪಾನಶಿಲೆಗಳೇ ದಿವ್ಯಾಶ್ವಕತವಾಗಲು, ಸುಪರ್ಶನನು ನೋಡಿ ಪರಮ ವಿಸ್ಮಯದಿಂದ ದಿವ್ಯ ತೇಜಸ್ವಿಯಾಗಿರುವ ನರಪತಿಯನ್ನು ಕಂಡು ನೀವ್ಯಾರೆಂದು ಕೇಳಲು, ಆ ನರಪತಿಯು ಬೇಗ ರಥದಿಂದಿಳಿದು ಬಾಲಕನಂ ತೆಗೆದಪ್ಪಿ ಬಹುವಿಧದಿ ನುತಿಮಾಡಿ ಧೀರ! ಕೇಳು ನಾನು ಸೌವೀರ ದೇಶಾಧಿಪತಿ, ಈ ಮಹಾರಣ್ಯದೊಳು ಮೃಗಯಾವಿನೋದದಿಂ ಕೂರಸಂಚಾರವಂ ಮಾಡುತ್ತ ಬರುತಿರಲು ; ನಾಕದಿಂ ಮೇನಕೆಯು ನಾರೀಸಹಸ್ರದಿಂದೀಗಿರಿಯಮೇಲಿರುವ ಗೌರಿದೇವಿಯರನ್ನು ಒಲ್ಲಿಸಲ್ಕೆಂದು ಪುಷ್ಪಾಪಚಯಗಳಂ ಮಾಡುತಿರಲು ; ಆ ದೇವಮಾನಿನಿಯಂ ಕಂಡು ನೀರಜಾಶುಗ ಶಿಲೀಮುಖ ಖಿನ್ನಮತಿಯಾಗಿ ವಾರಿಜಾಕ್ಷಿಯ ಕೂಡೆ ಸರಸವಾಡಲು ಪೋಗೆ, ಕೇಳಾ ದಿವ್ಯಮಾನಿನಿಯು ರೋಷದಿಂದ್ಯಾರು ನೀನೆನಲು, ತೋರದವಿವೇಕ ತಾನಾಕೆಯಂ ಕುರಿತು ಕೇಳ್ನೀರೆ! ತಾ ಭೂರಮಣ ಮಕರಕೇತನನ ಬಲುಬಾಧೆಯಿಂ ನಿನ್ನೊಳನುರಾಗದಿಂ ಕ್ರೀಡಿಸಲು ಬಂದಿರುವೆನೆಂದು ನುಡಿಯಲು, ದೇವಮಾನಿನಿಯು ಕ್ರೋಧಮೂರ್ಛಿತಳಾಗಿ ತನ್ನೊಡನೆ ಕೇಳೆಲವೋ ಮಾನುಷಾಧಮನೆ! ಮರ್ಯಾದೆಯಂ ಮೀರಿ ನುಡಿದೆಯಾದುದರಿಂ ಮಕರವೆ ನೀನಾಗಿಪೋಗು, ನೀನಿರುವ ರಥ ಕಾಸಾರವಾಗಲಿ, ತುರಗಗಳು ಸೋಪಾನವಾಗಲೆಂದೆನುತ ಶಾಪವನೀಯೆ, ತಾನಾಗ ವಿಗತವಿಸ್ಮಯನಾಗಿ ಖೇದದಿಂ ಮುಂದೇನುಗತಿಯೆಂದು ಯೋಚಿಸುತ ಇವಳ್ಯಾರೋ ಕಾಣೆನೆಂದೆನುತಾಕೆಗೊಂದಿಸಿ ಬಹುವಿಧದಿ ಬೇಡಿಕೊಳಲು, ಆ ದಿವ್ಯಮಾನಿನಿಯು ಕರುಣದಿಂ ಶ್ರೀಪತಿಯ ಪದಮಾನುಚರನಾದ ಬಾಹುಜಕುಮಾರನೀವಿಪಿನಮನೊಂದುಕಾರಣದಿಂದಲೈತರುವನು, ಆತನ ಮಹಾ ಖಡ್ಗಧಾರೆಯಿಂದ ದಳಿತತನುವಾಗಿ ನಿಜರೂಪವನ್ನೈದುವೆ, ಮಹೀಶ ! ಪೋಗೆಂದೆನುತ ಪೇಳುತಂತರ್ಧಾನವಾಗಲು, ಆಕ್ಷಣದಿ ತಾಮಕರ ದೇಹವನ್ನೈದಿ ಘೋರತ

ರ ದುಃಖವನ್ನನುಭವವಮಾಡಿದೆನು. ಬಹುಕಾಲದಿಂ, ಸುಭಗ! ನಿನ್ನ ಕಾರುಣ್ಯದಿಂದೀಗಲುದ್ಧೃತನಾದೆ, ತಾನು ತಪವ ಮಾಡುವರೆ ಪೋಗುವೆನು, ಈ ದೇವದತ್ತ ದಿವ್ಯಾಯುಸಮಯಾಭೇದ್ಯರಥವ ನಿನ್ನಡಿಗಳಿಗೆ ಕಾಣಿಕೆಯ ಮಾಡುವೆನು ದಯಮಾಡಬೇಕೆಂದು ಬೇಡಲು; ಸುಪ್ರಭಾತನು ಜನಂಗೀಕಾರಮಾಡುತ್ತವಗವ ಪ್ರಸಾದಮನಿತ್ತು ನೀಲಾಶ್ವರಥದೊಳಗೆ ಸುಂಡಿಸಿ ಜಾಬಾಲಿಮುನಿವರನ ಸನ್ನಿಧಿಗೆ ಬರುತ್ತಿರಲು; ಆ ಅತಿ ಕನಿಷ್ಠ ಘೋರ ತದ್ರಥ ಚರಣಸ್ವನಿನಾದವಂ ಕೇಳಿ ಬಹು ಭೀತಿಯಿಂ ಕಾಂತಿವಾಲಿಸಿಯು ಮೊದಲಾದವರು ಯೋಚಿಸುತ್ತಿರಲು, ಮುನಿವರನು ನಸುನಗುತಲಾಸೂತ್ರನಂ ಕರೆದು ಕೇಳೆಲಾ ಪ್ರೋ! ಕರವೀರ! ನಿಮಾತ್ರತನ್ನೈತರುವ ರಥಚರಣಗಳ ಘೋಷವಿದು ನೋಡೆಂದು ನುಡಿಯುತ್ತಿರಲು; ಅನಿತರೊಳು ಕಣಕ್ಕಣಿತ್ಕಾರರುಚಿರಕನಕಮಯ ಕಿಂಕಿಣೀನಿಕರದಿಂ ರಾಜಿಸುವ ವಿಚಿತ್ರಹುತಭುಕ್ಕ್ಷಾರುಚಿರ ಹಾಟಕರಚಿತ ಗಗನತಲಚುಂಬಿ ಘನಹೀರ ಮಣಿಮಯ ಮಲ್ಲಿಕಾಸ್ತ ಕೇತನದಿಂದ ಶೋಭಿಸುವ ನಿಜಚಕ್ರರಯದಳಿತ ಕಠಿಣಾಶ್ಮಯ ಪಾದಸಿಚಯ ಸಂದರ್ಶಿತಾತ್ಮೀಯಾಪದನ್ಯಾಗಿರುವ ತಾರ್ಕ್ಷ್ಯಮಾರುತ ಮನೋವೇಗ ಸಮುಜಂಘಾಲ ದಿವ್ಯಾಶ್ವಶತ ಕಲಿತಬಂಧುರ ಸ್ಯಂದನವು ದೃಷ್ಟಿಪಥವನ್ನೈದೆ, ಸೃಷ್ಟಿಯೊಳಗತಿಶಯದ ದಿವ್ಯರಥವನಖಿಲರತ್ಯಂತ ವಿಸ್ಮಯದಿ ನೋಡುತಿರೆ; ಸುಪ್ರಭಾತನು ಜನಾಶ್ರಮಪಡೆಗೆ ತಂದು ರಥದಿಂದಿಳಿದು ಕರವೀರನಂ ತದಧೀನವುಂ ಮಾಡಿ, ಸೂತನತಿಪ್ರೇಮದಿಂ ಕುದುರೆಗಳ ಮೈದಡವಿ ಮೇವುಗಳನಿತ್ತು ಸಂತೈಸುತಿರೆ, ನಿಶಿಯಲ್ಲಿ ರಾಜಪುತ್ರನು ಬಂದು ಮುನಿವರಗೆ ನಮಿಸಿ ವೃತ್ತಾಂತವಂ ಬಿನ್ನಹ ಮಾಡಲು;

ಆ ತಾಪಸನು ಸುಪ್ರೀತನಾಗಿ ಪರಮಾದರವ ಮಾಡಿ ಸುಕುಮಾರನಿಗೆ ಮಂತ್ರಮಯ ಕವಚವಂ ನೀಡೆ ಯಾಮಿನಿಯೊಳನುದಯದೊಳಗೆದ್ದು ನಿಯಮಾದಿಗಳನಾಚರಿಸಿ ಮಾಹಿಷ್ಮತಿಪುರಿಗೆ ಪೋಗಲತಿ ಜವದಿಂದ ಸನ್ನದ್ಧನಾಗಿ ಮುನಿಯಡಿಗೆ ವಂದನೆಮಾಡಿ ಹರಸುತಪ್ಪಣೆಗೊಳಲು, ದೇವಿ ಜನನಿಯುರೆಡೆಗೆ ಬಂದು ವಂದನೆ ಮಾಡಿ ಹರಸಿ ಕಳುಸೆಯನಿಕ್ಕಿ ದೇ

ಳಾತ್ತುಚಿತ್ತೋಕ್ತಿಗಳ ಬೀಳ್ಕೊಂಡೆ, ಕರವೀರಸಿಂಧ ಸನ್ನದ್ಧವಾಗಿಹ ರಥವನೇರಿದನು. ಸಂಭ್ರಮದಿ ಸುಪ್ರಭಾತನಯನೃಪಸೂತನಾರಥ್ಯಗಳ ತರುಬುತ್ತತ್ರಿಜವದಿಂದ ಮಾರುತನ ಮೀರಿ ಕಾಂತಾರವನ್ನು ಳಿದು ಬಹುಯೋಜನಾಧ್ವವನು ನಡೆದು ಮಧ್ಯಾಹ್ನ ಸಮಯದೊಳು ಮಾಹಿಷ್ಮತಿಪುರಿಯ ಸಾಮೀಪ್ಯವನ್ನೈದಿ ಬರುತಿರ್ದುದೆಂಬಲ್ಲಿಗೆ,

ಇಂತು ಕರ್ನಾಟಕ ಭಾಷಾ ವಿರಚಿತವಾದ ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲ ದೇಶಾವತಂಸ ಕರ್ನಾಟಕ ಜನಪದ ಸಂಪದಧಿಷ್ಠಾನ ಭೂತ ಶ್ರೀಮನ್ಮಹಿಶೂರ ಮಹಾ ಸಂಸ್ಥಾನ ಮಧ್ಯ ದೇದೀಪ್ಯಮಾನ ವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ನಿಜ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ಪರಮೇಶ್ವರ ಪ್ರೌಢ ಪ್ರತಾಪಾ ಪ್ರತಿಮವೀರ ನಗಪತಿ ಬಿರುದಂತೆಂಬರಗಂಡ ಲೋಕೈಕವೀರ ಯದುಕುಲಪಯಃ ಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀ ವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮ್ಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀ ಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಆತ್ರೇಯಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರ ಪುರವರಾಧೀಶ ಶ್ರೀಮತ್ಕೃಷ್ಣರಾಜವಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬಾಂಕಿತದಿಂದ ಕರ್ನಾಟಕಭಾಷಾ ವ್ಯಾಖ್ಯಾನರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪ ಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯ ಸಂವಾದದಲ್ಲಿ ಏಕೋನವಿಂಶೋಧ್ಯಾಯಃ.

ಹತ್ತೊಂಭತ್ತನೆಯ ಅಧ್ಯಾಯವು ಸಂಪೂರ್ಣವು.

## ಇಪ್ಪತ್ತನೇ ಅಧ್ಯಾಯ ಪ್ರಾರಂಭವು.



ಶ್ರೀ ಕೃಷ್ಣಾಯನಮಃ॥ ಅಸಂಚಿಚ್ಛಿನ್ನ ಘೋರಾಶನಿಧ್ವಾನ ಭೂಕಂಪ ನೋದ್ವಿಗ್ನರಾಗಿ ನಗರಾಸ್ಥಿತಾಶೇಷ ಜನರೆಲ್ಲ ತತ್ಕಾರ್ಯಕಾಣದಳಲುತ್ತ ತಲ್ಲಣಿಸುತ್ತಿರೆ? ಮಹೀಪಾಲನತಿಚಿಂತೆಯಿಂ ಮಂತ್ರಿಯೊಡನಿಂತೆಂದನು. ಎಲೆ ಸಚಿವ! ಲೋಕಾತಿಶಯನಾದ ಸುತನು ಕಣ್ಣುಮರೆಯಾದಬಳಿಕ ತಾನು ಜೀವಿಸುವುದನುಚಿತವು, ಬಹು ಮಾತನಾಡಿ ಫಲವೇನು. ಇನ್ನು ಹರಪಿಮುಖನಾದ ತರುವಾಯ ಮಾಡುವುದೇನು. ಮಂತ್ರಿ! ಕೇಳಾದಡೆಯು ಈಗ ಧರೆ ನಡುಗುತ್ತಿದೆ, ಮೊಗೆಯುತಿಪೆ ದಿಕ್ಕುಗಳು, ಹೃದಯವು ತಲ್ಲಣಿಸುತಿದೆ, ಇದಕೆ ಕಾರಣವೇನೊ ತಿಳಿಯದದನರಿದೆನಗೆ ತಿಳುಹೆನಲು; ಸಚಿವನದಕೇಳಿ ಸಹಚರರನ್ನು ಕರೆಸಿ ನಗರಾದ್ಬಹಿರ್ಭಾಗವನೈದಿ ಈ ಧ್ವನಿಯುಪಥವಿಡಿದು ನೆಲೆಯನು ತಿಳಿದು ಸತ್ವರದಿ ಬರುವುದೆನುತ್ತಪ್ಪಣೆಯನೀಯಲು;

ಇತ್ತಲಾ ನರಪತಿಕುಮಾರನು ಧಾನ್ಯಮಾಲಿನಿಯಿರುವ ವನಗರೋಪನನಕಾಗಿ ದೈವಗತಿಯಿಂ ಬರುತ ಲಲಿತಕುಸುಮಸ್ತಬಕ ನಮ್ರಲತಿಕಾನಿಕರ ಪರಿಶೋಭಿತಾನೇಕವಿಟಪಿ ವಿಟಪಾರೂಢ ವಿವಿಧವಿಹಗಾನೀಕ ಕಲಮಧುರ ವಿರುತಿಯಿಂ ಸೌರಭಸಮಾಕೃಷ್ಟ ಮಧುಕರೀಕಲಮಧುರ ಗಾನ ಜನಿತಾನಂದ ನಿರ್ಭರ ವಿದಗ್ಧವರಟಾವಿಲಾಸ ಕರಮಲ್ಲಿಕಾಕ್ಷ ವಿಹಾರರುಚಿರೇನ ಸುಂದರಕರ ಸ್ಪರ್ಶ ಸಂಪುದಿತ ಕಮಲಿನೀನಿಕರ ಮಕರಂದರಸ ಸಮ್ಮಂಥ ಬಂಧುರಕಬಂಧ ಪರಿಪೂರಿತ ವಿಶಾಲಕಾಸಾರ ವಿಪುಲತರಂಗ ಮಜ್ಜನೋಜ್ಜನ ಸಮಾಲಬ್ಧ ಗುಣಯುಕ್ತ ಗಂಧವಹ ಸಂಚಾರದಿಂದ ರಮಣೀಯ್ಯಮಾಗಿರುವ ನರಪತಿಯ ವಿಹಾರೋಪವನಮಂ ಕಂಡು, ಆ ವನದ ಸುತ್ತಲು ಬಹುಮಂದಿ ಭಟರನ್ವಹವು ಶಸ್ತ್ರಪಾಣಿಗಳಾಗಿ ಕಾದಿರುವುದಂ ನೋಡಿ ಸುಪ್ರಭಾತನುಜಾತನೀವನದಿ ಶರೆಯೊಳಗೆ ಜನನಿಯಿರಬೇಕೆಂದು ಮನದೊಳಗೆ ನಿಶ್ಚೈಸಿ, ಕೇಕಿ ಜಗಳವತ್ತೆಗೆವೆನಿಸಿವನೊಡನೆ ಯನುತ ರಥವಿಳಿದು ವನಕ್ಕೈದುತಿರೆ, ಪಟುಭಟರು ಮುಳಿದೆಲವೋ

ರಾಜಾಜ್ಞೆಯಿಲ್ಲದೇ ವನದೊಳಗೆ ಹೋಗಲಾ ಪುಕ್ಕಣ್ಣಗಳವಲ್ಲ, ನಿಲ್ಲು ಪೋಗದಿರು ಎಂದು ಘರ್ಜಿಸಲು. ಸುಪ್ರಭಾತನಯನದಕೇಳಿ ಕಡುರೋಷದಿಂದೆಲವ್ರೋ ಪುನುಜಾಪಶಧರಾ ! ಕೇಳಿ ನಾವು ಪೋಗುವದೇಸರಿ, ಗಳಹಿದಡೆ ಗಂಟಲನುತರಿವೆ ನಿಚ್ಚರದೊಳಿರಿ ಎಂದು ಜವದಿಂದ ಮುಂದಕ್ಕಡಿಯಿಡಲು ಪ್ರಭುಭಟರು ಬಲುರೋಷದಿಂದೆಲ್ಲರೊಂದಾಗಿ ಬಾಣಗಳಸುರಿಯಲು, ಅದಂ ಖಡ್ಗದಿಂ ತರಿದು, ಶಿರಗಳನರಿದು, ಕೆಡಹಲೊಂದೇನಿಮಿಷಮಾತ್ರದಲಿ, ಹತಶೇಷರಾದವರು ತವಕದಿಂ ನಗರದೊಳ್ ಪೊಕ್ಕು ನರಪತಿಯೆಡಗೆ ನಡೆದವೃತ್ತಾಂತವಂ ಬಿನ್ನೈಸಿ, ಖತಿಯಿಂದ ಮಡದಿ ಇರುವಳು ಖನದಿ, ಕಡೆಗೆ ತನಗಪಕೀರ್ತಿ ಬಡಲುಗಟ್ಟಿಂಬಂತೆ ಕಡುಚಿಂತೆಯಿಂ ನೃಪತಿ ದೃಢಧನ್ವನೆಂಬೋರ್ವ ಯೂಥಪತಿಯಂ ಕರೆದು ನಿಯುತ ಪೃತನಾಸಹಿತನಾಗಿ ಜವದಿಂದಪೋಗಿ ಪಿಡಿದು ಪಸುಳೆಯ ತರುವುದೆನುತಪ್ಪಣೆಗೊಡಲು, ಸಡಗರದಿ ಸೈನ್ಯದಿಂದೊಡಗೂಡಿ ದೃಢಧನ್ವನೈತರುತಿರಲು;

ಇತ್ತಲಾ ಕರವೀರನೊಡನಾಸುದರ್ಶನನು ನುಡಿದನೆಲೆ ಸೂತ! ನಡಗುತಿದೆ ಬಲದಭುಜ, ಜ್ವಲಿಸುತಿದೆ ಬಾಣಗಳು ಬತ್ತಳಿಕೆಯೊಳು, ಕೇಳು ಅದರಿಂದ ಘೋರತರಸಮ್ಮರ್ದನಡೆಯುವದು, ಇದು ಸಂದೇಹವಿಲ್ಲೆನುತ ನೋಡುತ್ತಲಿರೆ, ಸೇನೆಯಿಂದೊಡಗೂಡಿ ಬರುವ ದೃಢಧನ್ವನಂ ಕರೆದು ರಥವೇರಿ ಕೋದಂಡವಂ ಪಿಡಿದೊಂದು ಶರವ ದಕ್ಷಿಣಕರದಿ ತಿರುಹುತ್ತ ನಿಂದಿರಲು, ಬಂದುಮುತ್ತಿತುಸೇನೆ, ನಿಂದಿಸುತ ನಿಖಿಲಾಸ್ತ್ರಶಸ್ತ್ರಗಳ ವೃಷ್ಟಿಯಂ ಕರೆಯಲದ ಖಂಡಿಸುತ ನಿಜಚಾಪ ನಿರ್ಮುಕ್ತಶರಗಳಿಂ ಕರಿ ತುರಗರಥಗಳಂ ತರಿತರಿದು ಕೆಡಹುತಿರೆ, ನಿಮಿಷದಲಿ ರಕ್ತಪ್ರವಾಹಗಳು ಪ್ರವಹಿಸಿದವಖಿಲಭಟರಥಿಕ ಸಾರಥಿಗಳ ಕಬಂಧಗಳುನೆಲಕುರುಳಿ ಬೀಳ್ವಂತಿರೆ, ದೃಢಧನ್ವನೋಡಿ ಖತಿಯಿಂಸುದರ್ಶನಗೆ ಮಾರಾಂತುರೋಷದಿ ನುಡಿದನೆಲವೋ ಬಾಲಕ ! ನೀನು ಬರಿದೆ ತಮ್ಮನು ಕೆಣಕಿ ನೆಲದಸಾಲಾವಳಿಯನುಳಿಯುತಿರು ಎನುತ ನಿಜಚಾಪವಂ ಸೆಳೆದು ಶರನಿಚಯಮಂ ಸುರಿಯಲದಖಂಡಿಸುತ ನಸುನಗುತ ಕೇಳೆಲವೋ ! ಧಿಟಕೆ ಶೂರನು ನೀನು, ತಾನುಪಸುಳೆಯು, ಸತ್ಯವಾಡೊಡೊಂದೆನ್ನಕೈಗುಣವ ನೀ

ನರಿಯುದವನಾದಕಾರಣದಿಂದ ನೋಡೆನುತ ಪುಷ್ಕರು ಬಾಣವಿ ಸೂತನನು ಪನೀಗುತ ಲೈದು ಬಾಣದಿಂದಶ್ವಗಳ ತರಿದೇಳಂಬಾಣದಿಂ ರಥವ ಪುಡಿ ಪುಡಿ ಮಾಡಿ ಕರದ ಚಾಪವ ಕಡಿದು ಕವಚಕುಂಡಲ ಕಿರೀಟಗಳ ಖಂಡಿಸಿ, ಮತ್ತೆ ಶಿರಕೊಂದು ಬಾಣವನು ನಿಜಾತಪದೊಳು ಪೂಡಿ ನುಡಿದನೆಲೆ! ಯೂಧನೆ! ನೋಡಿದೆಯಾ ಬಾಲಕನ ಕೈಗುಣವ, ಆದಡೆಯು ನಿನ್ನಸುವ ನೀಗಿ ಫಲವೇನುಂಟು ತಮಗೆ, ನರಪತಿಯೆಡೆಗೆ ಪೋಗಿ ನೀನುಸುರೆಲವೊ ! ನಗರವಂ ತನಗೆ ನೀಬಿಟ್ಟು ಕೊಡಬೇಕಲ್ಲದೀಗಲೆನ್ನೊಡನೆ ಯುದ್ಧವಂ ಮಾಡಬೇಕಲ್ಲದಿರೆ ಬಿಡುವುದಿಲ್ಲೀ ನುಡಿಯ ಪೇಳ್ ನೃಪನೇನಿದಕೆ ಪ್ರತಿವಚನವಾಡುವನೋ ತನಗದನು ತಿಳುಹು ಪೋಗೆಂದೆನುತ ಕಳುಹಲು, ಅಪ್ಪಣೆಗೊಂಡು ದುಗುಡದಿಂ ದೃಢಧನ್ವನು ಹತಶೇಷಸೈನ್ಯದಿಂ ನಗರವಂ ಪೊಕ್ಕು ಸಭೆಯೊಳಗೆ ಸಿಂಹಾಸನದಿ ಚಿಂತಿಸುತ ಕುಳ್ಳಿರುವ ನೃಪನೆಡೆಗೆ ನಿಖಿಲ ವೃತ್ತಾಂತವಂ ವಿವರಿಸಲು; ನೃಪತಿಯದಕೇಳಿ ಕಡುರೋಷದಿಂ ನಿಜಚಮೂಪತಿಯಾದ ಚಿತ್ರರಥನಂ ಕರೆದು ನುಡಿದನೆಲೆ ವೀರ! ನೀನೊಂದು ಅಕ್ಷೋಹಿಣೀ ಸೈನ್ಯದಿಂದೊಡಗೂಡಿ ಪೋಗಿ ಬಾಲಕನು ಸೆರೆವಿಡಿದು ತರಬೇಕೆನುತಲಪ್ಪಣೆಯನೀಯ್ಯಲು, ಚಿತ್ರರಥ ಸೇನೆಯಂ ವೆರಸಿ ರಣಭೂಮಿಗೈತಂದು ನೋಡಿ ನರಪುಂಗವನ, ಕೊನೆಗೆ ಚಿಂತಿಸುತ ನೋಡಲೀ ಬಾಲಕನು ಸಾಮಾನ್ಯನಾಗಿ ಕಾಣುವುದಿಲ್ಲ, ಶಿವನೆಬಲ್ಲ, ವಿನುಕಾರಣ ಪುರಿಯಬೇಡುವನೋ ! ಪ್ರೌಢಪರಿಪರೊಳಿವನೊ ಇವನೆಂದು ಯೋಚಿಸುತ ಖತ್ರಿಯಿಂದ ಮುತ್ತಿದನು ಸೇನೆಯಿಂ, ಮೃತ್ಯುವಿನಂ ಮಾನುಷರು ಸುತ್ತಿಕೊಂಬಂದದಲಿ ಲೋಕಾತಿಶಯನಾದಬಾಲಕನ ನಾನಾವಿಧಾಸ್ತ್ರದಿಂ ದೊತ್ತಿದನು ಧರೆಗಗನದಿಕ್ಕುಗಳು ತಿಳಿಯದೊಲು, ಕೇಳರಸ ! ಸುಪ್ರಭಾತನಯನದನೋಡಿ ಕದಳೀವನವ ಮದಕರಿಯು ಪೊಕ್ಕಂತೆ ಸೇನಾಪ್ರವೇಶವಂ ಮಾಡಿ, ನಿಜಘೋರತೀವ್ರಶುಗವಾತ್ರದಿಂ ಕರಿಘಟೆಯ ಮರ್ದಿಸುತ್ತ, ತುರುಗಗಳ ಕೆಡಹುತ್ತ, ರಥಿಕರನು ಸದೆಯುತ್ತ, ಪಟುಭಟರ ನೊರಸುತ್ತ, ಪ್ರಳಯಕಾಲದಕೃತಾಂತನಂತೆ ಸಂಹರಿಸುತ್ತಿರೆ ರಕ್ತಪ್ರವಾಹಗಳು ಹರಿದವು, ಕಬಂಧಗಳು ನೆರೆದವು, ಶಿರೋವೃಷ್ಟಿಗರೆ

ಯುಲು ನಿರಂತರದಿನಗಳಿಂ ಹಾಸಿದುದು ರಣಭೂಮಿ, ಪಟುಭಟರ ಹೃದಯತಲ್ಲಣಿಸಿದುದು, ನರರೊಳಗೆ ಈಪರಿಯ ಕುವರನುದಯಿಸುವನೆ ? ಶಿವಶಿವಾ ! ಎಂದೆನುತ ಕರಗಳಿಂ ಕೈದುಗಳಬಿಸುಟೋಡಿ ಪೋಗಬೇಕೆಂಬ ಯೋಚನೆಯಿಂದ, ಕುವರನಾಟೋಪವಂ ತರಹರಿಸರಾರದಲೆ ತಲ್ಲಣಿಸುತಿಹ ಸೈನ್ಯವನ್ನೋಡಿ ಬಹುರೋಷದಿಂ ಚಿತ್ರರಥನಾಸುದರ್ಶನನ ರಥಕೆದುರಾಗಿ ಬಂದು ಕೇಳೆಲವೊ ಬಾಲಕ ! ಈಗ ಹುಲುಭಟರಗೆಲಿದು ನೀ ಹಿಗ್ಗದಿರು, ನಗ್ಗಿಸುವೆ ನಿನ್ನಧಟುತನವ, ನೀ ರಾಜನಪುರಿಯ ಬೇಡಲಹರ್ನೆ, ಮೂಢ! ಧರ್ಮರಾಯನಪುರಿಯ ನೈದಿಸುವೆ ನೋಡೆನುತ ನಿಶಿತಾಸ್ತ್ರಶಸ್ತ್ರಗಳ ವೃಷ್ಟಿಯನ್ನು ಸುರಿಯೆ, ಧರೆಗಗನ ದಿಕ್ಕುಗಳನ್ನು ಮುಚ್ಚಿದವು, ಕಚ್ಚಿದವು ಸೂತಾಶ್ವನಿಕರಗಳ ಕಾಯುವನು ನೋಯಿಸುತ, ಸುಪ್ರಭಾತನಯನವನೋಡಿ ಕಡುರೋಷದಿಂ ಘುಡಿಘುಡಿಸಿ ಚಿತ್ರರಥನಸ್ತ್ರಗಳ ತರಿದೆಲವೋ ಖೂಳ ! ನೀನಾಡಿಪುದ ಮರೆಯದಿರು, ನುಡಿದರ್ಥಗಳನು ನಿಶ್ಚಯವೆಂದು ತಿಳಿಯದಿರು, ಶೂರನಹೆ ನಿಜತನುವನೀಗರಕ್ಷಿಸಿಕೊ, ಎನುತ್ತೈದುಬಾಣಗಳಿಂದ ಕರದಚಾಪವಕಡಿದು ಮೂರು ಬಾಣಗಳಿಂದ ಸೂತನಸುವನೀಗಿ, ರಥ್ಯಗಳ ನೀರೈದುಶರಗಳಿಂ ಸದೆದೆಲವೋ ಗಳವಕತ್ತರಿಸುವೆನು ಸಲಹುವರ ಕರಸಿಕೋ ಎನುತ ಘನ ಗಂಭೀರನಿಸ್ವನದಿ ನುಡಿಯುತಿರೆ, ರಥವಿಳಿದು ಚಿತ್ರರಥ ಕ್ರೋಧಮೂರ್ಛಿತನಾಗಿ ಕರದಿ ಶಕ್ತಿಯಪಿಡಿದು ಹರಿಯಂತೆ ಮೊರೆಯುತ್ತ ತರಳ ! ಕೇಳೆಲವೋ ನೀನಿದನು ತರಹರಿಸಿದಡೆ ಧೀರನಹೆ ಎನುತಧನುವಂ ತೂಗಿಬಿಡೆ, ನಭದಲ್ಲಿ ಕಾರುತ ವಿಷಾಗ್ನಿಯನು ಘೋರಘಂಟಾಘಟಿತಶಕ್ತಿ ಯೈದುತಿರಲು ನೋಡಿ ರಾಜಕುಮಾರ ನೆರಡುಬಾಣಗಳಿಂದ ತರಿದು ನೆಲಕುರುಳಿಸಲು, ಚಿತ್ರರಥನತಿಜವದಿ ಮತ್ತೊಂದು ರಥವೇರಿ ನಿಜಶರಾಸನದಿಂದ ನಿಶಿತಶಸ್ತ್ರಾಸ್ತ್ರಗಳ ಬೀರುತಿರಲು, ಆ ಸುದರ್ಶನನು ಕೋದಂಡವನ್ನಿರಿಸಿ ರಥದೊಳು, ಗದೆಯಪಿಡಿದು ಅರಿಚರಣದಿಂ ಕಡುರೋಷದಿಂ ಧುಮುಕಿ ಪ್ರಳಯಭೈರವನಂತೆ ಬರುತ್ತಿರುವ ರಭಸವಂ ನೋಡಿ ಸೇನಾಪತಿಯು ಮಾತಾಭುಜದಿಂದ ಮುಂದೊದಗಿ ವರಲಬ್ಧಶೂಲವಂ ತೆಗೆದು ಬಿಡ

ಲಾ ಮಹಾಯುಧ ತನ್ನ ಮೂರುಮೊನೆ ನೀಮೂರಾಲೆ ರೇಕಗಳಿಂ ಸಾಲ ದೆಂಬಂತುರಿಯುಗುಳುತ ಅತಿವೇಗದಿಂ ಬರುತಿರಲು, ಜಗದಾಭ್ಯಮುದ್ರ ಯದಿಂದಲಿದು ಸತ್ವರದಿ ಚಿತ್ರರಥನೆಡೆಗೈದಿ ಚಕ್ರಚರ್ಮದವೋಲೆ ನಿಜ ಬಾಹುಗಳನೆತ್ತಿ ಪ್ರಹರಿಸಲು, ಅದಮೋಘಬಾಹು ನಿರ್ಮುಕ್ತಭಿಮರ್ಶೋ ಪಮಾಯಸಗದಾಘಾತದಿಂದ ರಥಸಹಿತವಾಗಿ ಚಿತ್ರರಥ ಮರ್ಣವನ್ನೈ ದಲು, ಪತಶೇಷಮುಖದಿಂ ಚಮೂಪತಿಮೃತಿಯುಕೇಳುತತ್ಯಂತ ಸಂತಾ ಪದಿಂದಾಕ್ಷಣದಿ ಸುತೀಕ್ಷ್ಣನ ಮೊಗನೋಡೆ, ಮುದದಿಂದ ಸತ್ಯವ್ರ ತಾತ್ಮಜನು ಧುರಕೆ ಅಪ್ಪಣೆಯನಾಂತು ಜವದಿಂದ ರಥದಿ ಕುಳಿತು ದ್ವ್ಯ ಕ್ಷೋಹಿಣೀ ಸೈನ್ಯದಿಂದೊಡಗೂಡಿ ತೆರಳೆ ಮಾಹಿಷ್ಮತಿಯು ರಣಭೂ ಮಿಯನೈದಿ ತರಳನ ಪ್ರಭಾವವನೋಡಿ ವಿಸ್ಮಿತನಾಗಿ ನಿಜಚಮೂನಿವಹ ದಿಂ ಮುತ್ತಿಗೆಯ ನವನರಥಕಿಕ್ಕಿದನು, ಶರಗಳಿಂ ಮುಕ್ಕಿದನು ಕರವೀರ ನೆದೆನಡಗುಡಂತೆ. ನಿಶಿತಾಸ್ತ್ರದಿ ಸುದರ್ಶನನಂ ನೋಯಿಸಲು, ನೃಪಕು ಮರನಾತನ ಶಿರೀಮುಖವ್ರಾತಮಂ ಕಡಿದಿವನು ಜನಕನ ಪ್ರಿಯಮಿತ್ರನಾದ ಗುರುಪುತ್ರನಾಗಿ ಇರಬೇಕಲ್ಲದಿವರಿಗೀ ಶಸ್ತ್ರಸಂಧಾನ ಕೌಶಲವೆತ್ತ, ಶಕ್ತಿಧರನಂಜುವನು ಶೀಸಲೀತನಕೂಡೆ, ಶಕ್ತನಾದಡೆಯು ಸೆಣಸ ನೋಡುವೆನೆಂದು ತತ್ತರಿಸುತವನಸ್ತ್ರಜಾಲವಂ ಸತ್ವರದಿ ಕರದೊಳಿಹ ಚಾಪವಂ ಕತ್ತರಿಸಿ, ಸಾರಥಿಯುಗಳದಬೆಸುಗೆಯಬಿಡಿಸೆ, ಸತ್ಯವ್ರತಾತ್ಮ ಜನು ಮತ್ತೊಂದು ರಥವೇರಿ ನವ್ಯಚಾಪವಪಿಡಿದು ಸನ್ನದ್ಧನಾಗಿ ಬರು ವನಿತರೊಳು ಸುಪ್ರಭಾತನಯನಾ ಸೈನ್ಯದೊಳಪೊಕ್ಕು ನೃಪವಿಕ್ರಮ ದೊಳಾಕ್ರಮಿಸಿ ಮುಕ್ಕಣ್ಣನಂತೆ ಪೋಲಿಕ್ಕಿ ಕರಿತುರಗ ಚಕ್ರವಲಾಘು ವದಿ ಚಕ್ರದಂತಿರುವ ನಿಜಚಾಪ ನಿರ್ಮುಕ್ತಶರ ನಿಕರದಿಂ ಸದೆಯುತಿರೆ, ಬಾಣಗಳು ಧರೆ ದಿಗಂಬರ ರಥಿಕರಂಗದೊಳು ತುಂಬಿದವು, ಸಂಗರದಿ ತು ರುಗಮಾತಂಗ ಕೆಡಹಿದವು, ತೊಡಹಿದವು ಪಟುಭಟರ ಪ್ರಾಣಗಳ, ನಿ ಮಿಷದಲಿ, ಪಾಣಿಯಿಂ ಸುಡಿಯೆಗೀರ್ವಾಣರಿಗಳವಲ್ಲ, ಕ್ಷೋಣೀಪತಿಯು ದವಧರಿಸು ! ಕಾಲನಂದದೊಳಂತು ಲೀಲೆಯಿಂ ನಿಜಬಲವ ಧೂಳೀಪಟವ ಮಾಡುತ ನಿರ್ಭಯದೊಳಿರುತಿಹ ಕುಮಾರನಂನೋಡಿ ಗುರುತನುಜ ನತಿ

ರೋಷದಿಂ ದಿಳೆನಡುಗೆ ರಥದಿಂ ಸುದರ್ಶನನ ಸಮ್ಮುಖಮನೈದಿ ಕೇಳೆಲವೋ ರಾಜಕುಮಾರ! ಯಾರು ನೀನದಪೇಳ್ಳು, ಯುಷ್ಮ ಪಟುವೇಧನವ ಬೇಡೆ ಕಾರಣವೇನು, ಶೂರನಹೆ ಆದೊಡೆಯು ಎಮ್ಮ ಕೈಗುಣವ ನೀನೋಡೆನುತ ಪರಿಘಮಂ ತಿರುಗಿ ಬಿಡೆ ಘುಡಿಘುಡಿಸುತಡಿಗಡಿಗೆ ಬರಲೆರಡುಶರಗಳಿಂ ತರಿದಿಳೆಗೆಕೆಡಹಿ ಕೇಳೆಲವೊ! ಶ್ರೀಹರಿಯೆ ತನ್ನಯ ಜನಕ, ತಾಯಿ ಕಮಲಾದೇವಿ, ನೀವೆ ಬಾಂಧವರೆನಗೆ, ವಾಸವಂ ಮಾಡುವರೆ ನಗರಿಯಂ ಬೇಡುವೆನು, ಕೊಡದಿರಲು ನರಪತಿಯು ಕೊಡುವೆ ಬಾಣಾಸನಗೆ ಇದು ತನ್ನ ವೃತ್ತಾಂತವೆನುತ ಅಲಗನೊಂದ ನಿಜಚಾಪದೊಳು ಪೂಡಿ ಪೂರಾಯದಿಂ ಸೆಳೆದು ಬಿಡಲಶನಿಯಂ ತೆರಲುತ್ತತಿವೇಗದಿ ಸುತೀಕ್ಷ್ಣನ ಶರನಿಚಯಮಂ ನುಂಗಿ ದಿವ್ಯಕವಚವನುಗಿದು ಮೂಡಿದುದುರಸ್ಥಳದಿ ನೆತ್ತರು ಪ್ರವಹಿಸಲು, ಸತ್ಯವ್ರತಾತ್ಮಜನು ಮೂರ್ಛೆಯುನೈದಿ ರಥದೊಳು ಮಲಗೆ, ಸಾರಥಿಯು ತಿಳಿದು ತೇರನು ತಿರುಹಿ ಜವದಿಂದ ಕಂಚುಕಿಗಳೈತಂದು ನರಪತಿಗೆ ತಿಳುಹಲು ;

ನೃಪತಿ ಚಿಂತೆಯಿಂದ ಮಂತ್ರಿಯೊಡನಿಂತೆಂದನೆಲೆ ಸಚಿವ! ಕೇಳೀ ಪೂರ್ವಬಾಲಕನು ಕಂತುಹರನಂತಖಿಲಶೂರರ ಪರಾಕ್ರಮವ ಶಾಂತಮಂ ಮಾಡಿದನು, ಮಂತ್ರಿ! ಕೇಳೀತನಂಪಡೆದ ಸತಿ ಯಾವಳೋ? ಮಡದಿ ಮಕ್ಕಳನಗಲಿ ಕಡಗೆ ತಾನಪಕೀರ್ತಿಗೆಡೆಯಾಗುವಂತಾಯ್ತು, ಮೃತನೊಲುಮೆಗೆಡರುಬರೆ ಮನುಜ ಮಾಡುವುದೇನು ಎನುತ ಕಡುದುಃಖದಿಂ ಮತ್ತೊರ್ವ ಸಚಿವನಂ ಕರೆದು ವೃಷಕೇತನನ ಕರೆತರುವುದೆಂದು ಜವದಿಂದಲಪ್ಪಣೆಗೊಡಲು, ಮಂತ್ರಿಯು ಕಲಾವತಿಯಪುತ್ರನಿದಮನೆಗೈದುವ ದ್ವಾರಕ್ಕೆ ಬರುತಿರಲು, ಕಂಡು ಕಂಚುಕಿಗಳೊಳಪೊಕ್ಕು ಸಚಿವನಾಗಮನವಂ ವಿದಿತವಂ ಮಾಡಿ ಕರೆತರುವುದೆನುತಪ್ಪಣೆಯನೀಯ್ಯಲು ಅವರೈತಂದು ಸಚಿವನಂ ಕರೆತಂದು ನರಪತಿ ಕುಮಾರನಡಿದಾವರೆಯ ಕಾಣಿಸಲು, ಮಂತ್ರಿ! ಮಕರಧ್ವಜನ ಸೋಲಿಸುವ ರೂಪಿನಿಂದರಿಯದೆ ನಿಚ್ಚೈಶ್ವರ್ಯದೆಡರನಬಲಾಸಕ್ತನಾಗಿಹ ಕುಮಾರನಿಗೆ ಕರಮುಗಿದು ಕರತರಲು, ಕಳುಹಿರುವನರಸನೆನುತೊರೆಯೆ ಚಿರಕಾಲದಿಂದರಸನಡಿಯು ದರು

ಕನಬಿಲ್ಲದವನಾದಕಾರಣದಿ ತ್ವರೆಯೊಳಖಿಳಾಭರಣ ನಿಕರಭೂಷಿತನಾಗಿ ತುರುಗವನೇರಿ ನಿಜಜನಕನಿಹ ಸಭೆಗಾಗಿ ನಡೆತಂದು ವಂದಿಸಲು, ನಂದನಗೆ ಹರಸುತಾನಂದದಿಂದೆಂದನೆಲೆ ಕಂದ! ಬಂದಿಹನೋರ್ವ ಬಾಲಕನು ಲೀಲೆಯಿಂಕೊಂದನೆರಡಕ್ಷೋಹಿಣೀ ಬಲವನಿದುವರೆಗೆ, ನಂದಗೋಪನುಜವರ್ಮಾಪತಿಯಾದ ಚಿತ್ರರಥನು, ನೊಂದನು ಮಹೋಗ್ರರಣಸವ್ಯಸಾಚಿಸಮಾನ ಸತ್ಯವ್ರತಾತ್ಮಜನು ಬಂದೀಕರದಿಂದ, ಕೇಳ್ಬಂದಿರುವ ಬಾಲಕನು ಬೇಡುವನು ನಿಜಪುರಿಯ, ಕೊಡದಿರಲು ಯುದ್ಧವನು ಮಾಡುವೆನು ಬಿಡೆನಲ್ಲೆನುತಲಾರ್ಭಟಿಸುತಿಹನೆಂದು ಧರಣೀರಮಣ ವಿವರಿಸಲು, ಕೇಳಿ ವೃಷಕೇತನನು ಕನರಿ ಕಡುರೋಷದಿಂ ರಕ್ತಾಕ್ಷನಾಗಿ ನಿಟಿಲಾಕ್ಷನೊಲು ಈಕ್ಷಿಸುವರೆಬೆನಡುಗೆ ಮಕರಾಕ್ಷನೆಂಬ ನಿಜಕ್ಷತ್ರನ ಕರದೆಲವೋ! ಚಕ್ರಚರಣವತರುವುದೀಕ್ಷಣದಿ ನಿಜಪುರಿಯ ಬೇಡುವನ ಸಾಹಸವ ನೋಡುವೆನು ತಡಮಾಡಬೆನುತ ಘರ್ಜಿಸುತಿರಲು, ತತ್ಸಭಾಸದಜನರು ನೋಡಿ ತಲ್ಲಣಿಸುತಿರೆ, ನರಪತಿಯು ಕುವರನಾಟೋಪವಂ ನೋಡಿ ಕೇಳೆಲವೊ ವೃಷಕೇತತನೆ! ಬಂದಿರುವ ಬಾಲಕನು ಸಾಮಾನ್ಯನರನೆಂದು ತಿಳಿಯದಿರು, ಲೋಕದೊಳು ಮಾನುಷನು ನರಪತಿಯ ಬೇಡುವುದೇ ದುರ್ಘಟವು, ಇಂತಿರಲು ಬಾಲಕನು ಓರ್ವನೆ ಬಂದು ಕೇಳಾದ್ಯ ಕನಗರಿಯಂಬಿಟ್ಟುಕೊಡು, ಕೊಡದಿರಲು ಶಕ್ತನಾದೊಡೆ ಯುದ್ಧವಂ ಮಾಡುಬಾರೆಂದು ಘರ್ಜಿಸುತ, ಪೋದ ದೃಢಧನ್ವನಂ ಪ್ರಾಣಮಾತ್ರಾವಶೇಷದಿ ಕಳುಹಿ, ಚಿತ್ರರಥನಂ ಸದೆದು, ಗುರುಪುತ್ರನಂ ರಣದಿ ವಿಮುಖನಂಮಾಡಿರುವನದರಿಂದಧುರದೊಳು ನಿಜಾತ್ಮರಕ್ಷಣೆಯಲ್ಲಿ ಮೈಮರೆಯದತಿಜಾಗರೂಕನಾಗಿರು, ವತ್ಸ! ಮತ್ಸರದಿ ಫಲವೇನು, ಕಾರ್ಯಸಂಗತಿಗಳನು ಕಾಣುವನೇಪುರುಷನದುಕಾರಣ ಮಣಿಮಂತ ಧರ್ಮಗುಪ್ತ ಪ್ರಮುಖಜನಿಖಿಲಯೋಧಪರಿಂದ ಲೊಡಗೂಡಿ ಸಮಯದೊಳು ಸರ್ವ ದಿಕ್ಕುಗಳನಾಕ್ರಮಿಸಿ. ತಕ್ಕುಪಾಯಗಳಿಂದ ನಿಗ್ರಹಿಸಿ, ಬಾಲಕನ ಸೆರೆವಿಡಿದು ತರುವುದೆಲೇ ತಾತ! ಕೇಳೆಂದೆನುತ ಪುತ್ರನಿಗುಪಾಯವಂ ನೊರೆದು, ಮಣಿಮಂತನಂ ಕರೆದು ಕೋಸಲಪತಿಯು ನಿಬಿ

ಲರನುಮತಿಯಿಂದ ಸೇನಾಧಿಪತ್ಯವಂನಾತನಿಗೆ ದಯಮಾಡಿ, ಅಕ್ಷೋ
ಹಿಣೀತ್ರಯದಿ ಪೋಗೆನುತಲಪ್ಪಣೆಯನೀಯ್ವಲು ಮಹೀಪತಿಯು,
ವೃಷಪತಾಕನು ಎದ್ದು ಜನಕನಡಿದಾವರೆಗೆ ಮಣಿಯೆ, ನೃಪ ಹರಸುತ್ತ
ದುಗುಡದಿಂ ಬೀಳ್ಕೊಡೆ, ಸಚಿವಮಣಿಯೊಡಗೂಡಿ ನಗರದಿಂ ತೆರಳ
ಚಮೂನಿವಹಂಬೆರಸಿ ಧರೆ ನಡುಗಲಶ್ವಕರಿರಥ ಪದಾಘಾತದಿಂದೆದ್ದ
ಕೆಂಧೂಳಿನಿಂ ಗಗನಧರೆ ದಿಕ್ಚಕ್ರಗಳು ಕಾಣದಿರೆ, ದಶಶತ್ರಾಯುಧನ ವಿರ
ಹಜ್ವರದಿ ಕಾತರಿಪ ನಾಗರಿಕರ ಸಮುಕರನಂತಿರುವ ನರಪತಿ ಕುಮಾರ
ನಂ ನೋಡಿ ಬಹು ಖೇದದಿಂದಳಲುತಿರೆ, ಗುಂಪುಗುಂಪಾಗಿ ಕೇಳ್ವನಿಪ
ತಿ! ಆ ಸಮೂಹದೊಳೋರ್ವ ಮಾನಿನಿಯು ನರಪತಿ ಕುಮಾರನಂ
ಕುರಿತು ಕರವೆತ್ತಿ ಕೂಗಿದಳೆಲಿವೋಸುಭಗ! ನೀನೆಂದಿಗೈತರುವೆ ನಿನ್ನ
ಡಿಯುಗಲಿತಾವಿರುವುದೆಂತು, ಕೇಳೆಮ್ಮನನಾಥರಂಮಾಡಿ ಪೋಗುವೆಯಾ
ಎಂದೊರಲೆ, ವೃಷಕೇತನನು ಕೇಳಿ ವಿಸ್ಮಿತನಾಗಿ ಕರೆದು ಕಂಚುಕಿಗಳ
ನು ಕೂಗುತಿಹ ಮಾನಿನಿಯ ಕರತರುವುದೆನಲು, ಧಾವನೆಯ ಮಾಡುತ್ತಾ
ತರುಣಿಯ ಸಮೀಪಮನೈದಿ ಕಾಣದೆ ಪರಮ ವಿಸ್ಮಯದಿ ಮುಂದಿಹ
ಸಮೂಹದೊಳು ಕಂಡಾಕೆಯಡೆಗೈದಿ ಕಾಣದಂತಖಿಳ ಗುಂಪುಗಳಲ್ಲಿ
ಕಂಡು ಕಾಣದೆ ಬರಲು ನೋಡಿ ವೃಷಕೇತನನು ಬಾಡಿದಾನನದಿಂದ
ಧರ್ಮಗುಪ್ತನ ಮುಖವ ನೋಡಲು, ಆ ಸಚಿವಮಣಿ ನುಡಿದನೆಲೆ ವತ್ಸ!
ಕೇಳ್ನಗರಾಭಿಮಾನದೇವತೆ ಇವಳು, ಮಹದೆಡರ ಸೂಚಿಪಳತೆರನಂತೆ
ಕಾಣುತಿದೆ, ಆದಡೆಯು ಎಂದಿಗೈತರುವೆ ನೀನೆಂದು ಕೂಗಿದಳಾಯಿಂದಿ
ರಾಪತಿಯು ದಯದಿಂದ ಕಡೆಹಾಯಿಸುವನೆಂಗು ಸಂದೇಹದಿಂ ನುಡಿಯುತ್ತೈತ
ರಲು; ರಣರಂಗದೊಳಗಮರಘಾಲಾಕ್ಷನಂತೆ ನಲಿದಾಡುತಿಹ ಸುಪ್ರಭಾತ
ನಯನಾಮುನ್ನೀರಿನಂತೆ ಅಪರಿಮಿತವಾಗಿ ಬರುತ್ತಿರುವ ಚತುರಂಗಮ
ನೋಡಿ ಮುಖದಿಂದ ತನ್ಮಧ್ಯದೊಳಗಮಿತಯೂಥಪರ ಮೇಳದೊಳ
ಬರುತಿರುವ ನರಪತಿಕುಮಾರನತ್ಯುಜ್ವಲ ಸುವರ್ಣಮಯ ವೃಷಪತಾಕ
ಕಂಡು ಪರಮಸಂತೋಷದಿಂ ಸೂತನೊಡನೆಂದನೆಲೆ ಕರವೀರ! ಬರುತಿರ
ವ ಸೇನಾಸಮುದ್ರದೊಳು ಕಾಣುತಿಹ ವೃಷಭಮಯಕೇತನಿವನೋಡ

ಕೇಳೀತನೇ ತಾತನನುಜಾತನತ್ಯಧಿಕತೇಜಸ್ವಿ, ಮೋಹೀತನೊಡನಖಿಳ ನೃಪರಂಜುವರು ಕಾದಲೆನುತಾಡುತಿರಲು, ಅನಿತರೊಳು ಬಂದು ಮುತ್ತಿತುಸೇನೆ, ನಗುತಾ ಸುದರ್ಶನನು ನಿಜಚಾಪವಂ ಪಿಡಿದು ಏರಿಸುತ ನಾರಿಯನು ನೇವರಿಸಿ, ತದಾಬ್ಹುನಿಸ್ವನಿತ ಮೌರ್ವೀಮಹಾಘೋರನಿನದ ಜನಿತಾತ್ಯಂತ ಸಾಧ್ವಸಧ್ವಸ್ತ ಯುದ್ಧೋತ್ಸಾಹರಾದ ನಿಜಯೂಥಪರ ಮೊಗವನೋಡಿಕಡುರೋಷದಿಂದ ವೃಷಕೇತನನು ಸುತನಸಮ್ಮುಖವತಾನೈದಿ ನರಹರಿಯು ನಿಟಿಲಾಗ್ನಿಯಾಕಾರವಂ ತಾಳಿ ನಿಂದಿರುವಂತೆ ಅವಿಷಹ್ಯಮಾನ ತೇಜಸ್ಸಿನಿಂಮೆರೆಯುತಿಹ ಸುಕುಮಾರನಂನೋಡಿ ಪರಮವಿಸ್ಮಯದಿಂದ ಮನದೊಳಾಲೋಚನೆಯಮಾಡಿ ಕೇಳಿದನೆಲವೋ ಬಾಲಕನೆ ! ತನ್ನೊಡನೆ ಸೆಣಸಿಕಾರಣವೇನು, ನಗರಿಯನುಬೇಡುವನೆ ನೀನ್ಯಾರು, ಮೂಢತನದಿ ತರಳಬುದ್ಧಿಯಮಾಡಿ ತನುವನೀಗಾಡದಿರು, ಗಳಹಿದಡೆಗಂಟಲನು ತರಿದುಭೂತಕೆಬಲಿಯ ಮಾಡುವೆನು, ನೋಡೆನುತನಿಜಚಾಪಗಳಿತ ಶರನಿಚಯದಿಂ ಸೂತಾಶ್ವನಿಕರಗಳ ನೋಯಿಸಲು, ನಸುನಗುತಸುಪ್ರಭಾತನಯನುವೃಷಕೇತನನ ಶರಜಾಲವನುಕಡಿದುನುಡಿದನೆಲೇಧೀರ! ಕೇಳ್ವೀಶೂರನಹೆ ಧಿಟಕೆನ್ನಶಿರವರಿಯೆ? ಭೂಗರ್ಭನಿಲಯಬಿಲಮಾರ್ಗ ಮೊದಲಾದ ಸಾಧನಗಳಿರೆ? ತನುವಿನರ್ಧವಮುಚ್ಚಿ ನಿಲಯವೃತ್ತಾಂತವನುತಿಳಿಯದಿಹಮೂಢತಮ ತಾನಿದುವೇ ಸತ್ಯವೇಸರಿ, ನಪುಂಸಕನ ಅಬಲೆಯಾರಿಗಾದರೂ ದೊರೆವಳು, ಇದಕ್ಕೆಸಂಶಯವ್ಯಾಕೆ, ತಾನುನಿನ್ನವನೆ ? ಮೇಣಾದಡೆಯು ಕೈಗುಣವನೋಡೆನುತ ರಥರಥ್ಯಸೂತ ಚಾಪಗಳತರಿದಿಳೆಗೆಕೆಡಹಲು, ವಿರಥನಾಗಿವೃಷಕೇತನನು ತರಳನಾಡಿದನುಡಿಯತಾತ್ಪರ್ಯವನು ಮನದಿಯೋಚಿಸುತ ತಿಳಿಯದಲೆ ದುಗಡದಿಂಪಿಂತಿರುಗೆ, ಮುತ್ತಿದರುಮಣಿಮಂತಮೊದಲಾದಯೂಥಪರು ಕ್ರೋಧಮೂರ್ಛಿತರಾಗಿ ನಾಲ್ಕ್ಕಸೆಯೊಳು ನಿಂದು ಸರಳಮಳೆಯನು ಸುರಿಯೆ, ಕನಲಿಶರನಿಚಯಗಳತರಿದಾಸುದರ್ಶನನು ಜವದಿಸೇನಾಪತಿಯ ಕರದಚಾಪವಕಡಿದು, ಮೂರುಬಾಣಗಳಿಂದ ಧರ್ಮಗುಪ್ತನಸೂತನನಸುವನೀಡಾಡಿ, ದಶನಿಶಿತಬಾಣಗಳಿಂದ ಮುದ್ಗರನರಥ್ಯಗಳ ಸದೆದು, ವಿಂಶತಿಗಳಿಂ ಭೀಷಣನ ಸ್ಯಂದನವ ಪುಡಿಮಾಡಿ ಬೊಬ್ಬಿರಿ

ಯು, ನಿಖಿಲರೆದೆನೀರಾಗಿದುದು, ಬಾಲಕನವಿಕ್ರಮವ ನೋಡಿ ಮಣಿಮಂತ್ರನ ತಿರೋಷದಿಂ ಮತ್ತೊಂದುಧನುವಕೈಕೊಂಡಲೆವೋ ಪ್ರಳಯ, ಮೊಯ್ಗಯು ಬ್ಬಿ ನೀಂಹಿಗ್ಗದಿರು, ನಿನ್ನೆದೆಯಬ್ಬಿಳುವೆನು ತಾಳುತಾಳೆಂದೆನುತ ಕೆಂಗೆಣೆ ಯಬೀರಲವು ಮುಚ್ಚಿದವು ಚುಚ್ಚಿದವು ಸುಕುಮಾರನಂಗವನು, ಸಂಗರದಿನೊಂದಾಸುದರ್ಶನನು ರೋಷಪರವಶನಾಗಿ ಮಾಡಿಗೆಯೊಳೊಂದು ನಿಶಿತಾಶುಗವತೆಗೆದು ನಿಜಚಾಪದೊಳು ಪೂಡಿಕೇಳೆಲವೊ ಮಣಿಮಂತ್ರ! ಕಠಿರನಹೆ ಯಾಡಿದೊಡೆಯು ತರಹರಿಸಿಕೊಳ್ಳೆನುತ ಸೆಳೆದುಬಿಡಲಲಗಾಳುರಿಯಾಗ್ನುಗುಳುತಿರೆ ರಭಸದಿಂ ಪರಿಪರಿಯ ವಿಧದಿಂದಬರುತಿರುವ ಗುಣಿನಾಶುಗವರಂಪರೆಯ ಸರಕಿಸದೆ ತಚ್ಛರವಕಚ್ಚಿ ವಿನತಾತನಯನುರಗವನು ಪಿಡಿವೊಯ್ವತೆರನಂತೆ ಗಗನಮಂನಡರಿದುದು ಸಕಲಯೋಧಪರ ಎಡೆನಡುಗೆ, ಕೇಳವನಿಪತಿಲಕ! ಸೇನಾನಿವಹಕವಿದುದು ಮಹೀಧರವ ಘನನಿವಹ ಮಾಪರಿಸುವಂದದಲಿ, ಮೂದಲಿಸಿನಾನಾವಿಧಾಯುಧ ವಿಚಿತ್ರತರವೃಷ್ಟಿಯಿಂ ನಿರಂತರವಿಕರೆದವು ಮಹೀ ಗಗನ ದಿಕ್ಕುಗಳು ತಿಳಿಯದೊಲು, ಹರಹರಮಹಾದೇವ ! ಸುಕುಮಾರನುಳಿಯುವನೆಂತು ಮಹದಾಹವದೊಳೆಂದೆನುತೆ ಗಗನದೊಳು ನೆರದಿರುವ ಸಕಲವೈಮಾನಿಕರು ಪರಮವಿಸ್ಮಯದಿಂದ ನೋಡುತ್ತಿರೆ? ಸುಪ್ರಭಾತನಯನು ನಿಜಚಾಪವನುಯಿಳುಹಿ ಗುರುಚರಣಗಳನೆನೆದು ಮಹಾಘೋರಗದೆಯ ನಿಜಹಸ್ತದೊಳಗಾಂತು ರಥದಿಂಧುಮುಕಿ ಸುಳಿದು ನಾನಾವಿಧದ ಗತಿಗಳಂ ತಿರುಗುತಪ್ಪಳಿಸುತಿರೆ, ಗಜಘಟೆಗಳುರುಳಿದವು, ತದ್ಗದಾಭ್ರಮಣರಯದಿಂ ರಥಿಕನಿಕರ ಬಂದೀನಿಮಿಷಮಾತ್ರದೊಳು ಬಯಲಾಯ್ತು, ತುರಗ ಸೇನಾನಿವಹಕದಡಿ ಕಶ್ಮಲವಾದುದು, ಅ ಹಹ! ಪದಾತಿಚಯ ಧೂಳೀಪಟವಾದುದಾರಣರಂಗದೊಳಗೆಲ್ಲಿನೋಡಿದಡೆ ಸುಪ್ರಭಾತನಯ ಮಯವಾದುದು, ಅಸೃಗಾಸವತರಂಗಿಣಿಗಳುಕ್ಕಿ ಪ್ರವಹಿಸಿದವು, ಅವಿರಾಚಾರ್ಯನುಪದೇಶಬಲವೆಂತುಟೊ? ಸೇನೆಯು ಕುವರನಾಟೋಪಮಂ ತರಿಹರಿಸಲಾರದತಿಭೀತಿಯಿಂ ಕೈದುಗಳ ಬಿಸುಟು ಕಾಂದಿಶೀಕರೊಲು ದಿಕ್ಕುದಿಕ್ಕುಗಳಾಗಿ ತೆರಳುತಿರೆ, ನೋಡಿ ವೃಷಕೇತನನು ಖತಿಯಿಂದ ಪ್ರಳಯಭೈರವನಂತೆ ರೋಷಪರವಶನಾ

ಗಿ ತನುವಿನಾಶವನುಳಿದು ಪಿಡಿದು ಶರಚಾಪಗಳ ನವ್ಯರಥದೊಳು ಕುಳಿ
ತು ತರಳಗಭಿಮಾನನಾಗಿ ಸರಳಗರೆಯುತ್ತಲವ್ರೊ ಮರುಳೆ! ಸೇನಾಪತಿ
ಯು ಸದದೆನೆಂಬುನ್ನತಿಯಗಿರಿಗೆ ಪವಿಯಿದಕೋ, ಚತುರಂಗವಂ ಬೆದರಿ
ಸಿದೆನೆಂಬ ಮದವಾರಿಧಿಗೆ ಬಡಬಶಿಖಿಯಿದಕೋ, ನಿಜನಗರಿಯನು ಬೇಡು
ವ ಅವಿನೇಕ ಶಿವಿರದ್ಯುಮಣಿಯಿದಕೋ? ಎನುತಾಗ್ರಹದೊಳುಗ್ರತರ
ನಿಚಯಗಳ ಬೀಶಲದ ನಿಜಗದಾಭ್ರಮಣದಿಂ ಖಂಡಿಸಲು ಪಲ್ಲಿಡಿ ಮೊರೆ
ಯುತ್ತಲಾಗ್ನೇಯ ಬಾಣಮಂಪೂಡೆ ನಿಜಚಾಪದೊಳು ದಿಕ್ಕುದಿಕ್ಕುಗಳಲ್ಲಿ
ಮೂಡಿದುದುಕಾಬೋರ್ಗೆಯು ಭುಗಿಭುಗಿಲು ಭುಗಿಲೆಂದು ಜ್ವಾಲೆಯಾವ
ರಿಸಲು, ಅದನೋಡಿ ರಾಜಕುಮಾರನು ಜವದಿ ನಿಜರಥವೇರಿ ಚಾಪವನು
ಪಿಡಿವನಿತರೊಳಗೆ ವೃಷಕೇತನನು ಶೆಳೆದುಬಿಡಲುರಿಯು ನಾಲ್ದೆಶೆಯ
ನಾವರಿಸಿ ಗಗನಾಂಗಣವ ಚುಂಬಿಸಲು ಹಂಬಲಿಸೆ ಕರಪೀರನಾಕ್ಷಣ ಸು
ದರ್ಶನನು ವಾರುಣಾಸ್ತ್ರವ ತೆಗದು ಪೂಡಿ ನಿಜಚಾಪದೊಳು ಬಿಡಲಾ
ಮಹಾಸ್ತ್ರಭವವಾರಿ ವರ್ಷವಿನಾಶಿತಾತ್ಮೀಯ ಶಿಖಿಬಾಣನಾದ ವೃಷ
ಕೇತನನು ಕ್ರೋಧಮೂರ್ಛಿತನಾಗಿ ವಿವಿಧ ಮಂತ್ರಾಸ್ತ್ರಗಳನುರುಬು
ತಡಿಗಡಿಗೆ ಬಹುವಿಧದಿ ನೋಯಿಸುತ್ತ ನಿಶಿತಾಸ್ತ್ರದಿಂ ನಾರಿಯನು ಕಡಿಯ
ಲು, ಅತಿರೋಷಪರವಶನಾಗಿ ಸುಕುಮಾರನು ಮರೆದು ಮರ್ಯಾದೆಗಳ
ಗುರುಪತ್ತ್ರ ಘೋರಶತ ನಿಶಿತಾರಧಾರಾಕರಾ ಮಹದುಜ್ವಲ ರಥಾಂಗವಂ
ತೆಗೆದು ಕರದೊಳು ತಿರುಹುತಲವ್ರೋ ವೃಷಕೇತನನೆ! ನೋಡು ನಿನ್ನ
ಯುಗಳವ ತರಿವೆ ನೆಚ್ಚರದೊಳಿರು, ತೋರು ನಿನ್ನಯ ಭುಜದ ಸಾರವನು
ಸಮಯವಿದು ಸಾರುವೆನುಯನುತ ಬಿಡೆ, ಬಿದುರದಂತೊರಲುತ ಅತಿರ
ಯದಿಂದ ರವಿಯಂತೆ ಗಗನದೊಳು ಬರುವರಿಯನೋಡಿ ವೃಷಕೇತನ
ನು ಭರದಿ ಮಂತ್ರಾಸ್ತ್ರಗಳನುರುಬಲದನಣಕಿಸುತ್ತ ಘನವೇಗದಿಂಗಳವ
ಕತ್ತರಿಸಿ ಕೆಡಹೆ, ಮಣಿಮುಕುಟ ಕುಂಡಲ ಘಟಿತ ವಿಧು ಬಿಂಬಸದೃಶಶಿರವು
"ಶಿವ ಮಹಾದೇವ ಗಿರಿಜಾರಮಣಹರ ಪಾಹಿ"ಯೆನುತ ನೆಲಕುರುಳಿದುದು,
ಹತಶೇಷಸೇನೆ ಯೊರಲಿದುದು ಹಾ ವತ್ಸ!ಯೆಂದೆನುತ ಬಾಯಿಗಳಬಿಟ್ಟು
ನಿಖಿಳಯೋಧವನಿವಹ ತಲ್ಲಣಿಸಿ ಶಿವಶಿವಾ! ಮುಂದೇನುಗತಿಯೆಂದು ಮಾಂ

ದೋರದಳಲುತಿರೆ, ನಗರಿಯೊಳು ಥರಥರದೊಳುತ್ಪಾತನಿಕರಗಳು ಕಾಣ ಲದನೋಡಿ ನೃಪನು ಚಿಂತೆಯಿಂದಳಲುತಿರಲು ;

ಅನಿತರೊಳು ಕಂಚುಕಿಗಳೈತಂದು ಸುಕುಮಾರನಸ್ತಮಯುವ ನೊರೆಯೆ, ತದ್ವಚೋವಜ್ರನಿಹತಾಮರವ್ರಹಿರುಹನ ತೆರನಂತೆ ನೆಲ ಕುರುಳೆ ಮೈಮರೆದು ಮೂರ್ಛೆಯನೈದೆ, ಜಯ ಪುರಂಜಯರೆಂಬ ಸಚಿವರತಿಭೀತಿಯಿಂನೋಡಿ ಬಳಿಗೈದಿ ಬಲುಖೇದನಿಂದುಪಚಾರಗಳಮಾ ಡೆ ಮೂರ್ಛೆತಿಳಿದೆಚ್ಚೆತ್ತು ಪುತ್ರರಂ ನೆನೆನೆನೆದು ಹಂಬಲಿಸಿ, ಹಾ ಸಹ ಸ್ರಾಯುಷನೆ! ಹಾ ವತ್ಸ ವೃಷಕೇತೂ! ವೃದ್ಧನನನಾಥನಂ ಮಾಡಿ ನೀವೆಲ್ಲಿ ಗೈದಿದಿರಿ, ತಾನೆಂತಿರುವೆನೀಭೂಮಿಯೊಳತಿಪಾಪಿ ಚಿರಜೀವಿಯಂ ತೆ ದೂಷಿತನಾಗಿ, ಕಾಂತಿಮಾಲಿನೀತನಯನು ಮಹದಪಮಾನುಷಕಾರ್ಯಗಳ ಮಾಡಿ ಸಹಜಾತನಚರತಾ ಪರಿಹಾರಗೈದಿವನ ಪರಿಣಯುವಮಾಡೆಲೆಲೋ ಕಾಂತರವನೈದಿ, ಮೇಣಲ್ಲಿಂದ ಭಾರತೀರಮಣವರದೃಪ್ತನಾಗಿರುವ ಸುರಪತಿಯನಾಹವದಿ ಸದದಮಲಮಣಿಯನು ತಂದು ಸಹಜಂಗೆ ವಿವಾಹವ ನು ಮಾಡಿ ನೀನಿಂದೋರ್ವ ಬಾಲಕನ ದೆಸೆಯಿಂದ ಮಡಿದಿರಲುಪೇಕ್ಷಿ ಸುವುದುಚಿತಮಲ್ಲೆನುತ ಕಂಬನಿಗರೆದು ಲಜ್ಜೆಯನುತೊರೆದು ಹಾ ವತ್ಸ ವೃಷಕೇತನನೆ! ಮರೆಯುದಗ್ರಜನ ಜನನಿನಿರಸಲ್ಕೈದಿದೆಯಾ, ತಾನೇನ ಮಾಡುವೆನಿನ್ನು, ಸುಕುಮಾರನುಪಕಾರವೆಣಿಸದವಿವೇಕದಿಂದಗಲಿ ಯಾ ಮಿನಿಯಲ್ಲಿ ಚೋರನಂದದಿ ತೆರಳಿಬಂದವನನುಗ್ರಹವ ಪಡಯಬೇಕೆನು ತೆನ್ನ ವಾತ್ಸಲ್ಯವನು ಮನಕೆ ತಾರದೆಲೆ ಬಂದಡಿಗೆಮಣಿದು ಮಮತೆಯ ಪಡೆದ ಸುಕುಮಾರ! ನಿನ್ನಗಲಿ ಜೀವಿಸುವೆನೆಂತು, "ಶಿವ ಪಾರ್ವತೀರ ಮಣ" ನಿನ್ನಡಿಯ ನಂಬಿ ತನ್ನನಿಂತು ಪರಿಹಾಸವನು ಮಾಡಲುಚಿತವೆ, ಪರಮ ಕರುಣಾಮಹೋದಧಿಗೆಯನುತ ನಿಜತನುಜಾತ ವಿರಹಜನಿತಾ ತ್ಯಂತ ಶೋಕ ತಿಮಿರ ವಿಲೂನ ನಿಖಿಲ ಕರುಣಾಗ್ರಾಮ ವೃತ್ತಿಯುಳ್ಳವ ನಾಗಿ ನೃಪತಿಯು ಇತಿಕರ್ತವ್ಯತಾ ಮೂಢನಾಗಿರಲು ; ತಿಳಿದು ವೃಷ ಕೇತನನಮೃತಿಯು ತಜ್ಜನನಿ ಹಾ! ವತ್ಸಯೆನುತಾಕ್ಷಣದಿ ಮತ್ಸದೃಶರಿಲ್ಲ ರೆಂಬುತ್ಸವವು ಬಯಲಾಗಿ ಮೂರ್ಛೆಯನೈದಲಾ ಕುಬ್ಜೆ ಮೊದಲಾದ

ಸಹಚರಿಯುರತಿಸತ್ವರದಿ ತಾಳವೃಂತಾದಿಗಳ ಪಿಡಿದು ತತ್ಕಾಲೀನ ಶಿಶಿ ರೋಪಚಾರಗಳ ಮಾಡಲಿಚ್ಚೈಸುತ್ತು ನಾನಾವಿಧದಿ ಹಂಬಲಿಸಿ ಸ್ವಕೃತ ದುಷ್ಕೃತ ಪರಂಪರೆಗಳನು ನೆನೆನೆನೆದು ತತ್ಫಲವಿದೆಂದೆನುತ ಮನದಿ ನಿಶ್ಚೈಸುತ್ತು ಮರುಗಿ ಕಂಬನಿಗರೆದು ಹ ಮ್ಮೈಸುತಲ್ಲಿಂದಲಿನೆಯು ಡೆಸ್ಕೈ ತಂದು ತತ್ಪಾದ ಸರಸೀರುಹವೆಡೆಯಲ್ಲಿ ಬಿದ್ದು ಪೊರಳುತ್ತು ಧೃತಿಗುಂದಿ ಮನದಳಲಿ ನಿಂನಳವಳಿದು ಬಸನಾಳದು ಮೈ ಮರೆದು ತರಳನ ವಿಚಿತ್ರ ತರ ಗುಣಗಳನು ನೆನೆನೆನದು ಮನ ಮರಗಿ ರೋದನವ ಮಾಡುತಿರಲು ; ನೃಪಪತಿಯು ನಿಜಪತ್ನಿಯು ವಿಚಿತ್ರತರ ಶೋಕಜನಿತವಿಲಾಪವನು ಕೇಳಿ ನಿಜತನುಜಿಹಾಸಯಿಂ ಮನದೊಳಗೆ ತರಳನನಿಮಿತ್ತಾಪಕಾರವನು ನೆನ ದು ಮಹದಾಗ್ರಹದೊಳುಗ್ರನೊಲು ವಿಗ್ರಹೋನ್ಮುಖನಾಗಿ ಜಯು ಪುರಂಜಯುರೆಂಬ ಸಚಿವರಂ ಕರೆದು ಪರಿಶೇಷ ಸೈನಿಕರಿಂದ ತೆರಳುವುದು, ಸಾರಥಿಯು ತರಹೇಳು ರಥವ ನಾ ದುರುಳ ಬಾಲಕನ ಶಿರವರಿದು ಶರನಿಕ ರದಿಂ ಹರನ ಪೂಜಿಸುವೆನೆಂದೆನುತ ಬಿತಿಯಿಂದ ಪರಕಾಲನೊಲು ಕವಚ ಕುಂಡಲ ಕಿರೀಟಾದಿಗಳ ಧರಿಸಿ ರಣರಂಗದಿ ರಕ್ತಾಕ್ಷನಾಗಿ ದ್ವಿಯು ಗಾಕ್ಷೋಹಿಣೀ ಸೇನೆಯಿಂ ವೆರಸಿ ಸಚಿವರೊಡಗೂಡಿ ಸರ್ವಾಯುಧ ಪ್ರಕರದಿಂ ಸನ್ನದ್ಧಮಾದ ನಿಜರಥವನೇರಿ ತೆರಳಲು, ಮಹೀಪತಿಯು ಕುಮುದ ಕುಮುದಾಕ್ಷ ಕಿಮ್ಮಿರ ಹೀರ ಚತುಷ್ಕಯಾರೂಢಪರು ವಾಹಿನಿ ಯು ಸೆಳದು ನಾಸೀರದೊಳು ನಡೆಯುತಿರೆ ಧರಣಿಯಲ್ಲಾಡಿದುದು, ಪರಿ ಪರಿಯು ರಣಭಯಾನಕ ಘೋರವಾದ್ಯ ನಿಕರನಿನಾದದಿಂದಿನಿಜರೆದೆ ನಡು ಗೆ ಸೇನಾರಜೋರಾಜಿ ಧರೆಗಗನದಿಕ್ಕುಗಳನಾವರಿಸಿ ಮಹದಂಧಕಾರ ಮಾಯುಮಾಗೆ? ಗಜ ತುರಗ ಪಟುಭಟರುಗಳ ಗಳಿತ ರಥಚರಣರಯಜನಿ ತ ಕಟುಘೋಷ ಚತುರನಾನಂದ ಬೆಸುಗೆ ಬಿಡುವ ತೆರದಿಂದೆಸಗೆ ಯುಗ ವಿಗಮ ಸಮಯುದೊಳು ಮರ್ಯಾದೆಯನು ಮೀರಿ ಬರುವ ವಾಹಿನೀಪತಿ ಯುತೆರನಂತೆ ಚತುರಂಗವಾಹಿನಿಯು ಬರುತಿರಲು ;

ಇತ್ತಲಾ ಸುಪ್ರಭಾತನಯನು ವೃಷಕೇತನನ ಮರಣಜನಿತವಿಷಾದದಿಂ ಧನುವನಿಳುಹಿ ಮನಮರುಗಿ ಪರವಶನಾಗಿ ಯೋಚಿಸುತ ವಾರಧಿಯುತೆರನಂ

ತೆ , ಮತ್ತೆಬರುತಿರುವ ಚತುರಂಗವಂನೋಡಿ ಕರವೀರನೊಡನೆಂದೆಲೆ
ಸೂತ ! ಕೇಳೀಗಬರುವಾತನೆಮ್ಮಯ ಪಿತಾಮಹನು, ಸಾಕ್ಷಾದ್ಧರ್ಮಮ
ಭೂಸಾಧುಜನತಿಲಕ, ಮೇಣೀತನಿಗೆ ಸರಿಯಾದ ಭೂಭುಜರನೀಮ
ಯೊಳರಿಸಿದಡೆಕಾಣೆ , ವಿಖ್ಯಾತಭೂಪತಿಯುಸು ಕುರಿತುಚಿರಕಾಲತಪಗೈ
ದು ಯೋಗೀಜನರಿಗೆದೊರೆಯದಗಸುತಾಕರ ಸರಸೀರುಹಲಾಲಿತಾಂಘ್ರಿ
ಯುಗನಾದ ಗಂಗಾಧರನ ಮಂಗಳಮಯಾಂಗವನು ಕಂಗಳಿಂದಲಿನೋಡಿ
ದೇವವಿನುತನ ಚರಣಯುಗಳವನು ನುತಿಮಾಡಿ ದಿವಿಜರರಿಯದ ಪರಮಕ
ರುಣವನು ಪಡೆದು ತತ್ಸದೃಶತನಯರ ಪಡೆದುಕಡೆಗೀಕಲಾವತಿಯ ದೆಶೆ
ಯಿಂದಲೀತೆರದಭವಣೆಗೊಳಗಾಗಿ ನೃಪನಳಲುತಿಹನು , ಸೂತ ! ಕೇ
ಳೀಗವೋಣಾತ್ರನಂಗದವೋಲೆ ಘಾತ್ರುಕನತೆರನಂತೆ ಸರಳಬೀರುವನೆಂತು?
ಹಾವಿಧಿಯೆನುತಮರುಗುತಿರಲು; ನೃಪತಿಯು ನಿಖಿಲರಿಂದೊಡಗೂಡಿ ಯು
ಗವಿಗಮ ಸಮಯದಲಿ ಜಗತ್ರನುಜ ಭುವನಗಳ ಭಕ್ಷಿಸುತಮಾನವಂ ಮಾ
ಡಿರುವತೆರನಂತೆಘೋರತರವಾಗಿರುವ ರಣಭೂಮಿಯನೈದಿ ಪರಮವಿಸ್ಮ
ಯದಿಂದ ರಣಭೂಮಿಗುತ್ತರದಿ ನಾತಿದೂರದೊಳಿರುವ ಸಹಕಾರಬನದೆಡೆ
ಯೊಳನಬಿಂಬದಂತೆಪೊಳೆಯುತ್ತಿರುವ ನಿಜಪುತ್ರನದ್ಭುತಸ್ಯಂದನವನೋ
ಡಿ ಕಡುರೋಷದಿಂ ನರಪತಿಯುನಿಜರಥವತಿರುಹೆ, ಕುಮುದಾಕ್ಷಕಿವಿಸ್ಮಾ
ರಮೊದಲಾದ ಯೂಥಪರು ಬಾಲಕನ ಬಂಧುರಸ್ಯಂದನವ ಮುತ್ತಿದರು
ಸುತ್ತ ನಾನಾವಿಧದಿಹೇಳನವ ಮಾಡುತ್ತಮೊದಲಿಸಿ ಕೈದುಗಳಮಳೆಗರಿ
ಯೆ , ಸುಕುಮಾರನಸುನಗುತ ಗುರುಚರಣಗಳನೆನೆದು ಶರಚಾಪಗಳಪಿ
ಡಿದು ಪೃತನಾರ್ಣವವಕದಡಿ ಬಡಬಾಗ್ನಿಯೊಳು ಮುಳಿದುತರಿದೆಡೆಗೆಡಹೆ,
ಕರಿಘಟಾಘನನಿವಹದೊಳಗೆ ಕ್ಷಣರುಚಿಯಂತೆ ಮಿನುಗಿ, ಖುರದಳಿತಧ
ರಣೀರಜೋರಾಜಿ ದುರ್ಗಮತುರಂಗಮಪ್ರಕರದೊಳು ಸುಳಿದು, ರಥ
ನಿಕರದೊಳು ನಲಿದಾಡಿ , ಪಟುಭಟಸಮೂಹದೊಳು ತೊಳಲಿ, ಸಮಸ
ಮಯದೊಳಗಿಂತು ಸರ್ವತ್ರಮೇಣೆಲ್ಲಿ ನೋಡಲು ಸುದರ್ಶನನೆಕಾಣುತ್ತಿ
ರಲು; ದಿವಿಜರಂಬರದಲ್ಲಿ ಬೆರಳನೊಲದೊಲೆದುಜಯಜಯವೆನುತಪೊಗಳುತಿ
ರೆ; ಸಚಿವಯೂಥಪರೊಡನೆಮುಳಿದು ಘನಕದನವನುಮಾಡ್ವಿಜಯಕುಮು

ದರನುಕಳುಹಿಸೆಂಯುವಮುನಿಗುಳಿದವರವಿಮುಖರಮಾಡಿ, ಪ್ರಳಯಾನಿಲಕ
ಕ್ಷನೆನಿಲು ಮೆರೆಯುತಿರಲು; ಅನಿತರೊಳುಗುರುಪುತ್ರನೊಸಗೊಂಡು ಧರ್ಮಗು
ಪ್ತನು ನಿಖಿಲಹತಶೇಷಯೋಧನರನೊಡಗೊಂಡು ತಿರುಗಿಬರುತಿರಲು ; ಧ
ರಣೀರಮಣ! ತರಳನಪರಾಕ್ರಮವ ನೋಡಿ ವಿಸ್ಮಿತನಾಗಿ ಮನುಜರಲ್ಲಿ ಪು
ರಹರನು ರೂಪಾಂತರವಧರಿಸಿ ಬಂದಿರುವಂತೆ ತೋರುತಿದೆ, ಅದರಿಂದಲಿವ
ನೊಡನೆ ಕದನವನು ಮಾಡಿ, ಈ ಪುಂಡರೀಕಾಕ್ಷ ನುದ್ದಂಡದೋರ್ದಂಡಧೃ
ತಚಂಡಕೋದಂಡ ವಿಚ್ಯುತನಿಶಿತಬಾಣ ಧಾರಾದಳಿತಗಾತ್ರನಾಗುತ ಲಸು
ವನೀಗಿ ಪರಲೋಕವನೈದುವದೇಕೇಸೆನುತ ಮನದಿ ನಿಶ್ಚಯಮಾಡಿ
ಪಿಡಿದು ನಿಜಚಾಪವನು ನುಡಿದನೆಲೆ ಸೂತ! ಪಾರ್ಥವನೀಪಸುಳಿ ಯಭಿಮು
ಖವನೈದಿಸುವುದೆನೆ, ತೆರಳಿದನು ರಥ್ಯಗಳ ನಿಮಿಷದಿ ಸುದರ್ಶನನ ಸಮ್ಮು
ಖವನೈದಿ ನರಪತಿಯು ಮಹದಾಗ್ರಹದಿ ನುಡಿದನೆಲೆ ತರಳ ! ನೀನ್ಯಾರು, ತ
ನ್ನೊಡನಿಂತು ಸೆಣಸೆ ಕಾರಣವೇನು , ಪುರಿಯಬೇಡುವೆಯಾಕೆ ಎನುತ ಶರ
ನಿಕರಗಳನುರುಬಲು ಅದಂ ಖಂಡಿಸುತ ನೃಪನಡಿಗೆ ಮಣಿದು ಮನದೊಳು
ಸುದರ್ಶನನು ನಗುತ ಧರಣೀಪತಿಯ ಮಧರಿಸು ! ಪ್ರಥಮದಲ್ಲಿ ಜನಕನೆಯಿ
ಲ್ಲಿ , ತನಗಿಂತಿರಲು ಪೌರವೆ ತಾನಾರೆಂದು, ಪುರಿಯ ನಾತನಪಡೆಯಲೋ
ಸುಗವೆ ಬೇಡುವೆನು , ಮತ್ತೊಂದು ನಗರಿಯೊಳಾತತ್ರಿಸಿದ್ಧಿಯಾಗದದರಿಂದೆ
ಲೆನ್ನಾದಡೆಯು ಬಿಡುವುದೇಲೇಸು, ನಿನಗಾನು ಕದನವ ಮಾಡಿದವನಲ್ಲ ನಿಂ
ನ್ನಮಾತಿ ವಿಪರೀತವೇಯಿಂತು ಘಾತವ ಮಾಡಿ ತೀಗಲಿನ್ನಾದಡೆಯು ತ
ರಳನ ವಿಷಾದವಂ ನುಳಿದು ನಗರಿಯ ನುಚಿವದಿಂದ ಬಿಡೆ , ಸಿರಿಯರಸನೆ ೞ
ಲು ಮೆಯಿರೆಜೀವಿಸುವುದರಿದಲ್ಲ ವೆನುತೆ ಶರನನುಕರದಿ ತಿರುಹುತ್ತ ನ್ನು
ಡಿಯಲದಕೇಳಿ ಕೋಸಲಪತಿಯು ಬಾಲಕನಮಧುರತರ ವಾಣಿಗಳಪರಿಪ
ರಿಯ ವಿಧದಿಂದ ಮಥಿಸಿ ಮನದೊಳಗೆ , ತದ್ವಿಷಯಗಳು ಪೆಸ್ತ್ರಗಳ
ದವ ನಾದಕಾರಣದಿಂದ ತತ್ಪರಮ ತಾತ್ಪರ್ಯವಂ ಅರಿಯದವನಿಪತಿ ನುಡಿ
ದನೆಲೆ ಡಿಂಭ ! ಪರಿಪರಿಯ ನನ್ವಿತವಾಕ್ಯಗಳ ನುಡಿದು ಮತ್ಸ್ಯಮಾಸ
ದೊಳು ನಗರಿಯನು ಬಿಡುವುದೆನುತಾಡುವೆಯ, ಕಡೆಗೆ ದುರ್ಬುದ್ಧಿಯಿಂ ಕೆ
ಡುವೆ, ನೊಡಾದೊಡೆನುತ ಅಲಗುಗಳ ತುಳುಕೆ, ಸಂಕುಪಾರಸವನರಿದು

ಮೃದುವಾಣಿಗಳ ನುಡಿ. ನವನೀಶ! ಕೇಳ್ವೃದ್ಧಮುಖರ್ನಸ್ತ್ರೈಯರಿಗೆ ಹಿತಾಹಿತಗಳತಿ ವಿಪರೀತವಾಗಿತೋರುವುದೆ ನಿಶ್ಚಯವು, ಮೇಣ್ ಸಕಲ ಕಳತ್ರಪರಿವಾರನಾದ ನಿಂನನು ನಗರಿಯಿಂದ ಪೊರಡಿಸಲು ಬಂದಿರುವನು ಮಾತಾಪಿತರೆನಂಜುವನೇ? ಪುತ್ರಮೊದಲಾದವರಂ ಕೈಯ್ಯಾರಕಳೆದುಕೊಂಡಿರುವ ದುರ್ಬುದ್ಧಿಯುಳ್ಳ ತಾನು ಧಿಟವೇಸರಿ ಎನುತ ಮೊಗದಿರುಹೆ, ಮಾಹಿಷ್ಮತೀಪತಿಯು ವಾಗ್ಬಾಣಗಳ ತರಹರಿಸಲಾರದತಿ ರೋಷಪರವಶನಾಗಿ ನುಡಿದನೆಲೇ ಪ್ರೇತ! ಕೇಳ್ತರಳನೆಂದೆನುತ ಕೈದಣಿಯೆ ಮನಬಂದಂತೆಗಳಹುವರೆ ನಾಲಿಗೆಯು ಬೆಳದುದೆ, ನಿನ್ನನಿತು ತಿಳುಹುವೆನು ಹಾಗಾದಪ್ಪಳುಕದೆ ಧುರದಲ್ಲಿ ನಿಂದುನೋಡೆನುತ ಮೂಡಿಗೆಯ ಬಾಣಗಳ ತೆಗೆತೆಗೆದು ಸೂತಾಶ್ವಗಳ ತನುವ ನೋಯಿಸುತ ಬಾಲಕನನೀರೈದು ಶರಗಳಂ ಘಾತಿಸಲು, ನೊಂದು ತರಹರಿಸುತ ಸುದರ್ಶನನು ಮೂರುಬಾಣಗಳಿಂದ ನರಪತಿ ಶರಾಸನವ ಕಡಿದು, ಶರಶತಗಳಿಂದ ರಥವಪುಡಿಮಾಡೆ, ನೃಪ ಜವದಿ ಮತ್ತೊಂದುರಥವನೇರಿ ಚಾಪಾಂತರದಿ ಸುರಿಯೆ ಶರನಿಕರಗಳ ಬರುವನಿತರೊಳು ತರಿದು ಧನುವನು, ಮತ್ತೆ ನಿರಥವ ನಿಕ್ಕಡಿಮಾಡೆ, ಸತ್ವರದಿ ನವ್ಯರಥವೇರಿ ಕಡುರೋಷದಿಂ ನೂತನ ಶರಾಸನವ ಪಿಡಿದು ಮಂತ್ರಾಸ್ತ್ರಗಳನುರುಬಲು, ಸುದರ್ಶನನು ಪ್ರತ್ಯಸ್ತ್ರ ಸಂಧಾನದಿಂದ ತದಮೋಘ ಮಹದಸ್ತ್ರಗಳ ಶಾಂತಮುಂಮಾಡಿ, ಖಂಡಿಸಿ ಧನುವ ರಥವ ನೆಲಕುರುಳಿಸಲು, ನೃಪತಿ ಧೃತಿಯಿಂದ ಮತ್ತೊಂದು ಸ್ಯಂದನವನೇರಿಬರಲದನು ಖಂಡಿಸುತ ಯಿಂತು ಶತಕೋದಂಡ ರಥಗಳನು ಖಂಡಿಸಲು, ನೃಪತಿ ನರಹರ್ಯಕ್ಷ ನಿರವಧಿಕಟಾಕ್ಷ ಪರಿರಕ್ಷಿತ ನಿಜಾನುಪಮ ನಪ್ತನೊಡನಿಂತು ರಣರಂಗದೊಳು ಪರಬುದ್ಧಿಯಿಂ ಕದನವ ಮಾಡಿ ಗಳಿತರಥ ಮನೋರಥಗಳುಳ್ಳವನಾಗಿ ನಿಜತನು ಜಿಹಾಸೆಯಿಂ ಚರಣದಿಂ ಚರಿಸುತ್ತ ಮುಸಲಮುದ್ಗರ, ಚಕ್ರ, ಪರಿಘ, ಕುಲಿಶ, ಕುಠಾರ, ಶೂಲ, ಪಟ್ಟಿಸಗದಾಶಕ್ತಿ ನಿಸ್ತ್ರಿಂಶ ಮೊದಲಾದ ಮಹಾಯುಧ ಪ್ರಕರಗಳ ಹಸ್ತದೊಳು ಕ್ರಮದೊಳೊಂದೊಂದಾಗಿ ಪಿಡಿಯೆ, ತತ್ಕ್ಷಣದಲ್ಲಿ ಜವದಿ ನಿಶಿತಾಸ್ತ್ರದಿಂ ತರಿದು ನೆಲಕುರುಳಿಸಲು, ನೃಪ ಜವಗುಂದಿ ಘುಸವಳಿದು

ಬಾಯಾರಿ ನಿಜತನುವಿನೊಳಗೀಷತ್ತು ಘಾಯವಡದೆ ನೊಂದು ಬಳಲಿ ನಿಸ್ಸತ್ವತಮನಾಗಿ ಬಿದ್ದಿರುಗಿದನು, ಸುರರು ಜಯಜಯವೆನುತ ಕುಸು ಮವೃಷ್ಟಿಯಕರದರೆಂಬಲ್ಲಿಗೆ.

ಇಂತು ಕರ್ನಾಟಕಭಾಷಾ ರಚಿತವಾದ ಶ್ರೀಮತ್ಸಮಸ್ತಭೂ ಮಂಡಲ ಮಂಡನಾಯಮಾನ ನಿಖಿಲದೇಶಾವತಂಸ ಕರ್ನಾಟಜನಪದ ಸಂ ಪದಧಿಷ್ಠಾನಭೂತ ಶ್ರೀಮನ್ಮಹಿಶೂರ ಮಹಾಸಂಸ್ಥಾನಮಧ್ಯದೇದೀಪ್ಯ ಮಾನಾವಿಕಲ ಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿ ಖಿಲ ನಿಜರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪಾಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಲೋಕೈಕ ವೀರ ಯದುಕುಲಪಯಃ ಪಾರಾವಾರಕಲಾನಿಧಿಶಂಖಚಕ್ರಾಂಕುಶಕುಠಾರ ಮಕರಮತ್ಸ್ಯಶರಭಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗ ರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕ ರಾಯಮಾನ ಶ್ರೀಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಆತ್ರೇ ಯಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀ ಮಹಿಶೂರಪುರವರಾಧೀಶ ಶ್ರೀಮತ್ಕೃಷ್ಣರಾಜವಡೆಯರವರು ಲೋ ಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀ ಕೃಷ್ಣರಾಜ ವಾಣೀವಿಲಾ ಸವೆಂಬಾಂಕಿತದಿಂದ ಕರ್ನಾಟಕಭಾಷಾವ್ಯಾಖ್ಯಾನರೂಪಕವಾಗಿ ರಚಿಸಿ ರುವ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾ ಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ವಿಂಶೋ ಧ್ಯಾಯ; ಶ್ರೀ ಶ್ರೀ ಶ್ರೀ ಶ್ರೀ *

ಇಪ್ಪತ್ತನೇ ಅಧ್ಯಾಯ ಸಂಪೂರ್ಣ.



# ಇಪ್ಪತ್ತೊಂದನೇ ಅಧ್ಯಾಯ.



ಅಖಿಲನೃಪಕುಲತಿಲಕ ! ಕೇಳು ಪುಣ್ಯಾತ್ಮರಿಗೆ ಪುತ್ರನಪ್ತರುಗಳಂ ಪರಿಭವವೇ ಭೂಷಣವು ಭುವನದೊಳು, ತರುವಾಯ ಸಚಿವಸಾತ್ಯವ್ರತಿಯು ಕರೆದು ಯೋಚಿಸಿ, ಮತ್ತೆ ಹತಶೇಷಯೋಧವರೊಡಗೊಂಡು ಕದನವನು ಮಾಡಲು ; ಆ ತರಳಗಭಿಮುಖರಾಗಬೇಕೆಂಬ ಸನ್ನಾಹವನು ಮಾಡುತ್ತಿರಲು; ನರಪತಿಯು ನೋಡಿ ಕಳುಹಿ ಕಂಚುಕಿಗಳನು ಸಚಿವಸಾತ್ಯವ್ರತಿಯು ಕರಸಲವರೈತಂದು ಮಣಿದು ನರಪತಿಯಡಿಗೆ, ನುಡಿದನವನೀಪತಿಯು ಕಡುದುಃಖದಿಂದೆಲವೋ ಸಚಿವ! ಸಂಯುಗದೊಳಗೆ ತರಳನನು ನಿಗ್ರಹಿಸಲುಗ್ರನಿನ್ನಳವಲ್ಲ, ಬರಿಯ ಮಾತ್ರೇನಿನ್ನು, ಸರ್ವಸಾಹಸದಿಂದ ತನುವನೀಬಾಲಕನಬಾಣಾನಲಜ್ವಾಲೆಯೊಳು ವಹಿಸಬೇಕೆಂದುಮಾತ್ರೆ ನಾನಾವಿಧವ ಸಾಹಸವ, ಬಾಲಕನು ತನುವಿಗೊಂದಲಗನಾದಪ್ಪೆಯು ತೊಡಲಘುವಿಕ್ರಮನುಪಾಯಗಳಿಂದ ಸತ್ವಗುಂದಿಸಿ, ಧುರದಿ ವಿಮುಖನಂ ಮಾಡಿ ನಿಂದಿರುವನು. ಈ ತರಳನೊಡನೆ ಮರರಾದೊಡೆಯು ನಿರ್ವಹಿಸಲಾರರು ರಣದಿ, ಕಡೆಯ ಮಾತೇನೆಲವೋ ಸಚಿವ! ಸಾಮೋಪಾಯದಿಂದ ಸಂಧಾನವನು ಮಾಡುತ ಒಡಂಬಡಿಸಿ ಹೈಮವತಿಯಂ ಕೆಲವು ನಾಡಿನಿಂ ಜೊಡಗೂಡಿಕೊಡುವೆವೆಂದೆನುತಲೀ ಗುಣತನುಜನೊಡಗೂಡಿ ತರಳನೆಡೆಗೈದಿ ನಯದಿಂದ ಅಂಗೀಕಾರಪಡಿಸಬೇಕೆಂದೆನುತ ನುಡಿಯೆ ಧರಣೀಪತಿಯು, ಧರ್ಮಗುಪ್ತನು ಕೇಳಿ ಗುರುತನುಜನೊಡಗೂಡಿ ನರಪತಿಯಪ್ಪಣೆಗೊಂಡು ತೆರಳಿ ಸಹಕಾರಬನದೆಡೆಯೊಳತಿರಮಣೀಯಪಲ್ಲವಸ್ತಬಕ ಪರಿಶೋಭಿತ ರಸಾಲತರುಮೂಲದೊಳು ಮನಸಿಜನ ಹೇಳಿಸುವ ರೂಪಿನಿಂ ಕುಳ್ಳಿರುವ ಸುಕುಮಾರನೆಡೆಗೆ ಚರಣಗಳಿಂದ ನಡದುಬರುತ್ತಿರೆ, ಸುದರ್ಶನನು ನೋಡಿ ನಸುನಗುತಲವರಿಗಭಿಮುಖನಾಗೆದ್ದು ಬರುತಿರೆ? ಜವದಿ ಸಚಿವಸಾತ್ಯವ್ರತಿಗಳೆಡೆಗೆ ಬಂದೊವಗಲವರಡಿಗೆ ನಮಿಸಲು ಬಂದು ಬಿಗಿಯಪ್ಪಿ ದಿವ್ಯತತ್ತನುಸಂಗಲಬ್ಧ

ಸುಖಜನಿತ ಪರಮಾಹ್ಲಾದದಿಂದ ಪರವಶರಾಗಿ, ಪಿಕನಿಕರಪಂಚಮ ಸ್ವರಭರಿತ ಸಹಕಾರತರುಮೂಲದೊಳು ಕುಳತು ಸಚಿವಸಾತ್ಯವ್ರತಿಗೆ ಖಿಳ ಲಕ್ಷ್ಮೀಕಲಿತ ದಶಶತಾಯುಷನಮಲರೂಪನನುಕರಿಸುತಿಹ ಸುಕುಮಾರನಾಕಾರವನು ನಯನದಿಂನೋಡಿ ಪರಮವಿಸ್ಮಯದಿಂದ ನುಡಿದನಾಸಚಿವ ಮಣಿ, ಸುಭಗ! ನಿನ್ನಾಕಾರವೆಮ್ಮಪಾಲಿಸುತಿರುವ ಸುಪ್ರಭಾವತಿಯನನು ಕರಿಸುತಿದೆನೋಡೆ, ನೀನ್ಯಾರೋ?ತಪುಗದುತಿಳಿಯದದರಿಂದದಯದಿ ನೀ ನೊರೆಯಬೇಕೆಲ್ಲೈ ತಾತ! ಭುವನವಾಳಲು ಶಕ್ತನಾದ ನೀನೀಪುರಿಯ ಬೀಡುವೆಯದಾತಕದತಿಳುಹುವುದಾತೆಯೋಳೆವಂಗೆ, ಸೋತವರೆಂಳನ್ನು ಮರೆಮಾತನಾಡದಿರು, ಭೂತಳಾಧಿಪಕಳುಹಲ್ಕೈದಿದೆಪ್ಪುನಿನ್ನೆಡೆಗೆ, ಯಾತಕೆಮ್ಮೊಳುಮುನಿಸು ತಿಳುಹು, ನೀಜೀದೆಡೆರಾಜ್ಯದೊಳಗರ್ಧವನುಕೊಡುವೆನು, ಈ ನಗರಿಯನು ಧಿಕ್ಕರಿಪ ನೂತನವಿಶಾಲಹಾಟಕರಚಿತ ಗೋಪುರಪ್ರಾಕಾರದಿಂದಲಮರಾವತಿಯನೇಳಿಸುವ ಹೈಮವತಿನಾಮನಗರಿಯ ನಿನಿಗೆ ಕೊಡುವೆನೆಂದೆನುತ ಅತಿವಿನಯದಿಂ ಸಚಿವಮಣಿ ನುಡಿಯಲು; ಅದ ಕೇಳಿ ನಸುನಗುತ ರಾಜಕುಮಾರನುಚಿದನೆಲೆ ಮಂತ್ರಿವರ! ರಾಜ್ಯಗಳಲ್ಲದರಸುತೀನಗರಿಯನು ಬೇಡುವೆನು ತಾನಲ್ಲವು, ಅದರಿಂದ ಪ್ರೇಮವತಿದೇಶದರ್ಧಗಳಿಂದ ತನಗೆ ಫಲವೇನು, ಅದಂತಿರಲಿ? ಮಾಹೀಪ್ಮತೀಯು ತನಗೆ ದಯಮಾಡಿ ನರಪತಿಯು ಸತಿಯೊಡಗೂಡಿ ತನಗೆ ಕೊಟ್ಟು ತಾನವ್ಯನಗರಿಯೊಳು ವಾಸವನುಮಾಡಿ ಸುಖದಿಂದಿರಲಿ, ತನಗೀ ಪುರಾತನನಗರಿಯೆ ಸಾಕು, ಮೋಗಾತನಂತಿರುವೆ ತಾನಾತನೀಸುಂಪಿನೊಳಗಾವ ನದನುಸುರೆಲಪ್ರೋ ಸಚಿವಕುಲತಿಲಕ! ಎನುತಾಡಲು; ಸುತೀಕ್ಷ್ಣನು ದುಗುಡದಿಂ ನುಡಿದನೆಲೆತಾತ! ಕೇಳಾತನೀನರಪತಿಗೆ ತನುಜಾತ, ಮಾತೆಯೊಡನೆಲ್ಲರಿಗನೋಚರತೆಯನೈದಿ ಈತೆರದೊಳಖಿಳರನನಾಥರಂಮಾಡಿ ಪೋಗಿರುವನೆಂದೆನುತ ನಯನಗಳಿಂದಲಶ್ರುಗಳಬಿಡಲು; ಆ ಸುಧರ್ಶನನ ನಯನಯುಗದಿಂದಶ್ರುಬಿಂದುಗಳು ಜಗುಳದವು, ಸಚಿವಮಣಿ ತತ್ಸುಭಗವದನದಿಂದು ಬಿಂಬದೊಳು ನಲಿದಾಡುತಿಹ ನಯನಕುವಲಯದ್ವಯದೊಳುದಯಿಸಿದ ಮೃದುಭರ್ಣನಿಭದ ತದಶ್ರುಬಿಂದುಗಳನೋಡಿ

ತತ್ಕಾಲೀನಪರವು ಸೌಂದರ್ಯರಸಸಮಾಲೋಕನಜನಿತಸುಖಪಾರವಶ್ಯ
ದಿಂದೆದ್ದು ಗಲ್ಲವಪಿಡಿದು ಪೇಳೆಲವೋ ಸುಕುಮಾರ! ನಿನ್ನ ಪಡೆದವರಾರು;
ಮೇಣವರ ಪೆಸರೇನು ? ಭವದೀಯನಾಮನಿಲಯಾದಿಗಳ ನುಸುರೆಲ
ವೋವತ್ಸ! ದಯದಿಂದ ಮರೆಮಾಚದೆಲೆ, ವೃದ್ಧನೊಲ್ಪು ಬೇಡುವೆನು ಎ
ನುತ ಬಹುಭಾವಜ್ಞಜನಶಿರೋಮಣಿಯಾದ ಧರ್ಮಗುಪ್ತನು ನುಡಿಯೆ,
ದುಗುಡದಿಂದಾಸುದರ್ಶನ ನುಡಿದನೆಲೆಸಚಿವ! ತಮ್ಮ ಜನಕನುಸಹಸ್ರಾ
ಯುಷನು, ಸುಪ್ರಭಾದೇವಿಯೆ ಜನನಿ, ನಿಜನಾಮವು ಸುದರ್ಶನನು
ನಿಲಯ ಕಿಂಪುರದೊಳಗಿರುವ ಗಜಪುರಿ ಎಂಬನಗರಿ, ಇದು ವೃತ್ತಾಂತ
ಮೆನೆ, ಸುತೀಕ್ಷ್ಣನೆದ್ದು ಭುಜಗಳಿಂ ಬಾಲಕನತೆಗೆದಪ್ಪಿ ತತ್ಸುಭಗ ಸು
ಕುಮಾರ ದಿವ್ಯತನುಸಂಗಸುಖದಿಂ ಪರವಶನಾಗಿ ಬಾಲಕನನೋಡೆ ಮನ
ದಣಿಯದಲೆ, ನುಡಿದನೆಲೆವತ್ಸ ! ನೀನಿಲ್ಲಿಗೈದಿದೆಯೆಂತು ? ನಿಜಜನರೊ
ಳೀಪರಿಯ ಕದನವನುಮಾಡೆ ಕಾರಣವೇನು ? ಜನಕನ ವಿಚಾರವೇನಾದ
ಡೆಯು ಭವದೀಯಕರ್ಣಗೋಚರವನ್ನೈದಿಹುದೆ? ಪೇಳೆನೆ, ಸುದರ್ಶನನು
ಮನದೊಳವರೊಡನೆ ಪೇಳಲಾಲೋಚನೆಯಮಾಡುತಿರೆ, ಸಚಿವನದತಿಳಿ
ದು ಸುಕುಮಾರನಂಕುರಿತು ಸುಂದರ । ಕೇಳು ಗುರುಪುತ್ರನಾಗಿಹ ಸು
ತೀಕ್ಷ್ಣನು ನಿಮ್ಮ ಮಿತ್ರನು ನಿಮಿತ್ತವಃ ತಾನು ಸಚಿವರೊಳಗೋರ್ವ
ನೆನೆ, ಗುರುತನುಜ ನುಡಿದನಿವಧರ್ಮಗುಪ್ತನು ತವಮ್ಮಾಳನುಮಾನವಮಾಡ
ದಿರು ತಿಳಹು ವೃತ್ತಾಂತವನು, ನಿನ್ನವರ್ಗೀಪರಿಯ ಸಂಶಯಮಾಡ
ದಿರು ಎಂದೆನುತ ನುಡಿಯಲು ;

ಸುದರ್ಶನನು ನುಡಿದನೆಲೆ ಸಚಿವ । ಕೇಳೊಂದುದಿನ ನಿಜಪುರಿ
ಯೊಳಡಿಗಡಿಗೆ ಮೂಡಲುತ್ಪಾತ ನಿಕರಗಳನದನು ನೋಡಿ ಮನಮ
ರುಗುತಿರಲು ; ಅನಿತರೊಳು ಗಗನದಿಂದಿಳಿದು ಮನೋಜವವೆಂ
ಬ ಯಾನವದನೋಡಿ ನಿಜ ಜನನಿಯತಿದುಃಖದಿಂ ರೋದನವ ಮಾಡ
ಲು, ಜನನಿಯೊಡನೇರುತ ವಿಮಾನವನು ಜನಕನಡಿದಾವರೆಯ ಕಾ
ಣಬೇಕೆಂಬ ಲವಲವಿಕೆಯಿಂ ಗಗನದೊಳು ಬರುತಿರಲು ; ಮಾರ್ಗ
ದೊಳು ನಾತಿದೂರದೊಳಿರುವ ಮಾಡವತ್ಯಾದಿ ಮೊರೆನ ವೃಷಭ

ಗಿರಿ ಸರಿಸದೊಳು ಬಂದಾವಿಮಾನವರ ಮುಂದಕ್ಕಡಿಯಿಡದಿರಲು ಸಂದೇಹದಿಂ ಜನನಿಸಹಿತ ಗಿರಿವರನಿತಂಬದೊಳು ಮೆರೆಯುತ್ತಿರುವ ಪರಮಪಾವನ ತಪೋವನವ ಕಂಡಲ್ಲಿ ಜಾಬಾಲಿಮುನಿವರನ ಪದಕಮಲಕೊಂದಿಸಲು, ಸ್ವಸವಿಾಪದೊಳು ಗಿರಿಜೆಯಂತೆ ಕುಳ್ಳಿರುವ ನಿಜಜನಕನ ಜನನಿಯುರಾದ ದೇವಿಯುರ ತೋರಿ ನಮಿಸೆನಲು, ಪರಮಾಶ್ಚರ್ಯಭರಿತರಾಗುತ ತಾವು ಚರಣಕಭಿವಂದಿಸಲು, ಪರಮರ್ಷಿ ಚಿರಕಾಲಕೃತತಪಃಪರಿಪಾಕ ಪರಿತೋಷಿತಾಗಧರ ಪರಮಕರುಣಾಲಬ್ಧ ನಿರ್ಮಲಜ್ಞಾನ ವಿದಿತಾಖಿಲ ಜಗತ್ಸಕಲವೃತ್ತಿಯುಳ್ಳವನಾದಕಾರಣ ನಿಖಿಲವೃತ್ತಾಂತವನೊರೆದೆನ್ನ ಕಳುಹಲಾನಿಲ್ಲಿಗೈದಿದೆನು. ವೇಣುವರಾಜ್ಞೆಯಂತೆ ಮಾಡಿರುವೆನಿದು ವೃತ್ತಾಂತವೆನೆ, ಸುತೀಕ್ಷ್ಣನು ಸಮ್ಮುದದಿಂದ ನುಡಿದನೆಲೆ ಸುಭಗ! ದೇವಿಯುರಲ್ಲಿಗೈದಿದರವೇತು ? ಮುನಿವರನು ವಿಜ್ಞಾನದಿಂದೊರೆದ ವೃತ್ತಾಂತವೇನದನೊರೆಯಬೇಕೆಮಗೆ ಮರೆಯಮಾಡದಿರಿನ್ನೆನಲು, ಆ ಸುದರ್ಶನನು ನುಡಿದ ನರಪತಿ ಪುತ್ರರೊಡಗೂಡಿ ಹೈಮವತಿಯೊಳಗೆ ನೆಲಸಿರಲು,

ಇತ್ತಲಾ ಕಲಾವತಿಯು ಕರಸುತಗ್ರಜನ ಜವದಿಂದಲವನೊಡನೆ ಯೋಚಿಸುತ ಕಳುಹಿ, ಮಾಹಿಷ್ಮತಿಯೊಳರಮನೆಗಳನು ರಚಿಸುತದರೊಳು ಬಿಲದ್ವಾರವನು ಮಾಡು, ಭೂಗರ್ಭದೊಳು ದಿವ್ಯರತ್ನಮಯಸಭೆಯುಂ ರಚನೆ ಮಾಡಿ ಅದರೊಳಗೆ ದಿವ್ಯನವರತ್ನಮಯ ಹರ್ಯಕ್ಷ ಪೀಠಗಳ ರಚಿಸಿ, ತದ್ದಿವ್ಯ ಪೀಠಗಳಪರಿಭಾಗದೊಳು ನೋಳ್ಪರಿಗೆ ದಿವ್ಯಾತಪತ್ರಗಳತೆರನಂತೆ ಕಾಣುತಿಹಪರಮದಾರುಣ ಘೋರನಿಶಿತಾಚಕ್ರಗಳ ರಚಿಸಿ, ಪೀಠದೊಳು ಕುಳ್ಳಿರಲು ತತ್ಕ್ಷಣದಿ ಶಿರವ ಕತ್ತರಿಸುವವೋಲದಕೆ ಸಂಧಾನಗಳ ರಚಿಸಿ, ಭೂಗರ್ಭದೊಳು ಮೂರುಪಥವನು ಮಾಡಿ, ತರುವಾಯ ಹೈಮವತಿಗೈದಿ ವೋಹದಬಲೆಯು ಬೀಸಿ ಮಾಹಿಷ್ಮತಿಗೆ ಕರತಂದು ನರಪತಿಗೆ ತಿಳಿಯವೋಲು ದೇವಿಯ ಸುತರೊಡನೆ ಮೂವರನು ಸಹಚರಿಯುರನು ಇತ್ತು ಬಿಲಮಾರ್ಗದೊಳು ಕಳುಹೆ, ದೂತಿಯೊರ್ವಳು ಬಂದು ಕರೆದು ವೃಷಕೇತನಸನಂಥಕಾರಷ್ಟೂ

ಳೊಂದು ಮಾರ್ಗದೊಳು ಭೂಪೃಷ್ಟದೊಳಗಿರುವ ನೂತನಾಲಯವ ನೈದಿಸಿದಳಲೆ ಸಚಿವ! ಕೇಳನ್ನೋರ್ವ ದೂತಿಯು ಜನಕನ ಕರವಪಿಡಿದು ಭೂಗರ್ಭದೊಳಗಿರುವ ಸಭೆಯನು ತೋರಿ ಪೀಠದೊಳು ಕುಳ್ಳಿರಲು ಚಕ್ರಧಾರಾದಳತಕಂಠನಾಗಲು, ಅಲ್ಲಿ ಮಲಗಿರುವ ದೇವಿಯರ ಕರವ ಪಿಡಿದು ಕುಬ್ಜೆಯೆಂಬವಳು ಮತ್ತೊಂದು ಬಿಲಮಾರ್ಗದೊಳು ನಡೆದು ದೇವಿಯರಿಗೆ ಅಡವಿತೋರಿ ಬಿಲಬಾಗಿಲನು ಮುಚ್ಚಲತಿ ದುಃಖದಿಂ ವನ ದೊಳಗೆ ತಿರುಗುತ್ತ ದೈವಗತಿಯಿಂದ ಮುನಿವರನಡಿಯ ಕಾಣೆ, ಜಾಬಾ ಲಿ ಸಂತೈಸುತ ಸಮೀಪದೊಳಗಿರಿಸಿ, ತಾನ್ನೈತರಲು ಕರುಣದಿಂದೆನ್ನೊಡನೆ ಕರೆಯೊಳಿರತಿರುವೆಮ್ಮ ಜನನಿಯಿಂದಲೆ ಜನಕ ಬದುಕುವನು ಭಯಬ್ಯಾ ಡವೆಂದಭಯವನ್ನಿತ್ತು, ತಿಳಿದಡೆ ಕಲಾವತಿಯು ಜನಕನ ಕಳೇಬರವ ನೇನಮಾಡುವಳೋ ಕೇಳದರಿಂ ನರಪತಿಯುಂ ಸತಿಯೊಡನೆ ನಗರಿಯಿಂ ತೆರಳಿಸಿ, ಸುದ್ದಿಯನು ಕಳುಹಲು ದೇವಿಯರನೊಡಗೊಂಡು ಜನನಿಯಿಂ ದೊಡಗೂಡಿಬಹೆನೆಂದು ಕಳುಹಲಾನ್ನೈದಿದೆನುಯನುತ ಸುಕುಮಾರಕಂಬ ನಿಗರೆಯೆ; ಕೇಳಿ ಸಾತ್ಯವ್ರತಿಯು ಸಚಿವರತಿದುಃಖದಿಂ ಸಾಂತ್ವವಚನಗ ಳಿಂದ ತರಳನಂತಕ್ಕೈಸಿ ಪರಮವಿಸ್ಮಯದಿಂದ ಹರನ ಕಾರುಣ್ಯದಿಂಬಂಜೆ ನೀನೆಂದೆನುತ ಹರ್ಷಪರವಶರಾಗಿ, ಮುಂದಿನಾಲೋಚನೆಯಮಾಡಿ ಬಾಲ ಕನೊಡನೆ ತೆರಳುತಪ್ಪಣೆಗೊಂಡು ಬಂದು ನರಪತಿಯಡಿಗೆ ಮಣಿದು ಕರಗಳ ಮುಗಿದು ಮಧುರತರವಾಣಿಯಿಂಜೀಯ್ಯ! ಕೇಳ್ತರಳ ನಪನಲ್ಲ, ಈ ನಗರಿಯೊಳು ವಾಸವನುಮಾಡೆ ಬೇಡುವನಾಗಿ ತಮಗೆ ತೋರುವು ದಿಲ್ಲ, ಕಾರಣವಪೇಳಲವನುಚಿವುದೇ ದುರ್ಲಭವು, ನುಡಿದಡೊಂದೇ ಮಾತು, ಕಡೆಗೆ ಫಲಿತಾರ್ಥವಿದು ನಗರಿಯನು ಕೊಡದಿರಲು ಬಿಡುವನಲ್ಲ ವರಿಂದ ಪ್ರಕೃತದಲ್ಲಿ ಪುರಿಯನಿವಗಿತ್ತು, ನೂತನನಗರದೊಳು ನೆಲಸಿ ಬಾಲಕನು ಸ್ಥಿರವಾಗಿರುವ ಸಂದರ್ಭವೇ ತೋರಿದಡೆ? ತರುವಾಯ ಭೇದ ಮೊದಲಾದ ಲಕ್ಷಗಳ ಬೆಳಸಿ ಫಲ ಕಾಣುವದರಿಬೇ ಜೀಯ್ಯಾ! ಚಿಂ ತಿಪುದ್ಯಾಕೆ, ಬರಿದೆಯಾಕಸ್ಮಿಕದಿ ಬಂಜೆಡರನರಸ ತತ್ಕಾಲದೊಳು ಸಹಿ ಸಿ ತರುವಾಯ ಯೋಚಿಸುತ ಕ್ರಮವಿಡಿದುಪಾಯಗಳಿಂದ ಗದದಂತೆ ಪರಿ

ಹಾರವನು ಮಾಡಬೇಕಲ್ಲದೀ ರಿಯು ಪರಿತಾಪಗೆ ಳಳಲೇನುಫಲವವನಿವ ತಿ! ಕೇಳು, ಬಾಲಕನ ನುಡಿಯು ನಡೆಲು ಮುಂದೆ ತಮಗೆ ಪರಮಾ ಭ್ಯುದಯು ಬರುವಪ್ರೋಲು ತೋರುತಿದೆ ಯದನು ಪರಿಕಿಸಬೇಕು, ಎನು ತಲು ಮಂತ್ರಿವರ ಕೋಸಲಗತಿಯು ಮನದೊಳಾಲೋಚನೆಯ ಮಾಡುತ ಪುರಂಜಯನ ಕರವೆಲಪ್ರೊಸಚಿವ! ಹತಶೇಷ ನಿಜಯೋಧಪರ ಕರೆಸಿ ನಿರ್ಗಮವಂ ವಿಸ್ತರಿದು ರಣಭೂಮಿಗುತ್ತರದಿ ಯೋಜನದೊಳಹ ನಿಮ್ನ ಗಾತೀರದೊಳು ಗಮನಸೂಚಕ ಪುರಃಕೇತನವನಿರಿಸಿ ರಣಶೋಧನೆಯ ಮಾಡುವುದು ಎನಲು ; ಆಸುತೀಕ್ಷ್ಣನು ಧರ್ಮಗುಪ್ತನ ಮುಖವನೋಡಿ ಹಸ್ತವ ಮುಗಿದು ನುಡಿದ ನರಪತಿಯೊಡನೆ ಜೀಯ್ಯ! ಬಾಲಕನ ರೋ ಷಾಗ್ನಿಯು ಮುಳಸುತಿಜೆ, ಕ್ಷಣಮಾತ್ರನಿಲ್ಲಿ ತಾವಿರಕೂಡದದರಿಂದ ಕರಸಿ ದೇವಿಯರ ನೀಕ್ಷಣದೊಳೆ ಇಲ್ಲಿಂದ ತೆರಳಬೇಕೆಂಬ ಛಲವದವ ಪಿಡಿದಿರುವ ನಿದುಕಾರಣಂ ತ್ವರೆಯಿಂದ ಮುಂದಕ್ಕೆ ಪಯಣವಂ ಮಾಡ ಬೇಕೆಂಗು ಬಿನ್ನಹ ಮಾಡೆ, ನರಪತಿಯು ಪಲ್ಗಡಿಪ ಪಂಜರದಿ ಸಿಲುಕಿದ ದ್ವಿಪವೈರಿಯಂತೆ ನಿರ್ಯತ್ನನಾಗುತ ಮಂತ್ರಿಯಂ ಕರೆದು ನಗರಿಯ ನೈದಿ ಜವದಿಂದ ಕಲಾವತಿಯನಬಲಾನಿವಹದಿಂದ ತೆರಳಿಸಿಕೊಂಡು ಬರು ವುದೆನುತಾಜ್ಞೆಯಂನೀಯಲು; ಆ ಸಚಿವನತಿವೇಗದಿಂ ರಥವೇರಿ ನಗ ರಿಯಂ ಪೊಕ್ಕು ಮೇಣರಮನೆಗಳೊಳಗಿರುವ ನರಪತಿ ಪತ್ನಿಯರ ನಿಖಿ ಲರಿಂದೊಡಗೂಡಿ ಕರತರೆ ಸುಶರ್ಮನತಿದುಗಡದಿಂ ನಲವೇರಿನವ್ಯಪುಟ ಭೇದನದ ಪಥವಿಡಿಯೆ ; ತರುವಾಯ ಸಚಿವ ಸಾತ್ಯವ್ರತಿಗಳಖಿಳ ಚತು ರಂಗದಿಂದೊಡಗೂಡಿ ಸತ್ವರದೊಳಪನಿಪತಿ ರಥವನು ಸರಿಸಿ ನಡೆ ಯುತ್ತಿರಲು ;

ಸುದರ್ಶನನು ಜವದೊಳು ರಣಭೂಮಿಯೊಳು ಭೂತರಾಕ್ಷಸ ನರಾದಿಗಳು ಗವಿಸದಂತಾಗ್ನೇಯ ಬಾಣವಂ ನಾವರಣಮಾಗಿ ಯಾವಾಹ ನೆಯ ಮಾಡಿ, ರಥದೊಳು ಕುಳಿತು ರವಿಯಸ್ತಕಾಲನಾಗಿರಲು ವಿಂಪು ಸರಯೂನದಿಯ ಜಲದಲ್ಲಿ ಕೃತಸಿಯಮನಾಗಿ ಗುರುಚರಣಗಳ ನೆನೆದು ಸುರನಗರಿಯಂತಿರುವ ಮಾಹಿಷ್ಮತಿಯ ನೋಡಿ ವಿಸ್ಮಿತನಾಗಿ ಸುಮು

ಹೂರ್ತದೊಳು ನಗರದೊಳ ಹೊಕ್ಕು ರಾಜಭವನವ ನೈದಿ ನೋಡಿ ಕರ ವೀರನೊಡನೆ ನುಡಿದನೆಲೆ ಸೂತ! ನೀನರುಣೋದಯದೊಳೆದ್ದು ನನ್ನ ರಥದೊಳು ಕುಳಿತು ಭರದಿ ಜಾಬಾಲಿಯಡೆಗೈದಿ ಕರತರುವುದೆನೆ, ತೆರಳಿ ಮುನಿವರನೆಡೆಗೆಬಂದು ವಂದನೆಮಾಡಿ ತರಳನ ಪರಾಕ್ರಮವ ವಿವರಿಸಲು, ವಿಸ್ತರದಿ ಕೇಳಿ ತಾಪಸವರ್ಯ ಕಾಂತಿಮಾಲಿನಿಯೊಡನೆ ನುಡಿದನೆಲೆ ವತ್ಸೆ! ಕೇಳಿದೆಯಾ ನಿನ್ನಯ ನಪ್ತ್ರನದ್ಭುತ ಚರಿತ್ರೆಯನು, ಎನುತ ಪರಮಾಹ್ಲಾದದಿಂದ ಯಾಮಿನಿಗಳೆದ್ದು ನಿಖಿಲರಿಂದೊಡಗೂಡಿ ಮುನಿಯು ಮನೋಜವ ಎಂಬ ದಿವ್ಯವಿಮಾನದಿ ಕುಳಿತು ಗಗನಪಥದಿಂ ನಿಮಿಷಮಾತ್ರದೊಳು ನಗರಿಯಡೆಗೈದಿ ರಣಭೂಮಿಯಂ ಕಂಡು ಸುತ್ತಲು ವಹ್ನಿ ಪ್ರಜ್ವಲಿಸುತ್ತಿರಲದಂ ನೋಡಿ ವಿಸ್ಮಿತನಾಗಿ ದೇವಿ ಸುಪ್ರಭೆಯರಿಗೆ ತೋರಿ ಮಾನಿನೀಮಣಿಯೆ! ನೋಡು ಸುದರ್ಶನ ಪ್ರೌಢಪ್ರತಾಪ ಸಂದಳಿತ ಪೃತನಾರಕ್ತಕರ್ದಮಿತರಣರಂಗ ನೃತ್ಯತ್ಕಪರ್ದಿ ನಿಟಲಾಕ್ಷ ನಿರ್ಗಳದಾಶುಶುಕ್ಷಣಿ ನಿರರ್ಗಳ ಜ್ವಾಲಾಪ್ರವಾಹನಿಭ ಸಂತತತಟಾವಾಹಿತಾವರಣರೂಪ ಮಹದಾಗ್ನೇಯ ಬಾಣಭಯದಾವದಸೃಗಾಮಿಷ ದ್ರವ್ಯಲೋಭಾಪತಿತ ಗೃಧ್ರ ಗೋಮಾಯುನಕರಗಳನೆನಲು; ಕರವೀರನು ಕರಗಳಮುಗಿದು ನುಡಿದನೆಲೆತಾಯೆ! ದೃಢಧನ್ವಜಯ ಚಿತ್ರರಥ ಕುಮುದ ಕುಮುದಾಕ್ಷ ಕಿರ್ಮೀರ ಬೀರ ಸುತೀಕ್ಷ್ಣ ಮಣಿಮಂತ ಮುದ್ಗರ ಪುರಂಜಯ ಧರ್ಮಗುಪ್ತ ವೃಷಕೇತನ ಮಹೀಪಾಲ ಭೀಷಣ ಪ್ರಮುಖನಿಖಿಲಾವಹ ಪ್ರೌಢ ಭುಜದರ್ಪದಳ ನವಿದಗ್ಧ ಭವದೀಯ ನಪ್ತೃರಥ ವಿವಿಧ ಗತಿಮಥಿತ ಚತುರಂಗ ವಿಶಕಲಿತ ಸರ್ವಾಂಗ ಜಯಭರಿತ ರಣರಂಗವಿದು ಕಡಲಂತೆ, ನೋಡಲು ಕಬಂಧಚಯ ರಾಹುಮಂಡಲದಂತೆ, ರಾಜಹಂಸ ಪ್ರಚುರ ತೇಜೋವಿನಾಶಿ ಸಂಯಮಿನಿಯಂದದಿ ಘೋರನರಕಪಾಲ ಸಮಾಜಸಾಂದ್ರವಾಗಿರುವುದೆಲೆ ಜನನಿ! ಎಂದೆನುತಲಾ ಸೂತ ತೋರುತ್ತಲಿರೆ, ಕಾಂತಿಮಾಲಿನೀದೇವಿ ನೋಡಿ ವಿಸ್ಮಿತಳಾಗಿ ಮನದೊಳಳುತ್ತಿರಲು, ಮುನಿವರನು ತೆರಳಿ ಜವದಿಂದ ನಗರಿಯನೈದೆ, ನಾಗರಿಕರಾಶ್ಚರ್ಯದಿಂದಾ ವಿಮಾನವನು ನೋಡುತಿರಲಿಳಿದು ನೃಪಮಂದಿರ ದ್ವಾರ

ದೊಳು ಚರಣಸರೋರುಹಕೆ ನಮಿಸಿದ ಸುದರ್ಶನನ ಬಿಗಿದಪ್ಪಿ ಮುನಿವರನು ಪರಮಸಂತೋಷದಿಂ ತರಳನಂ ನುತಿಮಾಡಿ ಸಕಲರಿಂದೊಡಗೂಡಿ ಕಾಂತಿ ಮಾಲಿನಿಯಿಂದ ಸಮ್ಯಗ್ವಿಮೃಶ್ಯ ಪರಿದರ್ಶಿತ ಕಲಾವತೀ ಕಾತ್ಸಿತೋಪಾಯ ಕೃತ ನೂತನಾಲಯಾಕೋಟಿ ಸಂಸ್ಥಿತಾಶೇಷಜನ ಪರಮ ದುಜ್ಞೇಯತಮ ಲೋಪ ನಿರ್ಮಿತ ಬಿಲದ್ವಾರಮಂ ಕಂಡು, ಮುನಿಯು ದನು ಮುಚ್ಚಿರುವ ಘನಭಿತ್ತಿಯಂ ಒಡೆದು ಸುಕುಮಾರ ದೇವಿಯರೊಡನೆ ಬಿಲರಂಧ್ರಮಂ ಪೊಕ್ಕು ನಿಜ ಜಟಾನಲ ಶಿಖಾಸಮ ವಿಮಲಕಾಂತಿ ಪರಿದರ್ಶಿತ ಕ್ಷಿತಿಗರ್ಭಕೃತ ಮಹಾಪಥವಿಡಿದು ನವರತ್ನಮಯ ಸಭೆಯು ಕಂಡು ಪರಮಾಶ್ಚರ್ಯದಿಂದ ತನ್ಮಧ್ಯದೊಳು ಮೆರೆವ ಸಿಂಹಾಸನ ಸಮೀಪದಿ ಸ್ಫಟಿಕಾಶಮಯ ಮಹೀತಲದಲ್ಲಿ ಕೃತ್ರಿಮದಿ ನಿಕೃಂತ್ರಕಂಬುಕಂಧರನಾಗಿ ದಶಶತಾಯುಷನು ಮಲಗಿರಲು, ಗಿರಿಜಾರಮಣ ವರಜನ್ಮನಾದ ಕಾರಣದಿಂದ ಋಷಿದತ್ತ ಪರಮ ವಿದ್ಯಾಭ್ಯಾಸ ಜನಿತ ಮಹಾತ್ಮೆಯಿಂದ ಗಸುತಾನುಪಮಾತ್ಕಾರುಣ್ಯ ರಸ ಪೀಯೂಷ ಪರಿವರ್ಧಿತಾಮಲತನೂಲತೆಯು ಕಿಂಚಿದಪಿ ಕಂದಿಕುಂದದೇ ಪರಮ ಕಾಂತಿಯಿಂ ಮೆರೆಯುತ್ತಿರೆ ? ಗಗನ ಸಂಚಾರ ನಿರ್ವೇದದಿಂದಲ್ಲಿ ನೆಲಸಿರುವ ತಿಂಗದಿರನೊಲು ಬೆಳಗುತಿಹ ತಳ್ಛರವ ನೋಡಿ ವಿಸ್ಮಿತನಾಗಿ ಮುನಿವರನು ಕರದಲ್ಲಿ ಪಿಡಿದು ಮುದ್ದಿಸುತ್ತಿರಲು ; ಕಾಂತಿ ಮಾಲಿನೀದೇವಿಯು ರೋದನವ ಮಾಡೆ, ಸುಕುಮಾರ ಕಂಬನಿಗರೆಯೆ, ಸುಪ್ರಭೆಯು ಮೂರ್ಛೆಯಿಂ ನೆಲವನೈದಲು ; ಋಷಿಯು ಸಾಂತ್ವವಚನಗಳಿಂದಲವರಂ ಸಂತೈಸುತ್ತೀ ಪರಮ ಮಂಗಳಮಯನ ಗಳವಕತ್ತರಿಸೆ ಮನವೆಳಸಿದುದದೆಂತೋ ? ಶಿವಶಿವ ! ಮಹಾದೇವ ! ಎನುತ ಭೂತಳದೊಳಾ ಪರಮಪುರುಷನ ಶಿರವನಿಳುಹಿ ಮತ್ತಲ್ಲಿಂದ ತೆರಳಿ ಯರಮನೆಗೆಬಂದಾ ಸುದರ್ಶನನೊಡನೆ ಮುಂದಿನಾಲೋಚನೆ ಮಾಡಿ ಕರವೀರನಂ ಕರೆದು ರಥದೊಳು ಕುಳಿತು ನರಪತಿಯು ನಿಕಟಮಂನೈದಿ ಕರತರುಪ್ರದೆಲೆಸೂತ ! ಪರಿವಾರ ಸಹ ನಿಖಿಲರನ್ನೆನುತ ಮುನಿವರನು ಕಟ್ಟಲೆಯ ಮಾಡೆ, ಮಣಿದು ಕರವೀರ ಮತ್ತೊಂದು ರಥದೊಳು ಕುಳಿತು ತೆರಳೆ ಸಾಸುಂ ಸಮಯದೊಳು ಮಧ್ಯ ಮಾರ್ಗದಲ್ಲಿ

ಶಿಂ

ಸಕಲ ಸೇನಾಸಹಿತನಾಗಿ ನರಪತಿಯು ನೆಲಸಿರಲು ; ತತ್ಕಟಕವಂನಾತ
ನಪ್ಪಣೆಯಿಂದ ಪೊಕ್ಕು ಮಾಹಿಷ್ಮತೀಪತಿಯ ಕಂಡಡಿಗಳಿಗೆ ಮಣಿದು
ಕರಗಳ ಮುಗಿಯೆ, ನೋಡಿ ಕರವೀರನಂ ನೃಪತಿಯುಚಿತಾಸನವ
ನಿತ್ತು ಪರಮ ವಿಷಾದದಿಂ ಕೇಳಿದನೆಲವೋ ಸೂತ! ಪಂಥವ ಮಾಡಿ
ವಿಕ್ರಮದಿ ಸಾಧಿಶಿದ ನಗರಿಯೊಳು ಸುಕುಮಾರನು ಕುಶಲಿಯೆ ಪೇಳು,
ನೀನಿಲ್ಲಿಗೈತಂದ ಕಾರ್ಯವೇನು, ಸೂತನನಗರಿಗೈದಲಾಗದು ಎಂದು ಪೇಳ್
ಲೈದಿದೆಯೊಯೆನೆ, ಕೇಳಿ ಕರವೀರನತಿವಿನಯದಿಂ ಕರವಮುಗಿದು ಜೀಯ್ಯ!
ಭವದೀಯ್ಯ ನಿರ್ಗಮನವಾಗಲು; ಬಳಿಕ ಮೋದದಿ ಸುದರ್ಶನನುನಗರಿ
ಯೊಳ ಪೊಕ್ಕು ನಿಶಿಯಲ್ಲಿ ಸುಖದಿಂದಿರಲು ; ಸೂರ್ಯನುದಯಾಚಲವನೈದಿ
ಬರೆ ನಿಜತೀವ್ರ ನಿರ್ಮಲ ತಪೋದೀಪ್ತ ನಿರುಪಮದ್ಯುತಿ ವಿಚಿತ ಧೂಮ
ಕೇತನನಾದ ಜಾಬಾಲಿ ಮುನಿವರನು ನಗರಿಯಂ ಯದೃಚ್ಛೆಯಿಂದೈದಲು ;
ಸುದರ್ಶನನು ಕಂಡು ತಾಪಸನಡಿಗೆ ಮಣಿದು ಭಯಭಕ್ತಿಯೊಳು ಕರ
ಮುಗಿಯೆ, ಜಾಬಾಲಿ ರೋಷಪರವಶನಾಗಿ ನುಡಿದನೆಲೆ ತರಳ! ಭುಜದರ್ಪ
ಗರ್ವಿತನಾಗಿ ಸತಿಸುತರ ವಿರಹ ಪರಿತಾಪದಿಂದಳಲುತಿಹ ಪರಮಸಾಧು
ಜನಾಗ್ರಗಣ್ಯನಾಗಿಹ ನೃಪನನವಮಾನವಂ ಮಾಡಿ ತತ್ಸುತನ ಸದೆದ
ರಣಶೋಧನೆಯ ಮಾಡಲವಕಾಶವಿಯ್ಯದೆ ಕಡೆಗೆ ನಗರಿಯಿಂ ತೆರಳಿಸಿ
ದುರುಳ ನೀನದರಿಂದ ಶಿಕ್ಷಿಸುವೆನೀಗ ಭವದೀಯ್ಯ ಮದವಾರಿಧಿಯ
ನೆನುತ ಘರ್ಜನೆ ಮಾಡೆ, ನಡುಗಿ ಸಾಧ್ವಸದಿಂದ ತರಳ ನಡಿಗಳಿಗೆರ
ಮುಂದೆ ಭವದಾಜ್ಞೆಯಂತಹುದೊ? ತಾಂತದನುಗುಣವಾಗಿ ನಡೆಯು
ನೆಂದು ಬಹುವಿಧದಿ ನುತಿಮಾಡಿ, ತರುವಾಯ ತದ್ಗತ ಮಣಿಮಯಾಸ
ದಲ್ಲಿ ಕುಳಿತು ಮುನಿವರನಾತನೊಡನೆ ಯೋಚಿಸಿ ತನ್ನ ಕರೆದು ತನಸನಿ
ಧಿಗೆ ಪೋಗಿ ಕರತರುವುದೆಲೆ ಸೂತ! ಪರಿವಾರಪತಿ ಚತುರಂಗಸಹಿ
ನರಪತಿಯಸುತ ಮೊದಲಾದ ಮೃತವರರೊಡಗಿಸಿಯನುಜ್ಜೀವನವ ಮಾಡ
ವೆನು ಭಯಬ್ಯಾಡವೆಂದಭಯವಿತ್ತನೆನೆ ಕರುಹುವುದೆನುತಪ್ಪಣೆಯನಿ
ಯ್ಯಲಾನೈದಿದೆನುಯೆನುತ ಕರವೀರ ಬಿನ್ನಹ ಮಾಡೆ, ಕೇಳುತಿರೆಯರ
ನತಿವಿಸ್ಮಯದಿ ಸಚಿವಗುರುಸೇನುಜರನು ಕರೆಸಿ ಕರವೀರನಾಡಿದ ನುಡಿ

ನೊರೆಯೆ, ಸಾತ್ಯವ್ರತಿಯು ನುಡಿದನರಪತಿಯೊಡನೆ, ಜೀಯ್ಯ! ಪುಣ್ಯಾತ್ಮರಿಗೆ ಬಂದೆಡರು ನಿಲಲರಿಯದ ಕೃತಜ್ಞ ಜನರಿಗೊಲಿದಿರುವ ಸಂಪದದಂತೆ, ತೆರಳಬೇಕದರಿಂದ ತಿರುಗಿ ಮುನಿವರನಾಜ್ಞೆಯನು ಮೀರಲಳವಲ್ಲ ಸುರರಿಗಾದಡೆಯು, ಎನಲವನಿಪತಿ ಯೋಚಿಸುತ ಕರವೀರನಿಗೆ ಬಹು ಮಾನವಂಮಾಡಿ ರವಿಯುದಯದೊಳು ಸಕಲರಿಂದೊಡಗೂಡಿ ತೆರಳಿದನು. ತಿರುಗಿ ಮಾಹಿಷ್ಮತಿಗೆ, ಪರಮಾಪೇಕ್ಷಿತದಿಂದ ನಿಜನಗರಿಯನು ಪೊಕ್ಕು ಮಣಿಮಯ ಸಭಾಮಧ್ಯದೊಳು ವರಸಿಂಹಾಸನದಲ್ಲಿ ನಿರುಪಮ ದ್ಯುತಿಯಿಂದ ಮೆರೆಯುತಿಹ ಜಾಬಾಲಿ ಮುನಿವರನ ಕಂಡು ತತ್ಪದ ಸರಸೀರುಹದೆಡೆಯೊಳಿರುವ ಸುಕುಮಾರನಂ ನೋಡಿ ಕೋಸಲಪತಿಯು ನಿಖಿಲರಿಂದೊಡಗೂಡಿ ಮಣಿದು ಬಹುವಿಧದಿಂದ ನುತಿಮಾಡೆ, ತಾಪಸನು ಹರಸುತತಿಹರುಷದಿಂ ಪರಿವಾರಸಹಿತ ನರಪತಿಯ ಕುಳ್ಳಿರಿಸಿ ಪರಮಾದರದಿ ಕುಶಲವನು ಕೇಳಿ ನಸುನಗುತ ಸುಕುಮಾರನಂ ನೋಡಿ ಮುನಿ ನುಡಿದನೆಲೆ! ವತ್ಸ ನಿಮ್ಮಯ ಪಿತಾಮಹನಿವನು ನಮಿಸೆನೆ, ಸುದರ್ಶನನು ಜವದಿಂದ ನರಪತಿಯಡೆಗೆ ಬಂದು ವಂದನೆ ಮಾಡೆ, ಹರಸುತ ಮಹೀಪಾಲ ದಶಶತಾಯುಷನ ಸಾರೂಪ್ಯಮನ್ವಾದಿ ಸುವಂಶಗನ ಧಿಕ್ಕರಿಪ ನಿಜನಪ್ತೃನ ನವಯುವ್ವನೋದಯ ಮಸೃಣಮಾಂಸಲಸ್ನಿಗ್ಧ ನಿಖಿಲಾವಯವ ಸೌಷ್ಟವಸಮಾವೇಶ ಸಂಪದವಲೋಕನ ಸ್ತಿಮಿತಲೋಚನಯುಗಳ ವೃತ್ತಿಯುಳ್ಳವನಾಗಿ ಇವನೆ ತನ್ನಯನಪ್ತೃನಾದಡೀಭುವನದೊಳು ತನಗೆ ಸರಿಯಾರೆಂದು ಮನದಿ ಸಂಶಯದಿಂದ ತರಳನಂ ಬಿಗಿಯಪ್ಪಿ ನರಪತಿಯು ತತ್ಸುಭಗ ಸುಕುಮಾರ ದಿವ್ಯತನು ದೃಢತರಾಶ್ಲೇಷ ಸುಖದಿಂದ ಸುತವಿರಹ ಪರಿತಾಪವಂ ಮರೆದು, ತನ್ನಯ ತೊಡೆಯಮೇಲೆ ಕುಳ್ಳಿರಿಸಿ ಸುಕುಮಾರನಂ ಮುದ್ದಿಸುತ, ಮುಗಿದು ಕರಗಳ ಮುನಿಗೆ, ತರಳತಾಪಸರರಸ ತನಗೆ ನಪ್ತೃನದೆಂತು ? ಪರಮ ವಿಸ್ಮಯ ನುಡಿಯ ಕೇಳದೆನಿಂದು, ಯೋಗಿಜನತಿಲಕ! ಇವನಪ್ತೃನಾದೊಡೆ ತಮ್ಮೊಳೀಪರಿಯ ಕಾರ್ಯವನು ಮಾಡೆ ಕಾರಣವೇನು ? ತಿಳುಹು ಕರುಣದೊಳೆಂದು ಕೇಳೆ, ನರಪತಿಯು, ಮುನಿವರನು ನಸುನಗುತ ಕೇಳವನಿಪತಿ! ಸಹಸ್ರಾಯುವು ಗುರು

ಕಾರ್ಯವಂ ಮಾಡಲುತ್ತರ ಕುರುವಿಗೈದುತಿರೆ? ಮಾರ್ಗದೊಳು, ಸು
ತ್ರೆಯು ಹರಿಕೇತನನ ಸುಪ್ರಭಾದೇವಿ, ತನಸುತ ವಿರೂಪಿತ ಪರಮದಾ
ರುಣ ಮಹೋದರೀತನಯಹೃತ ನಿಜನಿಲಯಳಾಗಿ ತನ್ನಯ ಜನನಿಯಿಂದ
ಸಹ ಗಗನದಿ ವಿಮಾನದೊಳು ಕುಳಿತು ಸ್ವಸಮಾನಪತಿಯನು ಧರೆಯೊಳ
ರಸುತತಿ ಜವದಿಂದ ಸಂಚಾರ ಮಾಡುತ್ತ ಕಂಡಳತಿರಮಣೀಯ ವಿಮಲ
ಕಾಸಾರದೊಳು ಮಿಂದು ಧೇನುವಿನೆಡೆಯೊಳಿಂದುಧರನಂಗನೆಯ ಚರಣಕ
ಮಲ ಧ್ಯಾನ ಪರಮನಿರ್ವೃತ್ತಿಯಿಂದ ಚಲಿಸದೆ ಕುಳ್ಳಿರುವ ತವಸುತನನ
ಬಲೆ, ಕೇಳವನಿಪತಿ! ಯುವಧರಿಸುತ, ತದವಲೋಕನ ಲಬ್ಧಸಮಯ
ಮನಸಿಜಲುಬ್ಧ ಶರನಿಕರ ಪರಿದಗ್ಧಹೃದಯಳಾಗಿ ವಿದಗ್ಧೆ ಜವದಿ ತನ್ನಿ
ಕಟವೊಳಗಿಳಿದಾ ವಿಮಾನದಿಂದ ಲಘು ವಿಕ್ರಮನೆಡೆಗೆ ಬಂದು ವಂದನೆ
ಮಾಡಿ ಬಹುವಿಧದಿ ಬೇಡಲವನಡಿಗಡಿಗೊಡಂಬಡದೆ ಕಡೆಗೆ ನಿರ್ಬಂಧವಂ
ಮೀರಲಾರದೆ ದಿವ್ಯಮಾನಿನಿಯ ಕರಪಿಡಿದು ಜನನಿಯನುಮತಿಯಿಂದ
ಪರಿಣಯವ ಮಾಡಿಕೊಂಡವಳೊಡನೆ ಕಿಂಪುರುಷ ವರ್ಷದೊಳಗಿರುವ
ಗಜಪತಿಯನೈದಿ ಅಲ್ಲಲ್ಲಿ ನೆಲಸಿರುವದಿತಿಜರನು ಸದೆದು ಸುಪ್ರಭೆಯೊಡನೆ
ರಮಿಸುತಾನಗರಿಯೊಳು ಸುಖದಿ ಕತಿಪಯಮಾಸವಾಸವನು ಮಾಡಲುದ
ಯಿಸಿದ ನೀ ಸುಕುಮಾರನಾಕೆಯುದರದೊಳಿರುವೆ ವೃತ್ತಾಂತ, ಮೋಣಿವ
ನು ಕದನವನು ಮಾಡೆ ನಿಮ್ಮೊಡನೆ ಕಾರಣವನವನೀಶ! ನಿನ್ನರಿಸಿಯನು
ಕೇಳು, ತಾವರಿಯೆವೆನೆ, ನರಪತಿಯು ಸುಧೋದಯದೊಳುದಯಿಸಿದ
ವಿಷದಂತೆ ಪರಮಪರುಷೋದಯ ಕ್ಷಣದಿ ತಲೆದೋರೆ ಮಹದನಿವಾರ್ಯ
ಸಂಶಯವು, ವಿನಯದಿ ಮಹೀಪಾಲ ಮಣಿದು ಮುನಿವರನಡಿಗೆ, ಪರಮ
ಕರುಣಾನಿಧಿಯೆ! ತಿಳುಹಾಕಾರಣವ ತನಗೆನುತ ನಾನಾವಿಧದಿ ಬೇಡೆ, ಅ
ತಾಪಸ ನುಡಿದನಖಿಲಸಾಮಾಜಿಕರು ಕೇಳುತಿರೆ ನೃಪನೊಡನೆ, ಪರಮ
ದಾರುಣ ಹೃದಯಳಾದ ಕಲಾವತಿಯು ಕೃತ್ರಿಮೋಪಾಯವನು ಮಾಡಿ
ಭೂಗರ್ಭದೊಳು ದಶಶತಾಯುಷನ ಶಿರವರಿದು ಕೆಡಹಿರುವನನು? ಕಾಂತಿ
ಮಾಲಿನೀದೇವಿ ದೈವಗತಿಯಿಂದ ನಿಜಪಾನನ ತಪೋವನವನೈದಿದುದಕೆ ?
ಕಿಂಪುರುಷ ಖಂಡದೊಳಗಿರುವ ಗಜಪುರಿಯೊಳುತ್ಪಾತಗಳುಕಾಣುತಿರಲನಿ

ತರೊಳಿಂ ದಿವ್ಯಮಣಿಮಯಯಾನಗಗನದಿಂದಿಳಿಯಲದನೋಡಿ ಕಡುದುಃಖದಿಂ ಜನನಿ ರೋದನ ಮಾಡಲೀಸುದರ್ಶನನೋಡಿ ಜನಕನಡಿದಾವರೆಯ ದರುಶನ ಮಾಡೆ ? ನಿಜಜನನಿ ಸಾರಥಿಯೊಡನೆ ದಿವ್ಯ ಮಣಿಮಯಯಾನದೊಳು ಕುಳಿತು ಬಂದುದನು ಮುಳಿದು ತನ್ನಾಜ್ಞೆಯಿಂ ಕದನಗಳ ಮಾಡೆ ಕಾರಣವಿದು ಮೊದಲಾದ ನಿಖಿಲ ವೃತ್ತಾಂತವನು ವಿವರಿಸಲು, ವಿಸ್ಮರದಿ ಕೇಳಿ ನರಪತಿಯು ಮೊದಲಾದ ಸಾಮಾಜಿಕರು ಪರಮವಿಸ್ಮಯದಿಂದ, ಶಿವಶಿವ ಮಹಾದೇವಯೆನುತ ಕಿವಿಗಳ ಮುಚ್ಚೆ, ನರಪತಿಯು ನಿರವಧಿಕರೋಷ ಪರವಶನಾಗಿ ಕರದಿ ಕರವಾಳವಂ ಪಿಡಿದು ನಿಜ ಪತ್ನಿಯನು ತರಿದುಬಿಸುಡುವೆನೆಂದು ಜವದೊಳಲ್ಲಿಂದೇಳೆ, ನೋಡಿ ಜಾಬಾಲಿಮುನಿ ನುಡಿದನೆಲೆನೃಪತಿ ! ತ್ವರೆಮಾಡದಿರು, ಭುವನದೊಳು ನಾರಿಯರ ಕೊಲುವನೇ ಪುರುಷನಾದವನು, ಕೇಳವನಿಪತಿ ! ತದ್ವಿಷಮಧುರತರವಾಣಿಗಳ ಕೇಳಲೆಳಸುವ ಮನವತರಿಯಜೆ ವಿವೇಕನಿಶಿತಾಸಿಯಿಂದದರಿಂದ ಪ್ರಕೃತದೊಳದುತಿರಲಿ, ನೀನು ಕೇಳದ ವಿಷಯಗಳನು ನಯನಗಳಿಂದ ನೋಡಿ ತನುಜಾತನುಜ್ಜೀವನನೋಪಾಯವನು ಮಾಡು, ಬರಿದೆ ವಿಷಾದದಿಂದ ಫಲವೇನೀಗಲಾವಜೆಯು ಕಾಂತಿಮಾಲಿನಿಯ ಸಂತೈಸು, ನೃಪ! ಧಾನ್ಯಮಾಲಿನಿಯಜೆಶೆಯಿಂದ ಮೋಚನಮಾಡು, ಮೂರುಬೆಲೋಕದೊಳವರಂ ಪೋಲುವಪತಿವ್ರತೆಯರಿಲ್ಲವಿದುನಿಶ್ಚಯವು, ಕೇಳು ಧರಣಿಪಾಲ ! ಎನುತ ಫಲಿತಾರ್ಥವನು ನುಡಿವ, ಜಾಬಾಲಿಮುನಿಯು ನರಪತಿಪ್ರಮುಖ ಮಿತಮತಿಪಂಕ್ತರೊಡಗೂಡಿ ಬಿಲರಂಧ್ರಮಂ ಪೊಕ್ಕು ಮಹಿಯುದರದೊಳಗಿರುವ ಮಣಿಮಯಸಭಾಸ್ಥಾನಮಂನೈದೆ, ನರಪತಿಯು ಮಡಿದು ಮಲಗಿರುವ ನಿಜತನುಜಾತನಂನೋಡಿ ಪರಮದುಃಖಿತನಾಗಿ ಧರಣಿಯೊಳು ಮೂರ್ಛೆಯಿಂಮಲಗಲು ; ಸುತೀಕ್ಷ್ಣನು ಜವದೊಳು ಸಮಾಶ್ವಾಸನನುಮಾಡೆ ? ತಿಳಿದೆದ್ದು ಬಹುವಿಧದಿ ಹಂಬಲಿಸಿ ರೋದನವಮಾಡೆ, ಮುನಿವರನು ನರಪತಿಯೊಡನೆ ನುಡಿದನೆಲೆಭೂಪ ! ಕೇಳ್ಗಾತ್ರಪುತ್ರಕಳತ್ರಮಿತ್ರ ಕೋಶಾಮಾತ್ಯದೇಶ ಮೊದಲಾದಖಿಳ ಸಂಪದಗಳವು ಚಲವು, ನಿತ್ಯನಿಗನಿತ್ಯಸಂಬಂಧನೇ ಸಂಸಾರ, ಇದರೊ

ಳನಂರಾಗನನುಗೊಳಿಸಿದಡನರ್ಥವೇಗರಿ, ತಾತ! ಕೇಳಿದನು ನಿರ್ಮೂಲವನುಮಾಡೆ ಶಿವಮುರಸನಕರಕಮಲದಯುಗಳ ನಿರತಧ್ಯಾನಪರಮಮತಿ ನಿಶ್ಚಲತೆಯು ಅದಕೆ ಸಾಧನವು ಸಜ್ಜನಸಂಸರ್ಗವು, ಅವರಿಂದಲು ಭಯತ್ರಫಲಸಂಗಪರಿವರ್ಜನವು, ಶಮದಮತಿತಿಕ್ಷಾನಸೂಯಾ ದಯಾಪರತೆ ವಿನಯಮೋಹಾದಿ ಜಯದ್ವಂದದೊಳು ಸಮತೆ, ನಿದ್ವಂದತೆಯು ನಿರತಪರತತ್ವದವಿಚಾರ ವಿವು ಸಾಧನಗಳು, ಅವನಿಪತಿ! ಈಗ ಪ್ರಕೃತಜ್ರೊಳವರುಜ್ಜೀವಿಸುವುಪಾಯಮಾಡು, ಶರೆಯೊಳಗಿರುವ ಧಾನ್ಯಮಾಲಿನಿಯು ಕರಿತ್ರರುವುದತ್ತಿನಿನಯುಮ್ಮದುಮಧುರತರವಾಣಿಯಿಂ ಸಂತೈಸು ತಾಕೆಯನು ಏನುತ ಮುನಿಪರನುಡಿಯೆ, ಕಾಂತಿಮಾಲಿನಿಯೊಡನೆ ನರಪತಿಯು ಸ್ವಪುಸ್ತ್ರರಿಂದೊಡಗೂಡಿ ಸತಿಸಿರುವಬನಕೆ ಬಂದಾಲಯುವಪೊಕ್ಕು, ಪರ್ವತಸುತೆಯು ವಿಮಲಪದಕಮಲಯುಗಳಪರಿಚರ್ಯವನು ನಿರುತಮಾಡುತ ಮಹರ್ಷಿಗಳತೆರನಂತೆ ದಿನಗಳನು ಕಳೆಯುತ್ತ ರೂಪಿನಲಿರತಿಯಂತೆ, ವಿಭವದಲಿ ಶಚಿಯಂತೆ, ಕಾಂತಿಯಲಿ ರೋಹಿಣೀಕಾಂತನತಿಕಮನೀಯ್ಯಕಲೆಯಂತೆ, ದಮೆಯಲ್ಲಿ ಧರೆಯಂತೆ, ಶುಚಿತೆಯಲಿ ಸುರತಟಿನಿಯಂತೆ, ಬಲುಕೃಶಳಾಗಿ ನೋಡುವರ ನಯನಗಳಿಗುತ್ಸವವಬೀರುತ್ತ ಬಡಗುತಿಹ ಮಾನಿನೀಮಣಿಯನವಲೋಕನವಮಾಡಿ ನಿಜ ಚರಣಸರಸೀರುಹಕೆ ಬಂದು ವಂದನೆಮಾಡೆ ಹರಸುತ್ತ ನರಪತಿಯು ಸತಿ ಸಚಿವರೊಡಗೂಡಿ ಬಹುವಿಧದಿ ನುತಿಮಾಡಿ ಸಾಂತ್ವವಚನಗಳಿಂದ ಸತಿಯುಸಂತೈಸುತಿರಲು, ಸುದರ್ಶನನುಬಂದು ಚರಣಗಳಿಗೊಂದಿಸಲು, ಕಾಂತಿಮಾಲಿನೀದೇವಿ ನುಡಿದಳೆಲೆವತ್ಸೆ ! ಕೇಳಿವನು ನಿನ್ನಯಸುತನು. ಸುಪ್ರಭಾ ಗರ್ಭದೊಳಗುದಯಿಸಿದ ಸುಕುಮಾರನೀತನೇ ಸುದರ್ಶನನು ಎನಲತಿತ್ವರೆಯಿಂದ ಧಾನ್ಯಮಾಲಿನೀ ಹರಸಿ ಬಹುವಿಧದಿ ಬಾಲಕನ ಲಾಲನೆಯಮಾಡುತಿರೆ, ಮಣಿಖಚಿತರಥದೊಳಗೆ ಧಾನ್ಯಮಾಲಿನೀದೇವಿಯರನು ಕುಳ್ಳಿರಿಸಿ ರಥರಥ್ಯದಖಲೀನವನು ಪಿಡಿದಾಸುದರ್ಶನನು ಮುದದಿ ರಥವನು ನಡೆಸುತಮಹಿಪತಿ ಮೊದಲಾದ ನಿಖಿಲರಿಂದೊಡಗೂಡಿ ನಗರಿಯೊಳವೊಕ್ಕು ಮುನಿವರನೆಡೆಗೆ ರಥವಿಳಿದು ಬರುತಿರಲು ;

ಜಾಬಾಲಿ ಮುನಿಯು ಪರಮವಿಸ್ಮಯದಿಂದ ಇವಳು ಭಾರ್ಗವಿಯೋ? ಭಾರತಿಯೋ? ಸತಿಯೋ ಎನುತ ಪರಿಪರಿಯ ವಿಕಲ್ಪವನು ಮಾಡುತ್ತಿರುವನಿತರೊಳು ಧಾನ್ಯಮಾಲಿನಿ ಬಂದು ಪದಯುಗಕೆ ವಂದಿಸಲು, ಹರಸಿ ತಾಪಸರರಸಮನದೊಳೀ ಮಾನಿನಿಗೆ ಪ್ರಥಮಾತ್ಮಜ ವಿಪದಿ ವ್ಯಾಪ್ತಿಯನೊರೆಯೆ, ತತ್ಸಮಯದಲಿ ಕೇಳುತೇನಾಗುವಳೋ ಇವಳು ಮೋಹದರಿಂದ ಪತಿಗುಪಾಯದೊಳೊರೆದು ಕಾರ್ಯವನು ಸಾಧಿಸುವೆನೆಂದು ನಿಶ್ಚಯವಮಾಡಿ, ಲಲನೆ! ನಿನ್ನಯ ಮಂತ್ರಿಸುತೆಯಾದ ಕನಕಾಂಗಿ ಬನದಿ ಸಾಹಸದಿಂದ ಪತಿಗುಪಾಯವಮಾಡಿದಂಡುಕದೇಹದೊಳು ನಿಂದು ಮೃತಸಂಜೀವನಿಯ ಮನುವನಿನಿಗುಪದೇಶವಮಾಡಿ, ತದನಂತರದಲ್ಲಿ ಸಂಧಾನಕರಣಿಯಂ ತಂದಿತ್ತು ನಿಜಕನವಂ ನಿನ್ನ ದೆಶೆಯಿಂದುಳಿಸಿ ಜೀವಿಸಿದನೆಂದು ನಿಂನೆರೆಯ, ಕೇಳ್ ರಾಣಿ! ಭಯಪಡಬ್ಯಾಡ, ಪ್ರಕೃತದೊಳು ಹಿಂದಿನಾಪದದಂತೆ ಬಂದಿರುವುದೀಗ ನಿಂನೆರೆಯನಿಗಪಾಯವದರಿಂದ ಮೃತನಾಗಿರುವ ಪತಿಯನ್ನುಜ್ಜೀವನವ ಮಾಡಬೇಕೆಲೆ ತರಳೆ! ಎಂದು ಪೇಳಲು ಮುನಿಯು, ಧಾನ್ಯಮಾಲಿನಿಯು ಕೇಳಿ ಶೋಕಸಾಗರದಲ್ಲಿ ಮುಳುಗಿ ಮೂರ್ಛೆಯನೈದೆ, ಕಾಂತಿಮಾಲಿನಿಯೇ ಮೊದಲಾದ ಲಲನಾನಿವಹವಾಡೆ ತತ್ಕಾಲೀನ ಶಿಶಿರೋಪಾಯಗಳ, ಮೂರ್ಛೆ ತಿಳಿದೆದ್ದು ನಾನಾವಿಧದಿ ಹಂಬಲಿಸಿ ರೋದನವ ಮಾಡುತಿರೆ, ನೋಡಿ ಜಾಬಾಲಿ ಮುನಿ ನುಡಿದನೆಲೆವತ್ಸೆ! ನೀನಳುವುದ್ಯಾತಕೆ, ಪತಿಯ ಜೀವಿಸುವುಪಾಯವಿರೆ ಬರಿದೆ ಹಂಬಲಿಸದಿರು, ಏಂದು ಸತ್ವರದಿಂದ ಮಡಿಯುಟ್ಟು ಪತಿಯನಾಪರಮ ವಿದ್ಯಾಮಹಿಮೆಯಿಂದ ಬದುಕಿಸುವುದೆನುತೊರೆಯೆ, ಲಲನಾಮಣಿಯು ಜಪದೊಳಗಲ್ಲಿಂದೆದ್ದು ಏಂದು ಮಡಿಯುಟ್ಟು ಮಹಿಯುದರದೊಳಗಿರುವ ಮಣಿಮಯ ಸಭಾಸ್ಥಾನವನ್ನು ಸಕಲರಿಂದೊಡಗೂಡಿ ಪೊಕ್ಕು ನಿಜಪತಿ ಕಳೇಬರವನ್ನು ನೋಡಿ ಸತಿಯು ಪರಮದುಃಖಿತಳಾಗಿ ದಿವ್ಯತನಶೀರ್ಷಗಳ ಸಂಧಿಸುತ ಸರಿಯಾಗಿ ಸಂಧಾನಕರಣಿಯಿಂ ಸ್ಪರ್ಶವಮಾಡಲು, ಜವದೊಳೊಂದಿನಂದದಿ ಶೀರ್ಷಮುಂಡಗಳು ಕೂಡಿದವು, ತನ್ಮಹಾಮಹಿಮೆಯನು ಚಂದ್ರಧರನೇ ಬಲ್ಲ ನಿಂದು

ಮುಟ್ಟಿ ತರುವಾಯ ದಿವ್ಯಪಾನಜಲವ ಕರದೊಳಭಿಮಂತ್ರಿಸಿ ಚೆಲ್ಲಿ ತನುವಿನಮೇಲೆ, ತಕ್ಷಣದಿ ಜೀವಿಸುತ ನಿದ್ರೆ ತಿಳಿದೆಚ್ಚತ್ತವನತೆರನಂತೆ ಕಂದೆರದು ಶಿವೆ, ಸರ್ವಮಂಗಳೆ, ಭವಾನಿ, ಶಿವನರ್ಧಾಂಗಿ ಪಾಹಿ ಎಂದೆನುತೇಳೆ, ಸಕಲಜನರಾಶ್ಚರ್ಯಭರಿತರಾಗುತ ಮಾಡಿದ ರಾಹುಮುಕ್ತ ಸುಧಾಂಶುವಂತೆ ರಾಜಿಸುವ ರಾಜಪುತ್ರನನೋಡಿ ಪರಮ ಸಂತೋಷದಲಿ ಪರಿಪರಿಯ ವಿಧದಿಂದ ಪೊಗಳುತಿರೆ, ಗಗನದೊಳು ನೆರದು ವೈಮಾನಿಕರು ಸುರದು ಸುಮವೃಷ್ಟಿಯನು ಜಯಜಯ ಮಹಾಪುರುಷ ಎನುತ ಕೊಂಡಾಡುತಿರೆ, ದೇವದುಂದುಭಿ ನಿಕರ ಮೊಳಗಿದವು, ನೃಪತಿ! ಕೇಳಾಕಲಾವತಿಯು ಮಹದ ಸಮಸಾಹಸದಿಂದ ಮೃತನಾದ ಸತ್ಪುರುಷನಿಂತು ಜೀವಿಸಿದನಾಗಿರಿಸುತಾ ಪರಮಕಾರುಣ್ಯದಿಂ ;

ಇಂತು ಕರ್ನಾಟಕಭಾಷಾ ವಿರಚಿತವಾದ ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲದೇಶಾವತಂಸ ಕರ್ನಾಟಕ ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾ ಸಂಸ್ಥಾನಸಮುಧ್ಯ ದೇದೀಪ್ಯಮಾನಾ ವಿಕಲ ಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ನಿಜ ರಾಜಾಧಿರಾಜ ಮಹಾರಾಜ ಚಕ್ರವರ್ತಿಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢ ಪ್ರತಾಪಾ ಪ್ರತಿಮವೀರ ನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲ ಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣಿ ವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾ ಸುಧಾಕರಾಯಮಾನ ಶ್ರೀ ಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಆತ್ರೇಯಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರ ಪುರವರಾಧೀಶ ಶ್ರೀಮತ್ಕೃಷ್ಣರಾಜಒಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬಾಂಕಿತದಿಂದ ಕರ್ನಾ

ಟೀಕಭಾಷಾ ವ್ಯಾಖ್ಯಾನರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ಏಕವಿಂಶೋಽಧ್ಯಾಯಃ ಶ್ರೀ

ಇಪ್ಪತ್ತೊಂದನೇ ಅಧ್ಯಾಯ ಸಂಪೂರ್ಣ.

---

ಶ್ರೀ ಕೃಷ್ಣಾಯನಮಃ

## ಇಪ್ಪತ್ತೆರಡನೇ ಅಧ್ಯಾಯ ಪ್ರಾರಂಭ.



ಶ್ಲೋ॥ ರಾಜತೇರಾಜತೇಜೋಜಿದ್ವಿಕ್ರಮೋಜ್ಞಾನವಶ್ರಿಯಾ। ಯೋಜನೀ
ಯೋಜನೀರಗ್ರ್ಯಕೃಷ್ಣರಾಜಸ್ಸತಾಂಸ್ಸೃಜಿ ॥

ನಿಜೋದಯಮಾತ್ರವಿತ್ರಾಸಿತ ನಿಖಿಲದಿತಿಜದ್ವಿಜ ವಿದ್ವೇಷದೂಷಿತಾಖಿಲಭುವನರಾಜಕುಲತಿಲಕನೇ! ಕೇಳು, ಸಹಸ್ರಾಯುವಿಂತು ಹರನಂಗನೆಯುಪಗಮಕಾರುಣ್ಯದಿಂ ಪುನರುಜ್ಜೀವಿತನಾಗಿ ಸುಪ್ತೋತ್ಥಿತನಂತೆ ಕಣ್ದೆರದು ಮುಂದಿರುವ ಜಾಬಾಲಿಮುನಿವರನಂ ಕಂಡು ಜವದಿಂದ ಪದಕಮಲಗಳಿಗೊಂದಿಸಲು, ತಾಪಸಪ್ರವರನು ಬಹುವಿಧದಿಂದ ಹರಸುತೆಲೆವತ್ಸ! ಕೇಳಿಂದು ಭವದೀಯ್ಯ ಮಹದಭ್ಯುದಯವನು ಹಿಮಹಾರ್ಯಭೂಕರುಣದಿಂ ಕಂಡೆವೆನೆ, ವಿನಯದಿಂ ದಶಶತಾಯುಷನು ಕರಗಳ ಮುಗಿದು ಭವದಾಭಿಮುಖ್ಯದೊಳಿದೇನಚ್ಚರಿಯು ಯೋಗಿಜನತಿಲಕ! ಎಂದೆನುತ ನಿಜಜನಕ ಜನನಿಯರಡಿಗೆ ನಮಿಸಿ ವೃಷಕೇತನನು ಕುಶಲಿಯೆ, ಎಲ್ಲಿಹನು ಎನುತ ಕೇಳಲು, ಮುನಿಯು ಜವದೊಳು ಸುದರ್ಶನನ ಕರದು ನಿಮ್ಮಯ ಜನಕನಡಿಗೆ ನಮಿಸೆಂದೆನಲು, ವಿನಯದಿಂ ಬಂದು ಪದಸರಸಿಜಕೆ ವಂದಿಸಲು, ಹರಸುತ ಸಹಸ್ರಾಯು ಭುಜಗಳಿಂ ತೆಗೆದಪ್ಪಿ ಪರಮವಿಸ್ಮಯದಿಂದ ಮುನಿವರಗೆ ಕರಮುಗಿದು ಸುತನದೆಂತಿವನು ತನಗೆನುತ ಪ್ರಶ್ನೆಯುಮಾಡೆ ನಗುತ ತಾಪಸರರಸ ನುಡಿದನೆಲೆವತ್ಸ! ಇವನು ಸುಪ್ರಭಾತನಯು ನೀತರಳನಾಕೆಯ ಗರ್ಭದೊಳಗಿರುವ ಸಮಯದಲಿ

ಗುರುಕಾರ್ಯಗೌರವದಿ ತೆರಳಲಾಸತಿಗೆ ನೀನಭಯವನ್ನಿತ್ತು ನಿನ್ನು
ದರದೊಳಗುದಯಿಸುವ ಕುವರಗೆ ಸುದರ್ಶನನೆಂದು ನಾಮವನಿರಿಸಿಕರೆ
ವುದೆನುತಾಜ್ಞೆಯನುಯಿತ್ತು, ಕಿಂಪುರುಷದಿಂ ದಿವ್ಯಯಾನವನೇರಿ ತೆರಳಲು
ತ್ತರಕುರುವಿಗೆ, ಅಬಲೆ ತರುವಾಯ ಸುಮುಹೂರ್ತದೊಳು ಪಡೆದಿವನ
ಪೊರೆಯುತಿರೆ, ಧಿಷಣನು ಗಜನಗರಿಗೆ ಯದೃಚ್ಛೆಯಿಂದೈದಿ, ಸುಕುಮಾ
ರನಂಕಂಡು ಪರಮಾದರದಿ ಸಕಲವಿದ್ಯಗಳನುಪದೇಶವನುಮಾಡಿ, ನಿಖಿಲಾ
ಸ್ತ್ರಶಸ್ತ್ರ ಗ್ರಾಮಗಳನು ದಯಮಾಡಿ, ನರಹರಿಯ ಚರಣಾಂಬುರು
ಹಯುಗಳವನುತೋರಿ ಗುರುವು ಶಿರದಿ ಕರವಿರಿಸಿ ಪರಮಾಶಿಷವನೊರೆದು
ನಿಜನಿಲಯಮನೈದಲು, ಇವನಂದಿನಾರಭ್ಯ ಗುರುಕರುಣದಿಂದಭಿವೃದ್ಧಿ
ನಾಗಲು, ಕಿಂಪುರುಷದೊಳಗಿರುವ ನರಪತಿಗಳೆನು ನಿರುಪಮಮಹೋ
ಗ್ರ ನಿಜಭುಜಪರಾಕ್ರಮದಿಂದ ವಿಗ್ರಹದಿ ನಿಗ್ರಹಿಸಿ, ನಿಜತೀವ್ರಶಾಸನ
ದೊಳಿರಿಸುತಾಖಂಡವನು ಖಂಡಪರಶುವಿನಂತೆ ಪೊರೆಯುತಿಹನೆನಲು,
ಮುನಿ ದಶಶತಾಯುಷನು ಋಷಿವಚನಗಳಕೇಳಿ ನಿರವಧಿ ಮುದದಂಬುಧಿ
ಯೊಳಾಳಿ ಪರವಶನಾಗಿ ತರಳನ ನಿಜೋತ್ಸಂಗದಲಿ ಕುಳ್ಳಿರಿಸಿ ಮೈದ
ಡವಿ ಋಷಿಪುಂಗವನೆ! ತರಳನಿವನಿಲ್ಲಿಗೈತಂದಿದನು ಕಿಂಪುರುಷರಿಂದ
ಕಾರಣವೇನು ಬರಲು ಪೇಳುವದೆನಗೆ ಕರುಣದಿಂದೆನಲು, ಮುನಿನುಡಿದ
ನೆಲೆ ಸುಭಗ! ನಿನ್ನ ಮಗನಿವನಿಲ್ಲಿಗೈತರುವದೇನಚ್ಚರಿಯು, ತದಪಿ ತವ
ಗಗನಚರಯಾನದೊಳು ಜನನಿಸಹಿತೈದಿವನು, ಕಾರಣವು ಭವದಸ್ತ್ರ
ಮಯವೆನಲು, ಪರಮ ವಿಸ್ಮಯದಿಂದ ಹೇಮಾಲಿನಿಯರಸ ನುಡಿದನು,
ತಪೋಧನನೆ! ತರಳಗೀ ವೃತ್ತಾಂತವಿದಿತವಾದುದದೆಂತು, ಯುಗಪದವ
ನೀಗರ್ಭವನು ತಾವು ಪೋಗಲು, ತರುವಾಯ ಸಹಜಾತ ಜನನಿಯರ
ವೃತ್ತಾಂತವೇನಾಯಿತು, ಭವದಾಗಮನವೆಂತು ಸಂಭವಿಸಿತೀ ಮಹ
ದಾಪದಬ್ಧಿಯೊಳು ಮುಳುಗಿರುವ ಸಮಯದಲಿ, ಕರುಣದಿಂ ತನಗದನು
ತಿಳುಹು ಎನುತ ಅವನಿಪತಿ ಕೇಳಲು ಸಹಸ್ರಾಯು ನಗುತ, ಮುನಿ
ಯು ನುಡಿದನೆಲೆ ತಾತ! ಕೇಳೆನುತ ವೃತ್ತಾಂತವನು ವಿಸ್ತರಿಸಿ, ಬ
ಳಿಕ ವೃಷಕೇತನನ ಮರಣವನುಕೇಳಿ ಕಡುದುಃಖದಿ ಸಹಸ್ರಾಯುವು

ಅಡಿಗಡಿಗೆ ಬಿಸುಸುಯಿದು ಮೃಡನರಪ ಯಡಿಗಳನು ನೆನೆದು ರಣಭೂಮಿಯನುನೋಡಿ ಮಡಿದಿರುವ ವೃಷಕೇತನ ಪ್ರಮುಖ ನಿಖಿಲಾಹವ ಪ್ರೌಢ ಚತುರಂಗವುಂ ನೆಬ್ಬಿಸುವೆನೆಂದು ನಿಶ್ಚಯವಮಾಡಿ ಮನದೊಳಲ್ಲಿಂದೇಳಲು, ನರಪತಿಯು ಸಚಿವನಂ ಕರೆದು ಸಭೆಯನುಮುರಿದು ಬಿಲದ ರಂಧ್ರಗಳ ಮುಚ್ಚಿ, ದ್ರೋಣಿಯರ ಶಿಲ್ಪಿಗಳಂ ಕರೆಸಿ ಕಾವಲ್ಗಿರಿಸಿ, ನಿಯುತಪೃತನಾಸಹಿತನಾಗಿ ಮಹೀಂದ್ರರನೆಂಬ ಯಮಾಧಿಪತಿಯನು ಕಳುಹಿ ಜವದೊಳಂ ವಿದರ್ಭ ವಿಷಯಾಧಿಪನ ಕರಸುವದು ಯನುಸುತಪ್ಪಣೆಯಿತ್ತು ಬಿಲಮಾರ್ಗದಿಂ ತೆರಳಿ ಭೂಪೃಷ್ಟದೊಳಗಿರುವ ದಿವ್ಯಾಲಯವ ನೈದಿ ರಥವನು ಜಪದಿತರುವುದೆಲೆ ಸೂತ! ಯನುತ್ತೆ ಉರೆಯಲು, ಸಹಸ್ರಾಯು ಸತ್ವರದಿ ಸರ್ವತೋಮುಖ ನಖಿಲರತ್ನಮಯ ಕಿಂಕಿಣೀ ನಿಕರಪರಿಶೋಭಿತ ವಿಟಂಕಘನಹೀರಮಣಿಘಟಿತ ಮಹದುನ್ನತ ಧ್ವಜಲಸತ್ಕೇತನ ಪತಾಕ ಪರಿರಂಜಿತ ಸ್ಯಂದನವತರೆ! ಸಹಸ್ರಾಯುವು ಮುನಿವರನ ಕರವಿಡಿದು ನವನಿಲಯದಿಂ ಭರದೊಳು ವಿಧುಂತುದಕ್ರಕಚನಿಭವದನ ಪರಿಮುಕ್ತನಕ್ಷತ್ರಕರನತೆರನತೆರದೊಳುತ್ಸಾಹದಿಂ ತೆರಳೆ, ನಾಗರಿಕರತಿಮೋದದಿ ಮಹಾರಾಜ ಜಯಜಯ, ಮಹೀಕಲ್ಪಭೂರುಹನೆ! ಎನುತ ನುತಿಮಾಡುತಿರೆ? ಗಗನದಿಂ ದಿವ್ಯ ಕುಸುಮಾಸಾರ ಸುರಿದುದು, ಮಹೀಪಾಲ! ದೇವದುಂದುಭಿನಿಕರ ಮೊಳಗಿದವು, ದಿಕ್ಕುಗಳು ಬೆಳಗಿದವು, ದ್ವಿಜನಿವಹಮುಳಗಿದವು ಹರುಷಜಲನಿಧಿಯೊಳಗೆ, ತರುವಾಯ ಮುನಿಯೊಡನೆ ಸುಪ್ರಭಾಪತಿಯು ರಥವೇರಿ, ನರಪತಿಯೇ ಮೊದಲಾದವರು ಗಜತುರಗರಥನಿಕರಗಳನಡರಿ ನಡೆಯುತಿರೆ; ನಾಗರಿಕರತಿಜವದಿ ಗುಂಪುಗುಂಪಾಗಿ ಬರುತಿರಲು; ರಣರಂಗದುಪಕಂಠವನ್ನೈದಿ ಮುನಿಸಹ ಸಹಸ್ರಾಯುಷನು ಗಗನತಲಚುಂಬಿಶತಮಹದುಜ್ವಲಹುತಾಶನಾವರಣಮಂನೋಡಿ ನೃಪತಿಲಕನು ಮುನಿಯೊಡನೆ ವಿಸ್ಮಯದಿ ಪರವಶನಾಗಿ ನುಡಿದನಹಾ! ಇದೇನು ದಹನನಾಪರಿಸಿ ಪ್ರಜ್ವಲಿಸುತಿಹನು ನೋಡಲೇಪೆಸೀಯುತ್ತಿದೆ, ನಡುಗುತಿದೆ ಹೃದಯವೆನೆ, ನಗುತ ಮುನಿ ನುಡಿದನೆಲೆ ತಾತ! ತರಳನಾಗ್ರೇಯಮಂನಿರಿಸಿರುವ ರಣರಕ್ಷಣಾರ್ಥವೆನೆ, ಕೇಳು ನಸುನಗುತ ಕಂ

ಚುಕಿಗಳನು ಕರೆದು ನರಪತಿಯೊಡನೆ ಹಿಂದೆಬರುತಿರುವ ನಿಜತನಯನ
ಜವದಿ ಕರತರುವುದೆನೆ, ಧಾವನೆಯುವಮಾಡುತವರೈದಿ ಸುಕುಮಾರನಡಿಗ
ಳಿಗೆ ಬಿನ್ನಹವಮಾಡೆ, ಕೇಳಿ ಕರವೀರನೊಡನೆಂದನೆಲೆಸೂತ ! ಮದ್ರಥ
ನಾತಂಜೆಯುಹ ಬಂಧುರಸ್ಯಂದನವ ನೈದಿಸುವುದೆನುತ ನುಡಿವನಿತರೊಳ
ನಿಜಚರಣರಭಸರಯಕಂಪಿತ ವಸುಂಧರೆಯೊಳಾರು ಗನತೆರನಂತೆ ಬರು
ನಿಜತನಯನರಿಚರಣವನುಕಂಡು ಬಲು ಹರುಷದಿ ಸಹಸ್ರಾಯುು ಪುತ್ರ
ಮಹೋಗ್ರತರ ತೇಜೋವಿಶೇಷವಂ ಪರಮವಿಸ್ಮಯದಿಂದ ನೋಡ
ತಿರಲು ; ಅನಿತರೊಳು ಸುಕುಮಾರನೆಡೆಗೈದಿ ವಿನಯದಿಂ ಕರಗಳವ
ಗಿದು ನಿಲಲೆದುರಿನಲಿ, ವತ್ಸ! ಭವದಾಗ್ನೇಯಶಸ್ತ್ರೋಪಸಂಹಾರವ
ಮಾಳ್ಪುದೆನಲು, ಜವದಿಂದ ರಣಭೂಮಿಗಭಿಮುಖನಾಗಿ ಧ್ಯಾನಮ
ಮಾಡಲಾಕ್ಷಣದಿ ವೈಶ್ವಾನರಜ್ವಾಲೆಯುಪಶಾಂತಿಯಂಸ್ಯೈದೆ, ಜನರೆಲ್ಲ ಪ
ಮಾಶ್ಚರ್ಯದಿಂದ ನೋಡುತಲಿರೆ, ದಶಶತಾಯುಷನು ರಥವಿಳಿದು ಸರಯು
ನದಿಯ ಜಲದೊಳಗೆ ಮಿಂದು ಮಡಿಯುಟ್ಟು ರಣಭೂಮಿಯಂಸ್ಯೈ
ಮಡಿದಿರುವ ಚತುರಂಗಮಂ ದಿವ್ಯ ಮೃತಸಂಜೀವಿನೀ ಮಂತ್ರಪರಿಪೂರಿ
ನವರತ್ನಮಯಕಲಶಪೂರಿತ ಪವಿತ್ರೋದಕಬಿಂದುಗಳ ಸಮ್ಬಂಧದಿಂ
ಮಲತರಸಂಧಾನಕರಣಿಯಿಂದಖಿಲರುಜ್ಜೀವನವಮಾಡೆ, ಸುಪ್ತೋತ್ಥಿ
ರತೆರದೊಳು ಚಮೂನಿವಹವೆದ್ದುದೇನೆಂಬೆನಚ್ಚರಿಯು, ನರಪತಿ! ಕೇಳ
ಬಳಿಕ ವೃಷಕೇತನನ ತನುವ ಕಾಣದೆ ಧಾನ್ಯಮಾಲಿನೀಪತಿಯು ಕ
ದುಃಖದಿಂ ಸಹಜನಸಮೇತ ಗುಣಗಳ ನೆನೆನೆನೆದು ಹಂಬಲಿಸಿ ಬತಶ
ಕಮೂರ್ಛಿತನಾಗಿ, ಸಹಜನ ಕಳೇಬರನ ಸಪ್ತದಿನದೊಳು ತಾ
ಕಾಣದಿರೆ? ನಿಜತನುವ ನನಲಗಾಹುತಿಕೊಡುವೆನೆನುತ ಶಪಥವಮಾಡಲ
ಅಖಿಳಜನರದ ಕೇಳಿ ಅಹಹ ! ಮುಂದೇನಹುದೊ ? ಎನುತ ಸಾಧ್ವ
ಸದಿಂದ ಅನ್ಯೋನ್ಯಮುಖಗಳನು ನೋಡಿಕೊಳುತಿರಲು ; ಮುನಿ
ಮನದೊಳಾಲೋಚನೆಯಮಾಡಿ ದುರ್ಮುಖದವನೊಡನೆ ವಾಚಿ
ನದೇನೆನಲು ;

ಎಲೈ ರಾಜಕುಮಾರನೇ ! ಕೇಳು, ಲೋಕದಲ್ಲಿ ವಿವೇಕಿಯಾದವ

ಕಾರ್ಯಾಕಾರ್ಯ, ಸಾಧ್ಯಾಸಾಧ್ಯ, ಯುಕ್ತಾಯುಕ್ತ, ಬಲಾಬಲ, ಪ್ರತಿಕೂಲಾನುಕೂಲ, ದೇಶವಿದೇಶ, ವಿಮರ್ಶೆಯನು ಮಾಡದೆಲೆ ಕ್ರೋಧಾವೇಶದ ಶೋಕಾಮರ್ಷವೇದಾದಿ ಜನಿತಚಿತ್ತ ವಿಕ್ಷೋಭದಿಂದ ಪರವಶನಾಗಿ ಸಹಸಾ ಪ್ರತಿಜ್ಞೆಯಂ ಮಾಡಲಾಗದು, ಅದರಿಂದ ಪ್ರಕೃತದಲ್ಲಿ ಭವಾನವಿನಿಜಾನುಜಸ್ಮೇರ ಸುಂದರವದನ ಮೃಗಧರಾನವಲೋಕನ ಸಮುದ್ಭೀ ಪಿತ್ರಾವಿಷಹ್ಯಮಾನ ಶೋಕಾಗ್ನಿದಂದಹ್ಯಮಾನ ಹೃದಯನಾಗಿ ತತ್ಕಾಲೀನ ಮನೋವಿಷಾದದಿಂದ ಪರವಶನಾಗಿ ಪ್ರತಿಜ್ಞೆಯಂ ಮಾಡಿದುದಸಂಗತವು, ಅದಂತಿರಲಿ, ಸತ್ಯಸಂಧನಾದ ತ್ವದೀಯ ಪ್ರತಿಜ್ಞಾ ಸಾಫಲ್ಯಮಂ ನ ಹಾರ್ಯವರ್ಯ ಕುಮಾರನು ಕಂಪನಿಂಪೈದಬೇಕಲ್ಲದಿತರೋಪಾಯಗಳೀಡೇರದದರಿಂದ ಜೀವಿ ದೇವತಾತಸಪ್ತ ತಂತುವನ್ನುಪಕ್ರಮಿಸಬೇಕೆಂದು ನುಡಿದು, ಮಹೀಪಾಲನಂ ಕುರಿತು—ಎಲೈ ಕೋಸಲಾಧಿಪತಿಯೇ! ಕೇಳು, ಸತ್ವರದಿ ಸರಯೂನಿಮ್ನಗಾತೀರದೊಳು ಸಮವಿಮಲ ಪ್ರದೇಶಮಂ ನೋಡಿ ಭೂಶೋಧನೆಯಂ ಮಾಡಿ ಯೋಜನತ್ರಯ ವಿಶಾಲ ಯಾಗಶಾಲೆಯಂ ರಚನೆಮಾಡುವುದು, ಯಥಾವಿಧಿಯಿಂದ ಯಜ್ಞಕುಂಡವಂ ರಚಿಸಿ, ಸಮಸ್ತ ಸನ್ನಾಹವಂ ಮಾಡುವುದು ಜವದೊಳೆಂದೆನುತ ಲಪ್ಪಣೆಯಿತ್ತು, ಸ್ವಸಮೀಪದಲ್ಲಿ ಕುಳ್ಳಿರುವ ನಾಡಿಂಧಮನೆಂಬ ನಿಜಾಂತೇವಾಸಿಯಂ ಕರೆದು ಜವದೊಳು ನಿಜಾಶ್ರಮವನೈದೆ ಸಮಸ್ತ ತಪೋಧನರ ನೀಕ್ಷಣದಲ್ಲಿ ಕರೆತರುವುದೆನುತಲಾಜ್ಞಾಪಿಸಿ, ಸಹಸ್ರಾಯುವಂ ಸಂತೈಸಿ, ಗಗನತಲ ಮಧ್ಯಮಂ ನೈದಲಿನನು, ಮುನಿಯು ನಿಯಮಾದಿಗಳನಾಚರಿಸೆ, ನಿಮ್ನಗಾತೀರಮಂ ನೈದಲು; ಸಹಸ್ರಾಯುವು ಸಚಿವನಂ ಕರೆದು ಸಕಲ ನರಪತಿಗಳಿಗೆ ಸವನಾರ್ಥಮಖಿಲ ಭೂಸುರರ ಕಳುಹುವುದೆನುತ ಪತ್ರಿಕೆಯಂ ಕಳುಹುವುದುಯೆನುತಲಪ್ಪಣೆಯಿತ್ತು, ಮುನಿಯು ಪದವಿಯನೈದೆ, ನಗಪತಿಯು ಸತ್ವರದಿಂದನೇಕ ಶಿಲ್ಪಿಗಳಿಂದ ಯಥಾವಿಧಿ ಯಜ್ಞಶಾಲಾ ಕುಂಡ ಮೊದಲಾದ ಸಾಧನಗಳಖಿಳಮಂ ತಾಪಸ ಪ್ರವರನಾಜ್ಞಾನುಗುಣಸಿದ್ಧಮಂ ಮಾಡಲು; ಸುಗಂಧಿನೀಪತಿಯು ನಿಮ್ನಗಾಪೂರದೊಳುತ್ಕೃತಸ್ನಾನನಿಯಮಾದಿನಿಯಮಗ್ನ

ತಪೋಧನನಡಿಗೆ ಪೊಡಮಟ್ಟು, ಧಾನ್ಯಪಾಲಿನಿಯಿಂದ ಸಹಿತಾಜ್ಞೆಯಿಂ ದೀಕ್ಷೆಯನಾಂತು ಕ್ರತುಶಾಲೆಯುತ್ತೈದಿ ಹೋತೃಪೋತೃನೇಷ್ಟೃ ಋತ್ವಿಗುದ್ಗಾತೃ ಪ್ರಮುಖ ನಿಖಿಲ ಸಮಾಜ ಸಂಗತನಾಗಿ ಸವನ ಪ್ರಾರಂಭವಂ ಮಾಡೆ, ಹೇಮ, ಹಿಮಕೂಟ, ಶತಶೃಂಗ, ಮಲಯ, ವಿಂಧ್ಯಾದಿ ಕುಲಗಿರಿಗಳುಂ, ನೈಮಿಷದ್ವೈತದಂಡಕ, ಪ್ರಮುಖ ಕಾನನಗಳುಂ, ಬದರಿತರು, ವಾರಣಸಿ, ಗೋಕರ್ಣ, ಮೊದಲಾದ ಪರಮಪಾವನ ಮಹಾಕ್ಷೇತ್ರನಿಕರಗಳುಂ, ಧೌಮ್ಯ, ಲೋಮಶ, ಭರದ್ವಾಜ, ಗೌತಮ, ವಸಿಷ್ಠ, ಕಣಾದ, ಕಣ್ವ, ಕಶ್ಯಪ, ಶತಾನಂದ, ವೀತಿಹೋತ್ರಾತ್ರಿ, ಪರಾಶರ, ಪಾಣಿನಿ, ಪತಂಜಲಿ, ಜೈದೋದಂಕ, ಕುಂಭಜಾಷ್ಟಾವಕ್ರ, ನಾರದ, ಪ್ರಮುಖನಿಖಿಲ ಮಹರ್ಷಿಸಮಾಜವಾಜಗನ್ಮಾತೆಯುದಯಿಸುವ ಸಂಭ್ರಮ ಸಮಾಲೋಕನೋತ್ಸುಕರಾಗಿ ತಂಡತಂಡದಲಿ ಬರುತಿರಲು ; ಸಹಸ್ರಾಯುವತ್ಯಂತ ವಿನಯ ಭಯ ಭಕ್ತಿಯಿಂದ ವನತಗ್ರೀವನಾಗಿ ವಿವಿಧೋಪಚಾರದಿಂ ಸತ್ಕರಿಸುತ್ತಿರೆ, ಸಮಸ್ತಜನಪದಗಳುಂ ಭೂಸುರರಸಂಖ್ಯಾತವಾಗಿ ಬಂದೊದಗಲು ; ಆ ಸಚಿವ, ಸುತೀಕ್ಷ್ಣ, ಜಯ, ಪುರಂಜಯ, ಪ್ರಮುಖ ನಿಖಿಲಾಧಿಕಾರಿಗಳು ಸಂತತಮತ್ಯಂತ ಜಾಗರೂಕರಾಗಿ ಸಕಲೋಪಚಾರದಿಂದಾದರವಂಮಾಡುತಿರಲು ; ಬಂಜಡೆಯೊಳಾ ಧೇನು ಸ್ಮರಿಸುತಿರಲಿಂತಾರುದಿನಗಳೆದು ಸಪ್ತಮಾಹರ್ಮಧ್ಯದೊಳು ಮಹಾನುಭಾವನಾದ ಜಾಬಾಲಿ ಮುನಿವರನು ಪೂರ್ಣಾಹುತಿ ಪ್ರದಾನಮಂ ಮಾಡಲಾ ಯಜಮಾನ ಸಹ ಮಹರ್ಷಿಗಳನುಜ್ಞೆಯನಾಂತು ಮುಹೂರ್ತಮಾತ್ರ ಧ್ಯಾನಮಂ ಮಾಡಿ ಪೂರ್ಣಾಹುತಿ ಪ್ರದಾನಮಂ ಮಾಡಲು ; ಆ ಕ್ಷಣದೊಳಾ ಶುಶುಕ್ಷಣಿಕುಂಡದೊಳನೇಕ ಸಿತಾಂಶು ನಿಕರಮೇಕಕಾಲದೊಳುದಯಿಸಿದಂತೆ, ಶುದ್ಧಾಶುದ್ಧ ಮಂತ್ರ ಋತ್ವಿಗ್ದೇಶ ಕಾಲ ದ್ರವ್ಯ ಸಮಾಜ ಸಮಾವೇಶದಿಂ ಪ್ರಸನ್ನಾಭಿಮುಖಿಯಾಗಿ ಸರ್ವಮಂಗಳಾದೇವಿಯಾವಿರ್ಭವಿಸಲು ; ಆ ಸಮಯದೊಳು ಗಗನದೊಳು ಮೊಳಗಿದವು ದಿವಿಜದುಂದುಭಿನಿಕರ, ಮಕರಕರಕುಸುಮಚಯ ಸುರಿದುದು, ನಿಲಿಂಪತತಿ ಜಯಜಯ ಜಗನ್ಮಾತೆ ” ಎನುತ ನುತಿಮಾಡುತಿರೆ,

ನಿಖಿಲತಾಪಸರೆದ್ದು ಮುಗಿದು ಕರಗಳನು ಬಳಿ ಭಯನಿವರ್ತಕಳಾದ ಭವ ಸರಸಿಯಂಘ್ರಿಗಳನು ಶ್ರುತಿಸಮೂಹಗಳಿಂದ ನುತಿಮಾಡುತಿರಲು ; ಮುನಿಸಹ ಸಹಸ್ರಮುಖನು ದೇವಿಯಂಘ್ರಿಗಳಿಗೆರಗಿ ಪರಮ ಮಂಗಳಮಯಳ ಕಂಗಳಿಂದಲಿ ನೋಡಿ, ನಿರುಪಮ ಪ್ರೇಮರಸಪೂರ ಪರಿಶುದ್ಧ ಮನದಿಂ ನಿರ್ಗಮದ್ವಾರನಾಗುತ ನುತಿಮಾಡುವರೆ ಕಿಂಚಿದಶಕ್ಯನಾಗದೆ, ಬಳಿಕ ತರಹರಿಸಿ ತತ್ಕ್ಷಣಾಲಬ್ಧ ವಾಗ್ವಿಸರನಾಗಿ ಬಹುವಿಧದಿ ನುತಿಮಾಡುತ ಡಿಗಡಿಗೆ ವಂದನೆಯ ಮಾಡುತಿರೆ, ಪ್ರಾಡಿಸರಸಿಯಂಘ್ರಿಗಳಿಗೆನುತ, ಲಲಿತಾದೇವಿಯಮೃತಧಾರಾಸದೃಶ ನುಡಿಗಳಿಂದಶನರುಚಿ ಕೌಮುದಿಯು ನಿಖಿಲರನು ತಾಪವನು ಪರಿಹರಿಸುವಂತೆ ಮುನಿನಿಕರಗಳು ಕೇಳುತಿರೆ, ವತ್ಸ! ಬಾರೆನುತ ಕರೆದವನ ಶಿರದಡವಿ ಸತಿ ಕರುಣದಿಂ ನುಡಿದಳೆಲೆ ತಾತ! ಜನನಿ ಭೂಗರ್ಭದೊಳು ನಿಲಯರಚನೆಯ ಮಾಡಿ, ಬಂದು ಯುಷ್ಮನ್ನಿಧನರೂಪ ನಿಜಕಾರ್ಯ ಸಂಸಿದ್ಧಿಗೋಸುಗ ಪುರುಷಪಶುವನು ಸಮರ್ಪಿಸುವೆನೆಂದು ನಿಜನಗರಾಭಿಮಾನದೇವತೆಯನತಿ ವಿನಯದಿಂ ಬೇಡಿ, ತರುವಾಯ ಕೊಡದಿರಲು ಬತಿಯಿಂದ ಮಾಹಿಷ್ಮತಿಯು ಸಹಜನ ಕಳೇಬರವ ನಪಹರಿಸಿ ಪುಷ್ಕರದ್ವೀಪದೊಳಗಿರುವ ಘನಮಾನಸೋತ್ತರ ಗುಹೆಯಗರ್ಭದೊಳಗಿರಿಸಿ, ಸ್ವಸಮಾನ ನಿಜಭೂತಗಳನದಕೆ ಕಾವಲಮಾಡಿ ಇರುವಳನು ಕೊಂದು, ನಿಜಪಾರ್ಶ್ವದೊಳು ನಿಂದಿರುವ ಗಣಪದೊಳಗೋರ್ವನಂ ಕರೆದು, ಮಾಹಿಷ್ಮತಿಯು ತರುವುದೆನುತಪ್ಪಣೆಯನೀಯುವನಿತರೊಳು ಗಡಗಡನೆ ನಡುಗುತವಳಡಿಗಳಿಗೆ ನಮಿಸೆ, ಸತಿ ನಗುತ ವೃಷಕೇತನನ ತನುವ ನೀಕ್ಷಣದಲ್ಲಿ ತರುವುದೆನುತಪ್ಪಣೆಯನಿತ್ತು ದುರ್ಮುಖನ ನೆಡೆಗೆ ಕರೆದವನಿಧರಸುತೆಯು ಕಾರುಣ್ಯದಿಂ ನೋಡೆ ಹನಾಸ್ತ್ರವನು ದಯೆಗೈದು ದಾಕ್ಷಾಯಣಿಯು ನುಡಿದಳೆಲೆವತ್ಸ! ಮುನಿವರರನಾದರಿಸುವುದು ಬಹುವಿಧದೊಳೆನುತ ಜನನಿಯನು ಸಂತೈಸಿ, ನೋಡುತಿರಲಖಿಳರಾಕ್ಷಣದೊಳಂತರ್ಧಾನವಾಗಲು, ಸುದಾಲಸೆಯಪತಿಯು ಪಾರ್ವತಿಯಂಘ್ರಿಯುಗಳ ವಿರಹಜ್ವರದಿ ತಪಿಸುತಿರಲನಿತರೊಳು ಮಡಿದ ವೃಷಕೇತನನ ತನುವ ಮಾಹಿಷ್ಮತಿಯು ತಂದು ಕಾಲಾಬಹಿರ್ಭಾಗದೊಳಿರಿಸಲದನೋಡಿ

ಬಳಿಕಾಕೆಯಡಿಗೊಂದಿಸಿ, ಸಹಸ್ರಾಯುವು ಧರ್ಮಗುಪ್ತನಂ ಕರೆದು ರಣರಂಗ
ವೆಡೆಯೊಳಹ ಸಹಕಾರಬನದಿ, ಮಾಹೇಶ್ವತಿಯು ಪೂಜೆಯನು ಮಾಡಿ
ಬಹುವಿಧದಿ ವೈಭವದಿಂದ ಕಾವಲೊಳಗಿರುವ ಶಿಲ್ಪಿಗಳ ನಾಹುತಿಯಿತ್ತು
ದೂತಿಯರನಾಸಿಕಾಕರ್ಣಗಳ ತರಿದು ಪೊರಡಿಸುವುದೆನುತಪ್ಪಣೆಯನ್ನಿತ್ತು,
ಸಹಜಾತನ ಮಹಾಮಹಿಮೆಯಿಂದೆಬ್ಬಿಸಲು, ಸಕಲಜನರಾಶ್ಚರ್ಯದಿಂದ
ನೋಡುತ್ತಿರಲು, ಬಳಿಕ ವೃಷಕೇತನನು ಮಲಗಿದ್ದವನದ್ದಂತೆ ಕಣ್ದೆರೆ
ದು ಮುಂದಿರುವ ದಶಶತಾಯುಷನಡಿಗೆ ವಂದಿಸಲು, ಹರಸಿ ತರುವಾಯ
ಶಾಲೆಯನೈದಿ, ಹರುಷದಿಂ ಜಾಬಾಲಿ ಮುನಿಯಡಿಗೆ ನಮಿಸಿ, ನವರತ್ನ
ಭೂಷಣನಿಕರದಿಂದಲಂಕೃತವಾದ ಕೋಟಿಧೇನುಗಳ ನವನೀಶ ದಕ್ಷಿಣೆ
ಸಹಿತ ಲಿತ್ತು ಋತ್ವಿಕ್ಪ್ರಮುಖ ನಿಖಿಲತಾಪಸರಡಿಗೆ ವಂದಿಸುತ ಧನ
ಕನಕ ವಸ್ತ್ರ ವಾಹನ ಧೇನು ಭೂಮಿಗಳನಪರಿಮಿತವಾಗಿ ಮನದಣಿವ
ತನಕಯಿತ್ತು, ವಿಪ್ರನಮಾಜವಖಿಲದೇಶಗಳಿಂದ ಬಂದಿರಲಸಂಖ್ಯಾತವವ
ರಮನದಣಿವಂತೆ ಭೂರಿ ದಕ್ಷಿಣೆಯಿತ್ತು, ಮುದದೊಳವರಾಶಿಷವನಾಂತು
ಮುನಿಯಾಜ್ಞೆಯಿಂದವಭೃತ ಸ್ನಾನವನು ಮಾಡಲು, ಸಹಸ್ರಾಯುವ
ಖಿಲ ಋಷಿವಿಪ್ರ ಸಮುದಾಯ ಸಂಮುದದಿಂದ ತೆರಳಿದುದು ನಿಜನಿಲಯ
ಗಳಿಗೆ, ತರುವಾಯ ನಿಜಜನಕ ಸಹಜಾತ ಸಹ ದಶಶತಾಯುಷನು ನೃಪ
ಪರಮ ವೈಭವದಿಂದ ನಗರಪ್ರವೇಶವನು ಮಾಡಿ, ನರಪತಿಯೊಡನೆ ಮ
ಣಿಖಚಿತ ಭವನಮಂನೈದಿ, ಹಾಟಕರಚಿತ ಪೀಠದೊಳು ನರಪತಿಯು
ಕುಳ್ಳಿರೆ; ಕಲಾವತಿಯು ನಿಖಿಲವೃತ್ತಾಂತವನು ಕೇಳಿ, ಮುಂದೇನುಗ
ಯೆಂದು ನಾನಾವಿಧದಿ ಯೋಚಿಸುತಲವಮಾನದಿಂದ ಪರವಶಳಾಗಿ, ತೆರ
ನಿಜಭವನದಿಂ ನರಪತಿಯು ಕುಳ್ಳಿರುವ ನಿಲಯಮಂನೈತಂದು, ತನಿ
ಕಟದೊಳು ನಿಂದಿರುವ ಕಾಂತಿ ಮಾಲಿನಿಯೆಂಬ ಗನಡಿಯಡಿಯೊಳತ್ಯಂ
ದುಃಖದಿಂ ಧರಣಿಯೊಳು ಪೊರಳುತ್ತ ನುಡಿದಳೆಲೆ ತಾತ! ಮಹಂತ್ರಿಯ
ದುರ್ನಯದ ಮಂತ್ರಿಯಂತಿರೆಯೊಳತಿಪಾತಕಿಯನು ಭಯಕುಲಘಾತಕಿ
ತರಿದು ದಿಗ್ಬಲಿಯನ್ನು ಮಾಡುವರುಗದಿರೆನ್ನ ಪೋಲುವನ್ಯಶಂಸರೀಭು
ವನದೊಳಗುಂಟೆ, ನೀನೋಡು? ತನ್ನಯ ಶಿರವನರಿದು ನೀಡಾಡುತಿ

ಯೊಳಗಿನ್ನು ಧರಿಸಲಾರೆನು, ತನುವ ಮರೆದು ತರುಭಾವ ಪರಿಹಾರವನು ಮಾಡಿದುಪಕಾರವನು ತನುಜ ಸಹಜಾತರಾಡಿದ ನುಡಿಯು ಕೇಳದಪ್ಪವೇ ಕದಲಿ ನಿರ್ವ್ಯಾಜದಿಂದ ಮಹದಘವನಾಚರಿಸಿದೆನು, ಬರಿದೆ ದೇವಿಯರಡಿಗೆ ಎನುತ ನಾನಾವಿಧದೊಳಾತ್ಮ ಹೇಳನವಗೈದು, ಮರಣವನು ನಿಶ್ಚೈಸಿ, ರೋದನವ ಮಾಡುತಿರೆ, ಕಾಂತಿಮಾಲಿನಿಯುಣುಗನಾಕೆಯನು ಎತ್ತಿ ಕುಳ್ಳಿರಿಸಿ, ಜನನಿಯನುಚಿತವಚನನಿಚಯಗಳಿಂದ ಸಂತೈಸಿ, ನುಡಿದನೆಲೆ ತಾಯೆ! ಭವಿತವ್ಯತಾ ಶಕ್ತಿತಾದೃಶವಿದಕೆ ನೀವು ಮಾಡುವುದೇನುಮಾತ್ರ, ಇನ್ನಾದಡೆಯುಂ ಈ ತೆರದ ಕಾರ್ಯಗಳ ಮನದಿ ಯೋಚಿಸದಿರುವುದೆನು ತಾ ಕಲಾವತಿಯು ಮಧುರವಚನಗಳಿಂದ ಮನದೊಳಿಹ ಸಾಧ್ವಸ ಮೆಲ್ಲ ಮೆಲ್ಲನೆ ಬಿಡಿಸಿ ಪರಮವೈಭವದಿಂದ ಕಳುಹಿ ಯಂತಃಪುರಕೆ,

ಅನಂತರಮನಂತಾದಿ ಪ್ರಮುಖ ನಿಖಿಲಜನರಾಸಹಸ್ರಾಯುವಿನ ಸೌಜನ್ಯಮಂ ನೋಡಿ ವಿಸ್ಮಿತರಾಗಿ, ಕೊಂಡಾಡುತಿರಲನಿತರೊಳು ಕಂಚುಕಿಗಳೈತಂದು ವಂದನೆಯಂಮಾಡಿ, ಮಹಾರಾಜ ಮುದ್ಗರನಾಹರದತ್ತರಾಯನೊಡನೈತಂದರರಮನೆಯ ದ್ವಾರ ದೇಶದೊಳಿರುವನಾತಗೇನಪ್ಪಣೆಯೆಂದು ಬಿಂನಹಮಾಡಲು, ಸುಶರ್ಮನಾನುಡಿಯಂ ಕೇಳ, ದೋಷಸಂರಕ್ತಲೋಚನನಾಗಿ ಮುದ್ಗರನೋರ್ವನಂ ಕರತರುವುದೆನುತಪ್ಪಣೆಯನೀಯಲು, ಕಂಚುಕಿಗಳೊಡನೆ ಮುದ್ಗರನೊಳಪೊಕ್ಕು ನರಪತಿಯಡಿಗೆ ಪೊಡಮಟ್ಟು ವೃತ್ತಾಂತಮಂ ವಿಜ್ಞಾಪನೆಮಾಡಲು ; ಮಹೀಶನಾಪುರಂಜಯನಂಕರದು ಯೆಲೈಸಚಿವನೆ ಕೇಳು? ಹರದತ್ತನೆಂಬ ರಾಜಪಶದನನ್ನೀಕ್ಷಣದಲ್ಲಿ ಕಾರಾಗೃಹದೊಳಿರಿಸಿ ಹಸ್ತಪಾದಗಳಿಗೆ ಶೃಂಖಲಾಬಂಧಮಂ ಶಸ್ತ್ರಪಾಣಿಗಳಾದ ಪಟುಭಟಸಹಸ್ರಮಂ ಕಾವಿಲನಿರಿಸುವುದೆಂದು ಅಪ್ಪಣೆಯಿತ್ತು ಸುಶರ್ಮನಾಮುದ್ಗರನೆಂಬ ಯೋಧಪನೊಡನೆ ನುಡಿದನೆಲೈ ಮುದ್ಗರನೇ! ಕೇಳು ನೀನುಪುನಹಾ ಪ್ರಯಾಣಮಂಮಾಡಿ ಈ ಕ್ಷತ್ರಿಯಾಧಮನ ಸತಿಸುತ ಪ್ರಮುಖನಿಖಿಲ ದೇಹಾನುಬಂಧಿಗಳು ಕಾರಾಗೃಹವನೈದಿರೆ ನಿರ್ಬಂಧಮಂ ಮಾಡಿ, ಬೊಕ್ಕಸಭಂಡಾರಗಳನಿಲ್ಲಿಗೆ ಕಳುಹಿ ರಾಜವಿಚಾರಮಂನೀನೆ

ವಿಚಾರಿಸುತ್ತಿರುವುದೆನುತಾಜ್ಞಾಪಿಸಲು; ಸಹಸ್ರಾಯುವು ತಾತನಡಿಗಳಿಗೆರಗಿ ಜ್ಯೇಷ್ಠ ಹರದತ್ತನಪರಾಧಮಂ ಮರೆದು ತದ್ರಾಜ್ಯಮಂ ನವೆಗೆದುಮಾಡಿ ರಕ್ಷಿಸಬೇಕು ಈ ಸಮಯದೊಳಗೆಂದು ಬಹುವಿಧದಿಂದಲರಸನಂತಃಕರಣಂ ದ್ರವಿಸುವಂತೆ ವಿಜ್ಞಾಪನೆಯಂಮಾಡಲಾ ಕೋಸಲೇಶನಾತ್ಮಜನ ದಯಾರ್ದ್ರತೆಯಂ ನೋಡಿ, ವಿಸ್ಮಿತನಾಗಿನುಡಿದನೆಲೆ ವತ್ಸ! ದುರ್ಜನರೊಳು ದಯಾಂಬುಧಿಯಂಗೈಯ್ಯಲಾಗದಾದಡೆಯು ಮುನಿಸುವೆನೆಂದು ತವವಚನದಿಂದೆಂದು ಹರದತ್ತನಂಕರಸಲಾ; ವಿದರ್ಭದೇಶಾಧಿಪತಿಯತ್ಯಂತ ಸಾಧ್ವಸದಿಂದ ತ್ರಸ್ತ ಹೃದಯನಾಗಿ, ಗೃಹಾಂತರಾಳಪ್ರವೇಶನಮಂಮಾಡಿ ಸಾಕ್ಷಾತ್ ಸಹಸ್ರಾಕ್ಷ ನೊಡ್ಡೋಲಗದಂತೆ ಮೆರೆಯುತ್ತಿರುವ ಸಭಾಸ್ಥಾನಮಂನೋಡಿಪರಮಾಶ್ಚರ್ಯಭರಿತನಾಗಿ ಮೆಲ್ಲನೈತಂದು ತಿರಿಯ ಬ್ರಾಹ್ಮಣನಡಿಗೆ ಮಣಿದು ಕಾಣಿಕೆಯನಿತ್ತು ಕರಗಳ ಮುಗಿದು ನಿಂದಿರಲನಿತರೊಳು ನಿರಂತರ ಚಿಗಂತನಾತ್ಯಂತ ಚಿಂತಾಕ್ರಾಂತ ಸ್ವಾಂತನಾದ ಜಾಬಾಲಮುನಿ ನಿಜಾಶ್ರಮಪನ್ಯೈದೆ ಪ್ರಯಾಣಾಭಿಮುಖನಾಗಲು, ಸುಶರ್ಮನು ಸತಿ ಸುತ ಸ್ನುಷಾನಪ್ತ ಸಚಿವಪರಿವಾರಸಹಿತನಾಗಿವಂದನೆಯಂ ಮಾಡಿ ಬಹುವಿಧದಿಂದ ಕೊಂಡಾಡಿ ಯಪ್ಪಣೆಯಿತ್ತು, ಸಕಲರಿಂದೊಡಗೂಡಿ ತಪೋಧನನು ಗಮನಮಂಮಾಡಲಾ ತಾಪಸಪ್ರವರ ಮಹೀಶಗಪ್ಪಣೆಯಿತ್ತು ಮುಂದಕೆತೆರಳಲು, ಸುಶರ್ಮಮಹಾರಾಯನಖಿಲರಿಂಪಿಂತಿರುಗಿಮಂದಿರಕೆಬಂದು ಮಾತ್ರಂ ದಿನಾರಭ್ಯಮಾನಂದದಿಂದ್ರನೊಲು ದಂದುಗವನುಳಿದಖಿಲಧರೆಯಂ ಪೊರೆಯುತ್ತಿರಲು,

ಸಕಲವಿಶ್ವಂಭರಾಮಂಡಲವು ನಾಕದೊಳು ನಿಖಿಲಸಂಪದಗಳಿಂ ರಾಜಿಸಿತು ನರರಸುರರಂತಪರಿಮಿತ ಸುಖದಿತಳೆದು, ದಾರಿದ್ರ್ಯಸದಮೃತ್ಯು ಮೊದಲಾದಖಿಲಭಯಗಳಂ ಮರೆಯುತ್ತಿರೆ, ದಶಶತಾಯುಷನು ಸಹಜಾತ ರೂಪಾಲಯದೊಳನವರತ ನೆಲಸಿನಿಬ ವಿರಹ ಪರಿತಾಪಭ್ರಾಂತಾಂತ್ರಗಾಗಿರುವ ನಿಜಸತಿಯರೊಡನೆ ಸಮಶರ ಸಮರದೊಳ ರವಿಸುತ ವಿಚಿತ್ರತರ ವಿಷಯಸುಖ ನಿಚಯಗಳನನುಭವಿಸುತೊಂದು

ದಿನ ಗುರುತನೂಭವನಪರಿಣಯವ ಮಾಡುವೆನೆಂದು ಮನದೊಳಾ ಲೋಚನೆಯಮಾಡಿ, ತಜ್ಜಾತಿಯೊಳು ಸರ್ವಲಕ್ಷಣಯುಕ್ತಳಾಗಿರುವ ಕನ್ನಿಕೆಯು ದೊರೆಯುವಳೆಂತೆನುತ ಧರ್ಮಗುಪ್ತನಕರೆಸು ಕೇಳಲು, ಮಹಾಮಂತ್ರಿಯು ನುಡಿದನೆಲೆತಾತ! ತ್ವಚ್ಚಿಂತಿತಾರ್ಥಗಳೀ ಶನನುಕೂಲದಿಂ ಪರಿಸುವರಿಗೆ ನಿಷ್ಫಲತೆಯನೈದಿದುದಾವುದದರಿಂದ ನರಪುಂಗವ! ಸಕಲನರಪತಿಗಳಿಗೆ ನಿಮ್ಮನಿಮ್ಮಯ ದೇಶದೊಳಗೆ ತಜ್ಜಾತಿಯೊಳು ಸಕಲಲಕ್ಷಣಯುಕ್ತಳಾದ ಕನ್ನಿಕೆಯಿರಲು ಸಮ್ಯಗ್ವಿಮರ್ಶೆಯನು ಮಾಡಿ ಕಣ್ಣಿನಲಿ ನೋಡಿ ತಿಳಿದು ತಿಳುಹುವುದೆಮಗೆನುತ ಪತ್ರಿಕೆಗಳನು ಬರಸಿಕಳುಹುವುದೆನುತ ನುಡಿವುತ್ತಿರಲನಿತರೊಳಗಶರೀರ ವಾಣಿಘನ ಮಧುರತರ ಗಂಭೀರ ನಿನದದಿಂ ಗಗನದೊಳಗುದಿಸಿದೆಲೆಪ್ರಾ ಸುಕುಮಾರ! ಸತ್ಯವ್ರತನು ಕ್ಷತ್ರಿಯ ಕುಲೀನನವನರಸಿ ಸತ್ಕುಲ ಜಯದಶೀರ್ಷರಿಗೆ ವ್ಯಾಥತ್ವದಜ್ಞಾನ ಕಲ್ಪಿತವು, ರವಿಸುತನರಾಧೇಯನೆಂಬ ವೊಲು, ವತ್ಸ! ಕೇಳದರಿಂದ ತತ್ತನುಜನುಭಯಕುಲಪರಿಶುದ್ಧನಿದನು ತಿಳಿದಿರುವುದೆನುತೊರೆದು ಮರೆಯಾಗಲು, ಅದಕೇಳಿಸಚಿವಪ್ರಮುಖ ನಿಖಿಲಜನರಾಶ್ಚರ್ಯ ಪಡುತಿರಲು, ದುವ್ವಾರಿಯು ಮನದೊಳುಕ್ಕುವ ಹರುಷದಿಂ ಪರವಶನಾಗಿ ಯೋಚಿಸುತ್ತ ಸಂಗತಿಯ ನಗಸುತಾಕರುಣದಿಂ ತಿಳಿಯುವದು ತನಗೆತಾನೆನುತ ನಿಜಾಲಯಮನೈದಲು, ಸಹಸ್ರಾಯು ರವಿಯುದಯಾಚಲವ ನವಲಂಬಿಸುತ್ತಿರುವ ಸಮಯದೊಳು ಗಗನದಿಂ ಧರೆಗಿಳಿವತೆರನಂತೆ ಭವ್ಯ ಮಣಿಖಚಿತ ಘನದಿವ್ಯಯಾನವು, ನಿಲಯರಕ್ಷಕರು ತತ್ಪ್ರಭಾಪಟಲದಿಂ ಪ್ರತಿಹತೇಕ್ಷಣರಾಗಿ ಜವದಿಂದಬಂದು ನರಪತಿಯಡಿಗೆ ವಿದಿತಮಂ ಮಾಡೆ ನರಪತಿಯು ಸೌಧಾಗ್ರಮಂ ಜವದೊಳೇರುತ್ತ ಪೂರ್ಣರಾಕಾಶಶಾಂತನೊಲು ಬೆಳಗುತಿಹ ಮಣಿಮಯವಿಮಾನವನು ಕಂಡದರೊಳಮರಪತಿಯಂತಿರುವ ದಿವ್ಯಪುರುಷನಂ ಕಂಡು ದಂಡಪ್ರಣಾಮವನು ಮಾಡಿ ಕೋಸಲಪತಿಯು ವಿವಿಧೋಪಚಾರಗಳ ಕುಶಲವಕೇಳಿ ವಿನಯದಿಂ ನೀವು ಬಾರಿಲ್ಲಿಗೈದಿದ ಕಾರ್ಯವೇನದಂ ತಿಳುಹಬೇಕೆನುತ ವಿಜ್ಞಾಪನೆಯಮಾ

ಡಲು ಸುರಾಧಿಪನ ಸೂತನಪನೀಶನಂ ಕುರಿತು ನುಡಿದನದೆಂತೆನಲು;

ಎಲೈ ಪರಂತಪನೆ ಕೇಳು? ನಿಲಿಂಪ ಪರಿಪೃಥಕ್ಷತ್ರತಾನಾತ್ರನಾ ಜ್ಞೆಯಿಂದಲಿ ಭವತ್ಸಂನಿಧಿಗೆ ಬಂದಿರುವೆನೆನಲು ಸುಶರ್ಮನದಂ ಕೇಳಿ ವಿಸ್ಮಿತನಾಗಿ ಎಲೈ ಮಹಾನುಭಾವನಾದ ಮಾತಲಿಯೆ ಕೇಳು? ಯಃಕ ಶ್ಚನನಾದ ಮನುಷ್ಯಮಾತ್ರನಲಿ ತ್ರಿಭುವನಾಧಿಪತಿಯಾದ ಸಾಕ್ಷಾತಸ ಹಸ್ರಾಕ್ಷನನುಕಂಪದಿಂ ಭವಾದೃಶರನ್ನು ಕಳುಹಲ್ತಕ್ಕ ಕಾರ್ಯ ಗೌರವ ವದೇಕದಂತಿಳುಹಬೇಕೆಂದು ಪ್ರಶ್ನೆಯಂ ಮಾಡಲು ಯಲೈಸುಮತೀ ಶನೆ ಕೇಳು, ವರ್ತಮಾನಕಾಲದೊಳೀವಸುಂಧರಾಲಯದೊಳು ಭವಾ ದೃಶ ಮಹೀಶರಿಲ್ಲದರಿಂದ ನೀನುಯಃಕಶ್ಚಿನನೇಸರಿ ಸಹಸ್ರಾಕ್ಷನು ಪ್ರತಿ ಕ್ಷಣದಲ್ಲಿ ರೂಕ್ಷರಾಕ್ಷಸಾರ್ಧಿತನಾಗಿ ತಛೀಕ್ಷಣಾಕ್ಷಪತೆಯಿಂದಾ ಕ್ಷಾಯಿಣೀ ಕಟಾಕ್ಷ ಕವಚಿತಾಂಗನಾಗಿರುವ ಭವತುಪ್ತ್ರನಾದಸಹ ಸ್ರಾಯುವಂಕರತರುವುದೆಂದು ಸರ್ವಮಂಗಳನುಜ್ಞೆಯಿಂ ಕಳುಹಿರು ವ ನಿನ್ನೆಡೆಗೆ ತಂನನೆಂದೆನಲು ಪ್ರೊಡವಿಪನಾನುಡಿಯಂ ಕೇಳಿ ಕಡುದು ಖಃದಿಂದ ಮೂರ್ಛಿತನಾಗಿ ಮೆಲ್ಲನೆಚ್ಚತ್ತು, ಎಲೈ ಮಹಾನುಭಾವ ನಿಜಭುಜಸಾರ ವಿತ್ರಾಸಿತ ವೃತ್ರಾದಿಗಳಾದ ಬಲರೂನ್ಮತ್ತ ದೈತ್ಯ ಮೋತ್ತಮರಂ, ದೈತ್ಯಜಯಿಸುವುದುಂಟೆ, ಸುಭಗಸಹಸ್ರಾಯುವಂನಗಲಿ ಕ್ಷಣಮಿರಲಾರೆನೆಂದು ಬಹುವಿಧಪ್ರಲಾಪವಂಮಾಡಲು, ಮಾತಲಿಯದಂ ಕೇಳಿ, ಮಂದವಿಸ್ಮಿತ ವದನಾರವಿಂದನಾಗಿ ಎಲೈ ಕೋಸಲೇಶನೇ ಕೇಳು ಪರಮೇಶ್ವರಪ್ರಸಾದಾ ವಿದಿತ ಕುಮಾರನಂ ಪಾರ್ವತೀದೇವಿ ಕರಸಿದಡೆ ಕಳುಹಲು ವ್ಯಸನವದ್ಯಾಕೆ, ಮಹೀಶತವನಂದನನು ಮಂದಪರಾ ಕ್ರಮಿಯದರಿಂದ ಮಹೇಂದ್ರಂಗೆ ಸಹಾಯವಂಮಾಡಿ, ಮಹದ್ವಿಖ್ಯಾತ ಮಾದ ಕೀರ್ತಿಯಂ ಪಡದ ಜವದಿ ಭವತ್ಸಕಾಶವಂನೈದುವನಿಂದಿ ರಾಪತಿಯು ದಯದಿಂದ ಸಂದೇಹವಂನುಳಿದು ಬೀಳುಕೊಡೆಂದು ಪುರಂಧರ ಸೂತ ನುಡಿಯಲು, ಸುಶರ್ಮನದಂ ಕೇಳಿ, ಕ್ಷಣ ಮನದೊ ಳಾಲೋಚನೆ ಮಾಡಿ, ತನ್ನಿರ್ಬಂಧವಂ ನಿರಾಕರಿಸಲಶಕ್ಯವೆಂದು ನಿಶ್ಚಯಗೈದು, ನುಡಿದನೆಲೈ ಬಿಡೌಜಃಕ್ಷತ್ರಪೇತರಥೊಳಿಂದ್ರನಂ

ಬಾಧಿಸುವ ಕರ್ಬುರನದಾರು? ತನ್ನಿಗ್ರಹಾರ್ಥವಾಗಿ ಎನ್ನಂಗವಂ ಕರತರುವುದೆಂದು ದೇವಿಯರಾಜ್ಞೆ ಎಂದುದಪ್ಪುತು? ತನಿಗದಂ ಪೇಳೆಂದು ಕೇಳಲು, ಮಾತಲಿಯು ನುಡಿದನಲ್ಲೈ ಮಹೀಶನೆ ಕೇಳು! ಅತೀತಕಾಲ ದೊಳು ಮಹರ್ಷ್ಯೈರಾನುಸಂಧಾನದಿಂದ ದಹ್ಯಮಾನಳಾಗಿ ಪುರಂದರನಂ ನಿಗ್ರಹಿಪ ನಂದನನಂ ಪಡೆಯಬೇಕೆಂದು ಮಂದಮತಿಯಾಲೋಚನೆಯು ಮಾಡಿ, ಕಶ್ಯಪಾಶ್ರಮ ಸಮೀಪಮಂ ನೈದಿ, ಜಗನ್ಮೋಹನಾಕಾರವಂ ತಾಳಿ, ತತ್ಸಮೀಪದೊಳು ಸಂಚಾರಮಾಡುತ ದಿತಿಯಂತೆ ಮಹರ್ಷಿ ಯಂ ಮೋಹಿಸಿ, ಕಪಟಮಾನಿನಿ ಮಹಾನಿಶಿಯೊಳಾತನೊಡಗೂಡಿ, ತದುತ್ತರ ಕ್ಷಣದೊಳಖಿಳ ಭುವನ ಭಯಂಕರನಾದ ಪುತ್ರನಂ ಪ್ರಸವಿ ಸಲಮೋಘವೀರ್ಯಜನ್ಮನಾದ ಮಹೋಗ್ರಶಿಶುವಷ್ಟಭುಜಗಳಿಂದ ದಗ್ಧಶೈಲಪ್ರಮಕಳೇಬರನಾಗಿ ಗಗನವಂ ನಡರಿ ಮಹದಟ್ಟಹಾಸಮಂ ಮಾಡಲು, ಮಹರ್ಷಿಯಾನಿಷ್ಠುರಸಿನಾದಮಂ ಕೇಳಿ, ಗಗನದೊಳು ನಿಂದಿರುವ ದುರುಳನಾಕಾರವಂ ನೋಡಿ, ತ್ರಸ್ತಹೃದಯನಾಗಿ, ಹಂತ ಸಂತಾನ ಜಗದಂತಕವಾದುದಿಂನೆಂತು ಮಾಡುವೆನೆಂದು ಚಿಂತಿಸುತ್ತಿರೆ, ದುರುಳನಂತರಿಕ್ಷದಿಂದಿಳಿದು ಮುನಿ ಉತ್ತರೀಯಮಂ ಪಿಡಿದೆಂದನೆಲೆ ತಾತ! ತನ್ನ ಸೃಷ್ಟಿಸಿದಬಳಿಕೆನಗೆ ವರಗಳನಿತ್ತು ಸಲಹದರೆ, ನಿನ್ನಡಿಯಬಿ ಡುವನಲ್ಲೆನುತ ಘರ್ಜಿಸಲದಂಕೇಳಿ, ಮುನಿಯು ಪರಮೋದ್ವಿಗ್ನಹೃದಯ ನಾಗಿ ನಕ್ತಂಚರನೇನಮಾಡುವನೋ ಎಂಬಸಾಧ್ವಸದಿಂದ ನುಡಿದನದೆಂತೆ ನಲು ; ಡಿಂಭ! ಹಂಬಲಿಸದಿರು ಬೇಡುನಿನ್ನಿಷ್ಟಾರ್ಥವಂ ನೀಡುವೆನು ಎನಲಸುರ ಪಶ್ಚಿಮದೊಳು ಅಂಡಭಿತ್ತಿಯೊಳು ಘನನಿಯುತಯೋಜನ ವಿಶಾಲ ಪುಟಭೇದನವು ತದನುಗುಣ ನಿಲಯ ಸತಿ ಸಹರಿಯರನುಪಮಾ ರಾಮಗಳು, ಪ್ರಜೆಗಳೀಭುವನದೊಳು ತನಿಗೆ ಪ್ರತಿಭಟನೋರ್ವನಿಲ್ಲ ದೊಲು, ಮದುಭಜಪ್ರಕರಗಳಿಗನುರೂಪಮಾದ, ದಿವ್ಯಾಯುಧವ್ರಾತ ಗಳ ದಯಮಾಡಬೇಕೆನುತ ವರಗಳನುಬೇಡೆ, ಮುನಿಯಿತ್ತು, ಚಿರ ಕಾಲ ಸಂಚಿತ ಸುಕೃತ ಸಫಲಮಾದುದು ; ಹಂತಯನುತ ನಾನಾವಿಧದೊ ಳಾತ್ಮ ಜೇಳನಗೈದು, ಬಹುವಿಷಾದವನೈದಿ, ಮುನಿಯು ಪರಮೋಪಾ

ಯನಿಂ ಭಲ್ಲಿಶಲಿ.ಂದಮುಕ್ತನಾಗುತ, ಜವದಿ ನಿಜತಪ್ರೋಭುವಿಯುನ
ಕೇರಿತು ನಕ್ಷೆಯುತ್ತಿರಲು; ಖಲಗೆ ತಜ್ಜನನಿಯುನುರೂಪವಾಗಿರುವ ಬ
ನೆಂಬ ನಾಮವನಿರಿಸಿ, ಕರೆಯಲು, ಮುಂದೆ ಪೊಲ ಬಳಿಕ ಬಲ ಜನನಿಯಿ
ವೆರಸಿ, ವರಲಬ್ಧ ನಿಜನಗರಿಯನು ಪ್ರೊಕ್ಕು ಸುಖದಿಂದ ವಾಸವ ಮಾ
ನಿಜ ಪರಾಕ್ರಮದಿಂದದಿತಿಜಾಧಿಪತ್ಯವಂ ನೈದಿ, ಬಹು ಸೈನ್ಯದಿಂ ವ
ಸಿ, ದಿಗ್ವಿಜಯವನುಂ ಮಾಡೆ, ನಿಜನಗರದಿಂ ತೆರಳಿ ದಿಕ್ಪತಿಗಳನು ವಿಗ
ಹದಿ ನಿಗ್ರಹಿಸಿ; ಭೃತ್ಯಕರ್ಮದೊಳವರನಿರಿಸಿ, ತರುವಾಯ ಸುರಪತಿಯ
ನಿಜಮಾತುಳನ ಕೊಂಡು ಮೈರವ ನೆನೆನವು, ಕೋಧಮೂರ್ಛಿತನಾ
ಕರ್ಬುರಚಮೂನಿವಹದಿಂ ವೆರಸಿ, ನಾಕವನು ಮುತ್ತಿ, ಬೊಬ್ಬಿರಿ
ಲದಕೇಳಿ, ಸುರಪತಿಯು ಕಡುರೋಷದಿಂದಖಿಲ ಸುರಸೇನೆಯಿಂವೆರ
ಖಳನೊಡನೆ ಯುದ್ಧವ ಮಾಡಿ, ಪಾರಗಾಣದೆ ವಿಮುಖನಾಗಿ, ನಾಕ
ತ್ರೂರಿದು, ಬರನ ಸಂಮರ್ದವನು ಸಹಿಸಲಾರದೆ ನೊಂದು, ಮನದೆ
ಳಾಲೋಚನೆಯು ಮಾಡಿ, ಮೃಡನಡಿಗೆ ತನ್ನೆಡರ ನೊರೆಯುವೆನೆಂ
ನಿಶ್ಚಯುವ ಮಾಡಿ, ಬಿಡುಗಣ್ಣರೊಡವೆರದು ಕಡುದುಃಖದಿ ಸಚೀಪ
ಯು ನಡೆದು ಸಡಗರದೊಳುಡುಪದದಿ ಬಹುದೂರವಂ ಬಳಿಕ ಕೈಲಾ
ಗಿರಿವರನಲೋಚನಗಳಿಂ ನೋಡಿ, ವಿಸ್ಮಿತನಾಗಿ ತದುಪಕಂಠವನೈ
ಪರಮ ರಮಣೀಯ ತರುಷಂಡಮಂಡಿತ ಗಂಡಶೈಲನಿಕರ ನಿಷಣ್ಣ
ಮಹಂಸ ಪ್ರಕರಮುಖ ವಿನಿರ್ಗತ ವಿವಿಧನಿಗಮಘೋಷ ವಿಮಿಶ್ರವಿ
ಗನಿವಹವಿಚಿತ್ರವಿರುತೀಕಾಂತಕೃತಾಂತದ ಮನಸಿಲಯಾಚಲನಸಂಪ
ವೋಡಿತಲೆದೂಗಿಸುರವರರು ಬಲುತವಕದಿಂದಿಳಿದುಗಿರಿಶಿಖರದೊಳು
ರ್ಜಟಿಯ ನಿಲಯುವನು ಕಂಡು, ನೃಪದಂಡಪ್ರಣಾಮವನುಮಾಡಿ, ಪಂ
ಕ್ಷರಿಯು ಜಪಿಸುತೊಳಪೊಕ್ಕು, ರವಿನಿಕರವನು ಸೋಲಿಸುವಕಾಂತಿಯಿ
ಕಾಂತೆಯೊಡಗೂಡಿ ದಿವ್ಯಾಸನದಿ ಪರಮ ವೈಭವದಿಂದ ಕುಳ್ಳಿ
ಪಾರ್ವತೀರಮಣನಂ ಪರಮ ಕರುಣಾಳುವಂ ಕಂಡು, ಪದಕೆಸಲ
ವಂದಿಸುತ ಸುರರು ನಿಗಮಗಳಿಂದ ನುತಿಸಿ, ನಿಜವೃತ್ತವನು ಬ
ಬಹುವಿಧದಿಂದ ಕೇಳಿ, ಕೃಪೆಯಿಂದ ನಿಟಿಲಾಕ್ಷದಾಕ್ಷಾಯಣಿಯು ಪ

ಮಂಗಳಮುಖಿಯ ಕಂಗಳಿಂದಲಿ ನೋಡೆ ಇಂಗಿತವನರಿದು, ಸುರಪುಂಗವನ ನೋಡಿ, ಹರನಂಗನೆಯು ನುಡಿದಳನುಕಂಪದಿ ನಿರ್ಲೇಪವತಿ ಕೇಳು; ನರಲೋಕದೊಳಗಿರುವ ಮಾಹಿಷ್ಮತೀ ನಗರದೊಳು ನೆಲಸಿರುವ ದಶಶತಾಯುಷನೆಂಬ ಕೋಸಲೇಶನ ಸುತನ ಕರೆದು ತಂದಡೆ ದಿತಿಜಕುಲವಿನಾಶವಾಳ್ಪನಿದುವೆ ನಿಶ್ಚಯ ಪೋಗು ಎನುತಲಪ್ಪಣೆಗೊಡಲು, ಸುರಪ ಶಿರಸಾವಹಿಸಿ ಮಣಿದು ಧೂರ್ಜಟಿಯುವತಿಗತೆರಳಿ, ಹಾಟಕಶೈಲ ಶಿಖರಕೈತಂದು, ನಿನ್ನೆಡೆಗೆ ಕಳುಹಿದನೆನ್ನನಿದುವೆ ವೃತ್ತಾಂತವೆನುತೊರೆಯೆ ಮಾತಲಿ ಕೇಳಿ, ಕೋಸಲ ಮಹೀಪತಿಯು ಕರದು ಕಂಚುಕಿಗಳನು ಕರೆ ಸಹಸ್ರಾಯುಷನನೆನುತಲಾಜ್ಞಾಪಿಸಲು;

ಅನಂತರಮತ್ಯಂತ ತ್ವರೆಯೊಳಾ ವೇತ್ರಜನರೈತಂದು, ಸಹಸ್ರಾಯುವಿನಡಿಗೆರಗಿ, ಜೀಯಾ! ಮಹಾರಾಜಭವದೀಯಾಗಮನಮಂ ಪ್ರತೀಕ್ಷಿಸುತ್ತಿರುವನೆಂದು ವಿಜ್ಞಾಪನೆಯಂ ಮಾಡಲು, ಸಹಸ್ರಾಯುವಾನುಡಿಯಂ ಕೇಳಿ, ಸತ್ವರದೊಳೆದ್ದು, ದಿವ್ಯಕಿರೀಟವಂ ಧರಿಸ್ಯ, ನಿಜಾಲಯದ್ವಾರದೊಳು ಕಂಚುಕವನಳವಡಿಸಿ, ಮಧ್ಯಮಾರ್ಗದೊಳು ಭೃತ್ಯಾನೀಕಪಾದುಕಗಳಂ ಮೆಟ್ಟಿ, ತಾತನರಮನೆಯನೈದಿ, ಅತ್ಯದ್ಭುತ ವಿಮಾನದೊಳು ದಿವ್ಯಪುರುಷನೆಡೆಯೊಳ್ಕುಳ್ಳಿರುವ ತಾತನಡಿಗೆರಗೆ, ಹರಸಿ ಮಹೀಶ ಪಾಕಶಾಸನ ಪ್ರಿಯಮಿತ್ರನಾದ ಮಾತಲಿಯೈತಂದಿರುವ ನಾತನಡಿಗೊಂದಿಸೆಂದೆನಲು, ಚಂಡಾಸುರಖಂಡ ನಾನಾಖಂಡಲಸೂತನಡಿಗೆ ಮಣಿಯೆ, ಮಾತಲಿ ಹರಸಿ, ಭೀಷಣಾರೀತೇಜೋವಿಶೇಷಮಂ ನೋಡಿ, ವಿಸ್ಮಿತನಾಗಿ ಹಂತ ಮಾನುಷರೊಳೀಪರಿಯ ಪುರುಷನುದಯಿಸುವನೆ? ಇಂತಲ್ಲದಿರೆ ದೇವಿಯರಾಜ್ಞೆಯಾಗುವದೇ? ಎಂದು ಮನದೊಳಾಲೋಚನೆಯ ಮಾಡುತಿರೆ, ಮಹೀಶನಖಿಲವೃತ್ತಾಂತಮಂ ಪುತ್ರನೊಡನೊರೆದು ಕಂಬನಿದುಂಬಲಾ ಸಹಸ್ರಾಯು ಕರಮುಗಿದು ಸಂತೈಸುತಪ್ಪಣೆಗೊಂಡು, ಜನನಿಯರ ಮನೆಗೈದಿ, ಮಣಿದು ವೃತ್ತಾಂತಮನೊರೆದು, ಬಹು ಪ್ರಕಾರದಿಂ ಸಂತೈಸಲು, ಕಾಂತಿಮಾಲಿನಿಯು ಹರಸಿ ಸೇಸೆಯನಿಕ್ಕಿ, ಬೀಳ್ಕೊಡೆ ಮಮ್ಮಾರಿಯು ಕಲಾ

ಪತಿಯು ಜವಾಬ್ಯಲಯುವ ನ್ವೈದಿ, ಅಪ್ಪಣೆಗೊಂಡು ಧಾನ್ಯಮಾಲಿನಿ ಪ್ರಮುಖ ಪತ್ನಿಯರನೊಡಂಬಡಿಸಿ, ವೃಷಧ್ವಜನಿಂಗೆ ಬಹುವಿಧ ವಿವೇಕಮನೊರೆದು, ಸುತೀಕ್ಷ್ಣನೊಡನೆ ಮಾತಾಡುತ್ತ ಪ್ರಯಾ ಣೋದ್ಯುಕ್ತನಾಗುವನಿತರೊಳು ಸುದರ್ಶನನೈದಿ, ವಂದನೆಯಂ ಮಾಡಿ, ತಾತ ಕೇಳೀ ಸ್ವೋಕಕಾರ್ಯಕೋಸುಗ ನೀನೈದಲ್ಕಾತಕೆನಗಪ್ಪಣೆಯ ನಿತ್ತಡೆ ಸುರಾರಿಗಳ ನಿಶ್ಶೇಷಮಂ ಮಾಡಿ ಬರುವೆನೆಂದು ಬಹು ವಿಧದಿಂ ನಿರ್ಬಂಧಮಂ ಮಾಡಲು, ಸಹಸ್ರಾಯು ಸುತನಂ ತಕ್ಕೈಸಿ ತದುದಾರ ಗಂಭೀರ ವಚನಾಮೃತವ ನೀಂಟಿ, ಪರವಶನಾಗಿ ಶಿರವನಾ ಘ್ರಾಣಿಸುತ ವತ್ಸ! ನಿನಿಗಸಾಧ್ಯವಾದ ಕಾರ್ಯವಿಲ್ಲವಾದಡೆಯು ದೇವಿ ಯುರಾಜ್ಞೆ ಎನಗಾಗಿರುವುದರಿಂದ ಪೋಗಿಬರುವುದೆಂದೊಡಂಬಡಿಸಿ, ನಿಜ ಖಡ್ಗ ಚಾಪ ತೂಣೀರಾದಿಗಳಿಂದಲಂಕೃತರಾಗಿ, ದಿವ್ಯ ವಿಮಾನವಂ ಮಾತಲಿಯೊಡನೇರಿ ಮೇರುಶಿಖರವಂನೈದಿ, ಶಚೀಪತಿಯನರಸಿ, ಕಾಣ ದೆ ದಿತಿಜಪ್ರಹಾರ ವಿಶಕಲಿತಾವಯುವರಾದ ದಿವ್ಯಪುರುಷನಂ ಕಂಡು, ಮಹೇಂದ್ರನೆಲ್ಲಿರುವನೆಂದು ಕೇಳಲು, ಆ ಭಿನ್ನಾವಯವಿಗಳಾದ ಸವನಾ ಸಿಗಳ್ನುಡಿದರೆಲೆ ಮಹಾನುಭಾವ ವೃತ್ರಾರಿಯುಪಕೃತ್ಪ್ರಯಾಣಮಾ ಸನಂತರದಲ್ಲಿ ಸಂತತ ಚಿಂತಾಂಗನಾವಹೃತಸ್ವಾಂತನಾಗಿ, ಸಪ್ತರ್ಷಿ ಸಮಾಜಮುಂಕರಸಿ, ಸ್ವಪರಚ್ಯುತಿ ಪ್ರಕಾರವಂ ನೊರದು, ಖರಾಸುರ ನಿಂಗಾಭಿಚಾರವಂಮಾಡಿ ದಸ್ಯುನಿಶ್ಶೇಷಮಂ ಮಾಡಬೇಕೆಂದು ಬೇಡಲಾ ತಪೋಧನರೆಂದರೆಲೈ ಸಂಕ್ರಂದನನೆ ಕೇಳು? ಫಲಾಭಿಸಂಧಿಯಿಂನಾಳ್ಪ ಕರ್ಮ ಗ್ರಾಮಂ ಸನ್ಯಾಸಮಂ ಮಾಡಿರುವೆವದರಿಂದ ತಮ್ಮಿಂದೀಕಾರ್ಯ ಸಂಧಿಸಲರಿಯಜೆಂದು ನುಡಿಯಲಾ ಪುರಂಧರನಿಂತೆಂದನೆನೆ. ಎಲೈ ಮಹರ್ಷಿ ಗಳಿರಾ ಕೇಳಿ, ನಿಮ್ಮಿಂದ ಬಂದೆಡರ ನೀವೆ ಪರಿಹಾರ ಮಾಡಬೇಕಲ್ಲದೆ ನ್ನಿಲ್ಲನೆಂದು ಬಹುವಿಧದಿಂದ ನಿರ್ಬಂಧಮಂ ಮಾಡಲು, ಆ ಮಹಾನುಭಾವ ರಾದ ಮಹರ್ಷಿಗಳು ಮಹೇಂದ್ರ ನಿರ್ಬಂಧಮಂ ಮೀರಲಾರದ ಶ್ರದ್ಧೆ ಯಿಂದಭಿಚಾರವಂ ಮಾಡಲಾ ವೈಶ್ವಾನರಕುಂಡದೊಳು ಪ್ರಚಂಡವೈತ್ಯ ನ ಚಾಂಡಮಂ ನುಂಗುವಂತೆ ಪ್ರಾದುರ್ಭವಿಸಲಾ ಮಾರ್ತಾಂಡ ಪ್ರಮುಖ

ನಿಖಿಲಗ್ರಹರ್ಕ್ಷನಿತರಸ್ತೇಜಸ್ಕವಾದುದು, ಚತುರ್ದಶಭುವನಮಂಸಂಧಕಾರ ವಾವರಿಸಿದುದಾಮಹಾದೈತ್ಯತನ್ಮಂತ್ರಸಂತತಿಮಾತ್ರಗಾತ್ರದಿಂ ದಕ್ಷಿಣದೊಳಭಿ ವೃದ್ಧನಾಗಿ ಸಹಸ್ರಶೀರ್ಷಗಳೊಳಾಮಧ್ಯವೋತ್ತಮಾಂಗಹಯಾನನಾಕಾರ ವಾಗಿಹುದು ದ್ವಿಸಹಸ್ರಬಾಹುಗಳಿಂದಖಿಲ ದಿಕ್ಕುಗಳನಾಕ್ರಮಿಸಿ ಮಹದಟ್ಟ ಹಾಸಮಂಮಾಡುತಾಮಹರ್ಷಿಗಳಭಕ್ಷಿಸುವೆನೆಂದು ಪಕ್ರಮಿಸಲು,ಆತಪೋಧನ ರು ಕುಂಡಜನಘೋರದಂಷ್ಟ್ರಾಕರಾಳಮುಖ ಸಹಸ್ರಸ್ಥಿತ ನಯನಸಹಸ್ರದ್ವ ಯುಗತಾಂಗಾರ ಸದೃಶತಾರಕಾನಿಕರಾ ವಲೋಕನಜನಿತಸಾಧ್ವಸತ್ರಸ್ತಹೃದಯ ರಾಗಿ ಫಲಾಯನಮಂಮಾಡಿ ಸತ್ಯಲೋಕಮಂಕುರಿತು ನಡೆಯುತ್ತಿರಲು; ಅಮು ನಿವರರು ವಿಸ್ಮೃತಿಯಿಂದ ಹಯಮುಖಮಂತ್ರದಿಂದುಪಕ್ರಮಿಸಿದ ಪೂರ್ಣಾ ಹುತಿಯಿಂದುತ್ಪನ್ನವಾದಹಯಮುಖಾಸುರನುಕುಂಡದಿಂದೆದ್ದುದೇವಸೇನಾಸಹಿತ ನಾದ ಶಚೀಪತಿಯಂಕಂಡುಕಡುರೋಷದಿಂದಟ್ಟಿಬರಲಿಂದ್ರನಾ ವಿಚಿತ್ರತರವಿವಿ ಧಾಯುಧಪ್ರಕರಭಯಂಕರ ಕರಸಹಸ್ರದ್ವಯದಿಂದಘೋರಾಟ್ಟಹಾಸಮಂಮಾ ಡುತ್ತಬರುವಹಯಗ್ರೀವನಂಕಂಡು ಅಪಮೃತ್ಯುಪರಿಹಾರಪ್ರಯುಕ್ತಪ್ರಾರ್ಥ ನೆಯಂ ಮಾಡುವಂಗೆ ಕಾಲಮೃತ್ಯು ಬಂದೊದಗಿದಂತಾದುದೆಂದುಮನದೊಳಾ ಲೋಚನೆಮಾಡಿ ಸಮಸ್ತಬೃಂದಾರಕಬೃಂದದಿಂಸಹಿತನಾಗಿನಿಖಿಲಶಸ್ತ್ರಾಸ್ತ್ರ ಗಳಿಂದಪ್ರಹಾರಮಂಮಾಡಲವು ದರಿದ್ರಮನೋರಥದಂತೆನಿರರ್ಥಕವಾಗಲಾ ಹಯಮುಖನುಪರಾಕ್ರಮಗ್ರಸ್ತತೇಜಸ್ಕನಾಗಿಫಲಾಯನಮಂಮಾಡಲಾದೈತ್ಯ ನಮರ್ತ್ಯಲೋಕಮಂನೈದಿದನಿಂದ್ರನೆಲ್ಲಿರುವನೋಕಾಣೆವೆಂದೊರೆಯೆ,ಸಹಸ್ರಾ ಯುವದಂಕೇಳಿದೇವದೂತರಂಕುರಿತು ಶಚೀಪತಿಯನರಸಿ ಸಪರಿವಾರನಾದಿಂದ್ರ ನಂನಮರಾವತಿಗೆ ಕರತರುವುದೆಂದು ಪೇಳಿಮಾತಲಿಯಿಂಸಹಿತನಾಗಿ ಬಹುದೂರ ಮಾರ್ಗಮಂನಡೆದಮರಾವತೀ ನಗರಸಮೀಪಮಂನೋಡಿವಿಸ್ಮಿತನಾಗಿ ಮಾತಲಿ ಯಂ ಕುರಿತು ಭವತ್ಪ್ರದರ್ಶಿತ ಸಾಗರದ್ವೀಪವನಪರ್ವತ ವಿಶಿಷ್ಟಮಧ್ಯ ಲೋಕ ವಿಸ್ತಾರವಿದಿತವಾದುದು, ಪ್ರಕೃತವಲ್ಲಿ ಸುರಲೋಕ ಮಹಾವೈಭವಮಂ ಸ್ವಶ ರೀರದಿಂದ ನೋಡಿದೆನದಂತಿರಲಿ,ಅಮರಾವತೀ ನಗರದೊಳು ಮಹದುತ್ಸವಪ್ರಸ ಕ್ತವಾಗಿರುವಂತೆ ತೋರುತಿದೆಯೆಂದದರನಿದಾನಮಂ ತಿಳಿಯ ಬೇಕೆಂದು ನುಡಿ ದನೆಂಬಲ್ಲಿಗೆ * * * * * * *

ಇಂತುಕರ್ನಾಟಕ ಭಾಷಾವಿರಚಿತವಾದ ಶ್ರೀಮತ್ಸಮಸ್ತಭೂಮಂಡಲ ಮಂಡನಾಯಮಾನನಿಖಿಲದೇಶಾವತಂಸಕರ್ನಾಟಕಜನಪದಸಂಪದಧಿಷ್ಠಾನಭೂತ ಶ್ರೀಮನ್ಮಹಿಶೂರಮಹಾಸಂಸ್ಥಾನ ಮಧ್ಯದೇದೀಪ್ಯಮಾನಾವಿಕಲಕಲಾನಿಧಿ ಕುಲಕ್ರಮಾಗತರಾಜಕ್ಷಿತಿಪಾಲ ಪ್ರಮುಖ ನಿಖಿಲ ನಿಜರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪಾ ಪ್ರತಿಮವೀರನರಪತಿಬಿರುದೆಂತೆಂಬರಗಂಡ ಲೋಕೈಕವೀರಯದುಕುಲಪಯಃಪಾರಾವಾರಕಲಾನಿಧಿಶಂಖಚಕ್ರಾಂಕುಶಕುಠಾರ ಮಕರ ಮತ್ಸ್ಯಶರಭಸಾಳ್ವಗಂಡ ಭೇರುಂಡ ಧರಣೀವರಾಹಹನುಮದ್ಗರುಡಕಂಠೀರವಾದ್ಯನೇಕ ಬಿರುದಾಂಕಿತ ಶ್ರೀಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭಸುಧಾಂಬುಧಿರಾಕಾಸುಧಾಕರಾಯಮಾನಶ್ರೀಚಾಮುಂಡಿಕಾಂಬಾವರಪ್ರಸಾದೋದ್ಭವರಾದಆತ್ರೇಯಸಗೋತ್ರಆಶ್ವಲಾಯನಸೂತ್ರಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರ ಪುರವರಾಧೀಶ ಶ್ರೀಮತ್ಕೃಷ್ಣರಾಜವಡೆಯರವರುಲೋಕೋಪಕಾರಾರ್ಥವಾಗಿರಚಿಸಲ್ಪಟ್ಟ ಶ್ರೀಕೃಷ್ಣರಾಜವಾಣೀವಿಲಾಸ ವೆಂಬಾಂಕಿತದಿಂದಕರ್ನಾಟಕ ಭಾಷಾವ್ಯಾಖ್ಯಾನರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿಹಯಗ್ರೀವಾಗಸ್ತ್ಯಸಂವಾದದಲ್ಲಿದ್ವಾವಿಂಶೋಧ್ಯಾಯಃ* * * * * * *

ಇಪ್ಪತ್ತೆರಡನೆ ಅಧ್ಯಾಯ ಸಂಪೂರ್ಣಂ



ಶ್ರೀರಸ್ತು

# ಇಪ್ಪತ್ತ ಮೂರನೇ ಅಧ್ಯಾಯ ಪ್ರಾರಂಭ.

ಅನಂತರದಲ್ಲಿ ಮಾತಲಿಯುದಂ ಕೇಳೀ ನೀನು ಪ್ರಚ್ಛನ್ನನಾಗಿರುವುದೆಂದು
ಪೇಳೆ ನಿಜಾಕಾರಮಂಧರಿಸಿ ನಗರಪ್ರವೇಶವಂಮಾಡಿ ವೃತ್ತಾಂತಮಂತಿಳಿದು ಬಂ
ದುವತ್ಸ! ಖರಾಸುರನಾ ಹಯಗ್ರೀವನಂ ಪರಾಜಿತನಾಗಿಸ್ವಕುಲಾಧಿಪತ್ಯವಂನವಗೆಸ
ಮರ್ಪಣೆಮಾಡಿ ಜೀವಿಸುವೆನೆಂದಾಲೋಚನೆಯುಮಾಡಿ ಸಾಮೋಪಾಯದಿಂದಾ
ತನನೊಡಂಬಡಿಸಿ ಆತಂಗೆ ಪಟ್ಟಾಭಿಷೇಕಮಂಮಾಡಿ ತದಾಜ್ಞೆಯಿಂ ತಾನುಯ
ವ್ವರಾಜ್ಯಮಂನೈದಿತ್ರಿಭುವನದೊಳೆಮಗೆ ಸರಿಯಾರೆಂಬುತ್ಸವದಿಂಗೈದ ಕೋಲಾ
ಹಲಧ್ವನಿಯಿದೆಂದುತ್ಸವನಿದಾನಮಂದಿತಿಜರ ಪರಾಕ್ರಮುವಂ ವಿಸ್ತರದಿ ವರ್ಣಿಸಿ
ಮನದೊಳೀತ್ರಿಭುವನ ಲಕ್ಷ್ಮೀಸಹಸ್ರಸಯುನಿಂಗೆಂತುಬರುವುದೋ? ಸಹಸ್ರಾ
ಯುವೆಂತುಜಯಿಸುವನೊ ಯೆಂದುಯೋಚಿಸುತ್ತಿರಲಾತನಿಂಗಿತಮಂನರಿದುಸಹ
ಸ್ರಾಯುವಿಂತೆಂದನೆಲೈ ಮಹಾಭಾಗ! ಕಾರ್ಯ ಸಿದ್ಧಿಗಳಲ್ಲಿ ಪುರುಷ ಪ್ರಯತ್ನಾ
ದಿಗಳನಿಶ್ಚಿತವಾದಡೆಯುಮಾಪ್ತವಾಕ್ಯದೊಳು ನಿಶ್ಚಯಬುದ್ಧಿಯಂ ಮಾಡಲಾ
ಗದೀಭುವನದೊಳು ಜಗಜ್ಜನನಿಗಿಂತತಿಶಯವಾದಸುಹೃದ್ವಸ್ತುವಿನ್ನುಂಟೆ? ಅ
ದರಿಂಸಮಾಹಿತ ಮನಸ್ಕನಾಗಿ ವಿಮಾನಮಂನೇರುವುದೆಂದು ನುಡಿದಾತನಿಂದೊಡ
ಗೂಡಿ ನಗರಸಮೀಪಮಂನೈದಿ ನಿಜಜಲಜಮಂಧ್ವನಿಮಾಡಲು, ಸಾವಧಾ
ದೊಳವನಿಪತಿತಿಲಕ! ಕೇಳುಯುಗವಿಗಮಘನನಿನದನಿಭಘೋರತಜ್ಜಲಜರವಗ
ಳಿತಪೌರುಷರಾಗಿ ದಿತಿಜರೆದೆತಲ್ಲಣಿಸೆ ನಗರಪಾಲಕರೈದಿ ಖರಗೆ ನರಪುಂಗವನ
ಬರವನೊರೆಯೆ, ಕನಲಿ ಎದುರಿಸಲಿನಿಂದಿರುವ ಕಿಂಕರರಿಗೊರೆದನೆಲೆಚರರ! ಬಂ
ದಿರುವಪುರುಷಾಧಮನಂಶೆರೆವಿಡಿದುತರುವುದೆನುತಪ್ಪಣೆಯೀಯಲನುಚರಕೋಟಿ
ಯೈದಿಮುತ್ತಲು, ಸಹಸ್ರಾಯು ನಿಮಿಷದೊಳಗನಿಬರುನು ಕಳುಹಲೆಮ್ಮ ನಗರಿ
ಗುಳಿದವರುಧಾವನೆಮಾಡಿ ಖರನಡಿಗೆತಿಳುಹೆ ಕಡುರೋಷದೊಳು ಗೃಧ್ರಮು
ಖನೆಂಬ ಯೂಥಪನಕರದೆಲವೊನಿಜ ಸೈನ್ಯದಿಂಪೆರಸಿ ಬಂದಿರುವನಿರವನರಿದುಜ
ವದಿಂದ ಸೆರೆವಿಡಿದು ತಹುದೆನುತ ಕರನೊರೆಯುಲಪ್ಪಣೆ ಗೊಂಡುತೆರಳಿ ನಿಜಸೇನೆ

ಯೊಡನರಸುತ್ತ ಮುತ್ತಲು,ನಿಮಿಷಮಾತ್ರದಿಸಹಸ್ರಾಯುತರಿದಖಿಲಸೇನೆಯಂಶ
ರಸಮೂಹಗಳಿಂದ ಗೃಧ್ರಮುಖನೆದೆಯನೆರಡಂಬಿನಿಂಸೀಳಲವನಸುವಸೀಗಲು
ಖರನುಕೇಳಿಆಲೋಚನೆಯ ಮಾಡಿ ಹಯಶೀರ್ಷನಡಿಗಳಿಗೆ ಬಿನ್ನಹಮಾಡೆ, ಸಭೆ
ಯೊಳಗೆ ಕುಳ್ಳಿರುವ ಯೂಥಪರೊಳಸುರಪತಿ ವೃಕವಿಕಟರೆಂಬ ಪೃತನಾಧಿಪ
ರಿಗಪ್ಪಣೆಯನೀಯ್ಯಲವರ್ಯೈದಿ ನಿಜಸೇನೆಯಿಂ ರಣದೊಳತಿಸಾಹಸವ ಮಾಡಿ ಮೃ
ತರಾಗೆ, ಹಯವದನ ನದಕೇಳಿಕಡುರೋಷದಲಿ ಶಕಟನಿಕಟ ವಿಟಂಕರೆಂಬಮರ
ರಿಪುಚಮೂಪತಿಗಳನ್ನು ಕರೆದುಬಹುಮಾನವಿತ್ತು ಚಿತೋಕ್ತಿಗಳನೊರೆಯ ಕ
ಳು ಹಲವರರ್ಬುದಚತುಷ್ಕ ತುರಂಗಯುಕ್ತರಾಗಿ ನೃಪತಿಲಕ! ಬಲಗರ್ವಿತರು
ಶರ್ವವರಜನ್ಮನಭಿಮುಖವಾಗಿಬರುತಿರೆ ಸಹಸ್ರಾಯುವಿಲಯಜನನಿಧಿಯವೊ
ಲುನೋಡಿನಿಜಚಾಪವನು ಮಿಡಿಯೆ ತದ್ಭುಜವಂಡನಿಸ್ತನಿತಚಂಡಕೋದಂಡಮೌ
ರ್ವೀನಿನದಜನಿತ ಸಾಧ್ವಸದಿಂದ ಖಲನಿವಹಮೂರ್ಛೆಯನ್ಯೆದೆ ಮಾತಲಿನೋಡಿ
ರಮವಿಸ್ಮಯದಿಂದ ನುಡಿದನೆಲೆ ತಾತ ! ಕೇಳ್ನಿನ್ನಪಡದವಳೆ ಈಭುವನದೊಳ
ಮಾನಿನಿಯುಎನುತ ಪೊಗಳುತಿರಲು, ಶಕಟ ನಿಕಟ ವಿಟಂಕರನ್ಯೋನ್ಯಮುಖ
ಗಳನು ನೋಡಿ ಕೊಳುತೊಡೆ ಮನಬಾರವತಿ ಸಾಹಸಿಗಳೆವಡಮ ಮರಣ
ನು ನಿಶ್ಚೈಸಿ ಯೂಥಪರಂತೊಡಗಿನಿಜಚಾಪಗಳ ಸಿಡಿಲಂತೆಮೊರೆಯುತ್ತ ಯ
ರಗುಲವರೊಡನೆನೃಪಮೂರುದಿನಶರಗಳಿಂಸೆಣಸಿ ಬಳಿಕೆರಡೆರಡು ಶರಗಳಿಂದಸ
ರವರಯೂಥಪರಕರದೊಳಿಹಚಾಪಗಳ ಖಂಡಿಸಲು, ಪರಿಘಮುದ್ಗರ ಖಡ್ಗ
ಚರ್ಮಗಳ ಖತಿಯಿಂದಬಂದೆರಗಲವರಾಯುಧ ಪ್ರವರಯುತಭುಜಗಳನುಶ
ಗಳಿಂತರಿಯ ಬೊಬ್ಬಿರಿಯಲವಧಿಕಸಂತಾಪದಿವಿವಾಮ ಹಸ್ತಗಳಿಂದ ಪಿಡಿದುಮ
ಸುಲಾದಿಗವೆಗಳನು ಬರುವನಿತರೊಳುಸೇನೆಜಲನಿಧಿಯವೊಲುಮೊರೆಯುತ್ತ ವಿ
ಧಶಸ್ತ್ರಾಸ್ತ್ರಗಳನುರುಬಲದನೋಡಿರುರ್ವರಿಯುನಿಜಚಾಪದೊಳಗಾಗ್ನೇಯ
ಶರವ ಕಡುರೋಷದಿಂ ಪೂಡಿಬಿಡಲುರಿಯನುಗುಳುತ್ತ ಸೇನಾಸಹಿತಯ
ಥಪರವೆಹಿಸಿದುದು,ನೃಪತಿ?ಕೇಳೊಂದೇ ನಿಮಿಷದಲಿ, ತರುವಾಯಹಯವದನನ
ಕೇಳಿಕಡುರೋಷವಲಿನುಡಿದಖರನೊಡನೆನರನಲ್ಲಬಂದಿರುವನಿವಮೃಡನೊ?ಕ
ಲೊಳಗೆ ಮಲಗಿಪನೋ? ಫಡ!ಮಾನುಷಗೆಗಗನಗಮನವಿದೆತ್ತ, ನಿಮಿಷದಲಿದಿ
ಜರನು ನದೆವ ಸಾಹಸವೆತ್ತಣದು, ಕೇಳವರಿಂದಸುಲಭದಿಂದ ಸುರವರ ಸ

ಧ್ಯನಾಗಿ ತೋರಲಿಲ್ಲವವರಿಂದ ನಿಖಿಲ ಸೇನಾಸಹಿತನಾಗಿ ನೀನೇಪೋ
ಗಿ ದುರುಳನನುವನು ನೀಗಿಬರುವದೆನುತಪ್ಪಣೆಯನೀಯ್ವಲು, ಖರಾಸು
ರನುತೆರಳಿದನು ನಿಖಿಲಖರಸೇನೆಯಿಂವೆರಸಿ ದಶಪಂಚಶತಸಂಖ್ಯಾಕ
ಪಂಚಮುಖವದನ ಹಯನಿಕರಪರಿಶೋಭಿತಾತ್ಯುನ್ನತಧ್ವಜವಿಲಸದ್ರಥವರ
ದೊಳುಕುಳಿತು ರಣಸಮಯಸಮುಚಿತಾಭರಣನಿಕರಂಗಳಿಂದಲತಿಭಯಂಕರ
ನಾಗಿ ಪ್ರಕೃತಿದಾರುಣನಾದ ದುರುಳನಮರಾವತೀ ನಗರದಿಂ ತೆರಳೆ ಬಕಶುಕ
ಮಧೂಕ ಮಹೋಲ್ಕ ವಜ್ರದಂಷ್ಟ್ರವರಾಹಧೂಮ್ರಕೇಶಲು ಲೂಕತಾಮ್ರನೇ
ತ್ರವಿರಾಧರೆಂಬದಶಯೂಥಪರುವಶಶತಾಕ್ಷೋಹಿಣೀಪತಿಗಳೋರೋರ್ವರಜಹ
ರವರೋದ್ಧತದರ್ಪರಖಿಲರಣಮರ್ಮದರು ನಿಜನಿಜಾಕ್ಷೋಹಿಣೀಸಹಿತ ಖರ
ನೊಡನೆ ಜವದಿಂದತೆರಳಿದರು ರಣರಂಗಕಹಮಹಮೆನುತ ಸಕಲಜಗತಲ್ಲಣಿಸೆ
ವಿವಿಧವಾದ್ಯಪ್ರಕರನಿನದದಿಂ ರಿಪುಗಳೆದೆನಡುಗೆ ಖರ ನಿಖಿಲರಿಂವೆರಸಿ ರಣರಂಗ
ಮನೈದುತಿರೆ ಮಾತಲಿಯು ನೋಡಿ ವಿಸ್ಮಿತನಾಗಿ ನುಡಿದನೆಲೆವತ್ಸ! ಕೇಳ್ಮತ್ಸ
ರದೊಳೀಗ ಬರುವಾತನೆ ಖರನು ಭೃಶದಾರುಣನು ದುರುಳನಿವನೊಡನೆ ಸುರ
ರಾಜ ಸಮರಾಂಗಣದಿ ಸೆಣಸಿ ಸಾಹಸದಿಂದ ಬಹುವಿಧದಿಖಳನ ನಿಗ್ರಹಿಸ
ಲಾರದೆ ಬಳಿಕ ತೆರಳಿತವಪಥವನವಲೋಕಿಸುತ್ತಿರುವನೆನೆ, ಕೇಳಿಪೌಳಿಯ
ನೊಲಿದು ದುರ್ಮುಖಾಸುರದಮನನಪರಿಮಿತವಾಗಿ ಬರುತಿರುವ ಚತುರಂಗ
ಮಂ ನೋಡಿ ನಿಜಜಲಜಮಂವದನದೊಳಗಿಟ್ಟು ಪೂರೈಸೆ ತನ್ನಿನದವಿಧ್ವಂಡದುರು
ಬೆಸುಗೆಯನು ಬಿಡಿಸುವಂತೆಸಗೆ ಖಲರೆದೆಯೊಡದುತಲ್ಲಣಿಸೆ ಬಳಿಕ ನಿಜಚಾಪ
ಮಂಪಿಡಿದ ಸುರಸೇನೆಯೊಳಪೊಕ್ಕು ನಿಶಿತಾಶುಗಪ್ರಕರವನು ಬೀರಲಸುವಳಿ
ದು ಗಜರಥಿಕಾಶ್ವಪತ್ತಿನಿಕರಗಳುರುಳಿ ಬೀಳುತಿರೆ ನಿಮಿಷದೊಳು ಶೋಣಿತ
ತರಂಗಿಣಿಗಳತಿಭಯಂಕರವಾಗಿ ಪ್ರವಹಿಸಿದ ವವನಿಪತಿ ಕೇಳು, ನಾಸೀರವನು
ತರಿದು ರುರ್ವರಿಯು ಬಳಿಕ ಸುರಸೇನಾಜಲಧಿಯೊಳು ಸುಳಿದು ಬರುತಿರಲುಕು
ಕಬಕಾಸುರರೆಂಬ ಯೂಥಪರು ಖತಿಯಿಂದ ತರುಬಿ ನಿಜರಥಗಳನು ದಶಶತಾ
ಯುಷನ ಸಂಮುಖಕೆ ಖಲರೆಂದರೆಲೆ ಮಾನುಷಾಧಮನೆ!ನೀಮಾನುಷಾದರನಳು
ಕಿಸಲು ಸಮರ್ಥನೆ ತೊಲಗು ತೊಲಗೆನುತ ನಿಕರಗಳನುರುಬಲವ ಖಂಡಿಸುತ
ಕನಲಿಕಡುರೋಷದಲಿವಾಯುವ್ಯ ಮಹಾಸ್ತ್ರವನು ಚಾಪಕಳವಡಿಸಿ ನುಡಿದನೆ
ಲೆ ಖಲರ!ಬಗುಳಿದುದಕೆ ಫಲವಿದಕೋಯೆನುತವನಿಪತಿಚಂಡರಿಪುಕೆಳೆದುಬಿಡೆ

ಪುಂಡರೀಕಾಕ್ಷ ತನುಜಾಂಡವಲ್ಲಾಡುವ್ರೊಲುಚಂಡಪವನನು ಪುಟ್ಟ ಕುಂಡಜನ
ಸೇನೆಯನು ಹಿಂಡಿ ಗಜರಥಿಕರನು ತಂಡತಂಡವಲಿ ನೃಪದಿಂಡುಗೆಡಹಿದುದು
ದುರಿನಲಿ ಸೋಸುತ್ತಿರುವ ಬಕಶುಕಾಸುರರೆಂಬಯೂಥಪರರಥಸಹಿತಕೊಂಡುಗ
ಗನಾಂಗಣವನಡರಿದುದುಬಳಿಕವರಗತಿಗಳನಾದುದೋಶಿತಿಕಂಠನೆಬಲ್ಲ,ಇಂತುನಾ
ಹೀರವೊಳು ದಶಯುಗಾಕ್ಷೌಹಿಣೀಪತಿಗಳೆಡೆಗೆಡದು ಬಯಲಾಗೆ ಖರನೋಡಿ
ತನ್ನೆದುರಿನೊಳು ಮಡಿಯೆ ಯೂಥಪರು ಕಡುರೋಷದಲಿ ಕಿಡಿಗಳನು ಕಂಣುಗ
ಳಲಿ ಕೆದರುತಡಿಗಡಿಗೆ ಪಲ್ಗಡಿವುತೆಲೆ ಸೂತ!ನಿಜರಥವನಾ ನರನೆಡೆಗೆನಡೆಸು,ವ
ತ್ತವನೊಡಲ ಬಗೆದು ತತ್ಕುಕ್ಷಿಗತ ರಕುತಪಾನವಮಾಡಿದ ನಕರೋಪಾನಲಿ
ಗುಪಶಾಂತಿಯಾಗದದರಿಂದೆನಲು, ಸಾರಥಿಯು ರಥ್ಯಗಳ ತರುಬುತಿರೆ ವಜ್ರದಂ
ಷ್ಟ್ರ ಮಹೋಲ್ಕರೆಂಬ ಯೂಥಪರೈದಿ ಸುಡಿದರೆಲೆ ಜೀಯ್ಯಾ ತಾವಿನಿಬರಿರೆ ನ
ರನಸಮ್ಮುಖಕೆಸೇನ್ಯೆಮವರೇತರುವೆಬಂದೆ ನಿಮಿಷದೊಳಗೆ ತಟ್ಟಿರವನೆಂದೆನುತ
ಶಪಥವಮಾಡಿತೆರಳಿ ನಿಜಸೇನೆಯಿಂವೆರಸಿ ಜವದಿಂದ ರುರ್ವರಿಯುಮುತ್ತಿದರು ನಿ
ಶಿತಾಸ್ತ್ರದಿಂ ಮುಚ್ಚಿದರು ಗಗನತಲದಿಕ್ಕುಗಳ ಕಾಣದೊಲು,ಬಳಿಕದುರ್ಮು
ಖದಮನನೆಸುರರಾಟೋಪವನು ನೋಡಿ ವಿಸ್ಮಿತನಾಗಿ ನಿಜಧನುಚ್ಯುತವಿಶಿಖ
ನಿಚಯದಿಂದ ಸುರಬಲವೆಸೆದ ನಿಶಿತಾಸ್ತ್ರಗಳ ತರಿದು ಚತುರಂಗದೊಳಹೊ
ಕ್ಕು ಚಾಪವನಿಳುಹಿ ಶತಪರ್ವದಂತಿರುವ ದಿವ್ಯಗದೆಯನು ಧರಿಸಿ ಗಗನಚರ
ಯಾನದಿಂದಿಳದು ನಾನಾಗತಿಗಳಿಂದ ತಿರುಹುತ್ತ ಕರಿತುರಗ ರಥಪತ್ತಿಗಳನೊ
ರಸುತ್ತೈತರುತಿರಲು ಖಲಚಮೂನಿವಹವಡಗೆಡೆದು ಶೋಣಿತತಟನಿಯುಕ್ಕಿಹರಿ
ದುದುದಿತಿಜರೆದೆಯಾರಿ ರಣರಂಗದೊಳು ಕೈದುಗಳ ಬಿಸುಟು, ಕಾಂದಿಶಿಕರೊ
ಲು ದಿಕ್ಕುದಿಕ್ಕುಗಳನಾಶ್ರೈಸಿ, ಶಿವಶಿವ! ಮಹಾದೇವ! ಮಾನುಷನೇ ಈ ಪು
ರುಷನೆಂದೆನುತ ತಲ್ಲಣಿಸೆ, ನೋಡಿ ಖರಯೂಥಪರು ಖತಿಯಿಂದ ಶರಗಳನು
ಬೀರಲವಗಣಿಸೆಯ್ಯದೆ ಶಿಡಿಲತೆರನಂತೆ ಬಂದೆರಗುವನಿತರೊಳು,ವಜ್ರದಂಷ್ಟ್ರ
ಮಹೋಲ್ಕರತಿ ಜವದಿನುಯದತ್ತಶೂಲ; ಶಕ್ತಿಗಳನ್ನು ಕರಗಳಲಿ ತೂಗಿಬಿಡ
ಲಶನಿಯಂತಾರ್ಭಟಿಸುತಂಬರದಿ, ಯುಗವಿಗಮಯುಗಶೀರ್ಷನಂತೆ ಬರುತಿರ
ಲು, ಗಗನವಹಹ! ಎನುತೊರಲುತಿರೆ, ತರುಣಿಶಶಿಶೇಖರನವರತನೂಭವ
ನಾದ ಧಶಶತಾಯುಷನು ನಿಜಗದೆಯೊಳವುಗಳತರಿದು ಬಿಸುಡುತತಿಜವದಿಂದ ಲಂ

ಘುಸಿ, ಮಹಾಗದೆಯನವರರಥಗಳಮೇಲೆ ಪ್ರಹರಿಸಲು ತದ್ಭುಜಾದಂಡ ಪರಿಮುಕ್ತಮಹದಾಯುಧ ಪ್ರವರ ಭೃಶಚೂರ್ಣೀಕೃತಾತ್ಮೀಯರಥಘನಕಳೇಬರರಾಗಿಯುಮನಗರಿಗವರ್ಪೈದೆ, ಖರನು ನೋಡಿ, ಬಲುರೋಷಪರವಶನಾಗಿ, ದುರ್ಮುಖಾರಿಯ ಸಮೀಪವನ್ನೈದೆ, ಬರುವಸೌರಂಭಮಂಕಂಡು, ಮಾತಲಿನುಡಿದ ನೆಲವೋ ರಾಜಕುಮಾರ ! ದುರುಳ ನಿಜಯೂಥಪರಮರಣಜನಿತವಿಷಾದದಿಂ ಬರುವನಷ್ಟಭುಜವೃಷ್ಟಿಗಮನಾವಧಿಕದೀರ್ಘಪೀವರಕಳೆಬರ,ಇವನದಂಷ್ಟ್ರಾಗ್ರರುಚಿವೃಷ್ಟಯುಗವಿಗಮ ಪವನಪರಿಧೋದೂಯಮಾನವಿಲಯಾರ್ಣವಾವರ್ತಸದೃಶತತಾಸ್ಯಗರ್ತವನು ನೋಡು, ಯದ್ಭಯದಿದಿಕ್ಪತಿಗಳೆದೆವೊಡದು ರಣರಂಗಮಂ ತೊರೆದು ನಿಜಪದವಿಗಳ ಖಲನಿಗೊಪ್ಪಿಸಿದರೆಲೆ ತಾತ ! ತವವಿಕ್ರಮಾವಸರವಿದು ಕೇಳೆನಲು, ನಗುತ ದುರ್ಮುಖದಮನನತಿಜವದಿ, ಗಗನಚರಯಾನದೊಳು ಕುಳಿತು ನಿಜಚಾಪವನು ಕರದಿ ಪಿಡಿವನಿತರೊಳು ದಿತಿಜಪತಿಯತಿರಭಸದಿಂದೈದಿ, ನಿಶಿತಶರನಿಚಯಗಳ ಕೆದರು ತೆಲವೆಲವೊ ಮಾನುಷನೆ ! ನೀನ್ಯಾರು ತಮ್ಮೊಡನೆ ಕಾದಲು ಕಾರಣವದೇನೆನುತನವಜಲದನಿಷ್ಠುರಧ್ವಾನದೊಳು ಘುಜೇಸಲು, ಕೇಳಿ ಕೋಸಲಪತಿಯು ಖರನಶರನಿಕರಗಳ ತರಿದೆಲವೋ ಖೂಳ! ಖಲಕುಲವನಾನಲ ತಾನು, ಕಾರಣವುತಮ್ಮ ಪತಿಯಾದ ಶತಮಖನಾಜ್ಞೆಯುಳಿಯುವರೆ, ನೀನು ಸುರಪತಿಯ ಶರಣಾಗತನಾಗದೆ, ಬರಿದೆಗರ್ವದೊಳೆನ್ನ ನುಡಿಯ ತಾತ್ಪರ್ಯವನು ತಿಳಿಯದವಿವೇಕದಲಿ ಸೆಣಸಿದಡೆ, ತ್ವತ್ಕುಲವನು ಉರುಹುವೆನು ಶರಹುತಾಶನ ಮಹಾಜ್ವಾಲೆಯೊಳು, ದುರುಳ ! ದುರ್ಮುಖನ ಸಂತತಿಯವೊಲು ಕೇಳೆನಲು ; ಖರನು ಶ್ರುತಿಪಥವತದ್ವಚನನಿಚಯಗಳೈದೆ, ರೋಷಯುಗಶೀರ್ಷಗಾಜ್ಯಾಹುತಿಯತೆರದಿಂದಲುದುರಿದವು ಕಣ್ಗಳಲಿ ವಿಸ್ಫುಲಿಂಗಗಳಂಗಕಂಪಿಸುದುದುಅಸುರಪಲ್ಗಡಿದು, ಬೊಬ್ಬಿರಿವುತೆಲೆಮರ್ತ್ಯ! ಕೇಳಾವದತೀಕ್ಷ್ಣದಿ ತವಗಳವ ತರಿದುದರ ದೊಳಗಿರುವ ಶೋಣಿತವನೀಂಟುವೆನು ಕರದಿತಿರುಹುತಿರೆ, ತದ್ಭ್ರಮಣರಭಸರಯರುಚಿಗಳಿಂ ಭುವನತಲ್ಲಣಿಸಿದುದು, ಮಾತಲಿಯು ಮನದೊಳಾಲೋಚನೆಯ ಮಾಡುತಿರೆ, ರುರ್ವರಿಯು ಖಲನವ್ಯವಸಾಯಮಂ ನೋಡಿ ಸತ್ವರದಿ ಮೂಡಿಗೆಯೊಳೊಂದಾಶುಗವತೆಗೆದು ನಿಜಚಾಪದೊಳುಪೂಡಿ ಪೂರಾಯದಿಂ ಶೆಳೆದುಬಿಡಲು, ಉರಿಯನುಗುಳತ್ತ,ಮಾ

ದರಿಯುಕರವಶರಸಹಿತ ಕತ್ತರಿಸುತಂಬರಕೆ ಜಗಿಯುಲು, ಅಸುರಾಧಿಪತಿರೋ
ಮೂರ್ಛಿತನಾಗಿ ಸುಡಿದೆಲವೆಲಪ್ರೋ ನರಪಶುವೆ ! ಕೇಳೆನ್ನಕರಕೃಂತನವು
ನ್ನಕಂವರವ ತರಿವುದಕೆ ಬೆಲೆತಿಳಿಯುಲವು ಮುಸುಕಿದವು ಗಗನತಲದಿಕ್ಕುಗಳ
ಮಾತಲಿಯು ಮರ್ಮತಾಡಿತನಾಗಿ ನೊಂವನಡಿಗಡಿಗೆ, ನೃಪತಿಲಕ ! ಕೇಳ್ಮಂತ
ಮಯುಕವಚದಿಂದಚ್ಛಿದ್ಯಮಾನಶತಪರ್ವಸಮಚಂಡ ರಿಪುಕಾಯುವನು ನೊ
ಯಿಸಿವವ ಸುರನಿಶಿಲೀಮುಖವ್ರಾತಗಳು, ಬಳಿಕ ಶುರ್ಪರಿಯು ಮಹದಾಗ್ರ
ದಿ ಭರ್ಗನೊಲು ವಿಗ್ರಹದೊಳುಗ್ರನಿಜಚಾಪವರ ವಿಸೃಷ್ಟತಾಶುಗ ಪರಂಪರೆ
ಳಿಂದಿತಿಜಶರತತಿಗಳನು ತರಿದವನ ಚಂಡಕೋದಂಡಗಳ ಖಂಡಿಸುತ ರಥ್ಯಗ
ನಡೆಕೆಡಹಿ, ಸೂತನಸುವನು ನೀಗೆ, ವಿರವಿರಥನಾಗಿ, ಮತ್ತೊಂದು ತತ್ಸದೃಶ
ಥದಿಂದ ಬಂದೊದಗುವನಿತರೊಳು ಸಂಕ್ರಂದನನಖಿಲವೃಂದಾರಕಾರವೃಂದದೊ
ಡಗೂಡಿ ಮಹದುಜ್ವಲದ್ಯುತಿಯಿಂದ ಮೆರೆಯುತ್ತೈರಾವತಸ್ಕಂದದೊಳು ಕುಳಿತ
ದಿಕ್ಪತಿಗಳೊಡವೆರೆದು ರಣರಂಗದುಪಕಂಠಮಂ ಪರಮವೈಭವದಿಂದಲೈದಿದ
ಪಾರಗುಣಸಿಂಧು ವತಿಚಿತ್ರತರವಿವಿಧವಾದ್ಯನಿನಾದ ಸೂಚಿತ ನಿಜಾಗಮನನಾಗಿ
ತರುವಾಯ ಜವದಿಂಸುನಾಸೀರದಾಕ್ಷಾಯಣೀ ಪರಮಕರುಣಾಮೃತ ಸಾರ
ರ್ಧಿಶಮರ್ತ್ಯರೂಪ ಮಂದಾರಭೂರುಹನವಲಂಬಿಸಲು, ದಿತಿಜಪೃತನಾಧಿಪ
ನೋಡಿ ಖತಿಯಿಂದ ಸುರರೊಡನೆ ಕದನವಮಾಡಲುದ್ಯದಾಯುಧರಾಗಿ ಸತ್ವ
ದೊಳೊತ್ತಿಬರೆ, ವೃತ್ರರಿಪುರೋಷದಲಿ ರವಿಜತ್ತಪರತರದ ಸುರರಭಿಮುಖವ
ಗಿ ಕಳುಹಲು;ಅವರಗಣಿತಾತ್ಮೀಯಪರಿವಾರಯುತರಾಗಿ ಖಲಸೇನೆಗೆದುರಾಂತ
ನಿಲಲವನಿಪತಿ ! ಕೇಳು ದಿತಿಜಾಸುರರಿಗಾದುದು ಮಹತ್ಕದನವಿತ್ತ ಕ್ರವ್ಯಾದ
ತಿ ನೋಡಿ ಮಂತ್ರಾಸ್ತ್ರಗಳ ಮಸೆಗಲು, ಸಹಸ್ರಾಯು ಲಾಘುವದಿ ಪ್ರ
ಸ್ತ್ರನಿಕರದಿಶಾಂತವನು ಮಾಡಿ ಬೊಬ್ಬಿರಿಯುಲಸುರಾಧಿಪತಿಕನಲಿ ಕಡುರೋ
ಷವಲಿ ಚತುರಾನನಾಸ್ತ್ರವನು ಚಾಪದೊಳು ಪೂಡಲು, ಚರಾಚರಗಳೆಲ್ಲ
ಲ್ಲಣಿಸಿದುದು ಬಿಡಲಮರರೆದೆಯೊರೆ ನೋಡಿ ಕೋಸಲಪತಿಯುಯೋಚಿಸಿತ
ಸ್ತ್ರವನೆಪೂಡಿ ಬಿಡಲು ಪಶಾಂತಮಾಗಲು ಮಹಾಸ್ತ್ರಬಳಿಕೂರ್ಧ್ವಕೇಶಿಯ
ನುಮನಾರ್ಭಟಿಸಿರೋಷದಲಿಸುಡಿದನೆಲೆಬಾಹುಜನೆಧೀರ:ಹೆಮಾದೊಡೆಮುನೊ
ಡಿವನು ತರಪರಿಸಿಕೊಳ್ಳೆನುತ ಕವಿವತ್ತಘೋರಘಂಟಾಘಟಿತಶಕ್ತಿಯನು ಕ

ದಲಿತರೂಗಿಬಿಡಲುರಿಯನುಗುಳುತ್ತ ಲಯಕಾಲಕುಪಿತ ಕೃತಾಂತಕಾಲವಿಪುಲ ನಿಟಾಲನಯನಹುತಭುಗ್ಜ್ವಾಲೆಯಂದದೊಳುಬರುತಿರಲು ಸುರರುಹೋಎಂದು ಮರುಗುತ್ತಿರಲು ಮಾತಲಿಯುನೋಡಿ ಮರದನುತನುವನನಿತರೊಳು ರುರ್ದ್ವರಿಯು ತ್ವರೆಯೊಳೈಂದ್ರಾಸ್ತ್ರವನುಧನುವಿನೊಳು ಸೆಳೆದುಬಿಡಲಾಗ ಸದಿಶಕ್ತಿಯನುನಿಮಿಷದಲಿ ಭಸ್ಮವನುಮಾಡಲವನೋಡಿ,ಖಳಮನದೊಳಗಜೇಯನಿವನ್ಯಾರೊ?ನರನಲ್ಲ,ಮುರಹರನೋ? ಮೃತ್ಯುಂಜಯನೋ? ಎನುತನಾನಾವಿಧದಿಯೋಚಿಸಿತಮನ್ನತಿಯಸಹಿಸಲಾರದೆ,ಸಪ್ತಕರದೊಳುಗದಾಸಿ,ಮುದ್ಗರ, ಪರಿಘ, ಪರಶು,ತೋಮರಪಾಶಗಳಧರಿಸಿ ರಥದಿಂದಿಳಿದು ಪಾದಚರನಾಗಿಖತಿಯಿಂದಬರುವಸನ್ನಾಹಮಂನೋಡಿ ಮಾತಲಿನುಡಿದನಹಹ! ರಾಜಕುಮಾರ! ಖಲನಂಧಕಾರಮಯವದನಮಂಡಲದಲ್ಲಿ ಸಮವಿಷಮಗತಿಗಳಿಂದುದಯಿಸಿದ ಕುಜಶುಕ್ರರಂತೆತೋರುತ್ತಿರುವ ನಯನಗತ ತಾರಗಳಿಂಭಯಂಕರವಾಗಿ ರಥವನುಳಿದಡಿಗಳಿಂಬರುವವ್ರೋಲು ತೋರುತಿದೆ ಎನೆಸಹಸ್ರಾಯುಷನು ಮನದೊಳು ಮಹಾಸ್ತ್ರವನು ತೊಡುವೆನೆನುತಾಹವದಿಯೋಚಿಸಿ ಹಯೂನವನು ರಣವನೈದಿದಬಳಿಕ ಬಿಡಲುತೊಡರಿಲ್ಲೆನುತ ನಿಶ್ಚಯಮಾಡಿ ಮೋಣಿವನಳಿಯದಿರಲವನು ಬರುವದಿಲ್ಲದರಿಂದಲದಕೊಂದುಪಾಯವನು ಮಾಡಿನೋಡುವೆನೆನುತ, ನಿಜಶರಾಸನದಲ್ಲಿ ಹೈಮವತಿಯುಗೈದಮೋಹನ ಮಹಾಸ್ತ್ರವನು ಪೂಡಿಬಿಡಲು; ಅವನಿಪತಿ!ಕೇಳುಮಹದಾಶ್ಚರ್ಯವನು ಖರಪ್ರಮುಖಖಲಸೇನೆನಿದ್ರಾಂಗನಾವೇಳದೊಳು ಮೈಮರೆದು ಮಲಗಿಮುದು, ಕರಗಳಿಂಕೈದುಗಳುಜಗುಳಿ ನೆಲಕುರುಳಿದುದು,ಕನಸಿನಲಿರುರ್ವರಿಯುಕಂಡುಹಮ್ಮೈಸುವರು, ದಾರಯ,ಗಸ,ಪಿಬ,ಛಿಂದಿ, ಜಹಿ, ಮಾರಯ,ವಿಖಿಂದಿಯನುತವನಿಪತಿಪಟುಭಟರು ಕನವರಿಸಿಹಲುಬುವರು ಖರನು ಗಾಢಸುಷುಪ್ತಿಯಿಂದನಿಶ್ಚಲನಾಗಿಮೃತನಂತೆ ರಥದಲ್ಲಿ ಮಲಗಲು ;

ಇತ್ತ ಅಮರಾವತೀ ನಗರದೊಳು ನೃಪ! ಮಹೋತ್ಪಾತಗಳು ಧರಧರದೊಳುದಯಿಸಲು ಹರಿಮುಖನು ನೋಡಿ ರಣರಂಗದೊಳುದನುಜರಾಟೋಪವಿಸ್ಫೋಟನಾರವಗಳುಪಶಾಂತವಾಗಿರೆ, ಮನದಿ ಯೋಚಿಸಿ ಸಿಶಾಟದೊಳು ಓಟ್ಟಿಭ ಮರಾಳರೆಂಬನುಚರರ ಕಳಿದು ರಣರಂಗದೆಡೆಗೈದಿ, ತತ್ರತ್ಯ ವೃತ್ತಾಂತಮಂ ತಿಳಿದು ಬಂದೊರೆವುದೆನುತೊರೆಯೆ, ರಾಕ್ಷಸರವರು ಪಕ್ಷಿರೂಪವ

ತಾಳಿ ತತ್ಕ್ಷಣದಿ ರಣಾನಕನಿಸ್ವನಮಂ ಗಗನದೊಳುನಿಂದು ನೋಡಿ ವಿಸ್ಮಯದಿಂದ ಬಂದು ತುರಗಾಸ್ಯನಡಿಗೊಂದಿಸುತ ನುಡಿದನೆಲೆ ಜೀಯಾ! ಖಲಸೇನೆ ಖರಸಹಿತ ವೈಸುರೆಮನಿದ್ರಾಂಗನಾಮೇಳದೊಳು ಮುಳುಗಿಹುದು ಮೃತರಂತೆ, ತಿಳಿಯದದು ಜೃಂಭಣಾಸ್ತ್ರವೋ? ಮಾರಣಾಸ್ತ್ರವೋ? ಮೋಹನಾಸ್ತ್ರವೋ? ವಾಯುವ್ಯೋ? ಮಹಾಭಾಗ! ತತ್ಪ್ರದೇಶದ ಗಗನದೊಳು ವಿರೂಪದೊಳೈದಲಾವಯೋರಪಿ ಮಹಾತಂದ್ರಿ, ತಲೆದೋರಲುರುಸಾಧ್ವಸದೊಳೈದಿದೆವು ನಿಲ್ಲದತಿ ಜವದಿಂದ, ನಲ್ಲ! ಬಹುಮಾತಿನಿಂದೇನು ಬಂಧಿಪನುನರನಲ್ಲ, ಬಲುಬಲ್ಲಿದನು, ಜೀಯ್ಯ! ಕೇಳವರಿಂದ ಪ್ರಕೃತದಲ್ಲಿ ಕಲಹವನು ಬಿಟ್ಟು ನಾಕನತೊಟ್ಟು ಸಂಧಿಯನು ಮಾಡುವುದೇ ಲೇಸು, ಸರ್ವಜ್ಞನಹ ನಿಂನಡಿಗೆ ಬಿನ್ನೈಸೆ ತಾವು ಶಕ್ತರೆ, ತವಪಿತೋರಿದರ್ಥವನಡಿಗೆ ವಿದಿತಮಾಡಿರುವೆನೆನುತೊರೆಯೆ, ತುರಗಾಸ್ಯನದ ಕೇಳಿ ಕಡುರೋಷದಲಿ ಚರರಧಿಕ್ಕರಿಸುತೆಲವೊ! ದಿತಿಜಾನ್ವಯದಿ ಜನಿಸಿ, ತುರಗಾಸ್ಯನಡಿದಾವರೆಯನೋಲೈಸಿ, ಕಡೆಗೆ ನರನಾರ್ಭಟಗೆ ಬೆದರಿ ತನಿಗುಪದೇಶವನು ಮಾಡಲೆಳಸಿದಿರಿ, ಛಟ ಛಟೆಲವೆಲವೋ ದಿತಿಜಾಧಮರ! ತೊಲಗಿ ತೊಲಗೆನುತ ನೃಪತಿಲಕ ಘನರೋಷದಲಿ ಜರಿದು, ನಿಜಸೂತನಂ ಕರದನೆಲವೊ! ಮಾನುಷನ ಪೌರುಷದನಾಹವದೊಳಿಂದುತಾಂ ನೋಡುವೆನು, ರಥವನತಿಜವದಿಂದ ತರುವುದೆನುತೊರೆದು, ಪೃತನಾಧಿಪನ ಅಖಿಲ ಸೇನಾಸಹಿತ ತೆರಳಲಪ್ಪಣೆಗೊಡಲು, ಮುಗಿದು ಕರಯುಗಳಮಂ, ರಣರಂಗಚತುರಚತುರಂಗಸಹನಗರದಿಂ ತೆರಳೆ; ಜಯತುಂಡನತಿ ವಿತತ ಮಹದುನ್ನತಸ್ಯಂದನವನೇರಿ, ತತ್ಸಮಯ ಸಮುಚಿತ ರಕ್ತಗಂಧಮಾಲ್ಯಾಭರಣದಿಂ ಭಯಂಕರನಾಗಿ ನಗರಮನ್ನುಳಿದು ಖಳ ಪರಮ ವೈಭವದಿಂದ ರಣಭೂಮಿಯನ್ನೈದೆ, ಭುವನತಲ್ಲಣಿಸಿದುದು, ದಿವಿಜರೆದೆ ನಡುಗಿದುದು, ಧರಣಿಪತಿ! ಕೇಳು, ಹರವರಸಮುದ್ಭವನನಲಕುಂಡಜನನಪಾರ ರಣಭೌಂಡಖಲಸೇನೆಯನು ಕಂಡು, ವಿಸ್ಮಯದಿಂದ ಖಂಡಪರಶುವಿನ ಪದಪುಂಡರೀಕವನೆನೆದು, ಚಂಡರಿಪುನೈಜಕೋದಂಡವನು ಪಿಡಿದು ರಣಪಂಡಿತನಸಂಖ್ಯಾತ ತುಂಡಭುಜ ನಿಕರದಿಂ ದಂಡಧರನಂಜುವವೋಲು ಗಂಡುಗಲಿದನುಜನುಚ್ಚಂಡ ನಿಜಗಾತ್ರದಿಂಗಗನದಿಗ್ಮಂಡಲವನಾಕ್ರಮಿಸುತ್ತೈತರಲು; ನೋಡಿ ಕೌಸಲಪತಿಯು ಮನದೊಳಾಲೋಚನೆಯಮಾಡಿ

ಮಾತಲಿಯೊಡನೆ ನುಡಿದನಾರ್ಯ! ಖರಾಪ್ತವಿವಿಧವಿಷಮವಿಷಾದ ವಿಕಲಿತಮತಿಯಾದ, ವಿಬುಧವಲ್ಲಭನ ನಿರ್ಘಂಧದಿಂದ ಸಖಿನುತಪರಮ ಘೋರನೃಶಂಸ ಕರ್ಮಕರುಣಾಭಿಮುಖ ಸಪ್ತಮುನಿ ಸಮುದಾಯ ತೀವ್ರದಾರುಣರೋಷ ಸಪ್ತಹಸ್ತನೇ! ಇಂತು ಸಕಲಭುವನನೋದ್ವೇಗಕರಕಠೋರಾಕಾರವನು ತಾಳಿದಂತಿರುವ ದಶಶತಾನನನ ಪರಿವಾರಸಹ ನಿಮಿಷಮಾತ್ರದಲಿ ಮಮ ಶರಾಸನಗಳಿತ ವಿಶಿಖಹುತಭುಗ್ಜ್ವಾಲೆಯೊಳಗುರುಹಿ ಭಸ್ಮವನು ಮಾಡುವೆನು ನೋಡೆನುತ ನುಡಿಯುತಿರಲು ;

ಅನಿತರೊಳು ದಿವಿಜಪತಿ ದಿತಿಜನಾಶಕರಾಜಕುಮಾರನಿರುವಯಾನಾಭಿಮುಖವಾಗಿ ವಿಷವೇಗದಿಂತೊಡಗಿಬರುತಿರೆ, ನೋಡಿ, ಕಿಂಚಿದಾಲೋಚನೆಯ ಮಾಡಿ ಮಾತುತನೊಡನೆ ನುಡಿದನು, ಮಹಾಭಾಗ! ವಿಗ್ರಹದಲೀತನತ್ಯುಗ್ರ ನಕ್ತಂಚರರ ನಿಗ್ರಹಿಪನೆಂತೋ ತಾನರಿಯೆನದನಾದೊಡೆಯು ಗಿರಿಜೆಯಾಡಿದ ನುಡಿಯು ವಿಪರೀತವಾಗುವದೆ ನೋಡುವೆವದಂತಿರಲಿ, ಪ್ರಕೃತದೊಳು ತದಭಿಮುಖ ಬರುತಿರುವ ಖಲಸೇನೆಗೆಮರಾಂತು ಯುಗಾನನೊಡೆವೆರೆದು, ನಿಜನಿಖಿಲ ಪರಿವಾರದಿಂ ತಡೆಯುವುದು ನೀನೆನುತ ನುಡಿಯಲು ; ನಿಲಿಂಪಪತಿಯು ಪೊಡವಿಪತಿ! ಕೇಳು, ಸಡಗರದೊಳನಿಲಾನಲರು ತೆರಳಿ ನಿಜಯೂಥಪತಿ ನಿಕರದಿಂಬೆರಸಿ ಖಲಸೇನೆಗೆದುರಾಂತುನಿಲ್ಲೆ ಪರಮದಾರುಣ ಕದನಮೆಸಗಿದುದು, ವಸುಮತೀರಮಣ! ಕೇಳಿತ್ತ ಹಯವಕ್ತ್ರನತಿ ಸತ್ವರದಿ ಖರನೆಡೆಗೆಬಂದು ಖಲಸೇನೆ ಸಹ ಮಲಗಿರಲು, ಗತನಂತೆ ಮೈಮರೆದು ನೋಡಿ ವಿಸ್ಮಿತನಾಗಿ, ನಾತಿ ದೂರದೊಳಿಂದುಮಂಡಲದತೆರದಿಂದ ಬೆಳಗುವ ವಿಮಾನದೊಳು ಪರಮ ತೇಜೋಮಯದಿ ರಾಜಿಸುತ್ತಿರುವ ನರರಾಜತನಯನಂ ಕಂಡು, ಸಕಲ ಭುವನೋದ್ವೇಗಕರನಾದ ರಕ್ಕಸನು ಮನದೊಳದನೇ ತನ್ನ ಮುರಿದು ನುಂಗುವ ಮೃತ್ಯುವೆನುತ ನಿಶ್ಚಯಮಾಡಿ ನಡುಗಿದನದೆಂತು, ನೃಪತನಯನಾಶ್ವಾಸ್ಯನುರುನಯನನಿಕರಗಳಿಂಗೆ ತೋರಿದನೋ? ಹುಬಲ್ಲ, ಸುಭಗ! ತರುವಾಯ ಸುರಮಂಡಲದಿದೂರದೊಳು ಮೆರೆಯುತ್ತೈರಾವತಸ್ಕಂಧದಲಿ ಕುಳಿತು, ಶಶಿಮಂಡಲಮನೋಜ್ಞ ಪರಿಲಂಬಮಾನ ವಿಚಿತ್ರ ದಿವ್ಯಮುಕ್ತಾನಿಕರರಂಜಿತಪ್ರಾಂತಾತಪತ್ರದಿಂದನಿಮಿಷರನಯನಗಳಿಗಾನಂದಕರನಾಗಿ ಸುರಪತಿಯು ಪರಮವೈಭ

ವದಿಂದ ಮೆರೆಯುತಿರೆ, ನೋಡಿ ಖಲಕ್ರೋಧಮೂರ್ಛಿತನಾಗಿ ನುಡಿದನೆಲೆ ಸೂತ! ನಿಜ ರಥವನಾನರನೆಡೆಗೆ ನಡೆಸು ಪುಡಿಮಾಡುವೆನು ನಿಮಿಷ ಮಾತ್ರ ದೊಳೆನುತ ಗಳಹುತಿರಲು ;* * * * *

ಇತ್ತ, ನೃಪ! ದಶಶತಾಯುಷನುಸಮ್ಮೋಹನ ಮಹಾಸ್ತ್ರೋಪಸಂಹಾರವನು ಮಾಡಿಕೊಳಲು ; ತಕ್ಷಣದಲ್ಲಿ ನಿಖಿಲ ಖಲಸೇನೆಖರಸಹಿತ ಕಣ್ದೆರಮ ಕಡುಲಜ್ಜೆಯಿಂ ಕೈದುಗಳ ಮೆಲ್ಲಮೆಲ್ಲನೆ ಪಿಡಿದು ಕರಗಳಲಿ, ಭೂಯೋಪಿ ಕಲಹವನು ಮಾಡಲತಿರೋಷದಲಿ ತೊಡಗಿಮದು, ಬಳಿಕ ಸುರನೆಮ್ದ ಮಹದಾಗ್ರಹದಿ ಯುದ್ಧವನುಮಾಡೆ, ಸನ್ನದ್ಧನಾಗಿರುವ ಹಯವಕ್ತ್ರನಂ ಕಂಡು ಬಲುಖಿನ್ನನಾಗುತಲೀರ್ವರನ್ಯೋನ್ಯ ಮುಖಗಳನು ನೋಡಿಕೊಳುತಾಗಲಾಲೋಚನೆಯಮಾಡಿ ಖರನಧಿಕರೋಷಾಮರ್ಷದಿಂದ ಪರವಶನಾಗಿ ಧರಿಸಿ ಶರಚಾಪಗಳನಿರಿಸಿ ತುರಗಾಸ್ಯನಂ ತರುಬಿ ನಿಜರಥವನಾ ದಶಶತಾಯುಷನ ಸಂಮುಖಕೆ, ಶರವರ್ಷಮಂ ಸುರಿಯುತೆಲವೆಲವೋ ಮಾನುಷನೆ! ರುರುದುರ್ಮುಖಪ್ರಭೃತಿಗಳ ತೆರನಂತೆ ತಿಳಿಯದಿರು, ರಿಪುವಿಪಿನದಳನನಿಶಿತಕುಠಾರತಾನಹೆನು, ನಿಮಿಷದಲಿ ನಿನ್ನ ಶಿರವರಿದು ಭೂತಕೆ ಬಲಿಯಮಾಡುವೆನು ನೋಡೆನುತ ಘರ್ಜಿಸಲು ; ಅವಂಕೇಳಿ ಕನಲಿಕೋಸಲಪತಿಯು ನಿಜಶರಾಸನಗಳಿತ ವಿಶಿಖನಿಚಯುಗಳಿಂದ ತರಿದವನ ಶರಗಳಂ ನುಡಿದನೆಲೆಮೂಢತಮ! ಕುಲಸಹಿತ ನಿನ್ನನೀಕ್ಷಣದಿ ದಹಿಸುವೆನು ನೋಡಾದಡೆನುತವನಿಪತಿ! ಕೇಳುಮಯಶರವ ನಿಜಕರದಿ ಮೂಡಿಗೆಯಿಂದ ತೆಗೆಯೆ, ಶಿಡಿಲಂತೆ ಘುಡುಘುಡಿಸುತಡಿಗಡಿಗೆ ಕಿಡಿಘುಡಣಿಸಲ್ಕೊಡನೆ ಕೋದಂಡಕಳವಡಿಸೆ, ಜಗವೆಲ್ಲ ತಲ್ಲಣಿಸಿದುದು, ದಿಕ್ಕುದಿಕ್ಕುಗಳಲ್ಲಿ ಭುಗಿಭುಗಿಲುಭುಗಿಲೆಂದು ದಹನನಾವರಿಸಿದುದು,ಕರಿಘಟಾಕುಂಭಗಳು ಚಟಚಟಚಟನೆಸಿಡಿದು ನೆಲಕುರುಳಿದವು, ದಿತಿಜರೆದೆಬಡದುಹಂಮ್ಮೈಸುತತಿಭೀತಿಯಿಂ ಗಳಗತಾನಿಲರಾಗಿ ಮುಂದೆತಮಗೇನುಗತಿಯಂದು ಕೂಗಿದರು, ಕಾಚೆರ್ಗೆಯು ಗಗನಾಂಗಣವನಡರಿ ಘನತಿಮಿರವಾವರಿಸಿ ಕವಿದುದು, ಖಲಾಬಲೆಯುರವುಹಾಗರ್ಜಗುಳಿದವು,ಮಾತಲಿಯು ನಿರುಪಮಪ್ರೌಢಪರಿತಾಪ ಗಳಿತೋತ್ಸಾಹನಾದನು. ಅನುರಾಧಿಪಪ್ರಮುಖರುರುಸಾಧ್ವಸದಿ. ಮನದೊಳೆತ್ತಣತಾಪವೆನುತ ಮನದೊಳಾಲೋಚನೆಯುಮಾಡಿರುವುದು, ತುರುಗಮುಖನೋ

ಡಿ ಮಹದಸ್ತ್ರಮಂ ದ್ವಿಸಹಸ್ರನಯನಗಳಮುಚ್ಚಿ ವೈಮರೆವನು. ಅವನೀಶ! ಕೇಳಂತವನ್ಮಲ್ಲದೆಯುಂ ಖರಾಸುರನಖಿಲಕ್ಷಣರುಚಿರಪ್ರಪಂಚವೊಂದಾಗಿ ನಿಜಸ್ವಭಾವವೊಳೇಕವೇಕವನುನ್ನುಳಿದುಪರಿಣಮಿಸಿದಂತೆ, ಉಪಪ್ರೋದ್ಯುಕ್ತಸಕ್ತಂ ಚರಪರಿಷದುತ್ಪಾತಾಲಾತದಂತೆ, ಭ್ರಾತೃಹಾಹನನಚರಣದುರಪತ್ಯಕಾಮನಾದ್ಭುತವೋಪನಾಕೃತಿ ಕ್ರವ್ಯಾದವಮಾಸಿಸೀವಿವಿಧಬಿಬ್ಬೋಕನಿಚಯನಿಷ್ಣ ಪರಮಾಸುರಾಗಕೃತತತ್ಸಮಾಗಮಮಾತ್ರವಿಭ್ರಂಸಿತಾಮಹರ್ಷಿವರಚಿರೋಪಾರ್ಜಿತಾತ್ಯಂತಮಸ್ಸಹತಪಃಪ್ರಕರಪರಿಪಾಕದಂತೆ, ದುರ್ಮದಸಜಾತೀಯದೈತೇಯಸಮುದಾಯಕೃತಚಿತ್ರ ಪರಿಹೇಳನೋಜ್ವಲಿತಪ್ರಬಲಪ್ರಭಾವದುರ್ಧರ್ಷಾಮಯಾಮರ್ಷವಿಷಾದಕಲಿತ ದುಸ್ಸಹಮಹಾರೋಷವೈಶ್ವಾನರೋಪಾತ್ತಘೋರಾವತಾರದಂತೆ, ಮತ್ತಮನ್ನಹಮನುಚಿತಾತಿದಾರುಣಕರ್ಮಪರಂಪರಾಸಮಾರಂಭರಸಿಕರಾತ್ರಿಂಚರಕುಲಕಬಳನೋದ್ಯುಕ್ತಕಾಳರಾತ್ರಿಪ್ರಸಾರಿತಕಠೋರರಸನೆಯಂತೆ, ಸಕಲ ಲೋಕಭಯಂಕರವಾಗಿಜ್ವಲಿಸುತ್ತಿರುವ ಚಂಡಾರಿ ವಿಪುಲದೋರ್ದಂಡವಿಧೃತಪರಮೋಚ್ಚಂಡ ಮಹದರಾಕ್ಷಸಪ್ರಕಾಂಡಮಂ ನೋಡಿ ದೈತ್ಯನಿತಿಕರ್ತವ್ಯತಾಮೂಢನಾಗಿ ಮನದೊಳಾಲೋಚನೆಯಮಾಡುತಿರಲು;

ಅನಿತರೊಳು ಸೆಳೆದುಗಿರಿಭಾರಮಹದಸ್ತ್ರಮಂರುರ್ವರಿಯು ಬಿಡಲು, ತದ್ರಭಸವಿಧ್ವಂಡದುರುಬೆಸುಗೆಯನು ಬಿಡಿಸುವಂತೆಸಗಲುರಿಮಸಗಿಬರೆಸಹಿತಖಲಸೇನೆಯನು ನಿಮಿಷದಲಿ ಭಸ್ಮವನುಮಾಡಿ, ಭೂಯೋಪಿ,ನೃಪತನಯನನಿಷಂಗದೊಳು ಶಯನವನುಮಾಡಿದುದು, ಮಯತಪೋಮಹಿಮೆಯನು ಪಾರ್ವತೀರಮಣನೇ ಬಲ್ಲ, ತುರುಗಾಸ್ಯನನ್ನುಳಿದು ಮಿಗಿಲಾವಖಲರೆಲ್ಲ ಭಸ್ಮೀಭೂತರಾಗಲು, ಮಹಾರಾಜ! ಸುರರು ಜಯಜಯಜಗತ್ರಾಣ, ಜಯದಿತಿಜಕುಲಕಾಳರಾತ್ರಿಯೇ ಮಹಾಪುರುಷಎಂದೆನುತ ಕೊಂಡಾಡುತ್ತಿರಲು, ಅಮರಪತಿಯು ನೋಡಿ ನೃಪತಿಲಕ! ಕೇಳ್ಪರಮ ವಿಸ್ಮಯದಿಂದ ಬೆರಳನೊಲದೊಲೆದು ನುತಿ ಮಾಡಿದನು.

ಬಳಿಕಹಯವಕ್ತ್ರನತಿ ಸತ್ವರದಿ ಮೂರ್ಛೆಯತಿಳದೆದ್ದು ಕಣ್ದೆರದು ನಿಜಸೇನೆಖರಸಹಿತ ಭಸ್ಮೀಭೂತವಾದುದನು ನೋಡಿ ಬಲುಖೇದದಿಂದೊಡಗೂಡಿತನುವಿನಾಶೆಯ ತ್ಯಜಿಸಿ, ಮರಣವನು ನಿಶ್ಚೈಸಿ, ಪರಮರೋಷಾವೇಶ

ದಿಂದಪರವಶನಾಗಿಯುದ್ಧವನುಮಾಡೆ ಸನ್ನದ್ಧರಾಗುತ್ತಿರುವಸಂಭ್ರಮವನೋಡಿ
ನರಪುಂಗವನು ವಿಸ್ಮಯದಿ ಮನದೊಳಾಲೋಚನೆಯಮಾಡಿ, ತುರುಗಾಸ್ಯನಿವನ
ಸುರಯೋನಿಜನಲ್ಲವಾವಕಾರಣದಿಂದಲುಳಿವನಿವನಾವಡೆಯು ; ಮೃಡನರಸಿಯೊ
ಲುಮೆಯಿಂಮಡುಹುವೆನು ನಿಮಿಷದಲಿಯೆನುತನಿಶ್ಚಯಮಾಡಿ,ತೊಡಗಿದನುಧನು
ವನು. ಅಸಿತರೊಳುಹೆಯವದನನತಿಜವದಿ ನಿಶಿತಕಠೋರಪರಿಘಮುದ್ಗರಶೂ
ಲಶಕ್ತಿಕುಲಿಶಕುಠಾರಪಾಶತೋಮರಖಡ್ಗದಂಡಚಾಪಮಹೋಗ್ರಭಿಂಡಿಮಾಲಗ
ದಾದಿಮುಸಲಪಟ್ಟಿಸಬಾಣ ಚರ್ಮಮುಖ ವಿವಿಧಮಹದಾಯುಧಪ್ರಕರಯುತ
ಘೋರಭುಜದಂಡ ಯುಗಪದಾಕ್ರಾಂತದಿಗ್ಮಂಡಲನಹಾರ್ಯನಿಭಚಂಡತುಂಡಸ
ಹಸ್ರಮಂಡಿತನಜಾಂಡಮಂನುಂಗುವತೆರದಿಂದ ಮಹದಟ್ಟಹಾಸಮಂಮಾಡೆ
ನಿಖಿಲನಿಲಿಂಪರಸುರನಾಟೋಪಕತಿಭೀತಿಯಿಂ ಮೈಮರದು ಮೂರ್ಛೆಯಂನೈ
ದಿದರು, ಮಾತಲಿಯು ಶ್ರವಣಾಕ್ಷಿನಿಕರಗಳ ಮುಚ್ಚಿನಿಜತನುಮರೆದನು, ಮ
ಹಾರಾಜ ! ಬಳಿಕಹಯವಕ್ತ್ರನತಿಚಿತ್ರತರವಿವಿಧಮಹದಾಯುಧಪ್ರಕರಗಳ
ವರ್ಷಿಸಲು, ಗಗನತಲದಿಕ್ಕುಗಳು ಕಾಣದೊಲು ದುರ್ಮುಖಾಸುರದಮನಖತಿ
ಯಿಂದ ನಿಶಿತಶರನಿಚಯದಿಂ ತರಿಯುತಿರಲು, ಅಸಿತನೃಪವಿಲಯಮೃಡಶಕ್ತಿತ
ಭೈರವಾರವಸದೃಶತದ್ಧನುರ್ಜ್ಯಾಲತಾಸ್ಫಾಲನಸಮುತ್ಪನ್ನಘೋರಕಠಿನನಿನಾ
ದಿಂದ ಪೂರಿತಮಾದುದಖಿಲ ವಿಧ್ಯಂಡಮಂಡಲವು, ಖಳನಳುಕಮರುಧೈರ್ಯ
ದಿಂಕೈದುಗಳವರ್ಷಿಸುತ್ತಿರಲು ; ಇಂತುಸಪ್ತದಿನಸಲೆಸಿ ಕಡೆಗಾಣದತಿರೋಷ
ದಿಂದಶತಾಯುಷನು ಸತಿಯಡಿಗಳನುನೆನೆದು ನಿಜಧನುವಯಾನದೊಳಿರಿಸಿವಿ
ಯಚ್ಚೈರವನಂತೆ ಇಳಿದಾವಿಮಾನದಿಂದಖಿಲಭುವನೋದ್ವೇಗಕರಮಹೋಗ್ರ
ಕರಾಳನಿಶಿತಧಾರಾಘೋರನಿಸ್ತ್ರಿಂಶಮಂಕೋಶದಿಂತೆಗೆದು ಹಸ್ತದೊಳುಧರಿ
ಲಾಘ್ವಾನನು ನೋಡಿತತ್ಪ್ರಥರುಚಿವಿನಿಹತಾಖಿಲನಯನನಿಕರನಾಗುತ ಲವಗ
ಸುನಿಮೀಲಸಗೈದುಗಳತಪೌರುಷನಾಗಿ ಮರಣಭಯದಿಂದಸುರ ಸತ್ವರದೊ
ನವರತವಿವಿಧನಿಶಿತಾಯುಧಪ್ರಕರಗಳನಾಸಹಸ್ರಾಯುವಂ ಕೊಲುವೆನೆಂಬಾ
ಕದಿ ವರ್ಷಿಸುತ್ತಿರೆ,ದಿವಿಜರಾಮಹಾಸಿಯ ಧರಿಸಿದ ಅವನಿಪತಿತನಯನಂ ನೋ
ಡಿ ಧೂರ್ಜಟಿಜಟಾಜನ್ಮವಿಜ್ಞಾನದಿಂ ನಡುಗಿದರು ಸಾಧ್ವಸದಿ, ಸುಭಟ
ಕೇಳಾಸಹಸ್ರಾಯುಷನು ಲಾಘವದೊಳಸುರನ ವಿವಿಧಗತಿಗಳಂಲಂಘಿಸ

ಲಸುರನಭುಜಾರಣ್ಯಗಳರಿದು ಕೆಡಹುತಿರೆ, ದಿತಿಜನವಯವದೊಳಸೃಗಾಸವ ತರಂಗಿಣಿಗಳುದಯಿಸಿ ಪ್ರವಹಿಸಿದವಮರಭೂಧರನಿತಂಬದಿ ಜನಿಸಿ ಪ್ರವಹಿಸುವ ನಿಮ್ನಗಾನಿಕರಗಳ ತೆರದಿಂದ ಅಸುರಪತಿ ತನ್ಮಹಾಖಡ್ಗಧಾರಾದಳಿತ ನಿಜಭುಜವ್ರಣವೇದನಾಜನಿತ ರೋಷದಿಂ ಹೊಂಚಿನ ಪಂಚಮುಖನತಿಕಠಿಣ ಜತ್ರುವಿನ ಪರಿಘಾಯುಧವ ಪ್ರಹರಿಸಲು, ನರಪತಿಯೆ! ಕೇಳು ತತ್ಪರಿಘಭೃಶತಾಡನಾಜನಿತವೇದನೆಯಿಂದ ತರಹರಿಸಲಾರದುರುಮೂರ್ಛೆಯನ್ನೈದೆ ಸುಕುಮಾರನು, ದಿವಿಷದರು ಹಾ ವತ್ಸ! ಯನುತೊರಲಿ ತಲ್ಲಣಿಸುತಿರೆ, ದಿತಿಜನಾಟೋಪಮಂನೋಡಿ ಸಂಕ್ರಂದನನು ಜವದೊಳೈರಾವತವ ತರುಬಿತುರುಗಾಸ್ಯನಭಿಮುಖಕೆ ಖತಿಯಿಂದೆಲವೊ ಖೂಳ! ನಾಕವಿದೆತ್ತಣಬಣಗು, ಖಳ! ನೀನೆತ್ತ, ತೊಲಗು ತೊಲಗೆನುತ ನೃಪನಿಶಿತಶರ ನಿಚಯಗಳನುರುಬಿಬೊಬ್ಬಿರಿಯಲು, ಅಶ್ವಾಸ್ಯನದಕೇಳಿ ಕಡುರೋಷದಲಿ ನುಡಿದನೆಲೆಶಕ್ರ! ತವವಿಕ್ರಮವನಾನು ಕಂಡಿರುವೆ, ಗಳಹದಿರಿನ್ನು ಮೆರೆದುಮಲಗಿದುದು ಭವದೀಯ ಭುಜಬಲಸಾರ ಸರ್ವಸ್ವವೆನ್ನ ಮಹದಾಯುಧಪ್ರಹತಿಯಿಂನೋಡು, ತರಹರಿಸಿ ನೀನಿಲ್ಲು, ಮೇಣೊಂದೇ ನಿಮಿಷದಲಿ ನಿನ್ನಯ ಗಳವ ತರಿದಾನು ತೊಲಗುವೆನು ಯನುತ ಸರಳನು ಕಡಿದು ಶಸ್ತ್ರವೃಷ್ಟಿಯಲಿಂತು ಶಕ್ರಾಸುರರಿಗಾದುದು ಮಹತ್ಕದನವು;

ಇತ್ತ ಮಾತಲಿ ಸಹಸ್ರಾಯುಷನ ನೋಡಿ, ಶಿಶಿರೋಪಚಾರವ ಮಾಡಿ, ಯಾನದೊಳು ತಂದಿರಿಸೆ, ಕಣ್ದೆರೆದು ನೋಡಿ ಮಹದಾಗ್ರಹದಿ ಧರಿಸಿ ಶರಚಾಪಗಳ ವಿವಿಧ ಶಸ್ತ್ರಾಸ್ತ್ರಗಳ ವರ್ಷಿಸುತ್ತೆಲವೊ ಖೂಳ! ತಿರುಗು ತಾನಿರಲು ಸುರರಾಜನೊಳು ಸೆಣಸೆ ಕಾರಣವೇನು, ಯನುತಬೊಬ್ಬಿರಿಯಲು; ಅವ ಕೇಳಿ ತೋತ್ರಾಹತದ್ವಿರದಪತಿಯಂತೆ ಹಯವದನನು ರೋಷದಿಂದವಶೇಷನಾಗಿರುವ ಚತುರಷ್ಟ ಭುಜಗಳಿಂ ಧರಿಸಿ ಮಹದಾಯುಧ ಪ್ರಕರಗಳನಟ್ಟಬರೆ, ರುರ್ವರಿಯು ಮನದೊಳಾಲೋಚನೆಯ ಮಾಡುತಿರಲು;—ಅಶರೀರವಾಣಿ ಆವಿರ್ಭವಿಸಿ ಗಗನದೊಳು ಗಂಭೀರನಿನದದಿಂ ನುಡಿದು ಎಲೆ ವತ್ಸ! ಹಯವದನನಿವನಖಿಲ ಮಂತ್ರಾಸ್ತ್ರದಿಂ ಮಡಿಯ, ತವಗುರುದತ್ತ ಘೋರ ವಿಷ್ಣುಸುಗಸ್ತ್ರದಿಂದ ಭಸ್ಮೀಭೂತನಾಗುವನು, ಜವದಿಂದ ತೊಡುವುದೆನುತೊ

ರೆಮ ಮರೆಯಾಗೆ, ದುರ್ಮುಖಾದಮನನತನುವಾಣಿಯುಕೇಳಿ ಪರಮಸ
ಮ್ಮುದದಿಂದ ದಿವ್ಯ ಮಹಾಸ್ತ್ರಮಂ ಕರದಿ ಮೂಡಿಗೆಯಿಂದ ತೆಗೆದು ನಿಜ
ಪದೊಳಗಳವಡಿಸೆ, ಭುವನತ್ರಯವು ನಡುಗಿತು, ಮಹೀಪಾಲ ! ಬೆದರಿದ
ಸುರರು, ಗಿರಿಶಿಖರಗಳು ಸಿಡಿದು ನೆಲಕುರುಳಿದವು, ವಾರಿಧಿಗಳುಕ್ಕಿಕುದಿದ
ನಾಗಪತಿಗಳ ಶಿರೋರತ್ನನಿಕರವರಳಾವವೇನಂಬೆ ಸತ್ಯವ್ರುತವನು, ಇನ
ಪ್ರಮುಖಗ್ರಹತಾರೆಗಳು ತಲ್ಲಣಿಸಿತಿರಿಯು ನಾ೯ದಿ...ಳಾವರಿಸಿದುದ
ಹಯವದನನಧಿಕ ಸಂತಾಪದಿಂ ಮರಣವನು ನಿಶ್ಚೈಸಿ ಮುಖಗಳಿಂದಾವಿ
ವಿಸುತ್ತೈದುವನಿತರೊಳು ಮಹದಸ್ತ್ರವಂ ಸೆಳೆದುಬಿಡೆ, ಕಾರ್ಬೊಗೆಯ
ಕವಿದುದವನೀಪತಿಯೆ ! ಕೇಳು, ಲಯಧೂಮಕೇತನ ಮಹಾಜ್ವಾಲೆಯೊ
ನಿಮಿಷದಲಿ ದೈತ್ಯನ ಮಹಾಕಾಯ ಘೋರಕಾಯವನು ಮಹದಸ್ತ್ರಭ
ವನು ಮಾಡಿ, ಭೂಯೋಪಿ ರಾಜಕುಮಾರನಮಲಮೂಡಿಗೆಯಲ್ಲಿ ಶಯ
ವನುಮಾಡಿದುದು, ಬಳಿಕ ಸುರಸಿದ್ಧ ಗಂಧರ್ವಚಾರಣ ನಿಕರಜಯ ಜಯ
ಸುರತ್ರಾಣ, ಜಯಪರಮ ಕಲ್ಯಾಣಗುಣ ಮಹೋದಧಿಯೆ, ಜಯದಿತಿಜಸ
ರಘುರಟ್ಟ ಯೆನುತ ಸುಮವೃಷ್ಟಿಯನಂ ಕರೆದುಕೊಂಡಾಡುತಿರಲು ; ಅವ
ಪತಿ ನಿಖಿಲರಿಂದೊಡಗೂಡಿ ಕರಿವರಸ್ಕಂದದಿಂದಿಳಿದು ಬಾಲಕನೆಡೆಗೆ ಬರುತಿ
ಲು, ನೋಡಿ ಕೋಸಲಪತಿಯು ಜವದೊಳು ವಿಮಾನದಿಂದಿಳಿದು ಪದಚರನಾ
ಬಂದು ಸುರಪತಿಯಡಿಗೆ ವಂದನೆಯಮಾಡೆ, ತೆಗೆದಪ್ಪಿ ನಿಜಭುಜಗಳಿಂದಿ
ಮೈದಡವಿ ಬಹುವಿಧದಿ ನುತಿಗೈದು ಮುದದಿಂದ ರಣಶೋದನೆಯಮಾಡೆ
ತನುಜನಿಂಗೊರೆದು ನೃಪತನಯನಂ ಕರಿವರಸ್ಕಂದದೊಳು ಕುಳ್ಳಿರಿಸಿ, ನೃಪ
ಕೇಳ್ಪರಮ ವೈಭವದಿಂದ ನಾಕವನು ಹೊಕ್ಕು ನಿಖಿಲೋಪಚಾರಗಳಿಂದ
ರ್ಮುಖಾರಿಯನು ಸಂತೈಸುತಿರೆ, ಸುಖದಿಂದ ದಿವ್ಯನಿಲಯದೊಳು ಖರದ
ನಕತಿಪಯಮಾಸವಾಸವನು ಮಾಡಿ ತರುವಾಯ ನಿಜಲೋಕಮಂ್ಯೈದಬೇ
ಬ ಲವಲವಿಕೆಯಿಂದಿರ್ದನಾ ದಶಶತಾಯುಷನು ಶ್ರೀಶೈಲಚಾಪರಮಾನು
ಪದಿಂದಿತಿ * * * * * * *

ಇಂತು ಕರ್ನಾಟಕಭಾಷಾವಿರಚಿತವಾದ ಶ್ರೀಮತ್ಸಮಸ್ತಭೂಮ
. ಲಮಂಡನಾಯಮಾನನಿಖಿಲದೇಶಾವತಂಸ ಕರ್ನಾಟಕಜನಪದಧಿಷ್ಠಾನಭ

ಶ್ರೀಮನ್ಮಹಿಶೂರ ಮಹಾಸಂಸ್ಥಾನಮಧ್ಯ ದೇದೀಪ್ಯಮಾನಾ ವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲನಿಜ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತದಿವ್ಯರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜರಾಜ ಪರಮೇಶ್ವರ ಪ್ರೌಢಪ್ರತಾಪಾ ಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃ ಪಾರಾವಾರ ಕಲಾನಿಧಿ ಶಂಖ ಚಕ್ರಾಂಕುಶಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀ ವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಅತ್ರೇಯಸಗೋತ್ರ ಅಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರ ಪುರವರಾಧೀಶ ಶ್ರೀಮತ್ಕೃಷ್ಣರಾಜ ವಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬಾಂಕಿತದಿಂದ ಕರ್ನಾಟಕ ಭಾಷಾವ್ಯಾಖ್ಯಾನರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ತ್ರಯೋವಿಂಶೋಧ್ಯಾಯಃ ಶ್ರೀ ಶ್ರೀ *

ಇಪ್ಪತ್ತಮೂರನೇ ಅಧ್ಯಾಯಮು ಸಂಪೂರ್ಣ.

ಶ್ರೀರಸ್ತು

## ಇಪ್ಪತ್ತ ನಾಲ್ಕನೇ ಅಧ್ಯಾಯಮು ಪ್ರಾರಂಭ.



ಯಸ್ಯಪ್ರೌಢಮಹೋ ಮಹೋಗ್ರದಹನಜ್ವಾಲಾಭಿ ಶುಷ್ಯತ್ಸರಿದ್ಭರ್ತಾರಂ ನಿಜಪಾಣಿಪಲ್ಲವಗಳದ್ದಾನಾಂಬುಧಾರಾಶತೈಃ । ನಿತ್ಯಂ ಪೂರಯತಿಪ್ರಸನ್ನಜನತಾಹೃತ್ತಾಪತಾಪಾಪತಿರ್ದೀನಾನಂದ ಮಿವೇಕ್ಷಿತಾಸಜಯತಿ ಶ್ರೀ ಕೃಷ್ಣರಾಜಪ್ರಭುಃ ॥ ೧ ॥

ನಿಖಿಲದಿಗ್ವಿಲಾಸಿನೀ ನಿಕರ ಕರ್ಣಪೂರೀಕೃತ ನಿರ್ಮಲಯಶೋವಿಪುಲ

ಮಾಲತೀ ಲಲಿತಲಕಾಂತಸ್ತಬಕನೇ ! ಕೇಳು, ನೆಲರುಣಿತಲ್ಪನನುಜೆಯನು ಕಂಪದಿಂದಿಂತು ಖರಾಸುರದಮನ ಖಿಲಭುವನ ವ್ಯಾಪಿಯಾದ ಜಗಮಂ ಪಡೆದು ನಿಜಲೋಕ ಗಮನಾಸಕ್ತಚಿತ್ತನಾದ ತದಭಿಪ್ರಾಯಮಂ ದಂಬೋಳಿಧರನರಿದು, ಮೇಣೊಂದುದಿನ ನಿಯುತಯೋಜನವಿಶಾಲ ದಿವ್ಯ ಮಹದದ್ಭುತಸಭಾಸ್ಥಾನಮಂನೈದಿ ಪರಮ ವೈಭವದಿಂದ ದಿವ್ಯಾಸನಾಸೀನನಾಗಿ, ನಿಜಸಮೀಪದೊಳು ನವ್ಯಮಣಿಘಟಿತ ದಿವ್ಯ ಪಂಚಾಸ್ಯಪೀಠದೊಳು ಪಂಚಾಸ್ಯನಂತೆ ಸಹಸ್ರಕರನನಣಕಿಸುವ ಕಾಂತಿಯಿಂ ಕುಳ್ಳಿರುವ ಸಹಸ್ರಾಯುವಂ ಸಹಸ್ರಾಕ್ಷನಖಿಲಾಕ್ಷಿನಿಕರದಿಂ ನೋಡಿ, ಮನದೊಳುಕ್ಕನತಿಹರುಷದಿಂದಾತನಂ ಕೊಂಡಾಡಿ, ಸಾರ್ವಭೌಮಾಧಿಪತ್ಯಮನ್ನಿತ್ತು, ನಿಖಿಲ ನಿಲಿಂಪ ತಾಪಸಪ್ರವರದಿಂ ವೆರಸಿ ಪಟ್ಟಾಭಿಷೇಕಮಂಗೈದನು. ಅಂದಿನ ಮಹೋತ್ಸವಪ್ರಕಾರಮಂ ವಿವರಿಸಲ್ಕಳವಲ್ಲ ನಾಕಿಗಳಗರಸ ! ಕೇಳ್, ತತ್ಕಾಲದೊಳು ಹರಿಮುಖಾರಿಯಾಗ ತನೂಭವನ ಪರಿಣಯೋದ್ಯೋಗಮಂ ಮಾಡಲಂದಾಗಸದೊಳಶರೀರವಾಣಿಯಾಡಿದಾಲಾಪಮಂ ನೆನೆದು ವಲಭಂಜನನಿಗಂಜಲಿಯಿಂ ಕಟ್ಟಿ, ತದಭಿಪ್ರಾಯಮಂ ನೊರೆದಿವರ ವೃತ್ತಾಂತಮೇನೆಂದು ಕೇಳಲು ; ಪಾಕಶಾಸನನದಂಕೇಳಿ ವಿಸ್ಮಿತನಾಗಿ ನಿಜಾಚಾರ್ಯನಾನನಮಂ ನೋಡಲಾ ದಿವ್ಯ ಸಂಸ್ಕೃತ ಮಹರ್ಷಿ ಸಮಾಜಮೊಳ್ಮಂಡಿಸಿರುವಾಖಂಡಲನಿಂ ಜೀವನದೆಂತೆನೆ :—

ವತ್ಸ ! ಕೇಳಚ್ಚರಿಯ, ಕಾಂಭೋಜದೇಶದೊಳು ಕಾದಂಬಿನೀ ನಾಮ ನಗರವಿಹುದು. ಅದರಲ್ಲಿ ಪೂರ್ವದೊಳು ಕುವಲಯಲಾಪೀಡನೆಂಬೋರ್ವ ನೃಪ ನಿಖಿಲ ಧರ್ಮಂಗಳಿಂದ ಚಿರಕಾಲ ರಾಜ್ಯಮಂ ಪೊರೆಯುತ ಯುಧಿಷ್ಠಿರನ ತೆರದಿಂದ ಪತ್ನಿಯೊಳು ಪುರುಷ ಸಂತಾನಮಂ ಕಾಣದತಿಚಿಂತೆಯಿಂ ಪರಿಪರಿಯ ಸಾಧನಂಗಳಿಂದ ಪರಮಾತ್ಮನಂ ಪೂಜಿಸಲು ಚಿರಕಾಲ, ಹರಿಯ ಕಾರುಣ್ಯದಿಂದುದಯಿಸಲು ಗರ್ಭ ನಿಜಸತಿಯುದರದೊಳು, ನೋಡಿ ನೃಪತಿ ಯತಿಮೋದದಿಂ ತದಭಿವೃದ್ಧಿ ನಿಮಿತ್ತಮಖಿಲ ಷೋಡಶ ಮಹಾದಾನ ಧರ್ಮಾದಿಗಳ ಮಾಡುತಿರಲು, ಉಡುಪತಿಯತೆರದಿಂದ ಗರ್ಭವಭಿವೃದ್ಧಿಯಾಗುತ ಸಪ್ತಮಾಸಮಾಗಲು, ಸುಭಗ ! ಕೇಳು, ಮೇಣಾ ನೃಪತಿ ವೃದ್ಧಸೇವಾನಿರತನಾದಕಾರಣದಿಂದ ದೊರೆದ ಭಗವಜ್ಜನರ ಸಂಸರ್ಗದಿಂ ವಿಷಯ ವಿಮುಖನಾಗುತ ಘೋರ

ಸಂಸ್ಕೃತಿ ಜಿಹಾಸೆಯಿಂದುದರಿಗೆ ಸಂತಾನಮಾತ್ರದಾಕಾಂಕ್ಷೆಯಿಂದಿದ್ದು ಭವಕೂಪದೊಳು ಪತ್ನಿಯಂ ತರ್ಪಿತ್ತಿಯಾಗಲದಕಂಡು ಕೃತಕೃತ್ಯ ತಾನೆಂದೆನುತ ಮನದೊಳತಿ ಹರುಷವಿಂದರಿದು ಸತ್ಪುರುಷನುದಯಿಸುವನೆಂದೊಂದು ದಿನ ನಿಜಸಭಾಮಧ್ಯದೊಳು ಮಂಡಿಸುತ ಪುಂಡರೀಕಾಕ್ಷನನುಕಂಪದಿಂದಭಿವೃದ್ಧನಾದ ವೈರಾಗ್ಯಮುದ್ರೇಕದಿಂ ಕುವಲಯಾಪೀಡನಾಕ್ಷಣದೊಳಾಲೋಚನೆಯ ಮಾಡಿ, ಶತಧೃತಿ ಎಂಬ ಮಂತ್ರಿವರರಸಂ ಕರೆದು ನುಡಿದನೆಲೆ, ಸಚಿವ! ಕೇಳ್ವಾನು ತಪಗೈದು ಮುರಹರನ ಚರಣಾಂಬುರುಹ ದರುಶನಧ್ವಸ್ತ ಭವಬಂಧನಮುಳ್ಳವನಾಗಿ ಐದುವೆನು ತೆಕ್ಕರಣನಿಸಮಂ, ನೀನು ಸತಿಯುದರದೊಳಗುದಯಿಸುವ ಸುಕುಮಾರನಿಂಗೆ ಸಕಲ ಪರಮ ವೈಭವದಿಂದ ರಾಜ್ಯಾಭಿಷೇಕಮಂ ಮಾಡಿ, ಮೇಣಾತನಾಜ್ಞಾನುಗುಣವಾಗಿ ನುಜದಿಂದಲಿಹುದೆಂದೆನುತ ನುಡಿದು ಮುದ್ರಿಕೆಯಿತ್ತು, ಸರ್ವಸ್ವಮಂ ನೃಪತಿ ತದಧೀನಮಂ ಮಾಡಿ, ಸತಿಯೊಡನೆ ತಿಳುಹಲೇನೆಡರನಾಚರಿಸುವಳೋ ಎನುತ ವಿಶ್ವಂಭರಾಪತಿಯು ತನ್ನೊಳು ತಾನು ಯೋಚಿಸುತ ಹರ್ಷಕ್ಷೀಣದಿಂ ದಿದ್ದ ನಿಜನಗರಮಂ ನುಳಿದುತ್ತರಾಭಿಮುಖನಾಗಿ ತೆರಳೆ, ನಾಗರಿಕರತಿಮುಃಖದಿಂದಳಲುತಿರಲು, ಅನಿತರೊಳು ತತ್ಸತಿಗೆ ತಿಳಿಯಲೀವಾರ್ತೆ ನೃಪತನಯ! ಕೇಳದು ಭ ತವ ಜನನಿ ಪತಿವಿರಹಮಂ ಸಹಿಸಲಾರದೆ ಮನದಿ ಯೋಚಿಸುತ ತಕ್ಷಣದೊಳಾಲಯದ ದೆಶೆಯಿಂದ ತೆರಳಿ ನಿಜನಗರ ಮಂನ್ನುಳಿದು ಪತಿಸರಣಿಯಂ ಹಿಡಿದೈದುತಿರಲು ;—ಅವನಿಪತಿ ಮೋಕ್ಷಲಕ್ಷ್ಮಿಯಂತೊಡನೆ ನಡಗರದಿಂದ ಹಿಡಿಯಂತೆ ನಡೆಯುತ್ತ ಹಿಡಿನಡುವಿನಬಲೆ ಕೈಪಿಡಿಯಂತೆ ಬೆಳಗುತಿಹ ಕದಪಿನಿಂ ಶೋಭಿಸುವ ಮಡದಿ ಕಡುವೇಗದಿಂದಡಿಯಿಡುತ ಬರುವುದಂ ಕಂಡು ವಿಸ್ಮಿತನಾಗಿ ಮೌನದಿಂ ಮುಂದೆ ನಡೆಯುತ್ತಿರಲು ; ಮಾನಿನಿಯು ಮನದೊಳಾನಮಾನಮಂತಾಳಿ ದಿನದಿನವಿಯನ್ನನುಸರಿಸಿ ಬರಲು, ಇಂತು ಮಾಸತ್ರಯಂ ನಡೆದು ದಂಡಕಾರಣ್ಯದೊಳು ಬರುತೊಂದುದಿನ ಸುಭಗ! ಪ್ರಸವವೇದನೆಯು ತಲೆದೋರಲಾ ಮಾನಿನಿಯು ಪರಮಯಾತನೆಯನ್ನು ಸಹನಮಾಡುತ ಪತಿಯ ಪದವಿಯನ್ನೈದುತಿರೆ ಮೆಲ್ಲಮೆಲ್ಲನೆ, ಬಳಿಕ ಸುಮುಹೂರ್ತದೊಳು ತರಳ ನುದಯಿಸಲು, ಭಾಮಿನಿಯು ವಿಮಲತರುಮೂಲದೊಳು ಪ್ರಸವಿಸುತ, ಬಾಲಕನ ಪರಮ ಸೌಂದರ್ಯವನು ನೋಡಿ ಮರುಗುತ್ತ ಪ.

ಸದಳಲತೊರೆದು ವೈರಾಗ್ಯದಿಂ ಧರಿಸಿರ್ದ ವಸನವಂ ಖಂಡಿಸುತ ಖಂಡ ಪಟವನ್ನು ತರುಮೂಲದೊಳು ಹಾಸಿ, ಕೋಳಾಶಿಶುವನದರಲ್ಲಿ ಮಲಗಿಸುತ ನೋಡಿ ಮುದ್ದಾಡಿ, ತವಜನನಿಮೋಹನ್ನನಾದೂತಿಯ ಕರಾಂಬುಜದೊಳಿತ್ತು ಕಳುಹುವ ಕಾಲದೊಳು ವಿಷಾದವನ್ನೈದಿದತೆರ ಕಂಬನಿಗರೆದು, ತರುವಾಯ ಪತಿಭಕ್ತಿ ಎಂಬ ನಿಶಿತಾಸಿಯಿಂ ತರಿದು ಮಮತಾ ಲತೆಯಧೈರ್ಯವಮಂ ಪಿಡಿದು, ಪತಿಸರಣಿಯನ್ನನುಸರಿಸಿ ನಡೆಯಲು ; ಮಹೀಪತಿಯು ಸತಿಯ ಮತಿನಿಶ್ಚಲತೆಯನ್ನು ಮನದಂದು ಬಹು ವಿಧದೊಳಾಲೋಚನೆಯಮಾಡಿ, ತನ್ನೊಳು ತಾನು ವಿಪಿನದೊಳಗೊಂದು ಕುಟಜಾರ್ಜುನ ಮಹೀರುಹದ ಮೂಲದೊಳು ಕುಳಿತ, ನಿಜಸತಿಯ ಮಾದರದಿಂದ ಬಳಿಗೆ ಕರದೆಂದನೆಲೆ ಕಾಂತೆ ! ಕಾಂತಾರದೊಳು ಕಂತುಪಿತ ದಯೆಗೈದ ಸಂತಾನವಂ ತೊರೆದು ತನ್ನೊಡನೆ ನೀನು ಬರಲೇನುಕಾರಣ ಪೇಳು, ತಾನು ತಪಗೈದು ಕೇಳ್ತರುಣಿಪರಲೋಕಮಂ ಪಡೆಯುವಭಿಲಾಷೆಯಿಂ ತೆರಳಿದೆನು, ನಿನ್ನೊಡನೆ ಪೇಳೆ ನೀನೆಡರನೇನಾಚರಿಸುವೆಯೋ ಎನುತ ಫುಲ್ಲಾಬ್ಜನಯನೆ ! ಸುತರಿಲ್ಲದವರಿಂಗೆ ಕೇಳಿಲ್ಲಪರಗತಿ ಎನುತ ಸೊಲ್ಲುಸೊಲ್ಲಿಗೆ ನಿಗಮ ಸಾರುತಿದೆ, ಯದರಿಂದ ನೀರೆ ! ಚಿರಕಾಲದಿಂ ಘೋರಭವರೂಪದೊಳಗಿದುವರಿಗೆ ಪುತ್ರನಭ್ಯುದಯಾವಲೋಕನಾಸಕ್ತಿಯಿಂದಿದ್ದೆನು, ಇಂತುತ್ತಮ ಶ್ಲೋಕನಡಿದಾವರೆಯ ಕರುಣದಿಂದತ್ಯಧಿಕ ಗುಣಯುಕ್ತಪುತ್ರ ನಿನ್ನುದರದೊಳು ನೆಲಸಲದನರಿತು ತಾಂ ತೆರಳಿದೆನು, ತರುಣಿ ! ಕೇಳದರಿಂದ ಶಿಶುಸಹಿತ ನಗರಮನ್ನೈದಿ ತತ್ಪೋಷಣವ ನಿರುತ ನೀಮಾಡುತ್ತಲಭಿವೃದ್ಧನಾದಬಳಿಕಪರಿಮಿತ ವಿಭವದಿಂ ಪಟ್ಟಾಭಿಷೇಕಮಂಮಾಡಿ, ತರುವಾಯ ತನಹೃದಯವೆಂತೆಳಸುವುದೋ ತದನುಗುಣವಾಗಿ ತರಳಾಕ್ಷಿ ! ನೀನಿರಲುಚಿತವೆಂದೆನಗೆ ತೋರುತಿದೆಯೆನುತ ನರಪತಿಯು ಬಲು ವಿನಯದಿಂ ನುಡಿಯಲು, ಅವನರಸಿ ಪತಿವಾಕ್ಯಮಂಕೇಳಿ ನಸುನಗುತ ತಚ್ಚರಣ ನಳಿನಗಳಿಗೊಂದಿಸುತ ಕೈಮುಗಿದು ಕಾಂತ ! ಲಾಲಿಪುದೆನ್ನಬಿನ್ನಪವ, ಸತಿಯರಿಗೆ ಪತಿಯೇಪರದೈವ, ತವಚರಣಸೇವೆಯೇ ಎನಗೆ ಸದತಿಗೆ ಸಾಧನವು, ಭವದನಾವೃತ ತನಯ ರಾಜ್ಯ ಸೇನಾಕೋಶಗಳ ಮಮತೆ ತನಗ್ಯಾಕೆ, ರಮಣ! ರಮಣೀಯ ಭವದಂಘ್ರಿಯುಗಳವನಗಲಿ ತೃಟಕಾಲ ತಾನಿ

ರುವಳಲ್ಲವಿನು ಫಲಿತಾರ್ಥ, ಬರಿದೆ ತನ್ನನಳಲಿಸದಿರೆಂದೆನುತ ವಿನಯ ಮೃದು ಮಧುರತರವಾಣಿಯಿಂ ಮಡದಿ ಬಿನ್ನೈಸೆ, ನರಪತಿಯು ಸತಿಯಾಡಿದುದ ಕೇಳಿ ವಿಸ್ಮಿತನಾಗಿ ಮನದೊಳಾಲೋಚನೆಯುಮಾಡಿ, ಮಾಧವನೆಗತಿ ಮಮತ ನೂಜನಿಗಾನು ಬರಿದೆ ಚಿಂತಿಸಲೇನುಫಲವೆನುತ ಕುವಲಯಾಪೀಡ ಸಿಕ್ಷಯ ಮಾಡಿ ತೆರಳಿದನು ಸತಿಸಹಿತ ಬದರಿಕಾಶ್ರಮಕಾಗಿ; ಮತ್ತೆ ಕೇಳಾಗ ಶತಧೃತಿ ಎಂಬ ಮಂತ್ರಿವರನವನೀಶ ನರ್ಧಾಂಗಿಯೊಡನೆ ತೆರಳುತಿನ್ನೇನಮಾಡುವೆ ನೆಂದು ಕರದೋರ್ವಚಾರನಂ ನುಡಿದನೆಲೆ ಗೂಢಚಾರ! ಕೇಳು, ವೇಣವರೊ ಡನೆ ಪೋಗುತ್ತವರರಿಯದಂತೇನಹುದೋ ನೋಡಿ ಜವದಿಂದೆನಗೆ ಸುದ್ದಿಯನು ಪೇಳುವುದೆನುತ ಕಳುಹಿದ್ದ ಚರನು ಬಾಲಕನನರಣ್ಯದೊಳು ಬಿಟ್ಟೈದಿ ದಂದ ವನುನೋಡುತತಿಜವದಿಂದ ಪುರಕೈದಿ ಸಚಿವನೊಡೆ ನೊರೆಯೆ ವೃತ್ತಾಂತವನು. ಕೇಳುತತಿ ಖೇದದಿಂ ಶಿಶುವತರದ್ಯಾಕೆ ನೀಬಂದೆ ಎನುತ ಚರನ ಜರಿದು ಜವದಿಂದಲವನೊಡನೆ ತುರಗವನೇರಿ ಬಂದು ನೋಡುತ ಶಿಶುವ ಕಾಣದಾವಿಪಿನದೊಳು ತಿರುಗಿ ಬರಲು, ಖೇದದಿಂ ಹರಿಯ ಕಾರುಣ್ಯದಿಂದು ದಯಿಸಿದ ಕುಮಾರನಿವ ನಷ್ಟವಾಗುವದಿಲ್ಲ, ಪ್ರಕೃತದೊಳರಣ್ಯದೊಳು ತಾನು ಮಾಡುವುದೇನು, ಮಾನವಾಧಿಪನಾಜ್ಞೆಯನುಸಾರ ಧರಣಿಯನು ಪೊರೆಯುತೀ ಕುವರನೈತಂದ ಬಳಿಕಾತನಡಿಗೊಪ್ಪಿಸುತ ರಾಜ್ಯಮಂ ತಾನು ಕೃತಕೃತ್ಯನಹೆನೆಂದೆನುತ ಪಿಂತಿರುಗಿ ಪುರಕೈದಿ ಧರಣಿಯನು ಪೊರೆಯುತಿಹನು. ಹರವರಾತ್ಮಜ! ಕೇಳು ಹರಿವಿಲಾಸವನು.

ಇತ್ತಲಾ ಮಹಾವಿಪಿನದೊಳಗೋರ್ವ ಘೋರಕಿರಾತನಬಲೆಯಿಂದೊಡಗೂಡಿ ಪರ್ಣಸಿಲೆಯುವ ರಚಿಸಿ ಚಿರಕಾಲದಿಂ ವಾಸವನು ಮಾಡಿಕೊಂಡಿರುವನಾಮೃಗಾದನು ಸುಭಗ! ನೆಂದಿನಂವದೊಳೆಂದು ಮೃಗಯಾರ್ಥವಾಗಿ ಶರಚಾಪಗಳ ಪಿಡಿದುಕಾಂತಾರದೊಳು ಸಂಚಾರ ಮಾಡುತ್ತ ತಮಾಲತರುಸಾಂದ್ರ ಶೀತಲವಿಮಲ ಸಚ್ಛಾಯದೊಳಗಳುತ ಗಗನಮಂ ಬೆಳಗುತಿಹ ಸುಂದರಾರ್ಭಕನಕಂಡನು. ಅವನಿಪತಿತನಯ! ಕೇಳಾಕಿರಾತನು ಪರಮವಿಸ್ಮಯದೊಳೆತ್ತಣ ವಿಚಿತ್ರತರಬಾಲಕನು, ಈ ಮಹಾರಣ್ಯದೊಳಗಿರಲು ಕಾರಣವದೇನೆಂದೆನುತ ಯೋಚಿಸಿ ಕಿರಾತನನಪತ್ಯನಾದುದರಿಂದ ಶಿವ

ದಯೆಗೈವ ತನಗೆಂದೆಪ ತನಿಶ್ಚೈಸಿ ಮನದೊಳತಿ ಹರುಷದಿಂದಾ ಸ್ತ್ರೀಸ್ವ ರಿಮುನನೀಜ ಕರದೆಡೆಳತ್ತ್ತದವಧಿಕ ಪ್ರೋದಿಂ ಮುದಾನ್ವಿತಿ ನೋಡಿಪುನ ಮುಬ್ಬಿ ಲೀನಿಜನಲಾಸಾಲಕೆ ಬಂದು ತನ್ನಬಳಿಯುಂ ಕರೆದು ಕಳೆಯ ಕುಳಿಮುದೊಳಾದಿಂ ಭನನ್ನಿತ್ತು ವೃತ್ತಾಂತನಂ ನೊರೆಯುಲು ಆ ಮಾನಿನಿ ಯು ನೋಂಡಿ ಪರವಶಳಾಗಿ ಸಪ್ತಾಬ್ಧಿಯೆಳ್ಳ್ಮಳಂಗಿ ಸುಂದರನೇ! ಕೇಳು ಮತ್ತೊಂದಿನಾರಣ್ಯವಾಕಂದನಂ ಪೊರೆಯುತ್ತಲಾನಂದದಿಂದಭಿವೃದ್ಧಿಸಾಗುತಿರಲೀರಾ ರುಹಾಯನನಯುತಾಲಿಯಾನ ಸುಕುಮಾರಕನ್ಯಾನಿಪಾವನು ನೋಡಿಮನದೊಳೀ ಬಾಲಕನಿಗನುರೂಪಳಾಗಿರುವ ತರುಣಿ ವನಚರನಾದ ತನಗೆಂತು ದೊರೆನಲಿಂದೆನುತ ಚಿಂತಿಸುತ್ತಿರಲು ; ಹರಿಯುಕಾರುಣ್ಯದಿಂ ತಾದೃಶಳೆದೊರೆವಳ ದನೇನರ್ಣಿಸುವೆನೆಂದೆನಲು, ತಾರಾಪತಿಯು ನರಮರಾತ್ಮಜನು ನಿಜಕರಗಳನು ಮುಗಿದು ನಮನಗುತಲಮರಾಚಾರ್ಯ ತನಗೆ ತಾರಾಧಿಪಾನನೆಯು ವೃತ್ತಾಂತಮಂತಿಳುಹಬೇಕೆಂದೆನಲು ಧಿಷಣನಿಜದಶನರುಚಿ ಕೌಮುದಿಯುತತ್ಸಭಾಸದ ಜನರದಹರಾಂಧಕಾರವನು ಪರಿಹರಿಸುತಿರಲು ವಿವರಿಸಿದನು, ಅವನೀಶಕುಲ ತಿಲಕ! ಕೇಳ್ ಸಾವಧಾನದೊಳದೆಂತೆನಲು ; ಹಿಮಾಚಾರ್ಯ ಕುಮಾರನನು ಕಂಪಸಂಪಾದಿತ ಸಕಲಭುವನ ಶ್ಲಾಘನೀಯ್ಯಸುಶ್ಲೋಕನೆ! ಕೇಳು, ನೇಪಾಳ ವಿಷಯದೋಳ್ ನಾಗಪುರಿಯೆಂಬವರರಾಜಧಾನಿಯೊಳ್ ಚಂದ್ರಸೇನನೆಂಬ ಮಹೀಪಾಲನಿರ್ದನು, ಆ ನರೇಂದ್ರನಿಂಗೋರ್ವ ಜಗನ್ಮೋಹಿನಿಯಾದಕನ್ಯೆಯಾ ವಿರ್ಭವಿಸಲಾತನು ತನುಭವೆಗೆ ಸುಚರಿಯೆಂಬ ಪೆಸರನ್ನಿಟ್ಟು ಪೋಷಿಸುತ್ತಿರೆ ಸುಭಗ! ವಿಭವದಿಂದಭಿವೃದ್ಧಿಯಾಗುತಾಕನ್ನೆಗಿಂತನ್ಯಥಾಚರಣಯುಗವನ್ನು ಮನ ಮುಟ್ಟಿ ಭಜನೆಯಂ ಮಾಡುತ್ತಲೊಂದುದಿನ ತದ್ವ್ರತೋದ್ಯಾಪನೆಯಮಾಡುತ, ತದಂಗಭೂತಾಚಾರ್ಯ ಪೂಜೆಯಂ ಮಾಡೆ, ಜೇಳಾ ಪುರೋಹಿತ ತನೂಭವನ ಕರೆದಮಲಹಾಟಕ ಪೀಠದಲ್ಲಿ ಕುಳ್ಳಿರಿಸಿ ತತ್ಕರಂಗಳ ಪೂಜಿಸುತ್ತಿರಲು ; ಆ ಪುರೋಹಿತ ತನೂಭವನು ರಮಣೀಯ್ಯ ರಮಣೀಮಯೀರೂಪ ಲಾವಣ್ಯ ವಿಭ್ರಮ ವಿಲಾಸ ಗತಿಹಾಸ ಮಧುರಾಲಾಪ ವಿವಿಧ ಚೇಷ್ಟಾ ಸಮವಲೋಕನ ಸಮುತ್ಪನ್ನ ಮುಕರಕೇತನ ನಿಶಿತನತ್ಕ್ಸ್ರಹಾರ ವಿಕ್ಷುಭಿತ ಮತಿಯಾಗಿ, ತದ್ವಿಪ್ರಯೋಗಜನಿತಾವಿಷಹ್ಯಮಾನ ವೇದನಾಮುಷಿತ ವಿವೇಕಮುಳ್ಳವನಾಗಿ, ಅಲ

ಬ್ಬತನು ವಸ್ತ್ರಲಾಘೋಷ್ಠಿಯಿಂ ನಿತಾಂತಸಂತಾಪವನ್ನೈದಿ, ತನ್ನಪಿಂಕರಣ ತ್ರಾ
ತೃವರ್ಗದಿಂ ವಿವಿಕ್ತಪ್ರದೇಶದೊಳೇಕಾಂಗಿಯಾಗಿರುವ ಭೂಕಾಂತಕುಮಾರಿಯಂ
ಕಂಡಿದೇ ಸಮಯವೆಂದು ಕಾತರದಿಂದ ನುಡಿವನೆಲೈ ಅನಂಗ ವಿಜಯಂದಿರಾ
ರಂಗಸ್ಥಲಾಯಮಾನ ನಿಜಾಂಗವಾಗುರಾಬದ್ಧ ನಿಖಿಲ ಭುವನಸ್ಥಿತಾಶೇಷ
ಯುವಜನಮನಃ ಕುರಂಗನಿಚಯಳೇ! ಕೇಳು, ಮನ್ಮನಃಕಲಭವನತ್ಯಂತ
ಕುತೂಹಲದಿಂದ ತವಮುಖೋಂಚಿತ ವಿನ್ಯಾಸ ಸುಭಗ ಸುಕುಮಾರ ಮಸೃಣ
ಮಾಂಸಲಸ್ನಿಗ್ಧ ಕರಚರಣಾದ್ಯವಯವ ಪ್ರಚಯ ರುಚಿರ ಮಂದಾರವನ
ದೊಳ್ಮುಹುರ್ಮುಹುರನುಧಾವನೆಯಂಮಾಡಿ ಭವದತುಲ ಲಾವಣ್ಯ ಪೀಯೂಷ
ಪಾರಾವಾರ ಪೂರದೊಳ್ಮುಳುಗಿ ಮುಳುಗಿ, ಯುಷ್ಮದತಿಕಠಿಣ ಮಹದುನ್ನತ
ವೃತ್ತವಿಪುಲಾನ್ಯೋನ್ಯ ಸಂಸರ್ಗ ಕಾಂತಕುಚ ಕುಭೃಚ್ಛಿಖರಮನ್ನೇರಿ
ಯೇರಿ, ತದೀಯ ನಿತಾಂತ ಸಂಘರ್ಷದಿಂದ ತೀವ್ರಕಾರ್ಶ್ಯಮನ್ನೈದಿ ಯೈದಿ,
ಭವದೀಯ ರೋಮಾಳಿ ಕಾಳಾಹಿಮುಖ ವಿನಿರ್ಗತಗರಜ್ವಾಲೆಯಿಂದದಹ್ಯ
ಮಾನ ಸರ್ವಾಂಗ ಸಂತಾಪದಿಂ ತವಮನೋಹರ ಲಸನ್ನಾಭೀ ಸರೋವರದೊ
ಳೀಜಾಡಿಯಾಡಿ, ಲಲಿತಾಂಗಿ! ನಿನ್ನ ಘನಪೀವರನಿತಂಬಯುಗ ಪುಳಿನ ಪ್ರದೇ
ಶದೊಳು ತೊಳಲಿ ತೊಳಲಿ, ಬಳಲಿ ಬಾಯಾರಿ ಬಸವಳಿದು, ಭವನ್ಮನಃ
ಕರಣ ಸಂಸರ್ಗಾಭಾವಪ್ರಯುಕ್ತ ಸಂತಾಪದಿಂ ತಪಿಸುತಿದೆ ಯದರಿಂದ ಸರೋ
ಜಾಕ್ಷಿ! ರಕ್ಷಿಸುವುದೆನ್ನ ಸತಿಯಾಗಿ ಚಿತ್ತಜ ಕಲಾಕೋವಿದರೊಳೆನ್ನ ಪೋ
ಲುವ ಪುರುಷರೀ ಭುವನದೊಳಗಿಲ್ಲ ಪುಸಿಯಲ್ಲ ಪುಲ್ಲಶರನಾಣೆ ಎನಲು;
ಕೇಳಿದಳು ಖೂಳ ಗುರುಬಾಲಕನ ನುಡಿಗಳನು, ತಾಳಿದಳು ರೋಷದುರವ
ಣೆಯ, ಸ್ವೈರಣೆಯಿಂದ ಕೇಳೆಲವೋ ಮೂಢ! ನಿಜಭಗಿನಿಯೊಳನುರಾಗವನ್ನು
ಮಾಡುವುದಲ್ಲದೆನ್ನೊಡನೆ ಮರ್ಯಾದೆಯನು ಮೀರಿ ನುಡಿದೆಯಾದೊಡೆಯುಮನ್ನಿ
ಸಿದೆ, ಕೇಳಿನ್ನು ಮೇಲೀತೆರದಿ ಬಗುಳದಿರೆ ನಾಲಿಗೆಯ ಸೀಳುವೆನೆಚ್ಚರದೊಳಿರು
ವುದೆನುತಾತನಂ ಜರಿದು, ದೂತಿಯರನ್ನು ಕರೆದೀ ನರಾಧಮನ ನಿಲಯದಿಂ
ಪೊರಡಿಸುವುದೆನುತಲಾಜ್ಞಾಪಿಸಲು, ತರುಬಲಾ ತರುಣಿಯರು ತರಳನತಿಖೇ
ದದಿಂ ತೆರಳಿದನು ತನ್ನ ಮನೆಗಾಗಿ, ತತ್ಪಿತನು ಸುತನಿರವಕಂಡತಿ ಭಯಾತುರ
ನಾಗಿ ನುಡಿವನೆಲೆತರಳ! ತಗ್ಗದಿರನಂ ಕಂಡ ತಾವರೆಯವೋಲು ನಿನ್ನ ಮುಖ

ಪರಿಸಿಹನು ಬಾಡಿರುವುದೇಂ ಕಾರಣಂ ಪೇಳು ದುಗುಡದ ನಿದಾನವನ್ನೆನುತ ಪ್ರಶ್ನೆಯಮಾಡೆ, ವಿಸ್ರುತಸುಜಾತ ತದ್ವಿಪ್ರಯೋಗಾವಮತಿಯಿಂದ ದುಃಖಿತನಾಗಿ ಮರೆಮ ಮರ್ಯಾದೆಗಳ, ಕರಗಿ ಕಂಬನಿಗರೆದು ಬರೆದು ವೃತ್ತಾಂತವಂ ನುಡಿದನವಶಾತ! ಕೇಳ್ ಪ್ರಡವಿಸನ ಬಾಲಕಿಯ ಪರಿಣಯವು ತನಗಾಗದಿರಲೊಡಲತಾಂ ಧರಿಸಲಾರೆ ನಿದು ನಿಶ್ಚಯವು ಎನಲು, ಆ ಮಹೀಸುರನು ಸುತನ ಸಂಭಾವಿತಾಲಾಪಮಂ ಕೇಳಿ ಕಡುವಿಸ್ಮಯದಿ ನುಡಿದನೆಲೆವತ್ಸ! ಮತ್ಸುತನಾದ ತಿರುಕ ಹಾರುವನಿಗೆ ತಿರೆಯಾಳ್ಮರಸುಗಿಯಂ ಕೊಡುವರೆ? ಮೂಢ, ಧಿಕ್ ಸಕಲ ವೇದಾರ್ಥಗಳ ನಿನಿಗೆ ತಾನುಪದೇಶವಮಾಡಿದುದು ಸಫಲವಾಯ್ತೆಂದು ರೋಷಾಮರ್ಷದಿಂದ ಧಿಕ್ಕರಿಸಲು, ಆ ಮಂದಮತಿಯುಂದನೆಲೆ ತಂದೆ! ಕೇಳೊಂದೇ ನುಡಿ, ಕೋಪದೊಳ್ಕೋಪವಂ ಮಾಡಿ ಫಲವೇನಿನ್ನು, ಮಾನಿನಿಯು ಮಾತಿದಾಳರ್ಕವಿಷವಂತಿರುವ ಘೋರಾವಮಾನವುಂ ಮನಕೆ ಹಿತನಾಗಿರುವ ಬಹುಮಾನವಂತೆ ತೋರಿಸುತಲಾ ಭಾಮಿನಿಯು ಭಾಗ್ಯಪದದಿಂ ನುಡಿದ ನಿಷ್ಠುರೋಕ್ತಿಗಳ ಸುರಸಗಸುಮಾಸಾರದಂತೆನ್ನ ಕಿವಿಗಿಂಪಾಗಿಮಾಡುತ್ತಲಿಂತು ಮಹದುಪಕಾರಿಯಾದ ಲಲಿತಾಂಗಿಯೊಳು ಭೂಯೋಪಿ ಮನಲಜ್ಜೆಯನು ತೊರೆದು ಮಮತೆಯಿಂ ಧಾವನೆಯ ಮಾಡುವಂತೆನ್ನ ನಾಹರನಳಕನಯನಾಗ್ನಿಯಿಂದಲಳಿದ ಗಿಳಿದೇರನೀಪರಿಯಲ್ಲಿ ಮರುಳುಮಾಡಿದಬಳಿಕ ತನ್ನಾಳಿ ತಾತ! ಕೇಳಿನ್ನು ನಿನಗ್ಯಾಕೆನುತ ಹಂಬಲಿಸಿ ಕಂಬನಿಯ ಸುರಿಸುತ ನಿತಂಬಿನಿಯ ನೆನೆ ನೆನೆದು ತದ್ವಿರಹ ಜನಿತಸಂತಾಪದಿಂದುನ್ಮಾದನಂತೆ ಮರ್ಯಾದೆಯನ್ನುಳಿದಳಲಿ ಹಲುಬುತಿರುವಾತ್ಮಜನನೋಡಿ ಭೂಸುರೇಶನೇಕಪುತ್ರನಾದುದರಿಂದ ಮನದೊಳಾಲೋಚನೆಯಮಾಡುತೀ ಪಾತಕನಿಂಗಾಕೆ ಯತಿ ರಮಣೀಯ್ಯತಾಸಮವಲೋಕನ ಸಮುತ್ಪನ್ನ ಪರಮಾನುರಾಗ ತಲೆದೋರಿ ಮರುಳಾದ ನಿವನಿದಕೆ ತತ್ಘಟನಮುನ್ನುಳಿದು ಮಿಗಿಲಾದುಪಾಯಗಳಿಗವಕಾಶಮಿಲ್ಲಿಹುದು, ಮೇಣ್ ಪ್ರಡವಿಪರ ಕನ್ನೆಯತಿ ಬಡವರಾದೆಮಗೆ ಸಂಘಟನೆಯಾಗುವುದೇ? ಶಿವಶಿವಾ, ಮಹಾದೇವ, ಕಡುಮೂರ್ಖನಾದೀ ತನೂಭವನ ಕಾರಣದಿಂದ ಪೋಷಿಸಿದ ನರಪತಿಯೊಳೀಗ ವಂಚನೆಯುಂ ಮಾಡಿ ಭೇದೋಪಾಯದಿಂದ ನಂದನನಿಗರವಿಂದಲೋಚನೆಯ ಸಮ್ಮಂಧವಾಗುವತೆರನ ಮಾಡಬೇಕಲ್ಲ

ದಿನ್ನಿಲ್ಲ ಪ್ರಾಯಶ್ಚಿತಾಂತರಗಳೆನುತ ಮಾನಸದಲ್ಲಿ ನಿಶ್ಚಯವ ಮಾಡುತಿರಲು ;

ಇತ್ತಲಾ ಸುರುಚಿಯು ಮರುಗುತ್ತ ಮನದಲ್ಲಿ ಗುರುಪುತ್ರನ್ಯಕ್ಕಾರಮಾಡಿದುದ ನೆನೆನೆನೆದು ಕ್ರೋಧದುರವಣೆಯಿಂದ ಲನುಚಿತಮಾಡಿದೆನು, ವಿಪ್ರಾಪಮಾನವತಿ ಕ್ಷಿಪ್ರದಿಂದುರುಪುವದು ಶತ್ರುವಿನ ಗೋತ್ರಮಂ, ಸತ್ಯಮಿದಕ್ಕಾರಣಂ ಕರೆಸಿ ತಜ್ಜನಕನನ್ನಾತನಡಿಗೊಂದಿಸುತ ಬೇಡಿದುದನಿತ್ತು ತನ್ನ ಕ್ರೂರಾಚರಣೆಯಿಂ ಜನಿಸಿದ ವಿಷಾದಮಂ ಪರಿಹಾರಮಾಡಿಕೊಂಡವರನುಗ್ರಹವ ಸಂಪಾದಿಸುವೆನೆಂದೆನುತ ಮನದೊಳಾಲೋಚನೆಯಮಾಡಿ, ದೂತಿಯು ನೋಡಿ ಕರೆ ಪುರೋಹಿತರನೆನಲು ; ಆಕೆಯುತಿ ಜವದಿಂದ ಬಂದು ಮುಖಜಾತನಂ ತಂದು ತೋರಿಸಲು, ನೃಪನಂದನೆಯು ವಿಪ್ರನಡಿಗೊಂದಿಸುತ ಪೀಠದಲಿ ಕುಳ್ಳಿರಿಸಿ ಸತ್ಕರಿಸಿ ವಿವರಿಸಿದಳವನಣುಗನ ದುರುಕ್ತಿಗಳನಾ ಮಹೀಸುರಪ ಕೇಳುತಿರುವುದವಪಂತೆ ಕಡುರೋಷದಿಂ ನುಡಿದನೆಲೆತಾಯೆ ! ತನ್ನುದರದೊಳು ಜನಿಸಿದನುಗದಂದೇ ಪಗೆಯಾಗಿ ದುರುಳನವನಿಗಿನ್ನುಚಿತ ಶಿಕ್ಷೆಯನು ಮಾಡದಲೆ ಕಳುಹಿದುದಕೇನೆಂಬೆ ಸಬಲೆ ! ಬಹುಮಾತಿನಿಂದೇನು ಫಲ. ಫಲಿತಾರ್ಥವಿರುವಕಡೆ ಗೀತನಂ ತೊರೆದು ಪರಲೋಕಮಂ ಪಡೆಯುವರೆ ಪರಮಾಂತರಂಗ ಸಾಧನವಾದ ಪರಮಹಂಸಾಶ್ರಮವಧರಿಸುವೆನು ಸಾಕು ಸಂಸಾರದೀ ಕೊಟಲೆಯು ಎನುತ ನಿರ್ವೇದದಿಂನುಡಿಯಲು, ಆ ಸುರುಚಿಯದಕೇಳಿ ಅತಿಭೀತಿಯಿಂ ಮನದೊಳಾಲೋಚನೆಮಾಡಿ ಬಲುವಿನಯದಿಂ ನುಡಿದಳು—ಆಚಾರ್ಯ! ಕೆಳ್ತರಳರವಿವೇಕದಿಂಮಾಡಿದಪರಾಧಮಂ ಮನಕೆನಿತುಘನವಾಗಿ ತಿಳಿಯುತಾ ಯಾಸಮಂತಾಳಿ ಗಾರ್ಹಸ್ಥ್ಯಮಂತೊರೆಯುವತಿಸಾಹಸವ ಹೃದಯದಿ ಭವಾದೃಶರು ಯೋಚಿಸುವುದೇನುಘನವಹಹ ! ಸತ್ಪಥತಪ್ಪಿ ಬಾಲಕರು ನಡೆಯುತಿರಲು ಅಂಧಕರತೆರದಿಂದ ಹಿರಿಯರಾದವರು ಮೇಣ ಮಿಗುಚಿತೋಕ್ತಿಗಳನೊರೆದು ನಿಗ್ರಹಿಸಿ ಸನ್ಮಾರ್ಗಮಂ ತೋರಿಪಾಲಿಸುವರಲ್ಲದೆ ತಾತ, ತಪ್ಪಿಸುವರೆ ? ಸಾಕದಂತಿರಲಿ, ಕೇಳೀಗಲೆವಿನ್ನಾರ್ಯರಪರಾಧಮಂ ಮರೆದು ಮುಂದೀತೆರದೊಳಾಚರಿಸದಂತೆ ಬಿಗಿಮಾಡಿ ಪಾಲಿಸುವುದನುತಾಪಗೊಳಲೇನು ಫಲವೆಂದು ಮದನೆಮಾಡಿ ಇಂದುಮುಖಿಯು, ಭೂಸುರನ ಸುಂದರೀ ! ಸಾಧುಜನಸಮ್ಮತ ಸುಧಾಸಾರ ಸನ್ನಿಭಸುಗಂಭೀರ ಮೃದುಮಧು

ರ ಭಾರತೀ ನಿಕರಗಳಕೇಳಿ ಕಡುವಿಸ್ಮಯದಿ ಮಾನಸದೊಳೀದೃಶರೊಳಂತು
ತಾಂವಂಚನೆಯುಮಾಡಿ ವಿಪ್ರಿಯುವ ಸಾಚರಿಸುವೆನು, ಶಿವಶಿವ, ಮಹಾದೇ
ವ! ಎನುತ ನಾನಾವಿಧದಿಂಯೋಚಿಸುತನಿಶ್ಚಯುಮಾಡಿ ಕಾರ್ಯವನೆ ಕಡೆಗೆಪ್ರೊ
ಡವೀಶನತುಜಾತ! ಕೇಳೀಷಣತ್ರಯದಲ್ಲಿ ಪುತ್ರಗಿಂತಧಿಕಮಿನ್ನಿಲ್ಲ ಸಂಸಾ
ರದೊಳು, ತರುವಾಯ ಭೂಸುರಾಧಮನಾಕೆಯೊಡನೆಂದನೆಲೆ ವತ್ಸೆ! ಮತ್ಸು
ತನು ಪರಮಾಸುರಾಗ ಪರವಶನಾಗಿರುವ ಶಿಷ್ಯಭಾವಮಂ, ಪೋಷ್ಯ ಪೋಷಕ
ಭಾವಮಂ ಮರೆದು ಮನಬಂದತೆರದಿಂ ದುರುಕ್ತಿಗಳನಾಡಿದುದಯುಕ್ತವದ
ರಲ್ಲಿ ಸಂಶಯಮಿಲ್ಲ, ಖಂಜರೀಟಾಕ್ಷಿ! ನೀನಂಜದತಿರೋಷದಿಂ ಗುರುತನೂ
ಭವ ನಿಗಮಮಾನವಂ ಮಾಡಿದುದು ಮಹದ ನುಚಿತಾರಂಭವದರಿಂದ ಕೇ
ಳಿಂದುಮುಖಿ! ನಿಖಿಲಾಘ ನಿಕರಗಳು ಪರಿಹಾರವಾಗುವಪ್ರೊಲು ಬಹುಫಲೋ
ನ್ಮುಖ ವಾದಕಾರ್ಯವನು ಪೇಳುವೆನು ಪ್ರಕೃತದೊಳು ಮಾಡುವರೆ? ಎನಲು;
ಆವಿಲಾಸಿನಿಯು ಕರಮುಗಿದು ತಾತ! ತಾಂ ಕೃತಕೃತ್ಯಳಾಗುವೆನು ಪೇಳು
ಜವದಿಂದೆನಲು; ಖೂಳ ವಿಪ್ರಾಧಮನು ಪೇಳಿದನು. ಮಾನಿನಿಯೆ! ಕೇಳು,
ಮೇಣೀವ್ರತೋದ್ಯಾಪನೆ ಯೊಳಾಚಾರ್ಯ ಪೂಜೆಯನು ಮನಮುಟ್ಟ ಮಾಡು
ತ್ತ ಲ ವಗಿಷ್ಟಮಾಗಿರುವ ಸರ್ವಸ್ವಮಂ ದಾನವಂ ಮಾಡುವರೆ ನಿನ್ನಂ
ಗವೊಳಗಿರುವ ಭೂಷಣಾಂಬರಗಳೊಳಗಿನಿತುಳಿಯದಂತೆ ನೀ ದಾನವಂ
ಮಾಡಿದರೆ ಮಾಡಿದೀವ್ರತ ಸಫಲ ಮಾಗುವದು, ವಿಪ್ರಾವಮಾನ ಜನಿತಾಘ
ಪರಿಹಾರ ವಾಗುವದೆನೆಗೆ ಪುತ್ರಭಿಕ್ಷವನಿತ್ತ ಮಹದಪರಿಮಿತ ಸುಕೃತಘಟನೆ
ನಿನಿಗಾಗುವುದು, ತನ್ನ ಮನದೆಣಿಕೆ ಕೈಗೂಡುವುದು, ಪುತ್ರ ನಿನ್ನಲ್ಲಿ
ತೋರಿದನುರಾಗಮಂ ದೂರದಲಿ ಮಾಡಬಹುದೆಂದೆನಲು, ಮಾನಿನಿಯದೆಂತೆನ
ಲು, ಭೂಸುರ ನುಡಿದನೆಲೆ ತಾಯೆ! ಕೇಳ್ವಿಪ್ರರೊಳಗೋರ್ವ ಸತ್ಕುಲಜೆ
ಯಾಗಿರುವ ಸುಂದರಿಯಾದ ಕನ್ನಿಕೆಯನೋಡಿ ಮತ್ತವಳ ನಿಶ್ಚಯುಮಾಡಿ
ನಿನ್ನ ದಿವ್ಯಾನರ್ಘ ಭೂಷಣಾಂಬರಗಳನ್ನು ಕನ್ನಿಕೆಗಲಂಕರಿಸಿ ಮಾಡಿದಡೆ
ಪರಿಣಯುವ ನೋಡುತೀಭ್ರಾಂತಿಯನು ಬಿಡುವ ಸುತನದರಿಂದ ಪೇಳುವೆನು
ನಿನಿಗುಚಿತವಾಗಿ ತೋರಿದಡೆ ಕೇಳಾಗಬಹುದೆಂದೆನಲು; ಮಾನಿನಿಯು ಪ್ರರೋ
ಹಿತನ ಕೈತವನರಿಯದತಿ ಮೋಹದಿಂದಾಚಾರ್ಯ ಪೂಜೆಯನು ಮಧುಪರ್ಕ

ಗಂಧ ಅಕ್ಷತೆಗಳಿಂದಖಿಳ ವೈಭವದಿ ಮಾಡಿ, ತಾಂ ಧರಿಸಿರ್ದ ಭೂಷಣಾಂಬರ ಗಳನು ಬೇಡಿದಂದದಿ ನೀಡಿ ಗೋ ಭೂಹಿರಣ್ಯಗಳನಪರಿಮಿತವಾಗಿತ್ತು ವಂದ ನೆಯುಮಾಡಲು, ಆನಂಪದಿ ಪುರೋಹಿತನು ಕೂಡಿಬಂದುದು ತಾನುಮಾಡಿರು ವುಪಾಯುವೆನುತಾಡಿದನು ಸತಿಯೊಡನೆ. ನೀರೆ! ಕೇಳಿನ್ನೊಂದು ಸಾಧನವು ಪ್ರಕೃತೋಪಯೋಗವಾಗಿರುವುದೆನ್ನೆಡೆಯೊಳದ ನೋಡಿ ನೀನಾಮುಹಾದಿವ ಸಿದ್ಧಾಂಜನವ ನವನಿರುತದಲಿಧಾರಣೆಯುಂಮಾಡಿದಡೆ ಮತ್ತನುಜ ನಿನ್ನೊಳನು ರಾಗನುಂತೊರೆವು ನೀನಿನ್ನೆಡೆಯು ಸೇರನು, ಅಜನಾರಿಯುನುಕಂಡಂತೆ ಮಾನಿನೀ ಮಣಿ! ಎನಲು, ಕೇಳುತಾಸುರುಚಿಯುದ ನೀಡು ತಂದೆನಗೆನುತ ಬೇಡಲಾ ಭೂಸುರನು ನಾರಿಯಿತ್ತಖಿಳ ಸಂಭಾರಮಂ ತೆಗೆದು ತನ್ನಾಲಯಕೆ ಬಂದು ಮುದದಿಂದಲೊಂದಂಜನವಮಾಡಿ ಕಪಟೋಪಾಯದಿಂದ ಸುಂದರಿಯೆಡೆಗೆ ಬಂ ದು ಮತ್ತಂಜನವನಿತ್ತು ಮನದಲ್ಲಿ ಮತ್ತನುಜ ನಿನ್ನಾಶೆಯನು ಬಿಡವಡೆಯು ತಂದೆಗಂತಾಗುವದು ಎಂದು ಕೇಳುತ್ತೈದಿದನು ಮಂದಿರಕೆ, ವಿಪ್ರ ನಿಜನಂದನನ ಕರೆದಖಿಳ ಸಂಧಾನಮಂ ನೊರೆದೊಡಂಬಡಿಸಿ ಎಂದಿನಂತರಸನೆಡೆಗೈದಿ ಸುಕು ಮಾರ! ಕೇಳಂದಿನಾರಭ್ಯ ವಾವಿಪ್ರನತಿದುಗುಡವುಂ ನಟಿಸುತಿರಲು; ಒಂದು ದಿನ ವಸುಮತೀಕಾಂತನೇಕಾಂತದೊಳು ಕುಳಿತು ಮಾತಾಡುತಿರಲೊಂದು ನುಡಿಗಾದಡೆಯು ಸಂದರ್ಭಗೂಡಿ ಪ್ರತ್ಯುತ್ತರವನಾಡದಿರಲು, ಅರಸನಾವಿಪ್ರ ನಂ ಕುರಿತೆಂದನಾರ! ಭವನೀಯ ಮತಿಸರಣಿತೆಯು ನಿರತಚಿಂತಾಂಗನಾಸಕ್ತ ಮಾಗಿರುವಂತೆ ತೋರುತಿವೆ ಕಾರಣವಪೇಳೆನಲು ; ಭೂಸುರನು ನುಡಿದನವ ನೀಶ! ಕೇಳಾವು ಚಿರಕಾಲ ಭವದಾತಪತ್ರಾಮುಲಛ್ಛಾಯದೊಳು ಸುಖದಿಂದ ವಾಸವನು ಮಾಡಿರ್ದೆವಿದುವರಿಗೆ, ಮುಂದಕ್ಕೆಡರೊದಗಿ ಬಂದಂತೆ ತೋರುತಿವೆ ಯದರಿಂದ ಚಿಂತಿಸುವೆನೆಂದೆನಲ್ಕಿಂದುಸೇನನುಕೇಳಿ ಸಂದೇಹದಿಂದಾರ್ಯ! ಎಡರ ದೇನೆಂದೆನಲು, ಪೇಳಲಾಗದು ರಾಯ! ಪೇಳಿದಡೆಯುಂ ವ್ಯರ್ಥವಾದ ಕಾರಣ ದಿಂದ ಕೇಳದಿರು ನೀನೆಂದೆನಲು, ಶಿಣದಿಂ ಬಹುವಿಧದಿ ಪೇಳಬೇಕೆಂದೆನುತ ಬೇಡಲವನಿಂತೆಂದನು - ಅವನೀಶ! ಮದ್ವಾಕ್ಯದೊಳು ಲೇಶ ಸವಬುದ್ಧಿ ನಿನಗಿರುವವದಬಲ್ಲೆ ನಾನಾದಡೆಯುಂ, ಈ ವಿಷಯತಾವೃಶವು, ಹಾಗಲ್ಲದಾ ನೊರೆದಿನಾದಡೆಯು ಸಿದ್ಧಯುವು ತೋರುವುದೆ ಕೇಳಾರಿಗಾದಡೆಯು, ಇನಿತು

ಸಂಶಯವ್ಯಾಕೆ, ಭಾವಿಭೂತಾರ್ಥವೇನಾದಡರುಹಲಿಬೇಕು, ವರ್ತಮಾನಾರ್ಥವನು ಪೇಳಲ್ಯಾತಕೆ, ನಿನಿಗೆ ತೋರುವೆನು ಪ್ರತ್ಯಕ್ಷವಾಗಿಯೆ ನೋಡು, ತರುವಾಯು ನಿಶ್ಚಯುವ ನೀವಮಾಡು, ಎನಲಾ ಮಹೀಪತಿಯು ತೋರುವಿರದೆಂದೆನಲು, ಆ ಪುರೋಹಿತನು ಕಾಶ್ಯಪೀಕಾಂತ! ಕೇಳ್ಕಾತರವ ತಾಳದಿರು, ಕಾಲವ ನಿರೀಕ್ಷಿಸುತ, ಕಾಳರಾತ್ರಿಯು ನಿನಿಗೆ ತೋರುವೆನುತಾಳು, ತಾನಾವಾಗ ತಿಳುಹುವೆನೋ? ನೀನು ಮೋಕ್ಷಾಕ್ಷಣದಿ ಕಸ್ನೊಡನೆಬಂದು ನೃಪನೋಡಿ ಮನದೊಳಗಿರುವ ಸಂದೇಹವನುಬಿಟ್ಟು ಮುಂದಿನಾಲೋಚನೆಯುಮಾಡಬಹುದೆಂದೆನುತ ಪೇಳುತಪ್ಪಣೆಗೊಂಡು ತನ್ನ ಮನೆಗೈದಿ, ಮತ್ತೊಂದೆರಡು ದಿನಗಳೆದು ನಂದನನ ಕರೆದು ನೀನಿಂದು ಕೇಳೀ ನಗರದಲ್ಲಿ ಯಾರಾದಡೆಯು ಮೃತವಾದ ಪೋನನಾಪಿತೃವನಕೆ ರವಿಯುಸ್ತಮಯ ಸಮಯದೊಳಗೇ ಇದನು ನೋಡಿ ತಿಳುಹಿದಡೆ ತನಗಿದನು ತಾನು ಕೃತಕೃತ್ಯನಹೆನೆನುತ ಸುತನಂ ಕಳುಹಿಸುತನಿಗೋಸುಗ ಮುಂದೆ ಮಾಡುವ ವಿಧಾನಮಂ ನೊರೆದೊಡಂಬಡಿಸಲಾ ಮಾನಿನಿಯು ಮಾನಸದಿ ಯೋಚಿಸುತೊಡಂಬಟ್ಟಳೇನೆಂಬೆನು, ವತ್ಸ! ನಾರಿಯರ ಸಾಹಸವನಾಮಹಾನಗರಿಯ ಪ್ರಾಣಿ ಸಂದೋಹದೊಳು ಜನನ ಮೃತಿಯಿಲ್ಲದಿಹ ವಾಸರಗಳೇಇಲ್ಲ, ವನಿತ ಜನಿತಾಸಮಾಶ್ರಯುಮಾದ ಕಾರಣದೊಳಾದಿವಸವಸ್ತಮಯಕಾಲದೊಳು ವಿಪ್ರರೊಳಗೋರ್ವ ಮಾನಿನಿ ಮೃತಿಯುನೈದಲಾ ಪೋನ ತದ್ಬಾಂಧವರು ಪಿತೃವನಕೆ ರೋದನ ಮಾಡುತ್ತ ಕೊಂಡೊಯ್ಯಲದನೋಡಿ ಭೂಸುರಾತ್ಮಜನು ಮನಮುಳುಗಿಮುತ್ಸಾಹದಿಂ ತಾತನೆಡೆಗೈದಿ ತಿಳುಹಲ್ಕೆ, ವಿಪ್ರಾಧಮನು ವೋದದಿಂ ಸತಿಸುತರಿಗಾ ಮಹಾನಿಶಿಯಲ್ಲಿ ಮಾಡುವ ವಿಧಾನಮಂ ತಿಳುಹಿ, ತಾಂಮಂತ್ರಜ್ಞಭಾವಮನ್ನಳವಟ್ಟು ಕರದಲ್ಲಿ ಕಂಕಣವಕಟ್ಟಿ ರುದ್ರಾಕ್ಷಿಗಳ ಹಾರಮಂ ಧರಿಸಿ ಭಸ್ಮಾವಕುಂಠಿತ ಸರ್ವ ದೇಹಮುಳ್ಳವನಾಗಿ ಕಾಲಭೈರವನಂತೆ ಘೋರ ರೂಪವತಾಳಿ ಹಸ್ತದೊಳು ಭಸ್ಮಮಯ ಪಿಂಡವನುಧರಿಸುತೇಕಾಂತದಲಿ ವಸುಮತೀ ಕಾಂತನೆಡೆಗೈದಿ ಧರಣೀಶ! ಕೇಳಿಂದಿನಿರುಳೆನ್ನೊಡನೆ ಧೈರ್ಯಮಂಮಾಡಿ ನೀನೈದಿದಡೆ, ಆ ಮಹಾಮಾರಿಯನು ತೋರುವೆನು, ಸಮಯವಿದು ತಾನಿರುವೆನಂಜದಿರು ಎಂದಭಯವನ್ನೀಡಲು, ಆ ಮಹೀರಮಣನು ನಿಜಖಡ್ಗಮಂ ಧರಿಸಿ ಮತ್ತಾ ಸುಪ್ರಾ

ನಿಶಿಯಲ್ಲಿ ವಿಪ್ರನೊಡನೈತರಲು, ಘೋರಸ್ಮಶಾನವನುಪ್ರೊಕ್ಕು ಮೇಣೊಂದೆ
ಡೆಯೊಳಾನರಾಧಿಪ ಸಹಿತ ವಿಪ್ರನುರುತರುಲತಾವ್ಯೂಹಮಂ ಮರೆಮಾಡಿ ಕು
ಳಿತು ನೋಡುತ್ತಿರಲು, ಆ ಪ್ರದೇಶದೊಳೆಲ್ಲಿ ನೋಡಿದಡೆಯುಂ ನರಕಪಾಲಾ
ಸ್ಥಿಚಯಭರಿತವಾಗಿಹುದು, ತತಚಿತಾಧೂಮ ದುರ್ಗಂಧಮಯವಾಗಿಹುದು,
ಬತಮೃತಪತಿತ ಪತಿಸುತ ಭ್ರಾತೃಮುಖ ಬಂಧುಜನ ವಿರಹಜನಿತ ವಿಷಾದ
ಗೋಮಾಯು ಶಾಕಿನೀಪ್ರೇತ ಭೇತಾಳಮುಖ ಭೂತಗಣ ಸಂಚಾರ ಸಾಂ
ದ್ರವಾಗಿಹುದು, ವಿಲಸದಬಲಾನಿವಹರೋದನಧ್ವಾನಮಯ ಸಮ ಸಮಯ
ಸಮುದಿತ ವಿವಿಧ ವಚನ ನಿಚಯಶ್ರವಣ ತತ್ಕ್ಷಣ ಸಮುತ್ಪನ್ನ ವಿಷ
ಯ ವೈರಾಗ್ಯ ಪರಿದಗ್ಧ ಪಥಿಕವ್ರಾತ ವಿವಿಧ ಚಿತ್ರವಿಲಾಪಮಯ
ವಾಗಿ, ಸಂಯಮನಿಯಂತೆ ನಾಟಕಬಂಧ ಮಯವಾಗಿ, ಖಲನಂತೆ
ಜನಕಾಪಕಾರಿಯಾಗಿರುವ ಬಹು ತತಚಿತಾನಲಶಿಖಾಹೃತ ನಿಶಾ ಗಾಢಾಂಧ
ಕಾರವಾಗಿರಲು, ನೃಪ ನೋಡುತಿರಲಾ ಮಹಾ ನಿಶಿಯಲ್ಲಿ ವಿಪ್ರ
ಸತಿ ನೃಪಸುತಾಭೂಷಣಾಂಬರಗಳನು ಧರಿಸಿ ಮಂಡೆಯ ಕೆದರಿ ಮುಖಕೆ ಮಸಿ
ಯನು ಬಳಿದು ರಕ್ತಸುಮಹಾರಗಳ ಧರಿಸುತ್ತ ಕೊರಳಲ್ಲಿ, ಕರಯು
ಗದಿ ಕೊಳ್ಳಿಗಳ ಪಿಡಿದಟ್ಟಹಾಸವನುಮಾಡುತ್ತ ಪುರದಿಂದ ಧಾವನೆಯಮಾಡು
ತ್ತ ನೋಡುತ್ತ ನಾಲ್ದೆಸೆಯ ಬಂದಳಾ ಮಂಗಳಾವನಿಗೆಚಿತಿಯಡೆಗೈದಿಸುತ್ತ
ನರ್ತನವನ್ನು ಮಾಡುತ್ತ ವಿಸ್ವರದಿ ಕೂಗುತ್ತ ಚಿತಿಯನ್ನು ಕೆದರಿ ಪೆಣನ ಶೆಳೆ
ದು ಪರಿಪರಿಯ ಚೇಷ್ಟೆಗಳ ಮಾಡುತಿರೆ? ಭೂಸುರನು_ಭೂಪ! ಈ ರಾಕ್ಷ
ಸಿಯ ನೋಡಿದೆಯ, ನಿನ್ನ ಮಗಳಾಗಿ ಜನಿಸಿರುವದಕೆ ಕಾರಣವದೇನೋ ತಾನ
ರಿಯೆನೆನಲು, ಇಂದುಸೇನನು ದುಗುಡದಿಂ ವಿಪ್ರ! ಮಮತನುಜೆ ಇವಳೆಂತೆ
ನಲು, ನಗುತ ಭೂಸುರ ನುಡಿದನೆಲೆ ಮಹೀಭುಜ! ಪುರೋಭಾಗದಲ್ಲಿ ಕಾಣು
ತಿಪ ವ್ಯಕ್ತಿಯಾಕಾರವನು ಗಮನಗಳ ನಾದಮಂ ಭೂಷಣಾಂಬರಗಳನು
ನೋಡುತ ವಿಮರ್ಶೆಯನುಮಾಡು ಎನಲು, ಧರಾಕಾಂತನತಿಚಿಂತೆಯಿಂ ನೋ
ಡುತ್ತ ನುಡಿದನಾಚಾರ್ಯ! ಆಳಾಕಾರಗಮನಗಳ ನಾದಗಳದಂತಿರಲಿ, ಭೂ
ಷಣಾಂಬರಗಳತಿ ಮೌಲ್ಯವಾಗಿರುವಂತೆ ತೋರುತಿದೆ, ಅದರಿಂದ ಸಂಶಯ
ವು ಬಾಧಿಸುವುದಾಕಲ್ಪವಸ್ತ್ರದ ನಿದರ್ಶನವು, ಮೊಣಾಡಡೆ, ಆಬಳಿಕ ಮ

ಗಿಲಾದ ಸಂಶಯವೆಲ್ಲಿ ನಿಲ್ಲುವುದೀರಕ್ಕಸಿಯೆ ಸುತೆಯೆಂದು ನಿಶ್ಚಯಮಾಡಬಹುದೆಂದೆನಲು, ತತ್ಕ್ಷಣದಿ ಮನದೊಳಾಲೋಚನೆಯಮಾಡಿ, ಭೂದಿವಿಜನತಿವೇಗದಿಂ ಭಸ್ಮದುಂಡೆಯ ಪಿಡಿದು ಮಂತ್ರಿಸುತ ನೃಪನಳಿಕದೊಳಗಿಟ್ಟು ಜವದಿಂದ ಭೂತಾಭಿಮುಖನಾಗಿ ನಡೆಯುತಿರೆ, ನರಪತಿಯು ಭೀತಿಯಿಂ ನುಡಿದನೆಲೆವಿಪ್ರ! ನೀನ್ಯಾತಕಾರಕ್ಕಸಿಯ ಸನ್ನಿಧಿಗೆ ಪೋಗುತಿಹೆ, ನಿನ್ನನಾರಕ್ಕಸಿಯು ಭಕ್ಷಿಸಿದಡೇಗೈವೆ, ತಾಳುಪೋಗದಿರೆನಲು; ದ್ವಿಜನೆಂದ, ಭೂಸುರನ ಭೂತ ವೇತಾಳಗಳು ಮುಟ್ಟಲಂಮದೆ, ರಾಯ! ತಾನದನು ನಿಗ್ರಹಿಸಲಾರದಡೆಯುಂ ತನ್ನನಾಪಿಶಾಚವು ಮುಟ್ಟದಂತೆಯಾದಡೆಯುಂ ಸತ್ಕೃತಿಯುಲಿಲ್ಲದಿರೆ? ತಾನುವಿಪ್ರನಾಗುವೆನೆಂತು, ಆದಕಾರಣದಿಂದ ಪೋಗಿಬಹೆ ನೋಡುತಿರು, ಸರ್ವಸಾಹಸದಿಂದ ಕಾರ್ಯಮಂ ಮಾಡಿಕೊಂಡೈತರುವೆ ಭಯಬ್ಯಾಡ, ಹೋಗಿಬಹೆನೆಂದೆನುತ ಭಸ್ಮವನು ಮಂತ್ರಿಸುತ ಮೆಲ್ಲನಡಿಯಿಟ್ಟು ನಡೆಯುತ್ತಲಿರಲು; ಆ ಮಹಾರಕ್ಕಸಿಯ ರೂಪಮಂ ತಾಳಿರುವ ಮಾನಿನಿಯು ಮಾನುಷನು ಬದಿಗೆ ಬಂದುದಕಂಡು ರೋಷವನು ತಾಳಿದವಳಂತೆ ನಾನಾವಿಧದಿ ಕೂಗುತ್ತ ಮಹದಟ್ಟಹಾಸವನು ಮಾಡುತ್ತ ಅಟ್ಟುವಳತೆರದಿಂದ ಸಮುಖಕೆ ಧಾವನೆಯ ಮಾಡುತೆಡೆಗೈದಿ ಬಲುಭೀತಿಯಿಂ ಪಿಂತಿರುಗಿಪೋಗುವಳ ತೆರನಂತೆ ಓಡುತ್ತ ಭೂಯೋಪಿ ಪಲ್ಗಡಿದು ಸಮ್ಮುಖಕೆ ಬಂದು ಪಿಂತಿರುಗುತ್ತಲವನ ಸುತ್ತುತಲಿಂತು ಹೋರ್ಯಾಡುತಿರೆ? ವಿಪ್ರನು ಮಂತ್ರಿಸಿದ ಭಸ್ಮವನು ಎಸೆಯಲಾ ರಕ್ಕಸಿಯು ನಿಶ್ಚೇಷ್ಟಳಾಗಿರಲು, ಸ್ಥಾಣುವಿನತೆರದಿಂದ ಮಂತ್ರಮಹಾತ್ಮೆಯಿಂ ಸ್ತಬ್ಧಳಾಗಿರುವಂತೆ ನೋಡುವರ ಕಂಗಳಿಗೆ ತೋರುತಾ ಮಾಯಾವಿ ಮಾನಿನಿಯು ಪ್ರಶಮಿತವ್ಯಾಪಾರಳಾಗಿರಲು ; ಭೂಸುರನು ಮೆಲ್ಲನಡಿಯಿಟ್ಟು ರಕ್ಕಸಿಯೆಡೆಗೆ ಬಂದು ನಿಂದನು, ಭೂಪ ನೋಡುತಿರೆ ರಕ್ಕಸಿಯ ಭೂಷಣಾಂಬರಗಳನು ಮೆಲ್ಲಮೆಲ್ಲನೆ ತೆಗದು ಕರದಲ್ಲಿ ಜವದಿಂದ ಧರಿಸಿ ತತ್ಕರದಲ್ಲಿ ಪಿಡಿದಳಾತಗಳಿಂದ ಮಹಿಷಿಯನ್ನು ತೆಗದು ತತ್ಫಾಲದೊಳಗಿಟ್ಟು ತಾಭಸ್ಮವನು ಚಲ್ಲಿದೆಡೆಗೈದಿ, ಮತ್ತಾ ಪ್ರದೇಶದೊಳೊಂದು ಮಂಡಲವ ಬರದದರ ಮಧ್ಯದಲಿ ನಿಂದು ಮಂತ್ರೋಪಸಂಹಾರವನುಮಾಡಿಕೊಂಬುವನಂತೆ ಧ್ಯಾನವನು ಮಾಡುತಿರಲು, ಆ ಮಹಾರಕ್ಕಸಿಯು ನಿದ್ರೆತಿಳಿದೆದ್ದವಳತೆರದಿಂದ ಕೂಗುತ್ತ [illegible]

ತಲ್ಲಣಿಸುವಂದದಿ ನಾರಿ ತಾದಿಗಂಬರಳಾಗಿ ಕರದ ಕೊಳ್ಳಿಯ ಬಿಸುಟು ಧಾವನೆ ಯುಮಾಡಿದಳು ನಗರಾಭಿಮುಖಿಯಾಗಿ, ತರುವಾಯ ಭೂಸುರನು ಜವದಿಂ ಧರಣಿಪತಿಯೆಡೆಗೆ ಬಂದದನೆಲ್ಲ ಮುಂದಿಡಲು, ನರಪತಿಯು ನೋಡಿ ವಿಸ್ಮಿತ ನಾಗಿ ರಕ್ಕಸಿಯೆ ತನುಜಾತೆ ಎಂದು ನಿಶ್ಚಯಮಾಡಿ ಪೃಡನೆ ನಿನ್ನಡಿಯನ್ನು ನಂಬಿದೆನಗೀಪರಿಯ ಮಹದೆಡರ ಕಡಲಲ್ಲಿ ಮುಳಗಿಸುವುದುಚಿತವೆ? ಗಡ! ಮಹಾ ಪಾಪಿಯಾದೆನ್ನೊಡಲನ ಸುಡು ಸುಡೆಂದವನಿಪತಿ ರೋದನವ ಮಾಡಿ ಕಡುದುಃಖದಲಿ ಮಿಡುಕುತಿರೆ, ಪ್ರೊಡವಿಬಿಡುಗಣ್ಣನದನೋಡಿ ಬಲು ಹರ್ಷ ದಲಿ ನುಡಿದನವನೀಶ! ಸಂತಾಪಗೊಳಲೇನುಫಲ, ಮಡದಿಯೆ ರಕ್ಕಸಿಯು, ಎಂದು ನಿಶ್ಚಯಮಾಡಿ ಘಣಿಯಲ್ಲಿ ಮಹಿಷಿಯು ತಾಂಬರದು ಬಂದಿರುವಂದ ನಾಳೆಯುದಯದೊಳೆದ್ದು ನೋಡು ನೀನವಳಳಿಕದೊಳಗೆ ತಟ್ಟಿನ್ನಿಯಿರೆ ರಕ್ಕ ಸಿಯೆ ಸುರುಚಿ ಎಂದೆನುತ ನಿಶ್ಚಯವನ್ನು ಮಾಡುಹೆತನಕ ನೀನಳಲದಿರು ತನ್ನೆದೆಯು ಬಿರಿಯುತಿದೆಯದರಿಂದ ಅರಮನೆಗೆ ದಯಮಾಡಬೇಕೆನುತ ನಯ ದಿಂದೊಡಂಬಡಿಸುತರಮನೆಗೆ ಕರತಂದು ಕರದೊಳಿಹ ಭಸ್ಮವನುನರಪತಿಯ ಹಸ್ತದೊಳಗಿರಿಸುತಪ್ಪಣೆಗೊಂಡು ಬರಲು, ಆ ಮಹೀಪತಿಯು ದುಗುಡದಿಂ ಶರ್ವರಿಯು ಕಳೆದಹಮ್ಮುಖದಲ್ಲಿ ಸುತೆಯೆಡೆಗೆಬಂದು ತನ್ಮುಖಕಮಲವನು ನೋಡೆ, ಸುರುಚಿಯಾ ವಿಪ್ರವರನಿತ್ತ ಕಜ್ಜಲವನ್ನು ಧಸಿರಲು ನೋಡಿ ನೃ ಪನಹಹ! ರಕ್ಕಸಿ ಇವಳು ನಿಶ್ಚಯವಿದೆಂದೆನುತ ಮನದಲ್ಲಿ ಭಯದಿಂ ದೆನುತ ತೆರಳುತಲ್ಲಿಂ ಜವದಿಂ ಯೋಚಿಸುತ ಬಹುವಿಧದಿ ಮುಂದಿನಾ ಲೋಚನೆಯು ತೋರದತಿದುಃಖದಿಂ ಕಳುಹಿ ಕಂಚುಕಿಗಳನು ಕರಸಲಾ ಚಾರ್ಯನಂ ವಿಪ್ರನತಿಜವದಿಂದಲರಸನೆಡೆಗೈತರಲು, ನುಡಿದ ನೃಪನವನೊಡನೆ ದುಗುಡದಿಂ ವಿಪ್ರ! ಮಮನಂದನೆಯು ರಕ್ಕಸಿಯು ಸಂದೇಹವಿಲ್ಲ ಕೇಳ್ಮುಂದೆ ಮಾಡುವುದೇನು ಹೇಳುಜವದಿಂದೆನಲು, ಮಂದಮತಿ ಮನದಲ್ಲಿ ನಿಶ್ಚೈಸಿದ ರ್ಥವನು ವಿವರಿಸಿದನವನೀಶ! ಕೇಳುಮೇಣೀಕಾರ್ಯವತಿ ವಿಷಮಮಾಗಿರುವುದ ದರಿಂದುಪಾಯದಲಿ ಕಳೆದು ಬದುಕಲಿಬೇಕು, ಕಳವುಕೈತವದಿಂದ ತಿಳಿಯದೊ ಲು ಮೃತ್ಯುತಾ ನೊಳಪೊಕ್ಕಡಾಬಳಿಕ ತಿಳಿಯೆ ನಿಗ್ರಹಮಾಡಲಳವಲ್ಲ, ಭೂಸುರನೇ! ನಿಜಭಾರಮಂತಾವು ತಿಳಿವಭಿಪ್ರಾಯಮೇಣಾಕೆಗೇನಾದಡೆಯು ವಿ

ದಿತವಾವಡೆ ತಮ್ಮನ್ನೇನಮಾಡುವಳೋ ? ಕೇಳದರಿಂ ರಹಸ್ಯದಲಿ ವಿ ಧಕರ
ಪದಾರ್ಥಗಳ ಸುಳಿತ್ತು, ಮೈಮರೆದು ಗಾಢನಿದ್ರೆಯುಗೈವ ಸಮಯವನಿರೀ
ಕ್ಷಿಸುತಲೊಂದು ಪೆಟ್ಟಗೆಯುಲ್ಲಿ ಭೂಷಣಾಂಬರ ವಸ್ತ್ರ ಭಕ್ಷಗಳನಿಟ್ಟು
ಮೇಣವರಲ್ಲಿ ಕೆಲವು ಧನಕನಕ ಸಹ ರಕ್ಕಸಿಯುನಲುಗನಂದದಿ ಮೆಲ್ಲನಲ್ಲಿಂ
ಮಲಗಿಸಿ ಮುಚ್ಚಿ ಗುಣಗಳಿಂಕಟ್ಟಿ ಬಲುಬುದ್ಧಿಶಾಲಿಗಳನುಪೊತ್ತು ಸತ್ವರದಿಂ
ದ ಯೋಜನಾನಂತರದಿ ತಟನೀ ಪ್ರವಾಹದೊಳು ತೇಲಿಬಿಡೆ ಕೊಂಡೊಯ್ಯುವುದು
ಅದನಾರು ಧನದಾಸೆಯಿಂದ ಸಂಗ್ರಹಿಸುವರೊ ತದನಿಷ್ಟವಾಗಿ ಪೋಗುವಳು
ರಕ್ಕಸಿ ಇವಳು, ತಮಗೆ ಲೇಸಹುದೆಂದು ತೋರುವುದುಪಾಯವೆನಗೆನಲು
ನರಪತಿ ಕೇಳಿ ವಿಪ್ರನಾಲೋಚನೆಯ ಮನದೊಳು ವಿಮರ್ಶೆಯನುಮಾ
ಭುಮದಿಂದದನೆ ನಿಶ್ಚೈಸಿ ಜವದಿಂದಲದರ ಸನ್ನಾಹವನು ಮಾಡುತಿರೆ,
ಪ್ರನು ತನ್ನಾಲಯಕೆ ಬಂದು ತನುಜಾತನಂ ಕರೆದಿದರ ಸಂಗತಿಯನೊರೆದ
ಮತ್ತೀಗಾಗ ನುಡಿದನೆಲೆ ಬಾಲಕನೆ ! ಜವದಿ ನೀನಿಲ್ಲಿಂದ ತೆ
ಳಿ, ನದಿಸ್ರೋತರಂಗಿಣಿಯು ತಟವಿಡಿದು ಯೋಜನಯುಗವನುಳಿದು ಕಿಂಶುಕಾ
ನ್ಯಾವಿಹ ತಾಣದೊಳು ಕುಳಿತು ತತ್ತೀರದೊಳು ನೋಡುತಾ ಪೆಟ್ಟಗೆಯ
ತೇಲಿಬರೆ ಮೆಲ್ಲನದ ಪಿಡಿದು ನೀಂಕಾನನದಿ ಬಿಚ್ಚದೆ ರಹಸ್ಯದೊಳು ಪ
ತ್ತು ಸತ್ವರದಿಂದ ಇನನುದಯವಾಗುವದಕಿಂತ ಮುಂದಲೆ ಬಂದು ಮಂ
ರವಸೇರುವುದು, ಎಂದು ನಾನಾವಿಧದಿ ನಂದನನಿಗುಪಾಯವನು ತಿಳುಹಿಕಳ
ಹಲ್ಕವನು ತಂದೆಯಾಡಿದ ನುಡಿಯಕೇಳಿ ಬಲುಹರುಷದಲಿ ಮುಂದುಗಾಣದೆಬ
ದು ತದನುಗುಣವಾಗಿರಲು ;

ಇತ್ತಲಾ ಭೂಪತಿಯು ಪತ್ನಿಯ ನೊಡಂಬಡಿಸಿ, ಮತ್ತ ಕ
ಶಿನಿಯನ್ನು ಮೃತ್ಯುವೆಂದೇತಿಳಿದು ಖಲನುದುರ್ನಯದಿಂದಲೊಲಿದ
ರಿದೇವಿಯನು ಕಳೆದುಕೊಂಬುವತೆರದಿ ದ್ವಿಜನೊರೆದರೀತಿಯಿಂ ಮಾಡ
ಅವನೀಶತನುಜಾತ! ಕೇಳಚ್ಚರಿಯ, ಅಸಮಯದೊಳು ವೇಷಧಾರಿಗಳು, ಪ
ದೇಶವಾಸಿಗಳು, ನೀತಾಭಿನಯಭರತ ಮೊದಲಾದ ವಿದ್ಯಾವಿಶಾರದರು,
ದೇಶಗಳನ್ನು ತಿರುಗುತ್ತ ಆಮಹೀಪತಿಯ ಸಂಸ್ಥಾನಮಂನೈದುತಿರೆ, ಬ
ಮಂದಿ ಚೋರರವರನ್ನು ಸಂಹಾರಮಂಮಾಡಿ ಸರ್ವಸ್ವಮಂ ಅಪಹರಿಸಲೆ

ಸುಗ ನಿಜಾಕಾರಗಳನುಳಿದು ಶ್ರೇಷ್ಟಿಗಳತೆರದಿಂದ ಅವರೊಡನೆ ಸಮಯು ವ ನಿರೀಕ್ಷಿಸುತ ಬರುತಿರಲ್ಕಿಂದು ಕೇಳಾಸನಗರಂದೆಡೆಯಲ್ಲಿ ಪ್ರವಹಿಸುವ ನಿಮ್ನಗಾತೀರದೊಳ ಗಸ್ತಮಯ ಮಾಗಲೊಂದೆಡೆಯಲ್ಲಿ ವಾಸವೆನುವಾಡಲು, ನಿಶಿಯಲ್ಲಿ ದಸ್ಯುಗಳು ಧರಿಸಿ ಶಸ್ತ್ರಾದಿಗಳನೊಳಪೊಕ್ಕು ಮಲಗಿರುವ ಜನರ ತರಿವುತ್ತ ಬರಲು, ಅವರು ತಿಳಿದೆದ್ದು ಬಲುಭೀತಿಯಿಂದೋಡಲಾ ತಸ್ಕರರು ಸರ್ವಸ್ವಮಂ ಜವದೊಳಪಹರಿಸಿ, ವೇಷಸಾಮಗ್ರಿಗಳ ತುಂಬಿದ್ದ ಪೆಟ್ಟಿಗೆಯೊಳಾಗ ತಾವು ತರಿದ ಶವಯುಗ್ಮವ ನಿಟ್ಟು ದೃಢರಶನೆಯಿಂ ಬಂಧಿಸುತಲಾತರಂಗಿಣಿಯ ಘನಪೂರದೊಳು ತೇಲಿಬಿಡುತಾ ಪ್ರದೇಶವನುಳಿದು ನಿಜಮಾರ್ಗವಮಂ ಪಿಡಿಯುತಿರಲು ;

ಇತ್ತಲಾ ವಿಪ್ರತನುಜಾತನಾ ದಸ್ಯುಹತಶವಭರಿತವಾಗಿರುವ ಪೆಟ್ಟಿಗೆಯುಕಂಡು ಕಡುಕಾತರದಿ ಮಹಾನಿಶಿಯಲ್ಲಿ ಬರುತ ಕಾಂತಾರದೊಳು ಪೆಟ್ಟಿಗೆಯ ನೊಡೆಯ ದತಿಸಾಹಸದಿ ಶಿರದಮೇಲಿಟ್ಟು ನೃಪನಂದನೆಯು ದೊರಕಿದಳು ತನಿಗೆಂಬ ಮೋದದಿಂ ಭಾರಮನ ತೆರದುರು ವೇಗದಿಂದಾಮದ ತನ್ನನರಮನೆಯಿಂದ ನೂಕಿಸುವುದೀಗ ನಿಸಿಗುಚಿತನಾಗಿರುವ ನರಪಾಲ ತನಯನು ಬಂದು ಕಾದಿರುವನೋಡು, ಕರಗ್ರಹಣಮಮಾಡು, ಗುರುಹೇಳನವು ತತ್ಕ್ಷಣದಿ ಕರ್ತೃವಿನಷ್ಟವನು ಮಾಡದಿರುವುದೆ? ಬಾಲೆ! ತಾಳು ನಿನ್ನುದ್ಧಟಿಗೆ ತದನುಗುಣವಾದ ಫಲಜಾಲವಂ ನನುಭವಿಸುವಂತೆ ಕಾಂತಾಮಣಿಯೆ! ಎನುತ ನಾನಾವಿಧದಿ ಬಗುಳುತ್ತ ಬರುತ, ಬಲುಭಾರದಿಂ ಗಳಗತಾನಿಲನಾಗಿ, ಮಾರ್ಗದೊಳು ಪಾಳುದೇಗುಲವನ್ನು ಕಂಡು ಕಡುಖೇದದಿಂ ಮುಂದಕ್ಕಡಿಯಿಡಲಾರದಲ್ಲಿ ಪೆಟ್ಟಿಗೆಯನ್ನು ಮೆಲ್ಲನಿಳುಹಿ, ಮನದಿಯೋಜಿಸುತ ಬಹುವಿಧದಿ ಮದನಶರಹತಿಯಿಂದ ಮಥಿತಮಾನಸನಾಗಿ ತರಹರಿಸುತ ಆ ಪೆಟ್ಟಿಗೆಯ ಮುಚ್ಚಳವಂ ತೆಗದು ಸಾಹಸದಿಂದಲವನಿಪತಿತನಯ! ಕೇಳ್ನೋಡೆ, ಮೇಣದರಲ್ಲಿ ದಸ್ಯುಹತ ಪುರುಷಶವಯುಗ್ಮವಂ ಕಂಡು ಬಲು ಭೀತಿಯಿಂ ಮನದಲ್ಲಿ ಸಮ್ಯಗ್ವಿಮರ್ಶೆಯನು ಮಾಡಿ ರೋಷದಿಗೂಡಿ ಪಿತನು ತನ್ನೊಳಗಿಂತು ಕಪಟವನುಮಾಡಿ ಮುಳುಗಿಸಿದನೇಗೈವೆನೆಂದೆನುತಬಹುವಿಧದಿಂದ ಹಲುಬಿ ಕಡುದುಃಖದಿಂ ನ್ಯಮರೆಪರಣ್ಯದೊಳು ಪೋಗಳನು ಖನನ ಮಾಡಿ ಜನನಿಂದ

ನಗರದೊಳಪೊಕ್ಕು ಮಂದಿರಕೆಬಂದುತಂದೆಗೆ ನಮಿಸಿ, ರೋಷಮೂರ್ಛಿತನಾಗಿ ರೋದನವ ಮಾಡುತ್ತ ನುಡಿದನೈಯ್ಯ! ಕೃತಾರ್ಥನಾದೆ, ಭವದೀಯ್ಯ ದಯ ದಿಂದ ನೃಪನಂದನೆಯು ವಿಪಿನದೊಳಗಿರಿಶಿ ನಾಂ ಬಂದಿರುವೆ, ನೋಡು ನೀದಯೆ ಗೈದು ನಂದನಗೆ ಮುಂದೇನು ಕಪಟಮಂ ಮಾಡಲೆಳಸುವದೋ ಮನಮಾಡಿ ನೀನಿದನೋಡು, ಕಾಡುವನ ಕಳೆದು ಕೇಳ್ಕಾಡಪಾಲನುಮಾಡೆ ಕೂಡೆ ತೊಡ ರಿಲ್ಲ ನಿನಿಗೆನುತ ನಾನಾವಿಧದಿ ಹೇಳನವಮಾಡಿ ನುಡಿವುತ್ತಲಿರಲು ; ಆ ಮಹೀ ಸುರನದನು ಕೇಳಿ ಕಡುವಿಸ್ಮಯದಿ ನಂದನನಂ ಕೇಳಿದನು ಸಂದೇಹದಿಂದ, ಪೇಳೆಲವೊ! ಮನಬಂದ ತೆರದಿಂದ ನೀನಾಡುವೆಯದೇನು ನೃಪನಂದನೆಯು ದೇನಾದಳು, ಸುಡು ರೋಷವನುಳಿದು ತಾನು ಮಾಡಿದುದೇನು ಪೇಳು ಜವ ದಿಂದೆನುತ ಮಿಡುಕುತಿರುವಾತನಂ ನೋಡಿ ಮನದೊಳಗಿವನು ಮಾಡಿ ತಾನರಿ ಯದವನಂತೆ ನಟಿಸುತಿರುವನೆಂದು ಖತಿಯಿಂದಲಾ ಮಂದಮತಿ ನುಡಿದ ಮರ್ಯಾ ದೆಯನು ಮೀರಿ ಕೇಳೈಯ್ಯ! ಬಾಲಕರೆಳಸಿದರ್ಥವನು ಹಿರಿಯರಾದವರು ಕಾಮಿಸಿದ ಬಳಿಕ ಆಡಲೇನುಂಟಿದುವೆಕಾಲಗತಿ ಎಂದೆನಲು, ಖೂಳವಿಪ್ರನು ಕೇಳಿ, ಶಿವ ಶಿವಾ! ಎಂದೆನುತ ಕರಗಳಿಂ ಕರ್ಣಗಳ ಮುಚ್ಚಿ ಮತ್ತಾಶ್ಚರ್ಯ ದಿಂ ನುಡಿದನೆಲೆ ಮಗನೆ! ಪೇಳು ನೀಪೋಗಿ ಬಂದನುಭವವ ನೀತೆರದಿ ಖಲನಂತೆ ಮನಬಂದತೆರದಿಂದ ನುಡಿಯೆ ಕಾರಣವದೇನೆಲವೆಲವೊ! ಎನಲು, ಸುತನಾ ದವನು ವಿವರಿಸಲು ತನ್ನ ವೃತ್ತಾಂತವನು, ಭೂಸುರನು ಕೇಳಿ ಕಡು ಖೇದ ದಿಂದಹಹ! ಸಾಹಸದಿಂದ ಮಾಡಿದ ಮಹತ್ಕಾರ್ಯ ಮೀತೆರದಿ ಕೈಸೇರದನ್ಯರಿಂ ಗುಪಯುಕ್ತ ಮಾದವೋಲು ತೋರುತಿದೆ, ಘಾತವನು ಮಾಡಿದನು ಕುವರನಿ ವನೆಂದೆನುತಲಾತನಿಂದೊಡಗೂಡಿ ಮೋಹಮಾನಸನಾಗಿ ಸಡಗರದಿ ನಗರಮ ನ್ನುಳಿದು ತಟಿನೀತಟವನ್ನೈದಿ ನೋಡುತ, ಮತ್ತೆ ಕಾಣದಲ್ಲಿಂ ಜವದಿಂ ಧಾವನೆಯ ಮಾಡುತ್ತ ತೀರಮನ್ನನುಸರಿಸಿ ಬಹು ದೂರ ಮಾರ್ಗಮನ್ನಡೆದ ರಸಿ ಕಾಣದರವಿಂದ ಬಾಂಧವನಸ್ತಗಿರಿಯನ್ನೈದುತ್ತಲಿರಲಾ ಬಳಿಕ ನಿರ್ವೇದದಿಂ ಮನದೊಳಾಲೋಚನೆಯಮಾಡಿ ರಾಜಕುಮಾರಿ ಯಿಹ ಮಂಜೂಷವೀ ತಟಿನೀ ಪ್ರವಾಹದೊಳು ಸುತನಿದ್ದ ತಾಣಮನ್ನತಿಕ್ರಮಿಸಿ ಮುಂದೆ ಪೋಗುತಲೇನಾ ದುದೊ ಎಂದು ಸಂಶಯದಿ ವಿಪ್ರತನುಜಾತನಿಂದೊಡಗೂಡುತುನ್ಮತ್ತನಂತ

ರಣ್ಯದೊಳು ಸುತ್ತಿ ನೋಡುತ್ತಲಿರಲಿತ್ತಲವನೀಶ ತನುಜಾತ ! ಕೇಳು ನೃಪ ನಂದನೆಯು ಇರುವ ಮಂಜೂಷವಾನಿಮ್ನಗಾ ಪೂರದೊಳು ತೇಲುತತಿ ವೇಗ ದಿಂದೊಂದೆರಡುದಿನ ಬರಲು, ಮುಂದೆ ಮಹದಾಖ್ಯಾನ ನಡೆದುದೆಂಬಲ್ಲಿಗ ಧ್ಯಾಯಃ * * * * * *

ಇಂತು ಕರ್ನಾಟಕಭಾಷಾ ವಿರಚಿತವಾದ ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲ ದೇಶಾವತಂಸ ಕರ್ನಾಟಕಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹಿಶೂರ ಮಹಾ ಸಂಸ್ಥಾನಮಧ್ಯ ದೇದೀಪ್ಯಮಾನಾ ವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲನಿಜ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಹಾಂಸನಾರೂಢ ಶ್ರೀಮದ್ರಾಜಾಧಿರಾಜ ರಾಜ ಪರಮೇಶ್ವರ ಪ್ರೌಢಪ್ರತಾಪಾಪ್ರತಿಮ ವೀರ ನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಆತ್ರೇಯಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರ ಪುರವರಾಧೀಶ ಶ್ರೀಮತ್ಕೃಷ್ಣರಾಜ ಒಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬಾಂಕಿತದಿಂದ ಕರ್ನಾಟಕಭಾಷಾ ವ್ಯಾಖ್ಯಾನರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರ ಭಾಗದಲ್ಲಿ ಲಲಿತೋಪಾಖ್ಯಾನದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯಸಂವಾದದಲ್ಲಿ ಚತುರ್ವಿಂಶೋಧ್ಯಾಯಃ * * * *

ಇಪ್ಪತ್ತನಾಲ್ಕನೇ ಅಧ್ಯಾಯ ಸಂಪೂರ್ಣ.



ಶ್ರೀರಸ್ತು

## ಇಪ್ಪತ್ತೈದನೇ ಅಧ್ಯಾಯ ಪ್ರಾರಂಭ.



ಯೋಷಿತಾಮೇಷ ಪುಷ್ಪೇಷು ದ್ವೇಷಿಣಾಂಪ್ರೂಷಣಾತ್ಮಜಃ |
ಪೋಷಕೋಶೇಷಸಾಧೂನಾಂ ಕೃಷ್ಣರಾಜಸ್ಥಿರಾಧರಃ ||

ಸಕಲ ರಾಜಕುಲಲಲಾಮನೆ ! ಕೇಳು, ದಂಡಕಾವಿಪಿನಜಿರಕಾಲ ಕೃತನಿಕೇತನನಾದ ಅತೀತ ಕಥಾಸಕ್ತ ಘೋರ ಕಿರಾತನಾಕಾಲದೊಳು ನೈಜ ವೃತ್ತಿ ನಿರ್ವಾಹಾರ್ಥವಾಗಿ ನಿಶಾವಸಾನದೊಳೆದ್ದು ಋಷ ಸಮೂಹಸಂಗ್ರ ಹಣಮಂ ಮಾಡುವರೆ ವಾಗುರಾದಿಗಳನಳವಟ್ಟು ಜವದಿ ತಟನೀ ತೀರಮನ್ನೈ ದುವನಿತರೊಳು ಉದಯಗಿರಿ ಶಿಖರಮಂ ತರಣಿ ಯನುಸರಿಸುತಿರೆ, ಧರೆಯ ರಸ ನಣುಗಿಯಿಹ ಪರಮಮಂಜೂಷವಾನಿಮ್ನಗಾಪೂರದೊಳು ದೈವಗತಿಯಿಂ ತೇ ಲಿಬರುತಿರಲು, ಆ ಕಿರಾತನದಂಕಂಡು ತಕ್ಷಣದೊಳದಂಪಿಡಿದು ನೋಡುವೆ ನೆಂದು ಕಡುವೇಗದಿಂದಾಮಹಾಸರಿತ್ ಪ್ರವಾಹದೊಳೀಸುತದಂ ಪಿಡಿದು ತಡಿ ಯಡರಿ ಸಡಗರದೊಳದಂತೆಗದು ನೋಡಲು, ಕ್ಷಣರುಚಿಪ್ರಚಯಮೊಂದಾಗಿ ನಿಜಭಾವದೊಳೇಕದೇಶಮನ್ನುಳಿದು ಸಾಕಾರಮನ್ನಾಂತು ವಿಶ್ರಮಿಸಿದಂತೆ, ಖಲದುರುಕ್ತಿ ಶ್ರವಣಜನಿತ ವಿಷಾದಕಲಿತ ಕೋಸಲರಾಜ ವನಪರಿತ್ಯಾಗ ಭವ ದತುಲ ಪರಮಕ್ಲೇಶ ಪ್ರಸೃತಾಮರ ಮಹಾಮೋಹ ಪರವಶರಸಾಜಾತೆ ಯಂತೆ, ಸುಪ್ತಾಳಿಕಾಂಬ ಕದ್ವಿಯುಗ ಶೃಂಗ ಮಹೋಗ್ರ ಕೀಲಾಕಲಾಪಗತ ತನುತನುಜವಿರಹ ಪರಿತಾಪ ಸಂಮೂರ್ಛನಾಮುಕುಳಿತ ವಿಲೋಲಾಂಬುಜಿ ಯಾದ ರತಿಯಂತೆ, ಜೀವನಾದೀರ್ಘಕಾಲ ಕೃತಕಿತವಲೋಕಾಶ್ರಯ ಸಮಾ ಪತಿತ ನವನವಾಪದ್ಬೃಂದಸಂಸ್ತಬ್ಧಪರಿಮುಗ್ಧಮಾನಿಜನಮತಿಯಂತೆ, ಅತಿ ಕರಾಧೀನತಾ ಭಿನ್ನಾನುಭಿಜ್ಞ್ಯಜನಪರಿಚಯಾದರಮುಷಿತ ನಯನ ವಿವೇಕ ನೃಪಾಲ ನಿರುಪಮ ಮಹಾರಾಜ್ಯರಮೆಯಂತೆ, ನಿಜನಿಚಯ ಲಲಾಮ ವಿಪ್ರಪ್ರ ಯುಕ್ತ ಮಹದನವಗತ ರಂಧ್ರಚಣ ವಂಚನಾ ವಿಶಕಲಿತ ಮತೀ ಮಹೀಪತಿ ವಿಟಿತ ವಚನಪರಿತ್ಯಾಗ ಸಮಸಮಯ ಸುವಿತೀರ್ಣ ಮದಕರ ಪದಾರ್ಥ ಚಯ

ಘಕ್ಷಣ ಸಮುತ್ಪನ್ನ ನಿರವಧಿಕ ಮೋಹಪರಿಲುಪ್ತ ಸಕಲೇಂದ್ರಿಯ ವ್ಯಾಪಾರ
ಗಳಾಗಿ ಗಾಢಸುಷುಪ್ತಿಯನ್ನೈದಿರುವ ಜಗನ್ಮೋಹಿನಿಯಾಗಿರುವ ಕನ್ನೆಯಂ
ಕಣ್ಣಾರ ಕಂಡು ವಿಸ್ಮಿತನಾಗಿ, ಶಿವನೆ ದಯೆಗೈವನೀ ಬಾಲೆಗೀದೆಸೆಯೈದಲೇನು
ಕಾರಣವೋ ? ಹಾ ! ಶಿವಶಿವಾ ! ಎನುತ ಮರುಗುತ ಕಿರಾತನಾ ಮಾನಿನಿಯ
ನಿಜಪಲಾಶಾಲಯಕೆ ಕೊಂಡೈದಿ ಕರೆದು ಪತ್ನಿಯನಾಕೆಗೀಕೆಯಂ ತೋರಲವ
ಳಂಗನೆಯು ಕಂಗಳಿಂ ನೋಡಿ ಮನಸಿಂಗದಂತರಂಗದೊಳುಕ್ಕುವತಿಮೋಹದಿಂದ
ತ್ಯಧಿಕ ಶೈತ್ಯೋಪಚಾರಮಂ ಸತ್ವರದೊಳಳವಡಿಸುತಿರಲು ;

ಆ ಮಹಾ ರಾಜಧಾನಿಯೊಳನೇಕ ವಿಭವಾನ್ವಿತ ಸುವರ್ಣಮಯ ಸೌಧ
ನಿಚಯಾಂತರಾಳದೊಳು ಶೋಭಿಸುತ್ತಿರುವ ಮಣಿಮಯಾಲಯದೊಳನೇಕ
ನಿಷ್ಕಳಂಕ ಶಶಾಂಕ ಶಶಾಂಕಾಪಹರು ಚಿರವದನಾರವಿಂದ ಸುಂದರಸಖೀನಿಕರ
ಪರಿಸೇವಿತಾಭಿನವ ನವರತ್ನಖಚಿತ ಪರ್ಯಂಕದೋಳ್ಪವಡಿಸಿರ್ದ ಪೊಡವಿಪನ
ತನಯಳಾ ಕಿರಾತಕಾಂತಾರಕಲಿತ ಮಯೂರಪಿಂಛರಚಿತ ತಾಳವೃಂತ ಭ್ರಮ
ಣಜನಿತ ಪ್ರಸೃಮರ ಮರುತೋತ್ಪೂತ ಲಲಿತ ಕೋಮಲ ಸುಖಸ್ಪರ್ಶ ಸಂಜೀ
ವಿತಪ್ರಾಣಳಾಗಿ ಮದಜನಿತ ಮೋಹಮಣಗಿ ಬಣಗಿರ್ದ ರಸನೆ ಸರಸಮಾಗ
ಲಾಪರಿತ್ರಸ್ತಹಾರಿಣೀವಿಲೋಚನೆಯು ಲೋಚನಾರವಿಂದಗಳನೀಷದ್ವಿಕಾಸಮಂ
ಮಾಡಿ ಕಂಡಳನೇಕ ನಾನಾವಿಧಾಂಬರ ಚುಂಬಿ ಶಾಖಿಶಾಖಾನಿಚಯ ನಿರಂತರ
ಛಾಯದೊಳಾ ಮಹದ್ಗಹನದೊಳು ಕಿರಾತಮಿಥುನ ಮಧ್ಯಗತಳಾದ ತನ್ನನಿದೇಂ
ಸ್ವಪ್ನವೋ? ಎಂದು ಗಕ್ಕನೆ ಕಣ್ಗಳಂ ಮುಚ್ಚಿ, ಮಹೋದ್ವೇಗಕಲಿತ
ಮಾನಸಳಾಗಿ, ಪುನರಪಿ ಕಣ್ಗಳಂತೆಗದು ನೋಡಿ ಮನದೊಳಾಲೋಚನೆಯ
ಮಾಡುತಿರಲು ; ಆ ಕಿರಾತ ನೀ ತರಳೆಯಭಿಪ್ರಾಯಮಂ ತಿಳಿದು ಬಾಲೆ! ನೀ
ನಂಜದಿರು, ನಿನ್ನ ಹೃದಯಾನುಗುಣವಾಗಿ ನಡೆಯುವೆನು, ನೀಂ ನಡುಗದಿರು,
ತನಗೆ ನೀದೊರೆದರೀತಿಯಿದೆಂದು ಸಾಂತ್ವವಚನಗಳಿಂ ಸಮಾಧಾನಮಂ ಮಾಡಿ,
ನಿನ್ನ ವೃತ್ತಾಂತಮೇನದಂ ತನಗೊರೆಯಬೇಕೆಂದು ಕೇಳಲು, ಸುರುಚಿಯು
ಸುಷುಪ್ತಿಪರ್ಯಂತಮಾಗಿ ತನ್ನ ವೃತ್ತಾಂತಮಂ ಯಥೋಚಿತಮಾಗಿ ಬರೆಯು
ತಿರಲನಿತರೊಳು ಗಗನದೊಳು ಗಂಭೀರವಾಣಿಯಾವಿರ್ಭವಿಸಿ ತರಳೆ ! ಭವದವ
ಮಾನಿತಾತ್ಮಜನಿಗೋಸುಗಂ ತವಪುರೋಹಿತ ವಿಹಿತ ವಂಚನೆಯನರಿಯದಲೇ

ತೊರದ ನಿಮ್ಮಯ ತಂದೆಯಾದಡೆಯು, ಊರ್ವಶೀಶಾಪವಾ ವಿಜಯನಿಂಗುಪ
ಯುಕ್ತವಾದಂತೆ, ತವಮನೋರಥ ಘಟನೆಗುಪಯುಕ್ತವಾಗುವದು, ಭಯ
ಬ್ಯಾಡವೆಂದೊರೆದು ಮರೆಯಾಗೆ, ಕಿರಾತಮಿಥುನರದಂಕೇಳಿ ಆಶ್ಚರ್ಯದಿಂ
ನೋಡುತ್ತಿರಲು ; ಆ ಖಂಜರೀಟಾಕ್ಷಿ ಆಃ ! ಪುರೋಹಿತನ ಕೈತವಮಿದೆಂದ
ರಿತು ಆ ವಿಯದ್ವಾಣಿಯುಕ್ತಾರ್ಥತಾತ್ಪರ್ಯವೇನೋ ? ಎಂದು ಯೋಚಿ
ಸುತ್ತಿರಲು ; ಭಿಲ್ಲಮಾನಿನಿಯು ಫುಲ್ಲಾಬ್ಜನಯನೆಯಂ ಬಹುವಿಧದಿ ಸಂತೈ
ಸಿ, ದಿವ್ಯ ನಾನಾವಿಧ ಸ್ವಾದುತರ ಕಂದಮೂಲಾದಿಗಳನಿತ್ತು ಪ್ರತ್ಯೇಕವಾಗಿ
ಮತ್ತೊಂದು ಮನೋಹರ ಕುಟೀರಮಂ ರಚಿಸಿತ್ತು ಅತ್ಯದ್ಭುತ ಕನ್ಯಾಪ್ರಾಪ್ತಿ
ಯಿಂದತ್ಯಂತ ಸಂತೋಷಯುಕ್ತರಾಗಿ ಪುತ್ರನಾಗಮನಮಂ ನಿರೀಕ್ಷಿಸುತ್ತಿ
ರಲು ; ಖರಾಸುರದಮನ ! ಕೇಳಾ ರಾಜಕುಮಾರನರುಣೋದಯದೊಳೆದ್ದು
ಧನುರ್ಬಾಣವಂಧರಿಸಿ ಮೃಗಯಾರ್ಥವಾಗಿ ಕಾಂತಾರದೊಳು ಸಂಚಾರಮಂ
ಮಾಡುತ್ತ ಬಹುದೂರ ಮಾರ್ಗಮಂ ನಡೆದು ಮನೋಹರಹರಿಣೀಯುಗ್ಮಮಂ
ಕಂಡಟ್ಟಬರಲು, ಆ ಹರಿಣೀಯುಗ್ಮವಾ ರಾಜಕುಮಾರನಂ ರವಿಕುಮಾರನೆಂ
ದರಿದು ಧಾವನೆಯುಮಾಡಲದನಟ್ಟಬರುತಿರಲನಿತರೊಳೀರ್ವ ವರ್ಣಿಗಳ್ಸಮಿಥೆ
ಯಂ ತರಲದೂರಸ್ಥತಮಹರ್ಷಿಯಾಶ್ರಮದಿಂ ವನಕ್ಕೈದುತವುಗಳಂ ಕಂಡು
ಭೋ ರಾಜಕುಮಾರ ! ಇವುಗಳೀ ಮಹರ್ಷಿಯಾಶ್ರಮಾಲಯಗಳದರಿಂ ವಿವೇ
ಕಿಗಳಿಂ ವಧಾರ್ಹಮಲ್ಲೆಂದು ಕರವೆತ್ತಿ ಕೂಗಲಾ ವಟುಗಳಾಲಾಪಮಂ ಕೇಳಿ
ತತ್ಕ್ಷಣದಿ ನಿಂದು ಶರೋಪಸಂಹಾರಮಂ ಮಾಡಿ ತದಭಿಮುಖವಾಗಿ ಸ್ವರಿ
ತ್ಥಮನಸ್ಕಳಿದವಸ್ಯಮರಗೌರವ ಬುದ್ಧಿಯಿಂ ದಭಿಮುಖನಾಗಿ ಬರುತಿ
ರುವ ರಾಜಕುಮಾರನಂ ನೋಡುತತ್ಯಂತ ಹೃಷ್ಟಮಾನಸರಾಗಿ ಸು
ತಿಗೈಯ್ಯುತಿಫಲಾ ರಾಜ ಕುಮಾರನವರ ಸಮೀಪಮನ್ನೈದಿ ವಂದ
ನೆ ಮಾಡಲಾ ವರ್ಣಿಗಳ್ನುಡಿದರೈಯ್ಯಾ ರಾಜಕುಮಾರ ! ಬಾಹು
ಜರಿಂಗೆ ಬ್ರಾಹ್ಮಣಾಲಾಪ ಪಾಲನವೆ ಮುಖ್ಯವ್ರತಮದಂ ಸ್ವಭಾವದಿಂದಾ
ಚರಿಸಿದನಾದ ಕಾರಣ ಸತ್ಯವ್ರತನೀತನೇಯೆಂದು ಸುತಿಗೈದಾಶಿಷಗಳಂ ಬೀರಲು,
ಆ ಕಿರಾತಪೋತನಂತರಂಗದೊಳಿದೇನಚ್ಚರಿಯು, ಋಷಿಕುಮಾರರಿಂದು ಕಿರಾತಾ
ತ್ಮಜನಾದತನ್ನಂ ರಾಜಕುಮಾರನೆಂದು ಸಂಬೋಧನೆಯಂಗೈದು ತದ್ಧರ್ಮವಂ

ತನ್ನೊಳಾರೋಪಣೆಯಂ ಮಾಡಿದರಿಪೇಸದಂತಿರಲಿದಂ ನಿವರಕೇಳುವೆನೆಂದು
ನುಡಿವೆನ್ನೈಯ್ಯ ! ಮಹರ್ಷಿಗಳದಾರು, ಮೇಣವರಪಾವನಾಶ್ರಮವದೆಲ್ಲಿಹು
ದೆಂದುಕೇಳಲು, ಅವರೊಳೋರ್ವನಿಂತೆಂದನೈಯ್ಯ ನೃಪನಂದನ ! ನಾತಿದೂರ
ದೊಳು ನಿನಿಗೆದುರಾಗಿ ಮರುದಿಕ್ಕಿನೊಳರ್ಕರಥ್ಯಗಳಿಂಗೆ ವಿಶ್ರಾಂತಿಯನೀಯ್ಯು
ಲೈಮತಿರುವಂತೆ ವಿಯತ್ತಲಾಲೀಢವಿಶಾಲ ಶಿಖರಯುಗ್ಮದಿಂ ರಾರಾಜಿಸುತ್ತಿರುವ
ಪವನಪಾರಿಯಾತ್ರಗಳೆಂಬ ಮಹೀಧರಾಂತರಾಳದೊಳಿರುವುದಷ್ಟಾವಕ್ರಮ
ಹರ್ಷಿಯಾಶ್ರಮನದಕೋ ನೋಡೆಂದುನುಡಿಯಲು, ರಾಜಾಪತ್ಯನವರಿಗೊಂದಿ
ಸುತಪ್ಪಣೆಗೊಂಡು ಜವದೊಳಾಶ್ರಮಾಭಿಮುಖನಾಗಿ ನಡೆತಂದು ನಗರಾಂತ
ರಾಳದೊಳನೇಕ ನಿಗಷಂಡಮಂಡಿತ ವಿಚಿತ್ರತರ ವಿವಿಧವಿಹಂಗಸ್ತೋಮ ಕಲ
ಮಧುರ ಸ್ವರಾಕರ್ಣನ ಮುದಿತಮಾನಸ ನಾಗುತಾಶ್ರಮದೊಳ ಪೊಕ್ಕು ಗಕ್ಕ
ನೆಕುಟಜಾರ್ಜುನ ಮಹೀರುಹದಮೂಲದೊಳು ಉದಯಿಸುವ ರವಿಯಂತೆ
ವೃದ್ಧಿಯ ನೈದುತಿರುವಾ ಶುಶುಕ್ಷಣಿಯ ತೀಕ್ಷ್ಣಜ್ವಾಲೆಯಂತೆ ಬ್ರಹ್ಮಾಸ್ತ್ರ
ವೆಮೂರ್ತೀಭವಿಸಿದಂತೆ ಜ್ವಲಿಸುತಿರುವ ಮಹರ್ಷಿಯಂಕಂಡು ವಿಸ್ಮಿತನಾಗಿ
ಮೆಲ್ಲನಾಮಹರ್ಷಿಯುಪಕಂಠಮಂನೈನುತಿರೆ ಆತಪೋಧನನತ್ಯಂತವರ್ಚಸ್ವಿ
ಯಾಗಿ ಬರುತಿರುವ ರಾಜಕುಮಾರನಂಕಂಡು ಪರಮಸಂತೋಷ ಯುಕ್ತನಾಗಿ
ಸಕಲಲಕ್ಷಣಯುಕ್ತನಾಗಿ ಪರಿಷ್ಕೃತಾರಿಚರಣಪ್ರಮುಖ ಪರಿಕರನಾಗಿ, ನಿಜಸ
ಮೀಪಮಂನೈದುವಾತನಿವನ್ಯಾರೊ ಯೆಂದು ಯೋಚಿಸುತ್ತಿರೆ, ಬಂದುವಂದನೆ
ಯಂಮಾಡಿ ಪ್ರಶ್ರಯಾವನತಗ್ರೀವನಾಗಿ ನಿಂದಿರುವ ರಾಜಕುಮಾರನಂಕಂಡು
ಪರಮಾನುಗ್ರಹ ದೃಷ್ಟಿಯಿಂಕುಶಲ ಪ್ರಶ್ನೆಯಂಮಾಡಿ, ಭೋ! ರಾಜಕುಮಾ
ರ! ಭವದನ್ವಯ ಪ್ರತೀತತಮಿಗಾಗಬೇಕೆಂದೊರೆಯಲಾನೃಪನಂದನನಿದೇನೀಮ
ಹರ್ಷಿಯುಂ ರಾಜಕುಮಾರನೆಂದು ಸಂಬೋಧಿಪನೆಂದು ವಿಸ್ಮಿತನಾಗಿ, ಅಯ್ಯ !
ಈ ಮಹದ್ಗಹನನಿವಾಸಿಯಾದ ಕಿರಾತಾ ಪತ್ಯತಾನೆಂದೆನಲು, ತಪೋಧನನತ್ಯಂತ
ವಿಸ್ಮಯದಿಂದ ಕಿಂಚಿದಾಲೋಚನೆಯ ಮಾಡಿ ವಿಜ್ಞಾನದೃಷ್ಟಿಯಿಂದರಿದು
ಮಂದಸ್ಮಿತವದನನಾಗಿ, ಭವತು, ಭವದಾಗಮನನಿಮಿತ್ತಮೇನದಂಪೇಳಬೇ
ಕೆನಲು ; ತಾತ! ಯದೃಚ್ಛೆಯಿಂದೈದಿದೆನು ಭವಚರಣ ನಳಿನಯುಗಸಂದರ್ಶ
ನೈಕಮಹತ್ಫಲಾಂತರಂಗ ಸಾಧನಸಮಾಜೀನ ಸುಕೃತ ಪ್ರಭಾವದಿಂದೆನುತೊ

ರೆಯು ತಿರಲು, ಅನಿತರೊಳು ವಿಚಿತ್ರತರವಿವಿಧವಿದ್ಯುತ್ಪ್ರಕರಘೋರ ಸಕಲಜ ಗದುದ್ವೇಗ ಜನಕಪ್ರಚಂಡ ಪವನಧೋಧೂಯಮಾನ ಯುಗವಿಗಮಸಮಯ ಸಮುದಿತಮಹೋಗ್ರಜೀಮೂತ ನಿಚಯನಿರ್ಗಳದಶನಿಸ್ಫೋಟ ಸದೃಶಕ ಠೋರಾಟ್ಟಹಾಸ ಧ್ವಾನ ಮಿದರ ನಿದಾನಮಂ ತನಗೆ ತಿಳುಹ ಬೇ ಕೆನಲು, ವತ್ಸ! ತುಳ್ಳನಾದ ದೀರ್ಘನಾಸನೆಂಬೋರ್ವ ನಕ್ತಂಚರ ನೀಮಹೀಧರಾಂತರಾಳದೊಳ್ ಮಹೋದರೀ ಎಂಬ ಮಹಾ ಘೋರ ರಕ್ಕಸಿ ಯಿಂದೊಡಗೂಡಿ ವಾಸಮಂಮಾಡಿ ಪೀಡಿಸುತ್ತಿರುವನೀ ಪ್ರದೇಶವು ಸನಿಶವು ದರಿಂದಲೀಕ್ರವ್ಯಾದನು ಪಟಳವಂ ತಾಳಲಾರದೀ ಪ್ರದೇಶದಿಂದೇಳಬೇಕೆಂಬ ಕು ತೂಹಲಿಗಳಾಗಿರುವೆವೇ ಗೈವೆವೆಂದೆನಲು, ಆ ಮಹೀಶ ತನಯನದಂ ಕೇಳಿ ಮದೋದ್ರಿಕ್ತ ಕರಿಬೃಂಹಿತ ಶ್ರವಣಸಂದೀಪ್ತ ರೋಷೋಗ್ರಹರ್ಯಕ್ಷನಂತೆ, ದುರ್ನಿಗ್ರಹಾಗ್ರಹದಿಂದುಗ್ರನಂತೆ, ನಿಜೋಚ್ಚಂಡ ಕೋದಂಡಮಂ ಸಜ್ಜಮಂ ಮಾಡಿ ತಾತ! ಕೇಳೀ ಖಲಾಧಮನ ದೆಸೆಯಿಂದಲಿಲ್ಲಿಂದೇಳಲ್ಯಾತಕೆ, ತರುವೆ ನೀಕ್ಷಣವೆ ದಿತಿಜಾಪಶದನುತ್ತಮಾಂಗಮಂ ತರಿದು ಭವದಂಘ್ರಿ ನಳಿನಾಗ್ರ ಪೂಜೆಗೆನುತ, ನಿರ್ಭೀತನಾಗಿ ತದಭಿಮುಖನಾಗಿ ನಡೆಯಲು, ಆ ಮಹರ್ಷಿ ಅತ್ಯಂತ ಕೃಪಾರ್ದ್ರಹೃದಯನಾಗಿ ಮಂತ್ರಮಯ ಕವಚವಂ ನೈಂದ್ರವಿಶ್ವಭು ಗಸ್ತ್ರಗಳನುಪದೇಶವಂಮಾಡಿ ನಿಜಕರಕುಶೇಶಯದಿ ಮೈದಡವಿ ಹರಸುತಪ್ಪ ಣೆಯನೀಯ್ಯಲು, ತೆರಳುತಲ್ಲಿಂ ಖಲನನರಸುತೆದುರಾಗಿ ದವದಹನದಸ್ಥಾಹಾ ರ್ಯದಂತೆ ಜಗಮುದ್ವೇಗತರ ಘೋರ ರೂಪಿನಿಂ ಕರದಿ ತ್ರಿಶೂಲಮಂ ಪಿಡಿದು ಬರುವ ದಿತಿಜಾತನಂ ಕಂಡು ನುಡಿದನೆಲೆ ಕ್ರವ್ಯಾದ! ಹರಿ ಇರುವ ಬನದಲ್ಲಿ ಕರಿನೆಲಸುತುಳಿಯುವುದೆ, ಪರಮರ್ಷಿಯಾಶ್ರಮದಿ ನಿನಿಗೆ ಸುಖ ದೊರೆಯು ವುದೆ? ಬರಿದೆ ನಿನ್ನಯಶಿರವ ನೆರವಮಾಡದಿರೆಲವೊ ದುರುಳ! ಪೋಗದಿರೆ ನುತ ಸರಳಮಳೆಯನು ಕರೆಯೆ, ಶರಗಳಂಗವ ಮುಚ್ಚಿ ಕೊರೆಯುತಿರಲು; ಅಸುರನೆಲೆಬಾಲ! ಧೀರನಹೆಯಾದಡೆಯು ಹಸಿದಮಾರಿಯು ಮುಖಕೆ ಕುರಿ ಯ ಚಾಚುವತೆರದಿ ಪರಮಸುಂದರನಾದ ನಿನ್ನನೆನ್ನಭಿಮುಖಕೆ ತರುಬಿದವನೆ ಧನ್ಯನಾದಡೆಯು ಮನ್ನಿಸಿದೆ, ತೊಲಗು ಬಣಗುಹಾರುವನೇನ ಮಾಡುವನೋ ನೋಡುವೆನು ಎನಲು, ಆ ರಾಜಕುಮಾರನಧಿಕ ರೋಷಾಮರ್ಷ ಪರವಶ

ನಾಗಿಸುಡಿದನೆಲೆ ಪಲಾಶ! ತಾನೆ ಪರಮಾತುಮನುಸ್ವೇತರಗಳೆಲ್ಲ ಪ್ರಶಿಯುಂದು ಸಿಶ್ಟಯುವಾಗಿತಿಳಿದಿರುವ ಮೂರ್ಖರಿಂಗೊರೆಯುವರೆ ನಯನ, ಆದಡೆಯು ಹಿರಿಯರೊಳುನಮ್ರತೆಯು, ಪ್ರಬಲರೊಳುವಿನಯ, ಮೃದುಗಳೊಳುಕೃಪೆ ಇವುಗಳುಚಿತವೆಂದೊರೆಯುವರು ಕೋವಿದರು. ದುರುಳ! ಕೇಳದರಿಂದ ತನ್ನೊಳಾಚರಿಸಿದ ದಯಾಬುದ್ಧಿಯಂ ಸ್ವಾತ್ಮವಿಷಯವಾಗಿಯೆ ಮಾಡಿತೊಲಗು, ಪರಮರ್ಷಿಯನುನೋಡಿ ಮರಣವೈದುವ ಸುಕೃತನಿಸಿಗೆತ್ತಣದೆಲವೋ ಪಸುಳೆ; ನೀನೆನುತರಿಯದಾಡಿದೆಯಾದೆಡೆಯು ತೊಡರಿಲ್ಲ,ತಿಳಿದು ತೊಲಗಲ್ಲಡೆ ತೊಲಗಿಸುವೆನಸುವನೆಂದೆನಲು; ಧರಣಿಪತಿ ತನಯಳ್ವಿಪರೀತಾನ್ಯಥಾಜ್ಞಾನ ಜನಕ ತಮೋಗುಣ ಪ್ರಕೃತಿಗಳಾದ ಖಲರಿಂಗೆಹಿತೋಕ್ತಿ ರುಚಿಸುವುದೇನರಪತಿ ಕುಮಾರ! ಎನಲು; ಮಧುರತರವಾಣಿ ಯಾದಿತಿಜಸಿಂಗಶನಿ ಪ್ರಹಾರದಂತೆಸಗೆ ರೋಷಮೂರ್ಛಿತನಾಗಿ ಎಲವೊ!ಮಾನುಷಪೋತ ಹಾಗಾದಡಿದಂತರಹರಿಸಿಕೊಳುವುದೆನುತ ಘೋರಾತಿಭಾರ ಕಠೋರ ತ್ರಿಶೂಲಮಂ ಕರದಿತೂಗಿಬಿಡಲು ಮೂರುಮೊನೆಗಳಿಂದುಗುಳೆ ತುರಿಯನಾಗಸದಲ್ಲಿ ತೆರಳೆ ಜಗವೆಲ್ಲತಲ್ಲಣಿಸಿ ತರಳನಿವಪೋದನಿನ್ನೇನುಹಾ! ಎನುತ ಸಕಲಚರಾಚರಪ್ರಾಣಿಗಳು ಮರುಗೆ, ಆಕಿರಾತಪೋತನತಿಲಾಘುವದಿಂನಿಜಚಾಪಚ್ಯುತಶಿಲೀಮುಖ ಶರಗಳಿಂದದನು ಖಂಡಿಸಲು, ದಿವಿಜರಾಮೋದ ಪಲ್ಲವಿಸಿದುದು ಮುನಿಯಸಂಕಲ್ಪ ಸಫಲವಾದುದು ದಿತಿಜನೆದೆ ತಲ್ಲಣಿಸಿದುದು, ಸುರುಚಿಯ ರುಚಿರವಾಮನಯನ ನಡುಗಿದುದು, ಬಳಿಕ ಖಲಮನದೊಳಾಲೋಚನೆಯಮಾಡಿ ಇವನು ಮಾನುಷನಲ್ಲ ಸಮ್ಮುಖದಿ ನಿಂದೇ ಯುದ್ಧವ ಮಾಡಲಳವಲ್ಲ, ಮಾಯದಲಿ ಕಂಗೆಡಿಸಿ, ಬಳಿಕ ಕೊಲ್ಲುವೆನೆಂದಗೋಚರನಾಗಿ ಗಗನಮನ್ನೈದಲು; ಆ ಮಿಹಿರನುರುಭಯದಿ ಚರಮಗಿರಿಯಂ ಮರೆಯಮಾಡಿಕೊಳಲು, ಜಾತ್ಯಭಿಮಾನದಿಂ ದೀರ್ಘನಾಸಂಗೆ ಸಹಾಯ ಮಾಡಲೆರಗಿದಂಧಕಾಸುರನವೊಲು, ಧರೆ ಗಗನ ದಿಕ್ಕುಗಳನಾವರಿಸೆ, ಖಲನು ನಿಶಾಕಾಲ ಸಂವರ್ಧಿತಾತ್ಮೀಯ್ಯಬಲನಾಗಿ, ಶೋಣಿತಾಲಾಕಾಶ್ಮ ವಿವಿಧಾಸ್ತ್ರ ಶಸ್ತ್ರಗಳ ವರ್ಷಿಸುತ ಜೀಮೂತರೂಪಿನಿಂ ಬಾಧಿಸಲು, ಬಾಲಕನೇಕಾಕಿಯಾದಡೆಯು ಕಿಂಚಿದಾಲೋಚನೆಯ ಮಾಡದತಿ ಸಾಹಸದಿ ಶರಗಳಿಂ ತರಿತರಿದು ಪಾರಗಾಣದತಿ ಸಾಹಸದಿ ಸೆಣಸುತಿರೆ, ಖಲನು ಗಿರಿರೂಪದಿಂ

ದೊಂದೆಡೆಯೊಳೊತ್ತರಿಸೆ, ಕಲಿಹರಿತರಕ್ಷುಮುಖ ಘೋರಸತ್ವಗಳಂತೆ ಬಿತ್ತರಿಸೆ, ತಂಹರಿಸುತವುಗಳಂ ಶರಗಳಿಂ ತರಿವುತ್ತ ಪಾರಗಾಣದೆ ಮನದಿ ಯೋಚಿಸಿ ಆ ರಾಕ್ಷಸನ ಮಾಯವೆಂದರಿದು ನೆನದು, ಮಹರ್ಷಿಯಿತ್ತ ಮಂತ್ರಾಸ್ತ್ರಗಳನವರೊಳೈಂದ್ರಾಸ್ತ್ರಮಂ ಚಾಪದಲಿ ಪೂಡಿ ಜವದಿ ಸೆಳದೆಸೆಯಲು, ಆ ರಾಕ್ಷಸೀ ಮಾಯವಾಕ್ಷಣದಿ ನಾಶವನ್ನೈದಲು, ಆ ದೀರ್ಘನಾಸನರುಣೋದಯಕಾಲದೊಳು ಗದಾಪಾಣಿಯಾಗಿ ಸಮ್ಮುಖದಿ ಸಿಂದು ಘರ್ಜಿಸಲು, ಕುವಲಯಾಪೀಡನಾತ್ಮಜನವನಂ ನೋಡಿ ಕ್ರೋಧಮೂರ್ಛಿತನಾಗಿ ಸತ್ವರದೊಳಾ ವಿಶ್ವಭುಗಸ್ತ್ರಮಂ ಚಾಪಕಳವಡಿಸಲು, ಧರೆನಡುಗಿತು ಆಗಸದದೆಸೆಯಿಂದುಡುಗಣಗಳುದುರಿದವು ವಾರಿಧಿಗಳುಕ್ಕಿದುದು, ದಿಕ್ಕರಿಗಳೊದರಿದವು ಶಿರಗಳುನು ಗಿರಿ ಶಿಖರಗಳು ಶಿಡಿ ಶಿಡಿದು ಖಗ ಮೃಗಧ್ವಾನಕ್ಕೈತವಗಳಿಂ ದೊರಲಿದವು, ತ್ರಿಜಗ ಕಂಪಿಸಿ ತೇನಸೆಂಬೆನಾ ಮಹದಸ್ತ್ರ ದುರುಬೆಯನು, ಹಮ್ಮೈಸಿದನು ದನುಜ, ಫಣಿ ಫಣಾರತ್ನ ನಿಕುರುಂಬವರಳಾದವೆಲೆ ತಾತ ! ಸುರಸಿಮ್ನಗಾಜಲ ಕುದಿದು ಅರ್ಕ ನಿಶಿನಾಯಕರನು ತಾಪಕೊಳಗಾದರವನೀಶತನುಜಾತ ! ಕೇಳ್ಸೆಳದಾ ಮಹಾಸ್ತ್ರವನು ಬಿಡಲು, ತಕ್ಷಣದಲ್ಲಿ ಮಹದದ್ರಿಸಿಭ ದೀರ್ಘನಾಸಿಕನಂ ಭಸಿತಾವಶೇಷನಾಗಲು, ದಿವಿಜರವನ ಕೊಂಡಾಡಿದರು, ಮಂತ್ರಮಯ ಕವಚಮನ್ನುಗಿದು ನಿಜಗಾತ್ರದೊಳ್ಮೂಡಿತುಗ್ರದನುಜಭುಜ ವಿಸಿರ್ಮುಕ್ತ ಮಹದಾಯುಧ ಕ್ಷತಸ್ರವ ರುಧಿರಧಾರಾಸಿಕ್ತನಾಗಿ, ಗುರುಕರುಣದಿಂ ದುರುಳನಿವ ಮಡಿದ, ತಚ್ಛರಣ ನಳಿನಂಗಳನು ಕಂಗಳಿಂ ಕಾಣದಲೆ ಹಿಂಗದೀರಣರಂಗಜನಿತ ಸಂತಾಪವೆಂದೆನುತಲಾ ಸಂಗರ ಕ್ಷೇತ್ರದಿಂ ತಿರುಗಿ ಬರುವನಿತರೊಳು, ಬಂದು ಮುನಿವರ್ಯ ತಕ್ಷಣದಿ ಗೋಚರನಾಗಿ ಮನದಿ ಮರುಗುತ ವತ್ಸ ! ನೀಚ ದೈತ್ಯಾಧಮನ ಕ್ಷತವ್ರತಿಯೆಲ್ಲವು ಪೋಗಿ ವಜ್ರಮಯವಾಗೆ ತನುವು ಮುನಿವರನು ನುತಿಸಿ ಬಹುವಿಧದಿ ತನ್ನಾಶ್ರಮಕೆ ತರಳನಿಂದೊಡಗೂಡಿ ಬಂದು ನೃಪನಂದನಗೆ ಕಂದಮೂಲಾದಿಗಳನಿತ್ತು ಸಂತವಿಸುತಾನಂದದಿಂ ಸುರುಚಿಯನು ತಂದಿರುವ ಸಂಗತಿಯ ನೊರೆದು ತತ್ಪರಿಣಯವ ಮಾಡಿಕೊಳುವುದಾವು ಬಂದು ಮಾಡಿಸುವೆವೆಂ

ದೊರವ ಭಿಗ್ರಹಗೈದು ತರಳಗಪ್ಪಣೆಗೊಡಲು, ತೆರಳಿ ಶಬರಾಲಯಕೆ ಬರುತಿರಲು ;

ಇತ್ತಲಾ ಶಬರ ರವಿಯಸ್ತಮಯಪರ್ಯಂತ ನೋಡಿ ನೃಪತನಯನಾಲಯಕೆ ಬರದಿರಲು ಘನ ಶೋಕದಿಂ ಧರಿಸಿ ಶರಚಾಪಗಳನಖಿಳ ಕಾಂತಾರಮಂನಂಧಕಾರದೊಳರಸಿ ಕಾಣದತಿ ದುಃಖದಿಂ ತಿರುಗುತರುಣೋದಯದಿ ಕಂಡು ಋಷಿಯಾಶ್ರಮವ ಬಂದವರ ಚರಣಗಳಿಗೊಂದಿಸುತ ನಿಜತನಯನೆಲ್ಲಿ ಪೋದನೋ ಕಾಣೆನೆಂದು ರೋದನವ ಮಾಡೆ, ಮುನಿಯು ಸಂತವಿಸುತಾ ಶಬರನೊಡನಖಿಳ ವೃತ್ತಾಂತಮಂ ತಿಳುಹಿ ಜವದಿಂದ ಪರಿಣಯವ ಮಾಡೆಂದು ನುಡಿದು, ಆತನಂ ತಮ್ಮ ನಿಜ ಶಿಷ್ಯರನು ಮಮತೆಯಿಂದೀತ ಸತ್ಯವ್ರತನು ಎಂದದರಿಂದ ತವತನುಜನಂ ಶಬರ ! ಕೇಳಾನಾಮದಿಂದ ಕರೆಯುವದೆನುತ ತಾಪಸನು ನುಡಿನುಡಿವುತಪ್ಪಣೆಗೊಡಲು, ಮಣಿದು ಮುನಿಚರಣಗಳಿಗಾ ಕಿರಾತನು ತನ್ನ ಸುಕೃತಕ್ಕೆಣೆಯಿಲ್ಲವೀಧರಣಿಯೊಳಗೆಂದೆನುತ ಪರಮ ವಿಸ್ಮಯದಿಂದ ಬಂದು ತನ್ನಾಲಯಕೆ, ತರಳನಂ ತೆಗೆದಪ್ಪಿ ಪರಮಸಂತೋಷದಿಂ ತನ್ನ ಸತಿಯೊಡನಖಿಲ ವೃತ್ತಾಂತವಂ ನೊರೆದು ಪರಿಣಯೋದ್ಯೋಗವಂ ಮಾಡುತಿರಲು, ಸುರುಚಿಯು ಸತ್ಯವ್ರತನ ಪರಮಲಾವಣ್ಯಮನ್ನೋಡಿ ವಿಸ್ಮಿತಳಾಗಿ ಚಲಿಸದಿಹ ತನ್ನ ಮನಕರಗಲಾಕ್ಷಣದೊಳಾ ಮಾನಿನಿಯು ಮನದಲ್ಲಿ ಗಗನವಾಣಿಯ ನೆನೆದು ಯೋಚಿಸುತ ತನ್ನಮನ ಕಡೆಗೀ ಕಿರಾತಸುತನಲ್ಲಿ ಪರಿಣಮಿಸಿತೇನೆಂಬೆನಚ್ಚರಿಯ, ಆದಡೀ ಪುರುಷನಂ ನೋಡಲೀ ಕಿರಾತತನುಜನಾಗಿ ತೋರುವುದಿಲ್ಲ, ಹರನು ತಾನೆಬಲ್ಲ, ಬರಿದೆ ತಾಂ ಚಿಂತಿಸಿದಡೇನಹುದು, ಮುರಹರನ ಕರುಣವಿದ್ದಂತಾಗಲೆನುತ ತರಹರಿಸುತಿರಲಿದುವೆ ತನ್ನವಸರವು, ತರಳೆ ! ಎನುತ ತನ್ನ ವಶಗೈಯ್ಯಲೆಂದೆನುತಲಾ ಶರಜ ಶರಚಾಪಮಂ ಪಿಡಿದಲರಕಣೆಗಳನು ತರುಬಲಾ ಮಾನಿನಿಯು ಕರಗಿ ಕಂಬನಿಗರೆಯು ಸುಭಗನನುರಾಗದಿಂ ದಿನಗಳೆಯಲಸದಳವೆ ಬಳಲುತ್ತಿರುವಾಕೆಯಂ ಕಂಡು ಸತ್ಯವ್ರತನು ತರಳೆಯನು ತಾಪನಂ ತಿಳಿದು ಸುರುಚಿಯ ಪರಮ ಸೌಂದರ್ಯ ಗಹನದೊಳು ಮನಸಿಕ್ಕಿ ಸ್ಮರಕಿರಾತಾ ಮೃಗಾಪತಿಯಿಂದ ಕಾತರಿಸಿ ಕಂಗೆಟ್ಟು ಪಥಗಾಣದಳುಕಿ ನಿಜಧೈರ್ಯಮಂ ನುಳಿದು ಮುಂದೋರದಲೆ ಮೋಹಪರವಶನಾಗಿ ತದ್ಗತಾತ್ಮ್ಯದಿ ಕ್ಷಪ

ರವಮಾನುರಾಗದಿಂ ಸುಡಿದಪೆಲೆ ಮಾರುತನೆ ! ಕೇಳು- ನೀಸಿದಮಂಗನಾರುಚಿ ರಾಂಗಾನುಷಂಗಿಯಾದುದರಿಂ ತದ್ವಿರಹಾನಲಜ್ವಾಲಾ ಸಮಾಲೀಢ ನಿಶ್ವಾಸಶ್ವಸನ ಸಂಪರ್ಕ ವಿನಷ್ಟಗುಣತ್ರಯನಾಗಿ ದಂದಹ್ಯಮಾನ ಸಂಸ್ಪರ್ಶಮುಳ್ಳವನಾದ ಡೆಯುಂ, ತದೀಯ್ಯ ಸಂಬಂಧಮಾತ್ರಾನುಸಂಧಾನ ಜನಿತಾನುರಾಗದಿ ಸ್ಪೃಹ ಣೀಯ್ಯನಾಗಿರುವೆ, ಅಯ್ಯಾ ನಿಶಾಕರ! ದೋಷಾಕರನಾದ ನಿನ್ನೊಳನುತಾಪ ಕಾರಿತಾಸ್ಥಿತಿಯುಕ್ತಮೇಕೆಂತು ಸಂತಾಪಕಾರಿಯಾದ ನಿನ್ನಂ ಸುಧಾಕರನೆಂದು ಕರೆವರದೆಂತುಟೋ ? ಜನರು, ಮೇಣಾದಡೆಯು ತದೀಯ್ಯವದನಾರವಿಂದ ಸ್ಥಿತ ಗುಣೈಕವೇಶಾತ್ರಯದಿಂ ದರ್ಶನೀಯ್ಯನಾಗಿರುವೆ, ಎಲೈ ವಸಂತ ! ಪ್ರಥಮದೊಳು ಜಾತಿಯೇ ಇಲ್ಲದಿಹ ನಿನ್ನೊಡನೆ ನುಡಿದೇನುಫಲ, ಎಲವೋ ಗಿಳಿದೇರ ! ಶೂರನಾದವನೆದುರಿನೊಳು ನಿಂದು ಸೆಣಸುವನು, ಧಿಗ ! ನಿನ್ನ ದೃಶ್ಯತೆಯನಾಂತು ಬಾಧಿಸುವ ನಿನ್ನ ಧಟುತನವನಾದಡೆಯು ಏಕತಾಗುಣದಿಂ ಸ್ಮರಣೀಯ್ಯನಾಗಿರುವೆ, ಆರಡಿಯೆ ! ಎನ್ನನಾರಡಿಗೈದು ಆ ಸಮಯದೊಳೆ ದುರಿನಲಿ ನಿಷ್ಠುರೋಕ್ತಿಗಳನೊರದಲ್ಲಿದು ಯುಕ್ತಮಧುಪನಿಂಗೆ, ಪರಭೃತ ! ಪರಿಕ್ಲಿಷ್ಟಲೋಕ ಪಂಚತಾಕಾರಿಯಾದ ನಿನ್ನಯ ಪಂಚಮಾರವಮಂ ವಿಚಾರಿ ಸದೆ ಕರ್ಬಿಗರ್ ವರ್ಣಿಪರೆಂದು ನಾನಾವಿಧದೊಳನುತಾಪಗೊಳುತಿರಲು, ಸುರಚಿಯಾಮದನ ವೇದನೆಯಿಂದ ಕಂಗೆಟ್ಟು ಮನದೊಳನುಮಾನದಿಂ ದೊಂ ದುದಿನವಿರಹವೇದನೆಯಿಂದ ಬೇಸತ್ತು, ವನದಲ್ಲಿ ಪುಷ್ಪಾಪಚಯವ ಮಾಡುತ್ತ ಮತ್ತಕಾಶಿನಿಯಾಸ್ಯವನಜ ಸೌರಭಲುಬ್ಧ ಮಧುಕರಾವಳಿಯಾವರಿಸೆ, ಭೀದ ದಿಂ ಮುಂದಕ್ಕಡಿಯಿಡುತ ಸ್ವತನುಸಾದೃತ್ಯ ಜನಿತಾನುರಾಗದಿಂ ಮಾಲತೀಲತೆ ಯಡೆಯುನೈದಿ, ನಿಜಕಟಾಕ್ಷಭ್ರಮರ ಸಮಾಲೀಢ ಕುಸುಮಸ್ತಬಕಮಂ ತೆಗೆ ದು ಕರದೊಳ್ಪಿಡಿದು, ಎಲೈ ಮಾಲತಿಯೆ ! ಪುಷ್ಪಿಣಿಯಾಗಿಯುಂ ಪುನ್ನಾಗ ಸಮಾಶ್ಲಿಷ್ಟಳಾಗಿರುವೆ, ನಿನ್ನಯ ಪುಣ್ಯಮೆಂತುಟೋ ? ಎಂದು ಮಲ್ಲಿಕಾ ವ್ರತತಿಯಡೆಗೈದಿ ಮರುತ್ಪ್ರೇತಮಂದಾಂದೋಳಿತಸ್ತಬಕಳಂ ಕಂಡು, ಪ್ರಿಯಾ ನಿಲಸ್ಪರ್ಶ ಸುಖಪಾರವಶ್ಯ ಕಂಪಿತಾವಯುವಳಿವಳೆಂದರಿದು,ನಗುತ ಸಖಿ; ಸದಾ ಗತಿಯುನಿಶ ಕಮಲಿನೀ ಗಂಧಸಾಂದ್ರನಾಗಿರುವನಾದಡೆಯು ನಿನ್ನ ಪ್ರಸನ್ನತೆ ಯ ಪೇಳಲಳವಲ್ಲ ಎಂದಡಾತಲ್ಲಿಂದ ರಸಾಲತರು ನಿರಂತರಛ್ಛಾಯಮಂ

ಆಶ್ರೈಸಿ, ಪಿಕಪಂಚಮಸ್ವನಶ್ರವಣ ದ್ರವೀಭೂತಮಾನಸಳಾಗಿ ಯೋಚಿಸುತ್ತಿರಲು,

ಅನಿತರೊಳು ತಾಪಸೋತ್ತಮನು ಯದೃಚ್ಛೆಯಿಂ ವನವ ಸಂಚಾರ ಮಾಡುತ್ತ ಚಂಡಖಂಡನ ದೈವಗತಿಯಿಂ ಕಂಡನಾ ಪುಂಡರೀಕಾಕ್ಷಿಯಂ, ವನದೊಳಿವಳೇ ಸುರುಚಿಯೆಂದರಿದು, ತದಧಿಷ್ಟಿತರಸಾಲದ್ರುಮಾಭಿ ಮುಖನಾಗಿ ಬರುತವಳಂ ನೋಡಿ ಮೃಗಾಂಕನಾಲತಾಮೂಲದೋಳ್ ಸಿಲೀನನಾಗಿಹನು ಆ ಜೈವಾತೃಕನು ಪರಿಭಾಗದೊಳು ಸ್ವಸಮೀಪವರ್ತಿಯಾಗಿರುವ ಘನತಿಮಿರನಿಕರದಿಂ ತ್ವಚಿತ್ಕ್ವಚಿತ್ಪ್ರದೇಶಮಂ ತದ್ವಿರಳರೇಖೆಗಳು ಛವಿದಾವರಿಸುತಿರೆ ಖಿನ್ನನಾಗಿರುವಂತೆ ತೋರುತಿದೆ? ಚಂಪಕಾಸುಮನಾಳವಿನಿಸ್ಸೃತಪವನಾದೋಧೂಯಮಾನಬಂಧೂಕವೇನಿದೇನಚ್ಚರಿಯು? ಹಂಸ ಚಕ್ರವಾಕಗಳಾ ಕುವಲಿಯದ್ವಯವಿನಿರ್ಗಳದ್ಭಗೂಸದೃಶಕಮಲಧಾರಾರ್ದ್ರ ಸರ್ವಾಂಗಗಳುಮುಳ್ಳವರಾಗಿ ಕಂಪಿಸುತಿಹವು, ಅತಿ ಚಂಚಲ ಚಂಚಲೀಕಗಳ್ ಪ್ರತಿಕ್ಷಣ ಭ್ರಮಣ ರೂಪ ನಿಜ ಪ್ರಕೃತಿಯನುಳಿದು ನಿನ್ನೆಡೆಯಲ್ಲೆ ಸ್ತಬ್ಧವಾಗಿಹವು. ಅದುಕಾರಣದಿಂ ಕುವಲಯಾಪೀಡನೆಂಬ ಕುವಲಯಾಧಿಪ ಸಂತಾನ ಮನೋರಥ ಕಲ್ಪಲತೆಯಾದ ಈ ಲಲಿತಾಂಗಿಯತಿಚಿಂತೆಯಿಂ ತಪಿಸುವಳಂತೆ ಕಾಣುತಿದೆ, ಜನನೀ ಜನಕ ವಿಯೋಗನಿಮಿತ್ತಕವೋ? ಸತ್ಯವ್ರತಾನುರಾಗಜನ್ಯವೋ? ಎಂದು ಮನದೊಳಾಲೋಚಿಸುತ ಸಮೀಪಮನ್ನೈದುತಿರಲು, ನಹುಷಕೃತವಿಷಾದಕಲಿತ ಪುಲೋಮಜೆಯೆಡೆಗೆ ಧಿಷಣನೈತಂದಂತೆ ತನ್ನೆಡೆಗೆ ನಡೆತಂದ ಮಹರ್ಷಿಶ್ರೇಷ್ಠನಾದ ಅಷ್ಟಾವಕ್ರಮುನಿವರಗೆ ಸಾಷ್ಟಾಂಗದಿಂ ನಮಿಸಿ ಜವದಿಂ ರಸಾಲಕಿಸಲಯಗಳಿಂ ಕೋಮಲಾಸನಮಂ ಮಾಡಿ ಕುಳ್ಳಿರಿಸಿ, ಭಯವಿನಯ ಕಲಿತಮಾನಸಳಾಗಿ ತಲೆಯನುವಾಗಿ ಅಂಜಲಿಯಂ ಕಟ್ಟಿ ನಿಂದಿರಲೆದುರಿನೊಳು, ಎಲೈ ತಾಯೆ! ನೀನು ಚಿಂತಿಸುವುದ್ಯಾತಕೆ ನಿನ್ನಂತರಂಗವನು ತಾನರಿವೆನದರಿಂ ದೊರೆವೆ, ಕೇಳಿಂದುಮುಖಿ! ವಿಯದ್ವಾಣಿಯುತ್ತರಾರ್ಧ ತಾತ್ಪರ್ಯಮಂ ಈ ಸತ್ಯವ್ರತನ ಪಾಣಿಗ್ರಹಣ ನಿನಿಗಾಗುವುದು ಎಂದು, ಮೇಣೀಸತ್ಯವ್ರತನು ಕಿರಾತನಪತ್ಯನೆಂದು ಸಂದೇಹಮಂ ತಾಳದಿರು, ಎನುತದರ ಸಂಗತಿಯ ಯಥೋಚಿತವನೊರೆವೆ, ನಿನ್ನಯ ಪರಿಣಯಾರ್ಥವಾಗಿಯೆ ತಾವುಬಂದಿರುವೆವಿವನ ಕೈಪಿಡಿ

ಯೆ ನಿನಗಿಪಸರವು ಲಭಿಸುವುದು ಎಂದನುಗ್ರಹಗೈದು, ಕರೆ ಕಿರಾತನ ಎನಲು, ಜವದೊಳು ಮಹರ್ಷಿವರನೈದಿ ಬಂದಿರುವುದನು ಸುರುಚಿಯೈತಂದು ತಿಳುಹಲು, ಆ ನಿಷಾದನತಿಜವದಿಂದ ಪತ್ನೀಪುತ್ರ ಪರಿವಾರದಿಂದೊಡಗೂಡಿಸುರುಚಿಯುಮೊಡಗೊಂಡು ರಸಾಲತರುಮೂಲದೊಳು ಉದಯಿಸಿದಭಾನುಮಂಡಲದಂತೆ ಕುಳ್ಳಿರುವ ಮಹರ್ಷಿಯಡಿಗೈದಿ ಸಾಷ್ಟಾಂಗದಿಂ ನಮಿಸುತೆಲ್ಲಮುಂ ಕೈಮುಗಿದು ದಿವ್ಯಫಲಪುಷ್ಪಗಳನಂದಿಟ್ಟು ದೂರದಲಿನಿಂದಿರಲು, ಮುನಿವರನು ನುಡಿದನೆಲೈ ನಿಷಾದ! ಸಜಾತೀಯಸಮೂಹ ವೊಂದೆಡೆಯೊಳಿಂತು ಜೊತೆಗೊಳಿಸಲೇನುಕಾರಣವು ಸತ್ಯವ್ರತನವಿವಾಹಲಗ್ನ ಸನ್ನಿಹಿತವಾಗಿರುವುದವರಸಂಭಾರಮಂಸಿದ್ಧಮಾಡಿದೆಯಾ ಎಂದು ಕೇಳಲಾ ಔದುಂಬರನೆರಗಿ ಕೈಮುಗಿದೆಂದನಾರ್ಯ! ತರಳನ ವಿವಾಹಮಹೋತ್ಸವನಿಮಿತ್ತವಾಗಿತತ್ತದರಣ್ಯಸ್ಥಿತಬಂಧುಜನ ವೊಂದಾಗಿ ಬಂದಿಪರು ತನ್ನೊಳನುರಾಗದಿಂ, ಯಥಾಶಕ್ತಿ ಸಂಭಾರಮಂಸಿದ್ಧಮಾಡಿಹೆನು, ಚರಣಸರಸೀರುಹವ ಕಾಣಲೈದುವೆನೆಂಬನಿತರೊಳುದಯಿಗೈವಬುದ್ಧಿಯುಂ ಕೇಳಿತಾನೇಧನ್ಯನೀಧರೆಯೊಳೆಂದು ನಿನ್ನಯಚರಣಸನ್ನಿಧಿಗೆಬಂದೆನೆಲೆತಂದೆ; ಇತಂಮವಯದಿಂ ಕಟಾಕ್ಷಿಪುದೆಂದು ಬಿನ್ನಹವ ಮಾಡಲು, ಆಮಹರ್ಷಿಯೈತಂದುಗಗನಾಂಗಣ ಚುಂಬಿತಾತಿ ವಿಶಾಲನ್ಯೂತನ ವೃಕ್ಷನೂತಪರ್ಣನಿಕರಾಭಾವಿತೋಪರಿ ಭಾಗ ರುಚಿರಮಂಟಪ ಪ್ರಾಕಾರಾಂತರಾಳದೊಳನೇಕ ನಾನಾವಿಧಪರ್ಣಶಾಲಾಪ್ರಚಯದೊಳಗಲ್ಲಲ್ಲಿ ಧನಕನಕಭೂಷಣಾಂಬರದುಕೂಲರಾಶಿಗಳನಲ್ಲಲ್ಲಿ ಸವ್ಯಾಢ್ಯತಂಡುಲಮುದ್ಗಗೋಧೂಮ ಮಾಷಶರ್ಕರಾದಿ ನಾನಾವಿಧಪದಾರ್ಥರಾಶಿಗಳನಲ್ಲಲ್ಲಿ ನವ್ಯಹಯ್ಯಂಗವೀನಾಜ್ಯಕೂಪಗಳನಿಂತಪರಿಮಿತ ವಿವಾಹ ಸಂಭಾರಮಂ ನೋಡಿಮುನಿಮನದೊಳಾಶ್ಚರ್ಯಯುಕ್ತನಾಗುತ ಕಿರಾತನಿಂಗಿಂತು ಭಾಗ್ಯವೆಲ್ಲಿಬಂದೊದಗಿದುದೊ ಶಿವಶಿವಾಯುಮ ಅಥವಾ ನಿರಂತರವ್ಯವಹಾರಿಯಾದವಗೆ ನಿಯಮವೆಂಬುದೇನು ಹತ್ಸಂಯದ್ಧಿಗೆಕಾರಣವುಮುಂಮಸಂತೋಷಯುಕ್ತನಾಗಿ ನಗುತಲೊಂದೆಡೆಯಲ್ಲಿ ಮಂಡಿಸುತಲವನಿಂಪ್ರಾರ್ಥಿತನಾಗಿ ನಿಜಾಂತೇವಾಸಿಗಳನೆಡೆಗೆಕರೆದು ಸಮೀಪಪ್ರದೇಶದೊಳಿರುವ ತತ್ತದಾಶ್ರಮನಿವಾಸಿಗಳಾದ ತಾಪಸರಸಶಿಷ್ಯರಾಗಿ ದಯಮಾಡಬೇಕೆಂದು ಕರತರುವುದೆಂದಪ್ಪಣೆಯಿತ್ತು, ನಿಜಾನುಷ್ಠಾನಕಾಲ ಪ್ರಾ

ಪ್ತಿನಾಗಲಾತರಂಗಿಣಿ ಯತೀರನುಂನನುಸರಿಸಲು,

ಇತ್ತಲಾಪುರೋಹಿತನು ತನುಜೆ.ತನಿಂ ವೆರಸಿ ಸುರುಚಿ ಪುನರಣ್ಯದೊಳಗರಸುತ್ತ ದೈವಗತಿಯಿಂದ ಲಾಕಿರಾತನಿರುವ ಅರಣ್ಯಮುಂಪೊಕ್ಕು ಬರುತಿರಲು, ಸಾಕ್ಷಾತ್ ವನಲಕ್ಷ್ಮಿಯಂತೆ ಪುಷ್ಪಾಪಚಯಮಂ ಮಾಡುತ್ತಿರುವ ಸುರುಚಿಯಂ ಕಂಡು ವಿಸ್ಮಿತರಾಗಿ ತತ್ಸಮೀಪಮಂ ಕುರಿತು ಮೆಲ್ಲಮೆಲ್ಲನೆ ಬರುತಿರಲು, ಕಂಡಳಾಸುರುಚಿಯಾಕಸ್ಮಿಕದಿ ಪರಮಾಪಕಾರಿಯಾಗಿರುವ ವಿಪ್ರನಂ ತತ್ಸುತನ ರೋಷ ತಲೆದೋರಿ ಆವರಿಸುತಿರೆ ಮನದಲ್ಲಿ ತಾಳಿ ಆಲೋಚನೆಮಾಡಿ ನಿಶ್ಚೈಸಿ ಬಲು ಹರ್ಷಮುಂತ್ಯೆದಿದವಳಂತೆ ಬಂದೆರಗಲು, ಆ ವಿಪ್ರನತಿವಿಸ್ಮಯದಿ ಮನದಲ್ಲಿ ತನ್ನ ವಂಚನೆಯುನಿವಳಲ್ಲಿ ಎಳವರಿಂ ವಿನಯದಿ ಬಂದು ನಮಿಸಿದಳೆಂದರಿದು ಹರಸಿ ಕೇಳಿಲೆ ಬಾಲೆ! ಈ ಮಹಾರಣ್ಯಮಂ ನೀನು ಸೇರಲೇನುಕಾರಣಂ ಪೇಳು ಎನಲು, ಸುರುಚಿಮನದೊಳಗಿವನು ತಾನು ಮಾಡಿದ ಭೇದನುಂ ತಾನರಿಯಳೆಂದೇ ತಿಳಿದು ತದನುಗುಣವಾಗಿ ಪ್ರಶ್ನೆಯಂ ಮಾಡುವನು, ಆದಡೀಭೂಸುರಾಧಮನಂ ಪವನಂತೆ ಕೃತ್ರಿಮದಿಂದ ಕೊಲುವೆನೆಂದೆನುತ ನಿಶ್ಚಯಮಾಡಿ ನುಡಿವಳಾಚಾರ್ಯ! ಕೇಳೆನ್ನವೃತ್ತಾಂತವಂ, ನಗರದೊಳರಮನೆಯೊಳಮೇ.ಹಾಟಕ ವಿಶ್ರುತಮಂಚದೊಳು ತಾನು ಮಲಗಿರ್ದ್ ಕಂದೇದೀ ಮಹಾಗಹನದೊಳು ಕಿರಾತ ಮಿಥುನ ಮಧ್ಯಗತಳಾದೆನ್ನ ಕಂಡು ನಡುನಡುಗಲಾ ಕಿರಾತನೆನ್ನಂ ನೋಡಿ ಸಂತೈಸುತೀತಟಿನೀ ಪ್ರವಾಹದೊಳು ತೇಲಿಬಹ ದಿವ್ಯ ಮಂಜೂಷಮಂ ಕಂಡು ಪಿಡಿದದನು ವಿಸ್ಮಯದಿ ತೆಗದು ನೋಡಲು ಬಾಲೆ ನೀನು ಮಲಗಿರ್ದೆ, ಇದು ಎನಗೆ ನೀ ದೊರದ ವೃತ್ತಾಂತಮೇನು ತೊರೆದನೆನ್ನಯ ಜನಕ ನೆನ್ನನೀಪರಿಯಲ್ಲಿ ತೊರೆಯೆ ಕಾರಣಮೇನೋ ಹರನು ತಾನೆಬಲ್ಲ, ನೀವು ಸುತನಿಂವೆರಸುತೀ ಮಹದ್ಗಹನಮುನ್ನೈದೆ ಕಾರಣಮೇನು ಪೇಳಬೇಕೆಂದೆನಲು, ಭೂಸುರನು ಕೇಳಿ ಮಗಳೆಂದನೆಲೆತಾಯ! ತನ್ನಣುಗನಿವ ನಿನಿಗೆ ಮರುಳಾಗಿ ನಿರುತ ತಪಿಸುತ್ತಿರಲು, ಪುರದೊಳಗ ಧರಣೀಶನು ನಿನ್ನಂ ತೊರೆದರ್ಥಮಂ ಜನರಾತಿಕೊಳುತಿರಲು, ಪುತ್ರನತಿ ಖೇದಮಂ ಧರಣಿಪತಿ ಯುಕ್ರಮವನೋಡಿ ನಿರ್ವೇದದಿಂ ನಗರದೊಳಗಿರಲಾರದೀತನಿಂದೊಡಗೂಡುತರಸುತ್ತ ನಿನ್ನನೀಗಹನಮಂ ಪೊಕ್ಕೆ, ಮುರಹರನ ಕಾರುಣ್ಯ

ದಿಂ ಕಂಡೆ ನಿನ್ನನು, ಮುಂದೆ ನಿನ್ನಯ ಮನದಿ ನಿಶ್ಚೈಸಿದರ್ಥವನು ಪೇಳೆ ತನಿಗಾರೀತಿಯಿಂ ನಡೆದುಕೊಂಬುವೆನು ಎನಲು, ಸುರುಚಿಯಾಭೂಸುರನ ಕೈತವಾಲಾಪಮಂ ಕೇಳಿ ಕಡು ದುಃಖಮಂ ನಟಿಸುತ್ತ ಮೃತ್ಯುವಿನ ತುತ್ತಾಗಿ ಇರುವೆನಗೆ ತೋರುವುದೇ ಮುಂದಿನಾಲೋಚನೆಯು, ನೀನು ಪೇಳಿದ ರೀತಿಯಿಂದ ತಾಂ ಕೇಳುವೆನು ಎನಲು, ವಿಪ್ರನೆಲೆ ಲಲಿತಾಂಗಿ! ತನ್ನಯ ಸುತನಂ ವರಿಸುವರ್ಥಮಂ ನಿಶ್ಚಯದಿ ಪೇಳಿದಡೆ ಸರ್ವಸಾಹಸದಿಂದ ನಿನ್ನನೀ ಮೃತ್ಯುಮುಖದಿಂದ ತೊಲಗಿಸಿ ಜವದಿ ಕರೆದೊಯ್ದು ನೆಲ್ಲರಂ ತೆರಳಿ ದೇಶಾಂತರವನೈದಿ ಸುಖದಿಂದಿರುವೆವೆಂದೆನಲು, ಮನದೊಳಾಮಾನಿನಿಯು ಯೋಚಿಸಿದಳೀಗಲೀ ವಿಪ್ರನನುಪೇಕ್ಷಿಸಿದಡಿನ್ನೇನು ಮಾಡುವನೊ ಹರಿಯಕಾರುಣ್ಯದಿಂದೊರೆದಿರುವ ಸತನುಜಾತನಂತಿರುವ ಪರಮ ಸುಂದರನ ಕರಗ್ರಹಣಕ್ಕೇನೆಡರನಾಚರಿಸುವನೊ? ಪರಮ ದಾರುಣಹೃದಯನೀ ಮಹೀಸುರನಿವಗೆ ತಕ್ಕುಪಾಯವ ಮಾಡಬೇಕೆನುತ ನಿಶ್ಚೈಸಿ, ನುಡಿದಳಾಚಾರ್ಯ! ಕೇಳ್ಪರಮದಾರುಣ ಹೃದಯನೀ ಕಿರಾತನು, ನಿಮ್ಮ ಕಂಡದೇಂಮಾಡುವನೋ? ವಿಪ್ರ! ಕೇಳದರಿಂದ ತನ್ನ ನಿಜಜನಕ ಮೋಹನ್ನಪೆಟ್ಟಿಗೆಯಲ್ಲಿ ಇರಿಸಿ ತೊರೆದೀವಿತತ ಮಂಜೂಷದೊಳಗೀರ್ವರಿನನಸ್ತಮಯಕಾಲ ಪರಿಯಂತ ಮಲಗಿರಲು, ನಿಶಿಯಲ್ಲಿ ಕಿರಾತನಂ ವಂಚಿಸುತ ತಾವೆಲ್ಲರತಿ ಜವದಿ ತೆರಳುತಿಲ್ಲಿಂದ ದೇಶಾಂತರವನೈದಿ ಬದುಕಲಿಬಹುದು ಎಂದೆನಗೆ ತೋರುವುದು ಎನಲಾ ಮಹೀಸುರನು ಕೇಳುತ್ತ ಮನದಲ್ಲಿ ಮಾನಿನಿಯು ಘೋರತರ ನೀಚ ದನುಜಾತನಂತಿರುವ ದಾರುಣ ಕಿರಾತ ಹಸ್ತಗತಳಾಗಿರುವ ಕಾರಣದಿಂದ ತನ್ನ ಸುತನಂ ವರಿಸಲೆಳಸು ತಂಗೀಕಾರಮಾಡಿ ತನ್ನೊಡನೆ ನಿಂತು ನುಡಿವಳೆಂದೆನುತಾಗ ತಿಳಿದು ಮಾನಿನಿಯೊಡನೆ ನುಡಿವ ಲಲಿತಾಂಗಿ! ನೀಪೇಳಿದಂತಾಗಲೆನುತೊಡಂಬಡಲು, ಸುರುಚಿ ಸುತಸಹಿತಲಾ ವಿಪ್ರನಂ ಪೆಟ್ಟಗೆಯೊಳಿಟ್ಟು ದೃಢರಶನೆಯಂ ಬಿಗಿದು ಬಲು ಜವದೊಳೈತಂದು ವೃತ್ತಾಂತಮಂ ಕಿರಾತನೊಡನೊರೆಯಲವನವಂ ಕೇಳಿ ಬಲು ಹರುಷದಿಂ ಸುರಚಿಯನ್ನುತಿಗೈದು ಮರುಳರಿಂಗುಚಿತಶಿಕ್ಷೆಯ ಮಾಡುವೆನು ತಾಯೆ! ತರಹರಿಸಲಹುದೆನುತಾಕೆಯಂ ಸಂತೈಸಿ ತೆರಳುತಾಕ್ಷಣದೊಳಾ ಪೆಟ್ಟಿಗೆಯುಂ ಶಿರದಮೇಲಿಟ್ಟು ಮೋಹನಾತರಂಗಿಣಿಯೆಡೆಗೆ ಪೋಗಿ ಬೃಹತ್ಪಾಷಾಣ

ಮನ್ನಾ ಪೆಟ್ಟಿಗೆಗೆಕಟ್ಟಿ ನಿಮ್ನಗಾಗಂಭೀರಹ್ರದದಲ್ಲಿ ಮುಳುಗಿಸಲು, ವಿಪ್ರತ
ನುಜಾತಸಹಮಿರಹಿ ತನುಜಾತನಿಂಗಧಿಕಧಿಗಳ್ತಾವಾದರವನೀಶತನಯ ! ಕೇಳ
ತ್ಯಂತ ದಾರುಣವ್ಯಾಪಾರನನುಮಾಡುವವರಿಂಗೆ ತತ್ಕ್ಷಣವೆ ತದನುಗುಣಫಲವಾ
ಗದಿರುವುದೇ? ಸುಭಗ! ಬಳಿಕಾ ಕಿರಾತನು ಬಂದು ಸುರುಚಿಯೊಡನೊರೆದು
ಪರಿಣಯದ ಸನ್ನಾಹದೊಳಗಿರುತಿರಲು;

ಇತ್ತ ತಾಪಸಾಜ್ಞೆಯಿಂದಲೊದಗಿದುದು ಮುನಿಮೊತ್ತವೆಲೆತನಯ!
ಕೇಳ್ಸಕಲ ಋಷಿಪತ್ನಿಯರು ನೆರೆಯೆ, ತಾಪಸವರನು ಬಂದೊಂದುದಿನವು
ಲಗ್ನವನು ನಿಶ್ಚೈಸಿ ಸಕಲರಿಂದೊಡಗೂಡಿ ಕೃಪೆಯಿಂದನುಗ್ರಹದಿ ಕ್ಷತ್ರಿ
ಯವಿಧಾನದಿಂ ಸುರುಚಿ ಸತ್ಯವ್ರತರನು ಸುಮುಹೂರ್ತದೊಳು ಸಕಲವೈಭವ
ದಿಂ ದಂಪತಿಗಳನುಮಾಡುತುತ್ಸವವ ಬೆಳೆಯಿಸಿ, ಮಹರ್ಷಿಗಳ ಮೃಷ್ಟಾನ್ನ
ಮೊದಲಾದ ಭಕ್ಷ್ಯ ನಿಚಯಗಳಿಂದ ಭೋಜನವ ಮಾಡಿಸುತ ದಕ್ಷಿಣಾದಿಗಳಿಂ
ದ ನಿತ್ಯಸಂತೈಸುತಲಾವುದುಂಬರನಿಂದ ತಾನು ಪೂಜಿತನಾಗಿ ನವ್ಯದಂಪತಿಗಳಿಗೆ
ಒರೆದು ಪರಮಾಶಿಷವ ನಡೆದನಷ್ಟವಕ್ರನಿಂತುಸಂತೋಷದಿಂದಾಉದುಂಬರನಖಿ
ಳ ವೈಭವದಿಂ ಕುವರನಿಗೆ ಮದುವೆಯನು ಮಾಡಿ, ನಿಜಬಂಧುನಿಕರಗಳಿಗೆ
ಬಹುಮತಿಯು ಮಾಡಿ ಮೇಣವರಿಗಪ್ಪಣೆಯಿತ್ತು ಸುಖದಿಂದಲಿರುತಿರ್ದರೆಂ
ಬಲ್ಲಿಗೆ:—

ಇಂತು ಕರ್ನಾಟಕ ಭಾಷಾ ವಿರಚಿತವಾದ ಶ್ರೀಮತ್ಸಮಸ್ತ ಭೂ
ಮಂಡಲ ಮಂಡನಾಯಮಾನ ನಿಖಿಲ ದೇಶಾವತಂಸ ಕರ್ನಾಟಕ ಜನಪದ
ಸಂಪದಧಿಷ್ಠಾನಭೂತ ಶ್ರೀಮನ್ಮಹಿಶೂರ ಮಹಾ ಸಂಸ್ಥಾನ ಮಧ್ಯದೇದೀ
ಪ್ಯಮಾನಾ ವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ
ನಿಖಿಲ ನಿಜರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತದಿವ್ಯರ
ತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜರಾಜಪರಮೇಶ್ವರಪ್ರೌಢ ಪ್ರತಾ
ಪಾ ಪ್ರತಿಮವೀರ ನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದು
ಕುಲ ಪಯಃ ಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರಮ
ತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠಿ

ರವಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮ ಪತ್ನೀ
ಕೆಂಪನಂಜಮಾಂಬಾ ಗರ್ಭ ಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀ
ಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಆತ್ರೇಯಸಗೋತ್ರ
ಆಶ್ವಲಾಯನ ಸೂತ್ರ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹಿಶೂರ
ಪುರವರಾಧೀಶ ಶ್ರೀಮತ್ಕೃಷ್ಣರಾಜಒಡೆಯರವರು ಲೋಕೋ
ಪಕಾರಾರ್ಥವಾಗಿ ರಚಿಸಲ್ಪಟ್ಟಶ್ರೀ ಕೃಷ್ಣರಾಜವಾಣೀ
ವಿಲಾಸವೆಂಬಾಂಕಿತದಿಂದ ಕರ್ನಾಟಕ ಭಾಷಾ
ವ್ಯಾಖ್ಯಾನರೂಪವಾಗಿ ರಚಿಸಿರುವ
ಬ್ರಹ್ಮಾಂಡೋಪ ಪುರಾಣದಲ್ಲಿ
ಉತ್ತರಭಾಗದಲ್ಲಿ
ಲಲಿತೋಪಾಖ್ಯಾ
ನದಲ್ಲಿ ಪೂರ್ವ
ಖಂಡದಲ್ಲಿ
ಹಯಗ್ರೀವಾಗಸ್ತ್ಯ
ಸಂವಾದದಲ್ಲಿ
ಪಂಚವಿಂಶೋಧ್ಯಾಯಃ



ಸಮಾಪ್ತೋಯಂಗ್ರಂಥಃ.



# ಶುದ್ಧಾಶುದ್ಧ ಪತ್ರಿಕೆ.



| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೭ | ೮ | ಕೂಡಿ. | ವೂಡೆ. |
| ,, | ೧೧ | ಲೊಡ: | ಲೋಟಕ. |
| ೧೩ | ೧೨ | ನಾಗವುಂ | ನಾಗವುನವುಂ |
| ೧೮ | ೩ | ಸೀವು | ಸೀವು |
| ,, | ೧೬ | ದೂಹಿಷ್ಣತೀಶನ | ವೂಹಿಷ್ಮತೀಶನ |
| ೨೨ | ೧೫ | ದಾಕೆ | ಯಾಕೆ |
| ೨೪ | ೫ | ನೀನೆಂಡೆ | ನೀನೆನ್ನಡೆ |
| ,, | ೨೦ | ಪ್ರದೇಶನಂದು | ಪ್ರದೇಶವನಂದು |
| ,, | ೨೫ | ಖಂಗಂರಲು | ಖಂಡಗಳರಲು |
| ೩೦ | ೫ | ನವ | ಆವೆ |
| ೩೫ | ೨೪ | ಎನ್ನಂ | ಎನ್ನಂ |
| ೪೧ | ೧೬ | ಸುದ್ವೇಲ | ಉದ್ವೇಲ |
| ೪೨ | ೯ | ವೂಡ.ವಾತಂತೆ | ವೂಡುವಾತಂಗೆ |
| ,, | ೧೪ | ಕ.ರಿ | ಕುರಿ |
| ೪೪ | ೧೩ | ವೇಣು | ವೇಣಿ |
| ೪೫ | ,, | ಸ.ದಿದ | ನುಡಿದ |
| ,, | ೨೦ | ವೂತ್ರಗಂ | ವೂತಿಗಂ |
| ೪೬ | ೨೫ | ವ್ರಕ್ರಿಯುವುಂ | ಪ್ರಕ್ರಿಯುವುಂ |
| ೪೭ | ೧೨ | ಅನಾಥ | ಅನಾಥ |
| ೫೨ | ೨೯ | ಸರಾಗ | ನ.ರಾಗ |
| ೫೫ | ೧೩ | ಕೌರಿತು | ಕುರಿತು |
| ೫೯ | ೨೩ | ಸಿಂತ್ಯೈಸಿ | ಸಂತೈಸಿ |
| ೬೨ | ೧೯ | ತನಪಂ | ತದನಂ |
| ೬೯ | ೫ | ವತ್ಸ | ವತ್ಸೆ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೬೯ | ,, | ಕೇಳಪ್ಪ | ಕೇಳವ್ಮ |
| ,, | ೧೯ | ಮಾವಂಷ | ಮಾನುಷ |
| ೮೧ | ೧೪ | ಲೋಕಕ | ಲೋಕಕೆ |
| ೭೭ | ೭ | ಧಾನ | ಧಾನ್ಯ |
| ,, | ೧೩ | ಧಾನವಿ | ಧಾನ್ಯ |
| ,, | ೧೬ | ಮುಖವಿ | ಮುಖ್ಯ |
| ,, | ೧೮ | ಗುಣಾಢವಿ | ಗುಣಾಢ್ಯ |
| ,, | ೧೯ | ತೆತೋಪವಿ | ತತೋಪ್ಯ |
| ,, | ೨೩ | ಪರಿಕಾವಿ | ಪತ್ಯಾ |
| ೭೯ | ೪ | ವೂರ್ವ | ಪೂರ್ವ |
| ೯೫ | ೪ | ಆಗಲೇ | ಆಗಲಿ |
| ,, | ೫ | ಭೋದೋ | ಭೇದೋ |
| ,, | ೧೮ | ಬಳಲಿ | ಬಳಲಿ |
| ೯೬ | ೨೨ | ವೋರೆ | ಮೊರೆ |
| ೯೮ | ೧೬ | ನೆನ್ನುಯನಾ | ನೆನ್ನೆಯುನ್ನಾ |
| ,, | ೨೦ | ಖಿನ್ನೈಸಿ | ಬಿನ್ನೈಸಿ |
| ೧೦೦ | ೮ | ಸಂಪಸತಾ | ಸಂವಸತಾ |
| ೧೨೨ | ೧೬ | ದ್ವಾಕವೆ | ದ್ವಾಕ್ಯವೆ |
| ೧೨೩ | ೨ | ದೃಗಾತ್ರ | ದೃಢಗಾತ್ರ |
| ೧೨೬ | ೨೦ | ತ್ಮನ್ನ | ತೃನ್ನ |
| ೧೨೮ | ೧೭ | ಪಹಿಸಿ | ಸಹಿಸಿ |
| ,, | ,, | ಮಂನಾ | ಮನಾ |
| ೧೨೭ | ೮ | ವಶದ | ಪಶದ |
| ,, | ೨೮ | ಯಿಾದ | ಯಿಂದ |
| ,, | ,, | ಧರಣಿಯಿಂ | ಧರಣಿಯಂ |
| ೧೫೦ | ೨೪ | ಬಾರದ | ಬಾರದೆ |
| ೧೫೧ | ೧೨ | ಖಿದ್ದು | ಬಿದ್ದು |
| ೧೫೮ | ೧೭ | ಜಡೆವ | ಒಡೆದ |
| ೧೬೨ | ೧೭ | ಪ್ರಾರ್ಥನಾ | ಪ್ರಾರ್ಥಿತನಾ |

